ನೂರಾರು ಅಜ್ಜಿ ಕಥೆ ಪುಸ್ತಕದ ಪ್ರಾಯೋಜಕರು

## ಶ್ರೀ ಮುಕ್ಕಾಟ್ಟಿರ ಮನೋಜ್ ಕುಮಾರ್

ಆರ್ಕಿಟೆಕ್ಟ್, ಬೆಂಗಳೂರು



# ‘ಅರೆಬಾಸೆನ ಅಜ್ಜಿ ಕತೆಗ’

## ಡಾ. ವಿಶ್ವನಾಥ ಬದಿಕಾನ

ನೇಹಾ ಕ್ರಿಯೇಷನ್ಸ್
ನಂ, 48/ಡಿ, 24ನೇ ‘ಎ’ ಕ್ರಾಸ್, 5ನೇ ಮುಖ್ಯ ರಸ್ತೆ,
ಕರೇಸಂದ್ರ, ಬನಶಂಕರಿ 2ನೇ ಹಂತ, ಬೆಂಗಳೂರು – 560 070
ಫೋನ್ : 080–26710552. ಮೊಬೈಲ್ : 98453 19878

‘ಅರೆಬಾಸೆನ ಅಜ್ಜಿಕತೆಗ’ – ‘**Arebaasena Ajjikatega**’

A collection of ‘Arebhashe’ Folktales from Sullia

Edited and written by - **Dr. Vishwanatha Badikana,**
Assistant Professor, Kannada, St. Aloysius College(Autonomous
Mangalore– 03, Dakshina Kannada, Karnataka,
Mobil : 9449615474, 91416 76453, Email : badikana65@gmail.c

ISBN :



978-93-85895-12-8

Published by
**Kodagu and Dakshina Kannada Gowda Sangha,** Bangalore

First Edition : 2016
Size : 1/8 Demi
Page : i – xxx, 242
C : Editor
Price : Rs. 200

For Copies Contact
**Padmanabha Kolchar,** Bangalore
94484 81450, 080 26581454

Typesetting
**Padmanabha Kolchar,** Bangalore

Cover Design
**Mohan Sona**

Page designed and Printed at
**Neha Creations Bangalore**
Tel : 080 26710552 Mobil : 98453 19878
nehacreationsbangalore@gmail.com

## ಪ್ರಕಾಶಕರ ಮಾತು

ಬೆಂಗಳೂರಿನ ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಮಾಜ ೫೦ರ ಸಂಭ್ರಮದಲ್ಲಿರುವ ಈ ಸಂದರ್ಭದಲ್ಲಿ 'ಅರೆಬಾಸೆನ ಅಜ್ಜಿಕತೆಗ' ಕೃತಿಯನ್ನು ಪ್ರಕಟಿಸಲು ನಮಗೆ ಸಂತೋಷವಾಗುತ್ತಿದೆ. ಶ್ರೀ ಡಿ.ವಿ.ಸದಾನಂದ ಗೌಡರು ಮುಖ್ಯಮಂತ್ರಿಗಳಾದ ಸಮಯದಲ್ಲಿ ಕರ್ನಾಟಕ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿಯು ರಚನೆಗೊಂಡಿರುವುದು ಈ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಒಂದು ಮಹತ್ವದ ಮೈಲಿಗಲ್ಲು. ಈ ನೆಲೆಯಲ್ಲಿ ಅರೆಭಾಷೆಯ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಕಟ್ಟಿಬೆಳೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವೆಂದು ಭಾವಿಸಿ ನಮ್ಮ ಸಮಾಜ ಅರೆಭಾಷೆ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಚರ್ಚೆ-ಗೋಷ್ಟಿಗಳು, ವಿಶೇಷ ಉಪನ್ಯಾಸ, ವಿಚಾರಮಂಥನ, ಸಾಧಕರಿಗೆ ಮನ್ನಣೆ ಇತ್ಯಾದಿ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸುತ್ತಾ ಬಂದಿದೆ. ಅದರ ಮುಂದುವರಿದ ಭಾಗವಾಗಿ ಅರೆಭಾಷೆಯ ಸಂಸ್ಕೃತಿ, ಜನಜೀವನ, ಬದುಕು, ಕಸುಬು, ಜೀವನಮೌಲ್ಯಗಳನ್ನು ಈ ಭಾಷೆಯ ಜನಪದ ಕತೆಗಳು ಸಮರ್ಥವಾಗಿ ಕಟ್ಟಿಕೊಡುತ್ತವೆ. ಆದರೆ ಅವುಗಳನ್ನು ಒಂದು ಕಡೆ ಸಮಗ್ರವಾಗಿ ನೋಡುವ ಅವಕಾಶ ನಮಗೆ ಲಭಿಸಿಲ್ಲ. ಆ ಕೆಲಸವನ್ನು ಕೈಗೆತ್ತಿಕೊಳ್ಳಬೇಕೆಂಬುದು ನಮ್ಮ ಮಹದಾಸೆ.

ಈ ನಿಟ್ಟಿನಲ್ಲಿ ಯೋಚಿಸುವಾಗ ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ 1992ರಲ್ಲಿ 'ಗೌಡಕನ್ನಡದ ಜನಪದ ಕತೆ'ಗಳ ಎಂ.ಫಿಲ್. ಅಧ್ಯಯನ ನಡೆದದ್ದು ಗಮನಾರ್ಹ. ಡಾ. ಪುರುಷೋತ್ತಮ ಬಿಳಿಮಲೆಯವರ ಮಾರ್ಗದರ್ಶನದಲ್ಲಿ ಈ ಅಧ್ಯಯನವನ್ನು ಕೈಗೆತ್ತಿಕೊಂಡವರು ಡಾ. ವಿಶ್ವನಾಥ ಬದಿಕಾನ. ಈ ಹಿನ್ನಲೆಯಲ್ಲಿ ಅವರು ಅಧ್ಯಯನಕ್ಕೆ ಬಳಸಿದ ಕತೆಗಳ ಮೂಲ ಪಠ್ಯವನ್ನು ಕೇಂದ್ರವಾಗಿಟ್ಟುಕೊಂಡು ಕನ್ನಡ ಲಿಪಿಯಲ್ಲಿ ಅರೆಭಾಷೆಯ ಕತೆಗಳನ್ನು ಪ್ರಕಟಿಸುವ ಕೆಲಸಕ್ಕೆ ತೊಡಗಿದ್ದೇವೆ.

ಸುಮಾರು ಎರಡು ದಶಕಗಳಷ್ಟು ಅಧ್ಯಾಪನ ಅನುಭವವಿರುವ ಡಾ. ವಿಶ್ವನಾಥ ಬದಿಕಾನ ಅವರು ಕನ್ನಡ ಜಾನಪದ ಅಧ್ಯಯನದ ಕುರಿತಾಗಿ ಆಳವಾದ ಸಂಶೋಧನೆಯಲ್ಲಿ ತೊಡಗಿಕೊಂಡವರು. ನಾಡಿನ ಸಂಸ್ಕೃತಿ, ಜನಜೀವನ, ಆಚಾರ-ವಿಚಾರಗಳ ಬಗ್ಗೆ ಹಲವಾರು ಪ್ರೌಢ ಪ್ರಬಂಧಗಳನ್ನು ರಚಿಸಿದವರು. ತಮ್ಮ ವಿದ್ಯಾರ್ಥಿಗಳಿಗೆ ಮತ್ತು ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿರುವವರು. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಕಾರ್ಯದಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡವರು. ಈ ಹಿನ್ನೆಲೆಯಲ್ಲಿ ಶ್ರೀಯುತರಲ್ಲಿ ವಿನಂತಿಸಿಕೊಂಡಾಗ ಪ್ರೀತಿಯಿಂದ ಒಪ್ಪಿ ತಮ್ಮ ಅಮೂಲ್ಯ ಸಮಯವನ್ನು ಈ ಕಾಯಕಕ್ಕಾಗಿ ಮೀಸಲಿರಿಸಿ, ಅರ್ಥಪೂರ್ಣವಾದ ಈ ಕೃತಿಕುಸುಮವನ್ನು ನಮ್ಮ ಸಮಾಜಕ್ಕೆ,

ಅರೆಭಾಷೆ ಸಾಹಿತ್ಯ ಸಂಸ್ಕೃತಿಗೆ ಅರ್ಪಿಸಿದ್ದಾರೆ. ಈ ನಿಟ್ಟಿನಲ್ಲಿ ಅವರ ಪ್ರತಿಭೆ-ಪಾಂಡಿತ್ಯ ಪರಿಶ್ರಮ, ಶ್ರದ್ಧೆ, ನಿಷ್ಠೆಯನ್ನು ಸಂಸ್ಕೃತಿ ಪ್ರಿಯರಾದ ನಾವೆಲ್ಲ ಮೆಚ್ಚಿಕೊಳ್ಳಲೇಬೇಕಾಗಿದೆ. ಇದು ಕೇವಲ ಅರೆಭಾಷೆ ಸಾಹಿತ್ಯ ಸಂಸ್ಕೃತಿಗೆ ಕೊಡುಗೆ ಮಾತ್ರವಲ್ಲದೆ ಒಂದು ಭಾಷೆಯ ಅಭ್ಯುದಯದಲ್ಲಿ ಯಾವೆಲ್ಲ ಪ್ರಯತ್ನ ಮಾಡಬಹುದೆಂಬುದಕ್ಕೆ ಮಾದರಿ ಮತ್ತು ಮಾರ್ಗಸೂಚಕ. ಅವರ ಈ ಸಾಧನೆ ಅಭಿನಂದನಾರ್ಹ. ನಮ್ಮ ಸಂಸ್ಥೆ ಅವರಿಗೆ ಚಿರಋಣಿ. ಹಾಗೆಯೇ ಈ ವಿಚಾರದ ಹೊಳಹನ್ನು ನೀಡಿದ ನಾಡಿನ ಘನ ವಿದ್ವಾಂಸರಾದ ಡಾ. ಪುರುಷೋತ್ತಮ ಬಿಳಿಮಲೆಯವರನ್ನೂ ಸಹ ಕೃತಜ್ಞತೆಯಿಂದ ನೆನೆಯುತ್ತೇವೆ.

ಹಾಗೆಯೇ ಈ ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ನೇಹಾ ಕ್ರಿಯೇಷನ್ಸ್ ಮಾಲೀಕರಾದ ಶ್ರೀ ಕೂಡಂಕಡಿರ ತಮ್ಮಯ್ಯರವರಿಗೂ ಹಾಗೂ ಸಹಕರಿಸಿದ ಸರ್ವರನ್ನೂ ನೆನೆಯುತ್ತಾ ನಮ್ಮ ಮುಂದಿನ ಎಲ್ಲ ಪ್ರಯತ್ನಗಳಿಗೂ ತಮ್ಮ ತುಂಬು ಹೃದಯದ ಪ್ರೋತ್ಸಾಹದ ಅಪೇಕ್ಷೆಯಲ್ಲಿ,

ಇತೀ ನಿಮ್ಮವ,
**ಪದ್ಮನಾಭ ಕೋಲ್ಚಾರ್**
ಅಧ್ಯಕ್ಷರು
ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಮಾಜ
ಬೆಂಗಳೂರು.

ಮುನ್ನುಡಿ

## ಅರೆಭಾಷೆಯ ಅನನ್ಯತೆಯ ಹುಡುಕಾಟದತ್ತ

ನನ್ನ ನಿಡುಗಾಲದ ಗೆಳೆಯರಾದ ಡಾ. ವಿಶ್ವನಾಥ ಬದಿಕಾನ ಅವರು ಅರೆಭಾಷೆಯಲ್ಲಿ ಪ್ರಚಲಿತದಲ್ಲಿರುವ ಕತೆಗಳನ್ನು ಮೊದಲಬಾರಿಗೆ ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ ಚರಿತ್ರೆ ನಿರ್ಮಿಸಿದ್ದಾರೆ. ಯಾವುದೇ ಒಂದು ಭಾಷೆಯ ಬೆಳವಣಿಗೆಯ ವಿಷಯದಲ್ಲಿ ಈ ಬಗೆಯ ಕೆಲಸಗಳ ಮಹತ್ವದ ಬಗೆಗೆ ನಾನು ಬೇರೆ ಹೇಳಬೇಕಾಗಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು ಮತ್ತು ಬೆಳ್ತಂಗಡಿ ಪರಿಸರದಲ್ಲಿ, ಕೊಡಗಿನ ಭಾಗಮಂಡಲ ಪರಿಸರದಲ್ಲಿ ಮತ್ತು ಕಾಸರಗೋಡಿನ ಬಂದಡ್ಕದಲ್ಲಿ ಪ್ರಚಲಿತದಲ್ಲಿರುವ ಅರೆಭಾಷೆಯು ಕನ್ನಡದ ಒಂದು ಸಾಮಾಜಿಕ ಉಪಭಾಷೆಯೆಂಬುದನ್ನು ವಿದ್ವಾಂಸರು ಈಗಾಗಲೇ ಖಚಿತಪಡಿಸಿದ್ದಾರೆ. ಈ ಭಾಷೆಯಲ್ಲಿ ಇಂದಿಗೂ ಕಾಣಸಿಗುವ ಕೆಲವು ವಿಶಿಷ್ಟ ಪದಗಳು ಸುಮಾರು 1000ಕ್ಕೂ ಹೆಚ್ಚು ವರ್ಷಕ್ಕಿಂತ ಪ್ರಾಚೀನವಾದುವು ಹೌದಾದರೂ ಅವು ಅರೆಭಾಷೆಯ ರೂಪದಲ್ಲಿ ಕಾಣಿಸಿಕೊಂಡು ಹೆಚ್ಚೆಂದರೆ 500 ವರ್ಷಗಳನ್ನು ಮೀರಿರಲಾರದು. ಏಕೆಂದರೆ ಅರೆಭಾಷೆಯನ್ನು ಪ್ರಧಾನವಾಗಿ ಮಾತಾಡುವ ಗೌಡ ಸಮುದಾಯದ ಜನರು ಮೇಲೆ ಹೇಳಿದ ಭೌಗೋಳಿಕ ಪರಿಸರದ ಮೂಲ ನಿವಾಸಿಗಳೇನೂ ಅಲ್ಲ. ಅವರು ಈಗಣ ಹಾಸನ ಪರಿಸರದಲ್ಲಿರುವ ಐಗೂರು ಪರಿಸರದಿಂದ ಕರಾವಳಿಯ ಕಡೆಗೆ ವಲಸೆ ಬಂದಿದ್ದಾರೆ. ಆದರೆ ಈ ವಲಸೆಗೆ ನಿರ್ದಿಷ್ಟ ಕಾರಣಗಳೇನು? ಈ ವಲಸೆ ಯಾವಾಗ ನಡೆಯಿತು? ಎಂದೆಲ್ಲಾ ಹೇಳಲು ಲಿಖಿತ ಆಧಾರಗಳೇನೂ ಇಲ್ಲದಿದ್ದರೂ, ಮೌಖಿಕ ಆಧಾರಗಳ ಸಹಾಯದಿಂದ ಇದು 15–16 ನೇ ಶತಮಾನದಲ್ಲಿ ನಡೆದಿರಬಹುದಾದ ಘಟನೆ ಎಂದು ಊಹಿಸಲು ಸಾಧ್ಯವಿದೆ.

ಉದಾಹರಣೆಗೆ, ಇಂದು ಅರೆಭಾಷಿಕ ಗೌಡರು ಪ್ರಧಾನವಾಗಿರುವ ಪಂಜ ಮತ್ತು ಎಣ್ಮೂರು ಪರಿಸರದಲ್ಲಿ ಕೋಟಿ ಚೆನ್ನಯ ಎಂಬ ಯಮಳ ವೀರರ ಆರಾಧನಾ ಪ್ರಕ್ರಿಯೆಯಿದೆ. ಎಣ್ಮೂರಿನಲ್ಲಿ ನಡೆದ ಹೋರಾಟದಲ್ಲಿ ಕೋಟಿ ಚೆನ್ನಯರು ಸಾವನ್ನಪ್ಪುತ್ತಾರೆ. ಈ ಪರಿಸರದಲ್ಲಿ ಕೋಟಿ ಚೆನ್ನಯರ ಹುಟ್ಟು, ಸಾಧನೆ ಮತ್ತು ಸಾವನ್ನು ವಿವರಿಸುವ ಸುದೀರ್ಘ ಪಾಡ್ದನಗಳೂ ದೊರೆಯುತ್ತವೆ. ಆದರೆ ಈ ಆಚರಣಾ ಪ್ರಕ್ರಿಯೆಯಲ್ಲಿ ಅಥವಾ ಪಾಡ್ದನಗಳಲ್ಲಿ ಗೌಡರ ಉಲ್ಲೇಖವಿಲ್ಲ. ಕೋಟಿಚೆನ್ನಯರ ಕಾಲವನ್ನು 16 ನೇ ಶತಮಾನದಿಂದ ಈಚೆಗೆ ತರುವ ಡಾ. ವಿವೇಕ ರೈ ಅವರ ವಾದವನ್ನು ನಾವು ಒಪ್ಪಿಕೊಂಡರೆ, 16ನೇ ಶತಮಾನದ ಹೊತ್ತಿಗೆ ಸುಳ್ಯ ಪರಿಸರದಲ್ಲಿ ಗೌಡರು ಈಗಿನಂತೆ ಪ್ರಬಲರಾಗಿರಲಿಲ್ಲ ಎಂದು ಊಹಿಸಲು ಸಾಧ್ಯವಿದೆ.

ಈ ಊಹೆಗೆ ಪೂರಕವಾಗಿ ಕರಾವಳಿಯ ಗೌಡರು ಹಾಸನ ಜಿಲ್ಲೆಯ ಹೊಸಕೋಟೆಯ ಕೆಂಚಾಂಬಿಕೆ ದೇವರಿಗೆ ಹರಕೆ ಒಪ್ಪಿಸುವುದನ್ನು ಗಮನಿಸಬಹುದು. ಹೊಸಕೋಟೆಯ ಕೆಂಚಮ್ಮ

ದೇವಸ್ಥಾನವನ್ನು ಕ್ರಿ.ಶ. 1604ರಲ್ಲಿ ಸ್ಥಾಪಿಸಲಾಯಿತು ಎಂಬುದಕ್ಕೆ ಶಾಸನಾಧರಗಳಿವೆ. ಈ ಹೊಸಕೋಟೆ ಕೆಂಚಮ್ಮನಿಗೆ ಕರಾವಳಿಯ ಗೌಡರು ಈಗಲೂ ಹರಕೆ ಒಪ್ಪಿಸುತ್ತಾರೆ ಮಾತ್ರವಲ್ಲ, ಪಂಜ ಸಮೀಪದ ಏನಡ್ಕ ಮನೆತನದವರ ಆಶ್ರಯದಲ್ಲಿ ಕೆಂಚಾಂಬಿಕೆಗೊಂದು ಗುಡಿಯನ್ನೂ ಕಟ್ಟಲಾಗಿದೆ. ಈ ಅಂಶವು ಹಾಸನ ಪರಿಸರದಿಂದ ಗೌಡರು ಸುಳ್ಯ ಪರಿಸರಕ್ಕೆ ವಲಸೆ ಬಂದ ಕಾಲವನ್ನು ಸ್ಥೂಲವಾಗಿ 16ನೇ ಶತಮಾನಕ್ಕೆ ನಿಗದಿಪಡಿಸಲು ಒತ್ತಾಯಿಸುತ್ತದೆ. ಇದರ ಜೊತೆಗೆ ಸಕಲೇಶಪುರ ತಾಲೂಕಿನ ಕೂಡುರಸ್ತೆಯ ಸಮೀಪದ ಒಣಗೂರು ಸಬ್ಬಮ್ಮನಿಗೂ ಗೌಡ ಸಮುದಾಯದವರು ಹರಕೆ ಒಪ್ಪಿಸುತ್ತಾರೆ. ಕೂಡು ರಸ್ತೆಯ ಆಸುಪಾಸಿನಲ್ಲಿ ದೊರಕುವ ಮೌಖಿಕ ನಿರೂಪಣೆಗಳ ಪ್ರಕಾರ ಒಣಗೂರು ಸಬ್ಬಮ್ಮನೂ 16ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ದೈವ.

ಅಂದಿನಂತೆ ಇಂದಿಗೂ ಹಾಸನ ಪರಿಸರದಲ್ಲಿ ಅರೆಭಾಷೆ ಪ್ರಚಲಿತದಲ್ಲಿ ಇಲ್ಲ. ಇದು ಹೌದಾದರೆ ಅರೆಭಾಷೆಗೆ ಹೆಚ್ಚೆಂದರೆ 400ರಿಂದ 500 ವರ್ಷಗಳ ಇತಿಹಾಸವಿದೆ. ಅರೆಭಾಷೆಯಲ್ಲಿರುವ ಅನೇಕ ಪದಗಳು ಮೂಲದ್ರಾವಿಡದ ಕಾಲಕ್ಕೆ ಹೋಗಬಹುದು, ಆದರೆ ಆ ಭಾಷೆಯ ಈಗಿನ ಸ್ವರೂಪ ಅಷ್ಟು ಹಳೆಯದಲ್ಲ.

ಈ ಅರೆಭಾಷಿಕ ಗೌಡರು ಇತರ ಸಮುದಾಯದ ಕೆಲವು ಜನರೊಂದಿಗೆ ಸೇರಿಕೊಂಡು ಕೊಡಗಿನಿಂದ ಬ್ರಿಟಿಷರನ್ನು ಪದಚ್ಯುತಗೊಳಿಸಲು ಸುಮಾರು 5 ವರ್ಷಗಳ ಕಾಲ(1832–37) ಹೋರಾಡಿದ್ದು ಇದೀಗ 'ಕಲ್ಯಾಣಪ್ಪನ ಕಾಟಕಾಯಿ' ಎಂದು ಪ್ರಸಿದ್ಧವಾಗಿದೆ. ಈ ಹೋರಾಟದಿಂದ ಬ್ರಿಟಿಷರ ಅವಕೃಪೆಗೆ ಒಳಗಾದ ಸುಳ್ಯಪರಿಸರವು ಆ ಕಾರಣಗಳಿಗಾಗಿ ಅಭಿವೃದ್ಧಿಯಾಗದೆ ಹಿಂದೆ ಬಿತ್ತು. 1970–80ರ ದಶಕದಲ್ಲಿ ಅಡಿಕೆಗೆ ಒಳ್ಳೆಯ ಮಾರುಕಟ್ಟೆ ದೊರಕಿದ ಅನಂತರ ಸುಳ್ಯವು ಅಭಿವೃದ್ಧಿಯಾಯಿತು. ಈ ಅಭಿವೃದ್ಧಿಯು ಜಿಲ್ಲೆಯ ಇತರ ಭಾಗದ ಅಭಿವೃದ್ಧಿಯ ಸೂಚಕಾಂಕದಿಂದ ಕೆಳಗೆ ಇರುವುದು ಹೌದಾದರೂ ಅದು ಸುಳ್ಯಪರಿಸರದ ಜನರ ಆತ್ಮ ವಿಶ್ವಾಸವನ್ನು ಹೆಚ್ಚುಮಾಡಿದ್ದಂತೂ ನಿಜ.

ಇಂಥ ಬೆಳವಣಿಗೆಗಳ ಜೊತೆಗೆ ಅರಭಾಷೆ–ಸಾಹಿತ್ಯಗಳ ಬಗೆಗೂ ನಿಧಾನವಾಗಿ ಜನರಲ್ಲಿ ತಿಳಿವಳಿಕೆ ಹೆಚ್ಚತೊಡಗಿತು. ಅಣ್ಣಾಮಲೈಯಲ್ಲಿ ಇದ್ದು, ಮುಂದೆ ಮದ್ರಾಸು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆಸಲ್ಲಿಸಿ ನಿವೃತ್ತರಾದ ಪ್ರೊ. ಕೋಡಿ ಕುಶಾಲಪ್ಪ ಗೌಡರು ಅರೆಭಾಷೆಯನ್ನು 'ಗೌಡ ಕನ್ನಡ'ವೆಂದು ಕರೆದು ಇಂಗ್ಲಿಷಿನಲ್ಲಿ 1976ರಲ್ಲಿ ಪುಸ್ತಕ ಪ್ರಕಟಿಸಿದ ಮೊದಲ ಮಹನೀಯರು. ದಕ್ಷಿಣಕನ್ನಡ ಮತ್ತು ಕೊಡಗು ಗೌಡ ಸಮಾಜದವರು ಪ್ರಕಟಿಸಿದ ಸ್ಮರಣ ಸಂಚಿಕೆಗಳು ಇಂದಿಗೂ ಅಮೂಲ್ಯ ಮಾಹಿತಿ ನೀಡುವ ಕೃತಿಗಳಾಗಿವೆ. 1984ರಲ್ಲಿ ನಾನು ಡಾ. ಬಿ ಎ. ವಿವೇಕ ರೈ ಅವರ ಮಾರ್ಗದರ್ಶನದಲ್ಲಿ 'ಸುಳ್ಯಪರಿಸರದ ಗೌಡ ಸಂಸ್ಕೃತಿ'ಯ ಮೇಲೆ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಮಂಗಳೂರು

ವಿಶ್ವವಿದ್ಯಾಲಯಕ್ಕೆ ಪಿಎಚ್. ಡಿ. ಪದವಿಗಾಗಿ ಅರ್ಪಿಸಿದ್ದೆ.

1991-92ರಲ್ಲಿ ನಾನು ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಾಗ ಡಾ.ವಿಶ್ವನಾಥ ಬದಿಕಾನ ಅವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅರೆಭಾಷೆಯ ಅಜ್ಜಿಕತೆಗಳನ್ನು ಆಯ್ದುಕೊಂಡರು. ಇದಕ್ಕಾಗಿ ಅವರು ಸುಮಾರು 120 ಕತೆಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿ 100 ಕತೆಗಳಿಗೆ ವರ್ಗ ಮತ್ತು ಆ ಕತೆಗಳಿಗೆ 320 ಆಶಯಗಳನ್ನು ಗುರುತಿಸಿ 'ಗೌಡ ಕನ್ನಡದ ಜನಪದ ಕಥೆಗಳು – ವರ್ಗ ಮತ್ತು ಆಶಯ ಸೂಚಿ' ಎಂಬ ಸಂಶೋಧನ ಕೃತಿಯನ್ನು ಸಿದ್ಧಪಡಿಸಿ, ಅರೆ ಭಾಷೆಯ ಅಜ್ಜಿಕತೆಗಳು ವಿಶ್ವವಿದ್ಯಾಲಯ ಮಟ್ಟದಲ್ಲಿ ಚರ್ಚೆಯಾಗುವಂತೆ ಮಾಡಿದರು. ತಮ್ಮ ಸಂಶೋಧನೆಯಲ್ಲಿ ಅವರು 7 ಹೊಸ ಉಪವರ್ಗಗಳನ್ನು ಗುರುತಿಸಿ ಗೌಡ ಕನ್ನಡದ ಕತೆಗಳಲ್ಲಿ ಜಾಣ ನರಿಯು ಜಾಣತನ ಮಾಡಲು ಹೋಗಿ ಕೊನೆಗೆ ತಾನೇ ಸತ್ತುಹೋಗುವ ರೀತಿಯು ಅರೆಭಾಷೆಯ ಅಜ್ಜಿಕತೆಗಳ ಅನನ್ಯತೆಯನ್ನು ಸಾರುತ್ತವೆ ಎಂದು ಅವರು ವಾದಿಸಿದರು. 1994ರಲ್ಲಿ ಈ ಸಂಶೋಧನ ಗ್ರಂಥವು 'ಗೌಡ ಕನ್ನಡದ ಜನಪದ ಕಥೆಗಳು – ವರ್ಗ ಮತ್ತು ಆಶಯ ಸೂಚಿ' ಎಂಬ ಶೀರ್ಷಿಕೆಯಲ್ಲೇ ಪ್ರಕಟವಾಯಿತು. ಇದೀಗ ಸುಳ್ಯದವರೇ ಆದ ಶ್ರೀ ಡಿ. ವಿ. ಸದಾನಂದ ಗೌಡರು ಕರ್ನಾಟಕದ ಮುಖ್ಯಮಂತ್ರಿಗಳಾದ ಹೊತ್ತು ಅರೆಭಾಷೆಗೊಂದು ಅಕಾಡೆಮಿಯೂ ರಚನೆಗೊಂಡಿದೆ. ಇಂಥ ಹೊತ್ತಲ್ಲಿ ಅರೆಭಾಷೆಯ ಕುರಿತಾದ ಕೆಲಸಗಳು ಹೆಚ್ಚು ಹೆಚ್ಚು ನಡೆಯಬೇಕಾದ ಅಗತ್ಯವಿದೆ. ಡಾ. ವಿಶ್ವನಾಥ ಬದಿಕಾನ ಅವರ ಈ ಕೆಲಸವು ಮುಂದಿನ ಅಕೆಡೆಮಿಕ್ ಕೆಲಸಗಳಿಗೆ ಬರೆದ ಸೊಗಸಾದ ಮುನ್ನುಡಿಯಾಗಿದೆ.

ಪ್ರಸ್ತುತ 1990ರ ದಶಕದಲ್ಲಿ ಸಂಗ್ರಹಿಸಿದ ಅರೆಭಾಷೆಯ ಅಜ್ಜಿಕತೆಗಳನ್ನು ಮೂಲ ರೂಪದಲ್ಲೇ ಡಾ. ಬದಿಕಾನ ಅವರು ಪ್ರಕಟಿಸುತ್ತಿದ್ದಾರೆ. ಈ ಕತೆಗಳನ್ನು ಸುಮ್ಮನೆ ಓದಿದರೂ ತುಂಬಾ ಸಂತೋಷವಾಗುತ್ತದೆ. ಈ ಸಂಕಲನದ ಕತೆಗಳ ಬಗ್ಗೆ ಹೆಚ್ಚು ಮಾತುಗಳ ಅವಶ್ಯಕತೆಯಿಲ್ಲ. ಚಿಕ್ಕ ಮಕ್ಕಳಿಗೆ ಅಜ್ಜಿ ಹೇಳುತ್ತಿದ್ದ ಕತೆಗಳು ಮಕ್ಕಳಿಗೆ ಸುಲಭವಾಗಿ ಅರ್ಥವಾಗಬಲ್ಲುವಾದರೆ ದೊಡ್ಡವರಿಗೆ ಯಾಕೆ ಕಷ್ಟ? ಆದರೂ ಓದುವಾಗ ಥಟ್ಟನೆ ಎದ್ದು ಕಾಣುವ ಸಂಗತಿಗಳನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

ಅರೆಭಾಷೆ ಅಜ್ಜಿಕತೆಗಳಲ್ಲಿ ಎದ್ದು ಕಾಣುವ ವಿಶೇಷ ಗುಣಗಳೆಂದರೆ ಕತೆಗಳ ಒಡಲಲ್ಲಿರುವ ಕ್ರಿಯಾಶೀಲತೆ ಮತ್ತು ನಾಟಕೀಯತೆಯ ಗುಣ. ಇವು ಕತೆಯ ಕೇಳುಗರನ್ನು ಸುಮ್ಮನೆ ನಿಷ್ಕ್ರಿಯವಾಗಿ ಕತೆ ಕೇಳಲು ಬಿಡದೆ, ಸಕ್ರಿಯರಾಗಿರಲು ಒತ್ತಾಯಿಸುತ್ತದೆ. ಉದಾಹರಣೆಗೆ ಈ ಕತೆಯ ನಿರೂಪಣೆ ಗಮನಿಸಿ–

**ಒಂದು ಮೊಲಕ್ಕೆ ಈಚೆ ಕಾಡ್‌ಲಿ ಮೇದ್ ಮೇದ್ ಅದ್ಕೆ ಅಲ್ಲಿ ಎಲ್ಲಾ ಮುಗ್ತ್. ತಿಂಡಿ ತಿನಸ್, ಹುಲ್ಲು ಎಲ್ಲಾ. ಆಚೆಕರೆಗೆ ಹೊಕು, ಹೆಂಗೆ ಹೋದು ? 'ಮೊಲಂಗೆ ಹಳ್ಳ ದಾಟಿಕೆ**

ಆದೆಯೊ'?

ಕೊನೆಯ ಪ್ರಶ್ನೆಗಳು ಕೇಳುಗನ್ನು ಉತ್ತರಿಸಲು ಪ್ರೇರೇಪಿಸುತ್ತವೆ. ಇದು ಒಂದು ಬಗೆಯಾದರೆ, ಇನ್ನೊಂದು ಬಗೆಯ ನಿರೂಪಣೆಯಲ್ಲಿ ಕಥನ ಕ್ರಿಯೆಯಲ್ಲಿಯೇ ನಾಟಕೀಯತೆಯಿದೆ. ಉದಾಹರಣೆಗೆ–

**'ಒಬ್ಬನೇ ಹಾಡ್ತನ ಹೇಳಿಕೊಣೊಕ್, ಡೋಲ್ ಬೊಟ್ಟಿಕನಕ್, ಗಗ್ಗರ ಆಡಿಸಿಕೊಣೊಕ್, ನಿನ್ನ ಗಾನದೆತ್ತ್‌ನ ಸತ್ತರೆ ಡೋಲ್ ಗಗ್ಗರ ಕೇಳ್ವಂತ ಹೇಳ್ತ್. ಇಂವ ಡೋಲ್ ಗಗ್ಗರ ಎಲ್ಲ ಕೊಟ್ಟತ್. ಕುಂಡತ ತಕನ್ತ್ ಬಾತ್. ಬೇಲಿಕರೆಲಿ ನಿಂತ್‌ಕಂಡ್ – ನಾ ಕತ್ತಿಲಿ ಗೆದ್ದೆ ಥೈ ಥಕ ಥೈಂತ ಹೇಳಿ ಕುಣೀದು. ಎತ್ತ್‌ಲಿ ಗೆದ್ದೆ ಥೈ ಥಕ ಥೈ, ಗಾನದೆತ್ತಿಲಿ ಗೆದ್ದೆ ಥೈ ಥಕ ಥೈ, ಡೋಲ್ ಗಗ್ಗರಲಿ ಗೆದ್ದೆ ಥೈ ಥಕ ಥೈಂತ ಹೇಳಿ ಕುಣ್ದತ್ ಆತ್'.**

ಈ ಕ್ರಿಯಾತ್ಮಕತೆಯೇ ಅರೆಭಾಷೆ ಅಜ್ಜಿಕತೆಗಳ ಜೀವ ಎನ್ನಬಹುದು. ಕನ್ನಡದ ಕತೆಗಳಲ್ಲಿ ಈ ಗುಣ ಇರುವುದು ಹೌದಾದರೂ ಅರೆಭಾಷೆಯಲ್ಲಿ ಅದು ಹೆಚ್ಚಿಗೆ ಇದೆ.

ಕತೆಗಳ ಮುಕ್ತಾಯ ವಿಶಿಷ್ಟವಾಗಿರುವುದನ್ನೂ ಓದುಗರು ಗಮನಿಸಬಹುದು. ಅಂತಿಮವಾಗಿ ಇದು ಕೂಡಾ ಕೇಳುಗನನ್ನು ಸಕ್ರಿಯವಾಗಿ ಒಳಗೊಳ್ಳುವ ತಂತ್ರದಂತೆ ತೋರುತ್ತದೆ. ಉದಾಹರಣೆಗೆ–

**'ಕುರೆ ಹಿಂಗೆ ಮಾಡ್ತ್. ಹಂಞ ಗುಂಡಿ ತೆಗೆಕನ ಒಂದು ಹೂಂಸ್ ಹೋತ್. ಮತ್ತೆ ಹಂಞ ಗುಂಡಿ ತೆಗೆಕನ ಮತ್ತೊಂದು ಹೂಂಸ್ ಹೋತ್. ಮತ್ತೆ ಅದರಲ್ಲಿ ಕುದ್ದ್‌ರ್‌ಕನ ಮೂರನೆ ಹೂಂಸ್ ಹೋಗಿ ಸತ್ತ್ ಹೋತ್. ಅದಕ್ಕೆ ಮಣ್ಣು ಮುಚ್ಚಿ ನಾವು ಬರೋಮಾ?'**

**'ನಾಯಿಗ ಹೊನ್ನಿ ಹಾರಿ ಬಿದ್ದ್ ಓಡ್ರೆ ಇವರ ಕೆಬಿ ಎಲ್ಲ ಹರ್ದೇ ಹೋತ್. ಇವ್ ಕತ್ತಿ ಬೆಡಿನ ಹೆಗ್‌ಲಿಗೆ ಹಾಕಿದೊ ಕೆಬಿಗೆ ಕೈ ಹಿಡ್ಕಂಡೊ. ಮನೆಗೆ ಹೋದೊ. – ಇವರ ಹೋಗಿ ನೀವ್ ನೋಡಿಕಂಡ್ ಬರಕಡ'.** ಈ ಗುಣಗಳು ತುಳು ಜನಪದ ಕತೆಗಳಲ್ಲಿ ಕೂಡಾ ಹೆಚ್ಚು ಕಾಣಿಸುತ್ತದೆ.

ಅರೆಭಾಷೆಯ ಕತೆಗಳು ಅನ್ಯಭಾಷೆಗಳನ್ನು ತನ್ನ ಕಥನದಲ್ಲಿ ಒಳಗೊಳ್ಳುವ ರೀತಿಯು ಮನೋಜ್ಞವಾಗಿದೆ. ಉದಾಹರಣೆಗೆ, ಒಂದು ಕತೆಯಲ್ಲಿ ತುಳು ಭಾಷೆ ಕಾಣಿಸಿಕೊಂಡ ರೀತಿ ಇಂತಿದೆ–

**'ಹ್ಣಂ ....ಹ್ಣಾಂ ....ತತ್ರ್ ಪೋಂಡ್. ತತ್ರ್ ಪೋಂಡ್‌ಂತ ಸಮದಾನ ಮಾಡ್ತ್. ಕಲ್ಲ್ ಕೋಟೆ ಮುಳ್ಳ್ ಬೇಲಿ ಕುದ್ಕ ಬಲ್ಲಾಳ್ ಬತ್ತ್‌ದ್ ಭೂತೋ ಕೊರಿಯೆರ್‌ಂದ್ ಹೇಳ್ತ್. ಕಲ್ಲ್ ಕೋಟೆ ಮುಳ್ಳ್ ಬೇಲಿ ಕತ್ತಿ ಬೆಡಿತಗ್‌ಲ್ ಎರ್ಕೆರ್ಕ ಬರಡೇಂತ ಹೇಳ್ತ್. ಎಕಡ್ ಪಂಡ್‌ನ ದಾಯ್ತುವ್, ಅಯಿನೇ ಪನ್ಪುನಾಂತ್ ಹೇಳಿ ಜೋರ್ ಮಾಡ್ತ್. ಕಲ್ಲ್ ಕೋಟೆ ಮುಳ್ಳ್ ಬೇಲಿ ಕುದ್ಕ ಬಲ್ಲಾಳ ಬತ್ತ್‌ದ್ ಭೂತ ಕೊರಿಯೆರ್. ಕಲ್ಲ್ ಕೋಟೆ ಮುಳ್ಳ್ ಬೇಲಿ ಕತ್ತಿ ಬೆಡಿತಗ್‌ಲ್ ಎರ್ಕೆರ್ಕ ಬಂರಡೇಂತ ಹೇಳ್ದೇ ತಡ ಕುದ್ಕಂಗಲ ಎಲ್ಲಾ ಆಗ ಪೊಡಿ ಪೊಡಿ ಪೊಡಿ ಪೊಡಿ ಮಾಡ್ದೊ. ಅದರ್ಲಿ ಒಂದ್ ಕುದ್ಕ ಒಳ್ದುಟ್ಟ್.**

ಅದ್ ಈಗ ಊರ್ಲ್ಲಿ ಸಂಚಾರ ಮಾಡ್ಡೆ. ಅದರ ನೀವು ನೋಡಿ ಕಂಡ್ ಬರಕಡ'. ಒಂದು ಭಾಷೆಯೊಳಗೆ ಇನ್ನೊಂದು ಭಾಷೆಯು ಹೇಗೆ, ಯಾವಾಗ ಮತ್ತು ಎಲ್ಲಿ ಕಾಣಿಸಿಕೊಳ್ಳುತ್ತದೆ? ಅವುಗಳ ಕಾರ್ಯವೇನು? ಎಂಬ ಕುರಿತು ನಮ್ಮ ಸಂಶೋಧನೆಗಳು ಇನ್ನಷ್ಟು ಮುಂದುವರಿಯಬೇಕಾಗಿದೆ.

ಗದ್ಯ ಪದ್ಯ ಸಂಮಿಶ್ರಗೊಂಡರೆ ಅದನ್ನು ಚಂಪೂ ಎಂದು ನಾವು ಕರೆಯುತ್ತೇವೆ. ಅರೆಭಾಷೆಯಲ್ಲಿ ಚಂಪೂ ಶೈಲಿಯನ್ನು ಹೋಲುವ ಅನೇಕ ಕತೆಗಳಿವೆ. ಕೆಳಗಿನ ಭಾಗವನ್ನು ನೋಡಿ–

'ಕೊಡ್‌ಂತ ಹೇಳ್ತ್‌ಗಡ.
ಬಾಳೆಪಾಪಕ್
ನೂಲ ಕೈತಾಂಗಾಕ್
ಅಳೆತ್ತರ ಕೆಂಡಕೂಡ್ ಅಲ್ಲಿ ಬಂದ್
ಸತ್ಯ ಹೇಳ್ನೆಂತ ಹೇಳ್ತ್‌ಗಡ'
ಅಲ್ಲಿಂದ ಸೀದ ಕುದ್ಕಣ್ಣನ ಮನೆಗೆ ಹೋತ್‌ಗಡ. ಅಲ್ಲಿ ಹೋಕನ
'ಹಬ್ಬಾಂತ ಬಾರ
ಹೊಸ್ತೂಂತ ಬಾರ
ಇಂದೇಕೆ ಬಂದೆ ಚೋರೆಕ್ಕಾ
ನೀರ್ ಚಾಪೆ ತನ್ನಿರೋಮಕ್ಕಳಿರಾಂತ' ಹೇಳ್ತ್‌ಗಡ.
ನಿನ್ನ ನೀರ್‌ಚಾಪೆ ತೆಗ್ದ್ ಬೆಂಕಿಗೆ ಇಟ್ಟ್ ನನ್ನ ಮಕ್ಕಳ ತಿಂದ್‌ದರ ವಿಚಾರ್ಸಿಕೊಡ್‌ಂತ ಹೇಳ್ತ್‌ಗಡ'.

ಪದ್ಯ ಗದ್ಯ ಮಿಶ್ರಣದ ಇಂತ ಕತೆಗಳು ಅರೆಭಾಷೆಯ ಸತ್ವ ಶಕ್ತಿಯನ್ನು ಮನಗಾಣಿಸಬಲ್ಲುವು.

ಈ ಸಂಕಲನದಲ್ಲಿ ಕಾಣಿಸಿಕೊಂಡ ಅನೇಕ ಹೊಸಪದಗಳನ್ನು ಡಾ. ಬದಿಕಾನ ಅವರು ಕೃತಿಯ ಕೊನೆಯಲ್ಲಿ ಪಟ್ಟಿಮಾಡಿಕೊಟ್ಟಿದ್ದಾರೆ. ಹಾಗೆ ನೋಡಿದರೆ, ಅರೆಭಾಷಾ ಪದಕೋಶವೊಂದರ ನಿರ್ಮಾಣ ಇಂದಿನ ಅಗತ್ಯಗಳಲ್ಲಿ ಒಂದು. ಕನ್ನಡದಲ್ಲಿ ಒಂದು ಕಾಲಕ್ಕೆ ಇದ್ದು ಇದೀಗ ಕಾಣೆಯಾಗಿರುವ ಅನೇಕ ಪದಗಳು ಅರಭಾಷೆಯಲ್ಲಿ ಇಂದಿಗೂ ಉಳಿದುಕೊಂಡಿರುವುದಕ್ಕೆ ಈ ಕಥಾ ಸಂಕಲನವೇ ಸಾಕ್ಷಿ.

ಒಟ್ಟಿನಿಂದ ಡಾ. ವಿಶ್ವನಾಥ ಬದಿಕಾನ ಅವರು ಶ್ರಮವಹಿಸಿ ಸಂಪಾದಿಸಿದ ಈ ಕೃತಿಯು ಅರೆಭಾಷೆಗೆ ಶೈಕ್ಷಣಿಕ ವಲಯದಲ್ಲಿ ಮನ್ನಣೆ ತಂದೀಯಬಲ್ಲ ಮಹತ್ವದ ಕೃತಿ. ಇಂತಹ ಸಾಧನೆ ಮಾಡಿದ ಅವರನ್ನು ಎಲ್ಲ ಭಾಷಾಭಿಮಾನಿಗಳ ಪರವಾಗಿ ಅಭಿನಂದಿಸುತ್ತೇನೆ.

**ಪುರುಷೋತ್ತಮ ಬಿಳಿಮಲೆ**

ಸಂಪಾದಕರ ನುಡಿ

# ಅಜ್ಜಿಕತೆ ಓದುವುದಕ್ಕೆ ಮೊದಲು

## ಭಾಗ 1

1991–92ರಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಡಾ. ಪುರುಷೋತ್ತಮ ಬಿಳಿಮಲೆಯವರ ಮಾರ್ಗದರ್ಶನದಲ್ಲಿ ನನಗೆ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಸಿಕ್ಕಿತು. ಆ ಸಂದರ್ಭದಲ್ಲಿ ಸುಳ್ಯ ತಾಲೂಕಿನ ಗೌಡರು ಮಾತನಾಡುವ ಅರೆಭಾಷೆಯ ಅಜ್ಜಿಕತೆಗಳನ್ನು ಆಧರಿಸಿ ಅಧ್ಯಯನಕ್ಕೆ 120 ಕತೆಗಳನ್ನು ಸಂಗ್ರಹಿಸಿದ್ದೆ. ಅವುಗಳಲ್ಲಿ 100 ಕತೆಗಳಿಗೆ ವರ್ಗ ಮತ್ತು ಆ ಕತೆಗಳಿಗೆ 320 ಆಶಯಗಳನ್ನು ಗುರುತಿಸಿ 'ಗೌಡ ಕನ್ನಡದ ಜನಪದ ಕಥೆಗಳು – ವರ್ಗ ಮತ್ತು ಆಶಯ ಸೂಚಿ' ಸಂಶೋಧನ ಕೃತಿಯನ್ನು ತಯಾರಿಸಲಾಯಿತು. ಅವುಗಳಲ್ಲಿ 7 ಹೊಸ ಉಪವರ್ಗಗಳನ್ನು ಗುರುತಿಸಿ ಗೌಡ ಕನ್ನಡದ ಕತೆಗಳಲ್ಲಿ ನರಿ ಸಾಯುವ ಕತೆಗಳು ಈ ಪ್ರದೇಶದ ವೈಶಿಷ್ಟವನ್ನು ಪ್ರತಿಬಿಂಬಿಸಿದೆ ಎಂದು ತಿಳಿಯಲಾಯಿತು. 1994ರಲ್ಲಿ ಈ ಸಂಶೋಧನ ಗ್ರಂಥವನ್ನು 'ಗೌಡ ಕನ್ನಡದ ಜನಪದ ಕಥೆಗಳು – ವರ್ಗ ಮತ್ತು ಆಶಯ ಸೂಚಿ' ಎಂಬ ಶೀರ್ಷಿಕೆಯಲ್ಲೇ ಪ್ರಕಟಿಸಲಾಯಿತು. ಪ್ರಸ್ತುತ 1991ರಲ್ಲಿ ಸಂಗ್ರಹಿಸಲಾದ ಅರೆಭಾಷೆಯ ಕತೆಗಳನ್ನು ಮೂಲ ರೂಪದಲ್ಲೇ ಪ್ರಕಟಿಸುವುದಕ್ಕೆ ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಂಘದವರು ಒಪ್ಪಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ಕತೆ ಹೇಳಿದ ಎಲ್ಲ ನಿರೂಪಕರನ್ನು ಮತ್ತು ಕತೆ ಸಂಗ್ರಹಕ್ಕೆ ಸಹಕರಿಸಿದ ಎಲ್ಲರನ್ನೂ ನೆನಪಿಸಿಕೊಳ್ಳುತ್ತಿದ್ದೇನೆ. ಅವರಿಗೆ ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ.

ಅಜ್ಜಿಕತೆ ಹೇಳಿದ 29 ಜನ ಕತೆಗಾರರಿಗೆ ಮತ್ತು ಕತೆ ಸಂಗ್ರಹ ಮಾಡುವುದಕ್ಕೆ ಸಹಕಾರ ನೀಡಿದ ನಾಗೇಶ್ ಕುಂದಲ್ಪಾಡಿ, ಲೋಕೇಶ್ ಅಮ್ಚೂರ್, ಡಿ. ಬಿ. ಬಾಲಕೃಷ್ಣ, ಪಾನತ್ತಿಲ ಚಂದ್ರಶೇಖರ್, ಡಾ. ಪಿ. ಶ್ರೀಧರ್ ಗೌಡ, ಪುರುಷೋತ್ತಮ ಗೌಡ ಮಡ್ತಿಲ ಹೀಗೆ ಎಲ್ಲರನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುತ್ತಿದೇನೆ.

ಅಜ್ಜಿಕತೆಗಳ ಸಂಗ್ರಹವು ಪುಸ್ತಕರೂಪದಲ್ಲಿ ಬರುವುದಕ್ಕೆ ಕಾರಣರಾದ ಕೋಲ್ಚಾರ್ ಪದ್ಮನಾಭರಿಗೆ, ಮುನ್ನುಡಿ ಬರೆದುಕೊಟ್ಟ ಗುರುಗಳಾದ ಡಾ. ಪುರುಷೋತ್ತಮ ಬಿಳಿಮಲೆಯವರಿಗೆ, ಅಂದವಾದ ಮುಖಪುಟ ರಚಿಸಿದ ಶ್ರೀ ಮೋಹನ್ ಸೋನರವರಿಗೆ, ಪ್ರಿಂಟಿಂಗ್ ಸಮಯದಲ್ಲಿ ಸಹಾಯ ಮಾಡಿದ ಮಡದಿ ಎಂ.ಕೆ. ಸರೋಜ, ಮಕ್ಕಳಾದ ಆಶಯ್–ಅನ್ವಿತ್‌ಗೆ, ಗೆಳೆಯ ಕುದ್ಪಾಜೆ ಸಂಜೀವಂಗೆ, ಮುಕ್ಕಾಟಿ ಮನೋಜ್ ಕುಮಾರ್, ಮನೋಜ್ ಆ್ಯಂಡ್ ಅಸೋಶಿಯೇಟ್ಸ್, ಜಯನಗರ ಬೆಂಗಳೂರು ಇವರಿಗೆ, ಮತ್ತು ಮುದ್ರಣ ಮಾಡಿದ ನೇಹಾ ಕ್ರಿಯೇಷನ್ಸ್, ಬೆಂಗಳೂರು, ಇವರಿಗೆ, ನನ್ನ ಮನಪೂರ್ವಕ ವಂದನೆಗಳು.

## ಭಾಗ 2

ಸುಳ್ಯದಲ್ಲಿ ಶೆಟ್ರು, ಪೂಜಾರಿಗಳು, ಕೃಷಿಕೂಲಿ ಕಾರ್ಮಿಕರು ಮನೆಯಲ್ಲಿ ಮಾತನಾಡುವ ಭಾಷೆ ತುಳು. ಮಾಪಿಳ್ಳೆಗಳು ಬ್ಯಾರಿಭಾಷೆ ಮಾತನಾಡುವರು. ಆದರೆ, ಬಹುಸಂಖ್ಯಾತರಾಗಿರುವ ಒಕ್ಕಲಿಗಗೌಡರ ಮನೆಮಾತು 'ಅರೆಭಾಷೆ'. ವ್ಯಾವಹಾರಿಕವಾಗಿ ಎಲ್ಲ ವರ್ಗದವರೂ ಅರೆಭಾಷೆಯನ್ನು ಮಾತನಾಡುತ್ತಾರೆ. ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆಯ ಪೂರ್ವಭಾಗವಾದ ಸುಳ್ಯ ತಾಲೂಕು ಮತ್ತು ಕೊಡಗು ಜಿಲ್ಲೆಯ ಮಡಿಕೇರಿ, ಸೋಮವಾರಪೇಟೆ, ವಿರಾಜಪೇಟೆ ತಾಲೂಕಿನ ಒಕ್ಕಲಿಗಗೌಡರು 'ಅರೆಭಾಷೆ'ಯನ್ನೇ ಮಾತನಾಡುತ್ತಾರೆ. ಭಾಷಾವಿಜ್ಞಾನಿ ಪ್ರೊ. ಕೋಡಿ ಕುಶಾಲಪ್ಪಗೌಡರು ಈ ಭಾಷೆಯನ್ನು'Gowda Kannada'(1976)ಕೃತಿಯಲ್ಲಿ 'ಗೌಡಕನ್ನಡ'ವೆಂದು ಕರೆದಿದ್ದಾರೆ. 2011ರಲ್ಲಿ ಸರ್ಕಾರವು 'ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ'ಯನ್ನು ಸ್ಥಾಪಿಸಿತು.

ಅರೆಭಾಷೆಯು ದಕ್ಷಿಣಕನ್ನಡ ಮತ್ತು ಕೊಡಗು ಪ್ರದೇಶಗಳಲ್ಲಿ ಗೌಡಸಮುದಾಯದರು ಒಟ್ಟು ಸೇರಿದಾಗ ಮಾತನಾಡುವ ಕನ್ನಡದ ಒಂದು 'ಉಪಭಾಷೆ'ಯಾಗಿದೆ. ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಯ ಪೂರ್ವಭಾಗಗಳಲ್ಲಿ ಪಾಲಾರ್, ಬಂದಡ್ಕ, ಅಡೂರು-ಮುಡೂರು ಭಾಗಗಳಲ್ಲಿ ಬಹುಪಾಲು ಅರೆಭಾಷೆ ಮಾತನಾಡುವ ಒಕ್ಕಲಿಗಗೌಡರಿದ್ದಾರೆ. ಕೊಡಗಿನ ಮಡಿಕೇರಿ ತಾಲೂಕಿನ ಜನಸಂಖ್ಯೆಯ ಅರ್ಧಕ್ಕಿಂತ ಹೆಚ್ಚು ಅಂದರೆ 40ಸಾವಿರದಷ್ಟು ಜನರು ಅರೆಭಾಷೆಯನ್ನು ಮಾತನಾಡುತ್ತಾರೆ.It is a 'half-tongue',(Are= half, Bhashe= speech) which is actually an admixture Kannada.(Gowda Kannada,1976)ಈ ಭಾಷೆಯ ಪದಗಳು ಕನ್ನಡದ 'ಅರ್ಧ'ದ ಜೊತೆಗೆ ಮಿಶ್ರವಾಗಿರುತ್ತವೆ. ಉದಾಹರಣೆಗೆ, ಕನ್ನಡದ 'ಆಯಿತು' ಕ್ರಿಯಾಪದ ಅರೆಭಾಷೆಯಲ್ಲಿ 'ಆತ್'. ಹೋಗಿದ್ದಾನೆ-ಹೋತ್, ಬಂದಿದ್ದಾನೆ-ಬಾತ್, ಬಿದ್ದಿದ್ದಾನೆ-ಬೀತ್, ಬರುತ್ತೇನೆ-ಬನ್ನೆ, ಹೋಗುತ್ತೇನೆ-ಹೋನೆ, ತಿನ್ನುತ್ತೀಯ-ತಿಂದ್ಯ, ಬರುತ್ತೀಯ-ಬಂದ್ಯ, ನಿಲ್ಲುತ್ತೀಯ-ನಿಂತ್ಯಾ, ಹೊಗುತ್ತೀಯ-ಹೋದಿಯ ಇತ್ಯಾದಿ.

ಭೂತಕಾಲ 'ಬಂದೆ', ವರ್ತಮಾನಕಾಲ 'ಬನ್ನೆ', ಭವಿಷ್ಯತ್ ಕಾಲ 'ಬಾಂವೆ' ಆಗುತ್ತದೆ. ಉದಾಹರಣೆಗೆ, 'ನಿನ್ನೆ ಬಂದೆ'(ನಿನ್ನೆ ಬಂದಿದ್ದೆ), 'ಇಂದ್ ಬನ್ನೆ'(ಇವತ್ತು ಬರುತ್ತೇನೆ), 'ನಾಳೆ ಬಾಂವೆ'(ನಾಳೆ ಬರುವೆನು) ಇತ್ಯಾದಿ.

ಬೇಕು ಎನ್ನುವುದು 'ಒಕು' ಎಂಬ ಪ್ರತ್ಯಯವಾದರೆ ಬೇಡವು 'ಬಡ' ಎಂಬ ಪ್ರತ್ಯಯ ರೂಪತಾಳುತ್ತದೆ. ಉದಾ: ಬರಬೇಕು-ಬರೊಕು, ಬರಬೇಡ-ಬರ್ಬಡ ಇತ್ಯಾದಿ.

'ಅಂತೆ' ಎಂಬ ಅರ್ಥದಲ್ಲಿ 'ಗಡ' ಪ್ರತ್ಯಯ ವಿಶಿಷ್ಟವಾಗಿದೆ. ಏನಂತೆ-ಏನ್‌ಗಡ, ಹೌದಂತೆ-ಹೌದ್‌ಗಡ, ಹೋದಂತೆ-ಹೋತ್‌ಗಡ, ಬಂದಂತೆ-ಬಾತ್‌ಗಡ, ಇದ್ದಂತೆ-ಇತ್ತ್‌ಗಡ

ಇತ್ಯಾದಿ. 'ಗಡ' ಪದವನ್ನು ಕಾಸರಗೋಡಿನ ಬಂದಡ್ಕ, ಮಡಿಕೇರಿಯ ಭಾಗಮಂಡಲ ಪರಿಸರದಲ್ಲಿ ಹೆಚ್ಚು ಬಳಸುತ್ತಾರೆ. ಈ ಪ್ರದೇಶದವರನ್ನು 'ಗಡಗಡ ಭಾಷೆ' ಯವರೆಂದು ಕರೆಯುತ್ತಾರೆ.

ಕನ್ನಡದ 'ಗಳ್', 'ಗಳು' ಬಹುವಚನ ರೂಪ ಪ್ರತ್ಯಯಗಳು ಅರೆಭಾಷೆಯಲ್ಲಿ ನಾಮಪದದ ಜೊತೆಗೆ 'ಗ' ಧ್ವನಿಯಾಗಿ ಬಳಕೆಯಾಗುತ್ತದೆ. ಉದಾ: ನಾಯಿಗಳು-ನಾಯಿಗ, ಮನೆಗಳು-ಮನೆಗ ಇತ್ಯಾದಿ.

ಕನ್ನಡದ 'ಅರ್' ಎಂಬ ಕ್ರಿಯಾ ವಿಭಕ್ತಿ ಪ್ರತ್ಯಯವು 'ಗ' ಧ್ವನಿಯಾಗಿ, 'ಎರ್', 'ಅರ್‍ಗ', 'ಇರ್‍ಗ' ಎಂಬ ಕ್ರಿಯಾರೂಪವಾಗಿ ಬಳಕೆಯಲ್ಲಿದೆ. ಉದಾ: ಮಾವಂದಿರ್-ಮಾವಗ/ಮಾವಂದಿರ್‍ಗ, ಜನರು-ಜನಗ, ಭಾವಂದಿರ್-ಭಾವೆರ್/ಭಾವಂದಿರ್‍ಗ, ಅಣ್ಣಂದಿರ್-ಅಣ್ಣೆರ್ ಇತ್ಯಾದಿ

'ಅತ್' ಎಂಬ ವಿಶಿಷ್ಟ ಪ್ರತ್ಯಯದ ಬಳಕೆ ಅರೆಭಾಷೆಯಲ್ಲಿದೆ. ಉದಾಹರಣೆಗೆ, ಬಿದ್ದಿದ್ದಾನೆ-ಬಿದ್ದತ್, ಕೂತಿದ್ದಾನೆ-ಕುದ್ದತ್, ನಿಂತಿದ್ದಾನೆ-ನಿಂತತ್ ಇತ್ಯಾದಿ

ಕನ್ನಡದಲ್ಲಿ ನಾಮಪದಗಳಿಗೆ 'ಇಗ' ಪ್ರತ್ಯಯ ಸೇರುವಾಗ ಹಾವಾಡಿಗ, ಕಲ್ಲುಕುಟಿಗ, ಕನ್ನಡಿಗ ಮುಂತಾಗಿ ಬಳಕೆಯಾಗುತ್ತದೆ. 'ಇಗ' ಎಂಬ ಪ್ರತ್ಯಯವು ಅರೆಭಾಷೆಯಲ್ಲಿ ಕ್ರಿಯಾಪದಗಳಿಗೆ ಹತ್ತುವುದರಿಂದ ಇದೊಂದುಪ್ರಾದೇಶಿಕ ವ್ಯತ್ಯಾಸವಾಗಿ ರೂಪುಗೊಳ್ಳುತ್ತದೆ.'ಈಯ', 'ಈರಾ' ಮುಂತಾದ ಪ್ರತ್ಯಯಗಳು 'ಇಗ'ವಾಗಿ ಬಳಕೆಯಲ್ಲಿದೆ. ಉದಾಹರಣೆಗೆ, ಸುಳ್ಯದ ಗುತ್ತಿಗಾರು ಪರಿಸರದಲ್ಲಿ ಬರುತ್ತೀಯ-ಬಂದಿಗ, ನಿಲ್ಲುತ್ತೀಯ-ನಿಂತಿಗ, ಹೊಗುತ್ತೀಯ-ಹೋದಿಗ. ಈ ಪ್ರದೇಶದವರನ್ನು ಹೋದಿಗ-ಬಂದಿಗ ಭಾಷೆಯವರೆಂದು ಕರೆಯುತ್ತಾರೆ.

ಕ್ರಿಯಾಪದಗಳಿಗೆ ಹತ್ತುವ 'ಈಯ', 'ಇಗ' ಪ್ರತ್ಯಯಗಳಂತೆ 'ಅಂಬ್ರಿ' ಎಂಬ ಬಳಕೆಯೂಸುಳ್ಯದ ಕುಕ್ಕೆ ಸುಬ್ರಹ್ಮಣ್ಯದ ಕಡೆ ಇದೆ. ಉದಾ: ಹೋಗುತ್ತೀಯ-ಹೋತಂಬ್ರಿ, ಬರುತ್ತೀಯ-ಬಾತಂಬ್ರಿ, ನಿಲ್ಲುತ್ತೀಯ-ನಿಂತಬ್ರಿಈ ಪ್ರದೇಶದ ಅರೆಭಾಷಿಗರನ್ನು ಹೋತಂಬ್ರಿ-ಬಾತಂಬ್ರಿ ಭಾಷೆಯವರೆಂದು ಕರೆಯುತ್ತಾರೆ.

ಈ ಮೇಲಿನ ವಿಚಾರಗಳ ಬಗೆಗೆ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.ಅರೆಭಾಷೆಯು ಆಡುಮಾತಿನ ರೂಪದಲ್ಲೇ ಬಳಕೆಯಲ್ಲಿದ್ದು ಸಂಸ್ಕೃತದ ಪ್ರಭಾವಕ್ಕೊಳಗಾಗಲಿಲ್ಲ. ಐದು ಅನುನಾಸಿಕ ವ್ಯಂಜನಗಳು ಅರೆಭಾಷೆಯಲ್ಲಿ ಬಳಕೆಯಾಲ್ಲಿವೆ. ಉದಾಹರಣೆಗೆ, ಬಂಜ(ಕಷ್ಟ), ಮಂಜ(ಮಗ), ಹಂಞ(ಸ್ವಲ್ಪ), ಕುಂಞಿನಾಯಿ (ಮರಿ ನಾಯಿ)

ಅರೆಭಾಷೆಯ ಸರ್ವನಾಮ, ಲಿಂಗ ಮತ್ತು ವಚನಗಳಲ್ಲೂ ವಿಶಿಷ್ಟತೆಯಿದೆ. ಪ್ರಥಮಾ ಪುರಷ ಪುಲ್ಲಿಂಗ ಏಕವಚನವು ಅಂವ(ಅವನು) ಎಂದಾದರೆ ಬಹುವಚನವು ಅವ್ರ(ಅವರು)

ಎಂದಾಗುತ್ತದೆ. ಉದಾ: ಅಂವ ಹೈದ(ಅವನು ಹುಡುಗ), ಅಪ್ರ್ ತಾತ(ಅವರು ತಾತ). ಪ್ರಥಮಾ ಪುರಷ ಸ್ತ್ರೀಲಿಂಗ ಏಕವಚನವು ಅದ್(ಅವಳು) ಎಂದಾದರೆ ಬಹುವಚನವು ಅಪ್ರ್(ಅವರು) ಎಂದಾಗುತ್ತದೆ. ಉದಾ: ಅದ್ ಗೂಡೆ(ಅವಳು ಹುಡುಗಿ), ಅಪ್ರ್ ಅವ್ವ (ಅವರು ಅವ್ವ). ಪ್ರಥಮಾಪುರುಷ ನಪುಂಸಕ ಲಿಂಗ ಏಕವಚನವು ಅದ್(ಅದು), ಬಹುವಚನವು ಅವ್(ಅವು) ಎಂದಾಗುತ್ತದೆ. ಅದ್ ನಾಯಿ(ಅದು ನಾಯಿ), ಅವ್ ನಾಯಿಗ(ಅವು ನಾಯಿಗಳು). ಮಧ್ಯಮ ಪುರುಷ ಮತ್ತು ಉತ್ತಮ ಪುರುಷ ಏಕವಚನ ಮತ್ತು ಬಹುವಚನಗಳಲ್ಲಿ ಅಂತಹ ವಿಶೇಷ ವ್ಯತ್ಯಾಸಗಳೇನೂ ಇಲ್ಲ. ಉದಾ: ನೀನು 'ನೀ', ನಾನು 'ನಾ' ಬಳಕೆಯಲ್ಲಿದೆ. ಆದರೆ ಮಧ್ಯಮಪುರುಷ ಸ್ತ್ರೀಲಿಂಗದಲ್ಲಿ 'ನೀನು' ಸರ್ವನಾಮವು ಏಕವಚನದಲ್ಲೂ ಬಹುವಚನದಲ್ಲೂ ಒಂದೇ ಆಗಿದೆ. ಉದಾಹರಣೆಗೆ:ಹೆಂಡತಿ ಗಂಡನನ್ನು 'ನೀ ಬಾಯ'(ನೀನು ಬಾರೊ) ಎಂದು ಸಂಬೋಧಿಸುವುದು ಬಳಕೆಯಲ್ಲಿದೆ. ತುಳು-ಕನ್ನಡ ಪರಿಸರದಲ್ಲಿ 'ನೀವು' ಮಧ್ಯಮಪುರುಷ ಬಹುವಚನ ಪ್ರಯೋಗವೂ ಬಳಕೆಯಲ್ಲಿದೆ.

**ಭಾಗ 3**

ಇಂದು ನಾವು ಜನಪದ ಕತೆಗಳನ್ನು ಕೇಳುವ ಅವಶ್ಯಕತೆಯನ್ನು ಮೀರಿ ಬೆಳೆದಿದ್ದೇವೆ. ಕಂಪ್ಯೂಟರಿನಲ್ಲಿ 'ಆ್ಯನಿಮೇಶನ್' ಚಿತ್ರತಯಾರಿ ಮತ್ತು ನಿರೂಪಣೆ ಬಂದಮೇಲೆ ಇಂದು ಅಜ್ಜ-ಅಜ್ಜಿಯರಿಂದ ತೊಡಗಿ ಎಲ್.ಕೆ.ಜಿ. ವರೆಗಿನ ಮಕ್ಕಳನ್ನೂ ಕಾರ್ಟೂನು ಪೋಗೋದಂತಹ ಚಾನೆಲ್‌ಗಳು ಆಕರ್ಷಿಸ ಬಯಸಿವೆ. ನಮ್ಮ ಬೇಕು ಬೇಡಗಳು ಟಿ.ವಿ. ಪರದೆಯ ಮೇಲೆ ನಿರ್ಧಾರಗೊಳ್ಳುತ್ತವೆ. ದಿನ ನಿತ್ಯ ಬರುವ ಧಾರಾವಾಹಿಗಳ ಕತೆಗಳೇ ಬದುಕಿನ ಸ್ಥಾನವನ್ನು ತುಂಬಿಕೊಂಡಿವೆ. ಮೊಬೈಲ್ ಪರದೆಯಲ್ಲಿ ಮೆಸ್ಸೇಜ್ ಓದುವ, ವಾಟ್ಸಪ್ ನೋಡುವ, ಯಾರದೋ ಫೇಸ್‌ಬುಕ್‌ಗೆ ಲೈಕ್‌ಕ್ಲಿಕ್ ಮಾಡಿ ತಮ್ಮಷ್ಟಕ್ಕೆ ನಗುವ ಅಥವಾ ಬೇರೆ ಯಾರದೋ ಅಶರೀರವಾಣಿಗೆ ತಮ್ಮಷ್ಟಕ್ಕೆ ನಿಂತಲ್ಲೇ ನಿಂತು ಮಾತನಾಡುವ ಜಾಯಮಾನದಲ್ಲಿದ್ದೇವೆ. ಇಂತಹ ಸಂದರ್ಭದಲ್ಲಿ ಬದುಕನ್ನು ತಿದ್ದುವ **ಜನಪದ ಕತೆ**ಗಳನ್ನು ತಿಳಿದುಕೊಳ್ಳುವ ಅವಶ್ಯಕತೆಯಿದೆ.

ಜನಪದ ಕತೆಗಳಲ್ಲಿ ಏನಿದೆ? ಅದು ಕಟ್ಟುಕತೆಯೇ? ಅಜ್ಜಿಕತೆಯೇ? ಸರಳಕತೆಯೇ? ನಡೆದ ಕತೆಯೇ? ಹೀಗೆಲ್ಲಾ ಹಲವು ಪ್ರಶ್ನೆಗಳು ಉದ್ಭವಿಸುತ್ತವೆ. ಇವೆಲ್ಲವಕ್ಕೂ ಉತ್ತರಿಸುವುದು ಕಷ್ಟವಾದರೂ ಭಾರತೀಯರಲ್ಲಿ 'ಅಜ್ಜಿ' ಕತಾ ನಿರೂಪಕಿ. ಅಜ್ಜಿ ಯಾವ ಕತೆಯನ್ನು ಹೇಳುತ್ತಾಳೆ? ಯಾರಿಗೆ ಹೇಳುತ್ತಾಳೆ? ಎಷ್ಟೊತ್ತಿಗೆ ಹೇಳುತ್ತಾಳೆ? ಮತ್ತು ಯಾಕೆ ಹೇಳುತ್ತಾಳೆ? ಎಂಬುದಕ್ಕೆ ಅಜ್ಜಿ ಒಂದು ಕುಟುಂಬ ಪದ್ಧತಿ[Kinship]ಯಲ್ಲಿ ಬೆಳೆದಿರುತ್ತಾಳೆ. ಮಗು ಗಂಡಾಗಿದ್ದರೆ ಅಥವಾ ಹೆಣ್ಣಾಗಿದ್ದರೆ ಕತೆಯ ನಿರೂಪಣೆಯನ್ನು ಅಜ್ಜಿ ಬದಲಾಯಿಸಿಕೊಳ್ಳುತ್ತಾಳೆ. ತನ್ನ

ಕುಟುಂಬದಲ್ಲಿ ಆಗು ಹೋಗುವ ಎಲ್ಲವುಗಳಿಗೂ ಕುಟುಂಬ ಪದ್ಧತಿಯ ಆಧಾರದಲ್ಲೇ ಅರ್ಥಕಟ್ಟುತ್ತಾಳೆ. ಅವುಗಳನ್ನು ಮರಿ ಮಕ್ಕಳೊಂದಿಗೆ ಹೇಳಿ ಬದುಕುವುದಕ್ಕೆ ಪ್ರಯತ್ನಿಸುತ್ತಾಳೆ. ಅಂತಹ ಪ್ರಯತ್ನಗಳಲ್ಲಿ 'ಅಜ್ಜಿಯ ಕತೆ' ಪ್ರಧಾನ ಪಾತ್ರ ವಹಿಸುತ್ತದೆ.

'ಅಜ್ಜಿಯ ಕತೆ' ಹೇಳುತ್ತಾಳೆಂಬುದು ನಮ್ಮ ಭಾರತದ ಜಾನಪದ ಪರಿಸರದಲ್ಲಿದ್ದು, ಇಂತಹ ವಿವರಣೆಗಳು ನಮಗೆ ಒಪ್ಪುತ್ತವೆ. ಜಾಗತಿಕ ಮಟ್ಟದಲ್ಲಿ ಕತೆಯನ್ನು ನಿರೂಪಿಸುವವರು, ನಿರೂಪಣೆಯ ಪರಿಸರಗಳು ಭಿನ್ನವಾಗಿರಬಹುದು. ಉದಾಹರಣೆಗೆ, ಜರ್ಮನಿಯ ಗ್ರಿಮ್ ಸಹೋದರರಿಗೆ ಹದಿನಾರು ವರ್ಷದ ಯುವತಿ ಕತೆ ಹೇಳಿದಳು. ಅಂದರೆ ಜನಪದ ಕತೆಯನ್ನು ಹೇಳುವ ಸಂದರ್ಭದ ಬಗೆಗೆ ನಾವು ವಿವರಿಸಿಕೊಂಡದ್ದು ತೀರಾ ಸಂಕುಚಿತಾರ್ಥವಾಗುತ್ತದೆ. ಈ ನೆಲೆಯಲ್ಲಿ ಜನಪದ ಕತೆಗಳನ್ನು ಜಾಗತಿಕ ನೆಲೆಯಲ್ಲಿ ವಿದ್ವಾಂಸರು ಅಧ್ಯಯನಿಸುವ ಪ್ರಕ್ರಿಯೆಗೆ ತೊಡಗಿದ್ದಾರೆ. ಅಂತಹ ಅಧ್ಯಯನಕ್ಕಾಗಿ ಹಲವು ಸಿದ್ಧಾಂತಗಳು ರೂಪುಗೊಂಡು ಅನೇಕ ಆರ್ಥಗಳನ್ನು, ಚಿಂತನೆಗಳನ್ನು ಇಂದು ಜಾಗತಿಕ ನೆಲೆಯಲ್ಲಿ ಸೃಷ್ಟಿಸಿವೆ. ಜನಪದ ಕತೆಗಳಿಗೆ ವರ್ಗಸೂಚಿ ಮತ್ತು ಆಶಯಸೂಚಿಗಳನ್ನು ತಯಾರಿಸಿ ಜಾಗತಿಕ ಮಟ್ಟದಲ್ಲಿ ಕತೆಗಳು ಒಂದೇ ಪಠ್ಯವನ್ನು ಹೋಲುವ ಭಿನ್ನ ಪಠ್ಯಗಳಾಗಿ ತೋರುತ್ತವೆಂದು ಅಧ್ಯಯನಗಳು ನಡೆದಿವೆ. ಅಂತಹ ಅಧ್ಯಯನಗಳ ಆರಂಭವು ಇಂದಿನ ವರೆಗೆ ನಡೆದು ಬಂದ ನೆಲೆಯಲ್ಲಿ ಅರೆಭಾಷೆಯ ಕತೆಗಳನ್ನು ವಿವರಿಸುವ ಉದ್ದೇಶವನ್ನು ಪ್ರಯತ್ನಿಸಬಹುದಾಗಿದೆ.

## ಭಾಗ 4

ಜಾನಪದ ಅಂದರೆ ಪರಂಪರೆ, ಅದು ಪುರಾಣದ ಒಡೆದ ಚೂರುಗಳು, ಅವುಗಳು ದಂತಕತೆಗಳು, ಐತಿಹ್ಯಗಳು, ಇತಿಹಾಸದ ಪುನಾರಚಣೆಗೆ ಅವುಗಳು ಸಹಾಯವಾಗುವುವು ಹೀಗೆಲ್ಲಾ ಹಲವಾರು ಪ್ರಮೇಯಗಳೊಂದಿಗೆ 1800ರಿಂದ ಈಚೆಗೂ ಚರ್ಚೆಯಾಗಿವೆ.

ಕರ್ನಾಟಕದ ನೆಲೆಯಲ್ಲಿ ಜಾನಪದ ಅಧ್ಯಯನಕಾರರ ಎದುರಲ್ಲಿ ಇರುವುದು ಈ ಮೂರು ನೆಲೆಗಳು.

1. **'ಪರಂಪರೆ ಮತ್ತು ಜಾನಪದ'.**
2. **'ಆಧುನಿಕತೆ ಮತ್ತು ಜಾನಪದ'.**
3. **ಇವುಗಳ ಸಮ್ಮಿಶ್ರಣ : 'ಪರಂಪರೆ–ವಸಾಹತೀಕರಣ–ಆಧುನಿಕತೆ–ಆಧುನಿಕೋತ್ತರ'.**

**ಪರಂಪರೆ ಮತ್ತು ಜಾನಪದ**ದ ಬಗೆಗೆ ಈಗಾಗಲೇ ಜಾಗತಿಕ ಮಟ್ಟದಲ್ಲಿ ಸಿದ್ಧಾಂತಗಳು, ಚರ್ಚೆಗಳು ನಡೆದಿವೆ. ಪಾಶ್ಚಾತ್ಯರಲ್ಲಿ 'ಈಲಿಯೆಡ್','ಒಡಿಸ್ಸಿ'ಯಂತಹ ಶಿಷ್ಟಕಾವ್ಯಗಳು, 'ಕಲೆವಾಲ'ದಂತಹ ಜನಪದ ಕಾವ್ಯಕತೆಗಳು ಬದುಕಿದರೆ, ಭಾರತದಲ್ಲೂ 'ರಾಮಾಯಣ', 'ಮಹಾಭಾರತ'ದಂತಹ ಶಿಷ್ಟ ಮತ್ತು ಜನಪದ ಕಾವ್ಯಕತೆಗಳೇ ಹೆಚ್ಚು ಬದುಕಿವೆ. ಪುರಾಣ

ಮೂಲಸಿದ್ಧಾಂತ(ಗ್ರಿಮ್ ಸಹೋದರರು), ಭಾರತೀಯ ಮೂಲಸಿದ್ಧಾಂತ(ಥಯೋಡಾರ್ ಬೆನ್ಫೆ – ಪಂಚತಂತ್ರ ಕತೆಯ ತೌಲನಿಕ ಅಧ್ಯಯನ ನಡೆಸಿದಾತ), ಮಾನವಶಾಸ್ತ್ರೀಯ ಪಂಥ(ಇ. ಬಿ. ಟೈಲರ್), ಚಾರಿತ್ರಿಕ ಭೌಗೋಳಿಕ ವಿಧಾನ(ಫಿನ್ನಿಷ್ ವಿಧಾನ – ಕಾರ್ಲೆ ಕ್ರಾಹ್ನ ಪ್ರಮುಖ), ಮನಶ್ಶಾಸ್ತ್ರೀಯ ಸಿದ್ಧಾಂತ(ಫ್ರಾಯ್ಡ್ ಮತ್ತು ಆತನ ಶಿಷ್ಯರು), ಕ್ರಿಯಾತ್ಮಕ ಸಿದ್ಧಾಂತ (ಬೊಯಾಸ ಮತ್ತು ಮ್ಯಾಲಿನೋವ್‌ಸ್ಕಿ), ಸಾಂದರ್ಭಿಕ ಸಿದ್ಧಾಂತ (1860ರಲ್ಲಿ ರಷ್ಯನ್ ಜಾನಪದ ವಿದ್ವಾಂಸರ ಗುಂಪು), ರೂಪನಿಷ್ಠ ಸಿದ್ಧಾಂತ (ರಷ್ಯನ್ ವಿದ್ವಾಂಸ ಪ್ರಾಫ್) – ಮೊದಲಾದವುಗಳು ಜನಪದ ಕತೆಗಳನ್ನು ಒಂದು ನಿಶ್ಚಿತ ಸಿದ್ಧಾಂತಗಳಿಗೆ ಹಚ್ಚಿ ಅರ್ಥ ಕಲ್ಪಿಸಿಕೊಂಡವು. ಈ ಪ್ರಕಾರ ಭಾರತದಲ್ಲಿ ಕತೆಗಳ ಮೂಲ, ಅವುಗಳ ಇತಿಹಾಸ ಹೀಗೆ ಪರಂಪರೆಯ ಸುತ್ತಾಟದಲ್ಲಿ ಜನಪದ ಕತೆಗಳನ್ನು ತೊಡಗಿಸಿಕೊಂಡಿತು.

ಜಗತ್ತಿನಾದ್ಯಂತ ಇರುವ ಕಥೆಗಳ ವಸ್ತುವಿನಲ್ಲಿ ಸಾಮ್ಯವಿದೆಯೆಂಬುದು ವಿದ್ವಾಂಸರ ಅಭಿಪ್ರಾಯ. ಕೇಳುಗರ ಮತ್ತು ನಿರೂಪಕರ ಮನೋಧರ್ಮ, ಪ್ರದೇಶ, ಜಾತಿ, ವೃತ್ತಿ, ಧರ್ಮ, ಸಂಸ್ಕೃತಿಗಳನ್ನು ಹೊಂದಿಕೊಂಡು ಅವುಗಳ ಸ್ವರೂಪ ಬದಲಾಗುತ್ತಾ ಹೋಗುತ್ತದೆ. ನಾಗರಿಕ ಸಂಸ್ಕೃತಿಯಲ್ಲಿರುವ ಕಥನಶೈಲಿ ಆದಿವಾಸಿ ಸಂಸ್ಕೃತಿಗಳಲ್ಲಿ ಇರಲಾರದು. ಅವರಲ್ಲಿರುವ ಸರಳ ಕತೆಗಳ ಮೊತ್ತವೇ ಅವರಿಗೆ ಮನೋರಂಜಕ ಸಾಮಗ್ರಿ, ಪುರಾಣ, ಐತಿಹ್ಯ ಎಲ್ಲವೂ ಆಗಿ ಕಾರ್ಯನಿರ್ವಹಿಸುತ್ತವೆ. "ಜನಪದ ಕತೆ, ಪುರಾಣಗಳನ್ನು ನಿಖರವಾಗಿ ಬೇರ್ಪಡಿಸುವುದು ಕಷ್ಟವಾಗುತ್ತದೆ. ಒಬ್ಬ ಸಾಹಸಿ ಮಾಡುವ ಸಾಹಸಗಳನ್ನು ಸಾಂಸ್ಕೃತಿಕ ವೀರನಿಗೆ ಆರೋಪಿಸಿದಾಗ ಅದು ಪುರಾಣವಾಗುತ್ತದೆ. ಅಲ್ಲಿನ ದೈವಿಕ ಅಂಶ ಕಳೆದಾಗ ಅದು ಜನಪದ ಕಥೆಯಾಗುತ್ತದೆ"(ಕೆ. ಆರ್. ಸಂಧ್ಯಾರೆಡ್ಡಿ, 1982–ಪುಟ29).

**ಆಧುನಿಕತೆಯ** ಬಗೆಗಿನ ವಿದ್ವತ್ತು ಬೆಳೆದಿರುವುದು 18ನೆಯ ಕಾಲದಿಂದೀಚೆಗೆ ಎಂಬುದು ಗಮನಿಸಬೇಕಾದ ವಿಚಾರ. 18ನೆಯ ಶತಮಾನದ ಆದಿಯಿಂದ 19ನೆಯ ಶತಮಾನದ ಅಂತ್ಯದ ವರೆಗೆ ಜಾಗತಿಕ ಮಟ್ಟದ ತಲ್ಲಣ ಪ್ರತೀ ದೇಶಗಳಲ್ಲೂ ಉಂಟಾಗಿದೆ. ಇದಕ್ಕೆ ಕಾರಣ ಆಧುನಿಕತೆ. ಇಂತಹ ತಲ್ಲಣ ಭಾರತದಲ್ಲಿ ಉಂಟಾದದ್ದು ಪಾಶ್ಚಿಮಾತ್ಯರ ಆಗಮನದಿಂದ. ವಾಸ್ಕೋ–ಡ–ಗಾಮ, ಬಾರ್ತಲೋಮಿಯ ಡಯಾಸರ ಹುಡುಕಾಟದಲ್ಲಿ ಬರೇ ಪ್ರಪಂಚ ಪರ್ಯಟನ ಮಾತ್ರ ಇರಲಿಲ್ಲ. ಬದಲಾಗಿ ಅವರಿಗೆ ಜಾಗತಿಕ ಗುರುತ್ವದ (Global Identity) ಪ್ರಶ್ನೆಯಾಗಿತ್ತು.

'ಆಧುನಿಕತೆ' ಎಂಬುದನ್ನು ವಸಾಹತು ಕಾಲದ [ಪ್ರೆಂಚ್‌ಕ್ರಾಂತಿ'– 1799] ಅನಂತರದ ಬೆಳವಣಿಗೆ ಎಂದು ಭಾವಿಸಿದರೆ, ಜಾನಪದ ಅಧ್ಯಯನವು ಆಧುನಿಕತೆಗೆ ವಿರುದ್ಧವಾಗಿ ಕಾಣಿಸಿಕೊಂಡಿತು. ವ್ಯಾಪಾರ, ಕೈಗಾರಿಕೀಕರಣ, ಊಳಿಗಮಾನ್ಯ ಪದ್ಧತಿ, ಬಾಲ್ಯ ವಿವಾಹ ಪದ್ಧತಿಯ ಶೈಥಿಲ್ಯ, ವಿಧವಾ ವಿವಾಹ, ಹೊಸ ಅರಿವಿನ ಉಗಮ, ಹೊಸ ಶಿಕ್ಷಣ ಇವುಗಳು ಆಧುನಿಕತೆಯ ಮುಖ್ಯ ಲಕ್ಷಣಗಳಾಗಿದ್ದರೆ, ಇವುಗಳಿಗೆ ವಿರೋಧವಾಗಿರುವುದನ್ನು ಜಾನಪದ

ಗುಣವೆಂದು ಭಾವಿಸಲಾಯಿತು. ಬ್ರಿಟಿಷರಿಗೆ ಭಾರತದಲ್ಲಿ ಹಿನ್ನಡೆ ಆದದ್ದೇ ಇದರಿಂದ. ಭಾಷಾ ವೈವಿಧ್ಯತೆ, ಜಾತಿ ವೈವಿಧ್ಯತೆ, ಭೌಗೋಳಿಕ ಭಿನ್ನಾಂಶಗಳು, ರಾಜಕೀಯ – ಆಡಳಿತ ಒಳರಚನೆಗಳು ಹೀಗೆ ಅನೇಕವುಗಳು ಅವರನ್ನು ಕಾಡಿತ್ತು. ಹಾಗಾಗಿ ಬ್ರಿಟನ್ನಿನಿಂದ ಬಂದ ಎಲ್ಲಾ ಆಡಳಿತಾಧಿಕಾರಿಗಳು ಇವೆಲ್ಲವುಗಳಿಗೆ ಪ್ರತಿಕ್ರಿಯಿಸಿದ್ದು ಜಾನಪದ, ಶಾಸನ ಸಂಗ್ರಹಗಳನ್ನು ಮಾಡುವುದರ ಮೂಲಕ ಎಂಬುದನ್ನು ಚರಿತ್ರೆ ಹೇಳುತ್ತದೆ.

ಇಂದು ಜಾನಪದವು ಜಾಗತಿಕ ನೆಲೆಯಲ್ಲಿ ಪರಂಪರೆ–ವಸಾಹತೀಕರಣ–ಆಧುನಿಕತೆ–ಆಧುನಿಕೋತ್ತರವೆಂಬ ಸಂಮಿಶ್ರಣವಾಗಿ ರೂಪು ಪಡೆದಿದೆ. ಪ್ರಸ್ತುತ ನಡೆಯುವ ಜಾಗತಿಕ ಅಧ್ಯಯನಗಳೆಲ್ಲಾ ಪರಂಪರೆ ಮತ್ತು ಆಧುನಿಕೋತ್ತರದ ಡಿಸ್ಕೋರ್ಸ್‌ಗಳು. ಈಗ ಸಂಗ್ರಹಗಳು ನಿಂತಿವೆ. ವಿಮರ್ಶೆಯೆಂಬ ಡಿಸ್ಕೋರ್ಸ್‌ಗಳು ವ್ಯಾಪಿಸಿವೆ.

ಈ ನೆಲೆಯಲ್ಲಿ ನನ್ನ ಅಧ್ಯಯನ ಪ್ರಯತ್ನವನ್ನು ಕೆಳಗಿನ ಪ್ರಶ್ನೆಗಳಿಗೆ ಸೀಮಿತಗೊಳಿಸಿದ್ದೇನೆ.

1. **ಪಾಶ್ಚಾತ್ಯ ದೇಶಗಳಲ್ಲಿ ಯಾವ ಕಾರಣಕ್ಕೆ ಜನಪದ ಕತೆಗಳ ಅಧ್ಯಯನ ಉಂಟಾಯಿತು? ಮತ್ತು ಸಂಸ್ಕೃತಿಯೊಂದರ ಯಾವ ಬಗೆಯ ಅವಶ್ಯಕತೆಯನ್ನು ಈ ಅಧ್ಯಯನಗಳು ಈಡೇರಿಸಿದವು?**
2. **ಜಾಗತಿಕ ನೆಲೆಯಲ್ಲಿ ಕರ್ನಾಟಕದಲ್ಲಿ ಜನಪದ ಕತೆಗಳ ಸಂಗ್ರಹವನ್ನೂ ಅಧ್ಯಯನವನ್ನೂ ಹೇಗೆ ಸಂಘಟಿಲಾಯಿತು?** ಮತ್ತು ಹಾಗೆ ಸಂಘಟಿಸುವುದರ ಮೂಲಕ ಜನಪದ ಕತೆಗಳ ಸಂಗ್ರಹಕ್ಕೆ ಯಾವ ನೆಲೆಗಳನ್ನು ಸಿದ್ಧಪಡಿಸಿಕೊಳ್ಳಲಾಯಿತು?

'19ನೆಯ ಶತಮಾನದ ಆದಿಭಾಗದಿಂದಲೇ ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಜನಪದ ಕತೆಗಳ ಸಂಗ್ರಹ, ಅಧ್ಯಯನ ಆರಂಭವಾಯಿತು. ಯೂರೋಪಿನ ಅನೇಕ ಕಡೆಗಳಲ್ಲಿ ಜನಪದ ಸಾಹಿತ್ಯದ ಕಡೆ ಆಸಕ್ತಿ ಹೊರಳಿ ಇತರ ಜಾನಪದ ಪ್ರಕಾರಗಳಿಗಿಂತ ಕಥೆಗಳ ಕಡೆ ಸಂಗ್ರಾಹಕರ ವಿಶೇಷ ಒಲವು ಹರಿದು, 19ನೆಯ ಶತಮಾನದ ಅಂತ್ಯದ ವೇಳೆಗೆ ನೂರಾರು ಕಥಾಸಂಕಲನಗಳು ಬೆಳಕಿಗೆ ಬಂದುವು. ಯೂರೋಪಿನ ಪ್ರತಿಯೊಂದು ದೇಶವೂ ತನ್ನ ಮಾತೃಭಾಷೆಯಲ್ಲಿ ಸಂಗ್ರಹಕಾರ್ಯವನ್ನು ನಡೆಸಿ ಆಯಾ ಭಾಷೆಯಲ್ಲಿಯೇ ಕೃತಿಗಳನ್ನು ಪ್ರಕಟಿಸಿದವು. ಕಳೆದ ಶತಮಾನದಲ್ಲಿ ಯೂರೋಪಿನಲ್ಲಿ ಕಾಣಿಸಿಕೊಂಡ ರಾಷ್ಟ್ರೀಯ ಪ್ರಜ್ಞೆ ಹಾಗೂ ರೋಮ್ಯಾಂಟಿಸಿಸಮ್‌ಗಳ ಫಲವಾಗಿ ಜಾನಪದದ ಬಗ್ಗೆ ತೀವ್ರ ಆಸಕ್ತಿ ಮೂಡಿತು. ಶ್ರೀಸಾಮಾನ್ಯರ ಭಾಷೆ ಮತ್ತು ಬದುಕನ್ನು ಅರ್ಥಮಾಡಿಕೊಳ್ಳಲು, ಅಳಿಸಿಹೋಗುತ್ತಿದ್ದ ಜಾನಪದವನ್ನು ಉಳಿಸಲು ವಿದ್ವಾಂಸರು ವಿಶೇಷವಾಗಿ ಶ್ರಮಿಸಿದರು'(ಜೀ. ಶಂ. ಪರಮಶಿವಯ್ಯ, 1970).

**ಭಾಗ 5**

ಜಾಗತಿಕ ನೆಲೆಯಲ್ಲಿ ಪ್ರಕಟವಾದ ಪ್ರಾತಿನಿಧಿಕ ಜನಪದ ಕತೆಗಳ ಸಂಗ್ರಹಗಳು ಮತ್ತು ಅಧ್ಯಯನಗಳು : **ಬೊಕೆಮೆರೊನ್** ಎಂಬಾತ 1471ರಲ್ಲಿ **'ಡೆಕಾಮೆರೊನ್'** ಎಂಬ ಕೃತಿಯನ್ನು ಪ್ರಕಟಿಸಿದ. ಬಾಸಿಲ್ 1634ರ ವೇಳೆಗೆ ನಿಯಪೊಲಿತನ್ ಉಪಭಾಷೆಯಲ್ಲಿ **'ಪೆಂಟಾಮೆರೊನ್'** ಎಂಬ ಐವತ್ತು ಕತೆಗಳ ಸಂಕಲನವೊಂದನ್ನು ಪ್ರಕಟಿಸಿದ. ಇವೆರಡೂ ಶುದ್ಧ ಜನಪದ ಕಥೆಗಳ ಸಂಕಲನಗಳೆಂದೇ ಪರಿಗಣಿಸಲ್ಪಟ್ಟವು.

**ಚಾರ್ಲ್ಸ್ ಪೆರ್ರಾಕ್ಟ್** ಎಂಬಾತ 1697ರಲ್ಲಿ ಫ್ರಾನ್ಸಿನಲ್ಲಿ 'ಕೊನ್ಟರ್ ಪೊಪ್ಯುಲಾರಿಸ್'(Conter populaire) ಎಂಬ ಎಂಟು ಕಥೆಗಳ ಸಂಕಲನವೊಂದನ್ನು ಪ್ರಕಟಿಸಿದ.

**ಫಿನ್‌ಲೆಂಡ್**ನಲ್ಲಿ 1702ರ ವೇಳೆಗೆ ಜಾನಪದ ಸಂಗ್ರಹ ಕಾರ್ಯ ಆರಂಭವಾಯಿತು. ಜನಪದ ಕತೆಗಳ ಅಧ್ಯಯನಕ್ಕೆ ಫಿನ್‌ಲೆಂಡ್ ಜಾಗತಿಕ ನೆಲೆಯಾಯಿತು. ಫಿನ್‌ಲೆಂಡಿನವರಾದ ಕಾರ್ಲೆಕ್ರಾಹ್ನ ಮತ್ತು ಆರ್ನೆ ಆಂಟಿ ಜಗತ್ತಿನ ಶ್ರೇಷ್ಠ ಜಾನಪದ ವಿದ್ವಾಂಸರಲ್ಲಿ ಪ್ರಮುಖರಾದರು. 1784ರಲ್ಲಿ ಫಿನ್‌ಲೆಂಡಿನ 'ಪ್ರಾಣಿಕಥೆ'ಗಳ ಸಂಕಲನವೊಂದು ಪ್ರಕಟವಾಯಿತು. 1831ರಲ್ಲಿ ಸ್ಥಾಪಿತವಾದ 'ಫಿನ್ನಿಷ್ ಲಿಟರರಿ ಸೊಸೈಟಿ'ಯು ಜಗತ್ತಿನ ಪ್ರಥಮ ಜಾನಪದ ಪರಿಷತ್ತು ಎಂಬ ಹೆಮ್ಮೆಗೆ ಪಾತ್ರವಾಯಿತು. 1850ರ ಸುಮಾರಿಗೆ ರಷ್ಯಾದ ನಿರ್ಬಂಧಕ್ಕೊಳಗಾಗಿ ಯಾವುದೇ ರೀತಿಯ ಸಾಹಿತ್ಯಿಕ ಕೃತಿಯನ್ನೂ ಪ್ರಕಟಿಸುವ ಸ್ವಾತಂತ್ರ್ಯವನ್ನು ಫಿನ್ಲೆಂಡ್ ಕಳೆದುಕೊಂಡಿತು. ಆದರೆ ಜಾನಪದ ಸಂಗ್ರಹಕ್ಕೆ, ಪ್ರಕಟಣೆಗೆ ಯಾವ ಅಡ್ಡಿಯೂ ಇರಲಿಲ್ಲ. ಮುಂದೆ ಈ ಸಂಸ್ಥೆಯಿಂದ ಕಂಠಸ್ಥ ಸಂಪ್ರದಾಯದ 'ಕಲೆವಾಲ'ದಂತಹ ರಾಷ್ಟ್ರೀಯ ಮಹಾಕಾವ್ಯವು ಪ್ರಕಟವಾಯಿತು. 1850 ರಿಂದ 1866 ರವರೆಗೆ ನಡೆದ ಜಾನಪದ ಸಂಗ್ರಹಗಳಲ್ಲಿ ನಾಲ್ಕು ಸಂಪುಟಗಳಲ್ಲಿ ಜನಪದ ಕಥೆಗಳು ಪ್ರಕಟವಾದುವು.

**ಕಾರ್ಲೆ ಕ್ರಾಹ್ನ** ಜನಪದ ಕತೆಗಳ ನೈಜ ವಿದ್ವಾಂಸ. ತಂದೆ ಜೂಲಿಯಸ್ ಕ್ರಾಹ್ನ 'ಕಲೆವಾಲ'ವನ್ನು ಅಧ್ಯಯನಿಸಲು ಅಳವಡಿಸಿದ ಐತಿಹಾಸಿಕ ಭೌಗೋಳಿಕ ಸಿದ್ಧಾಂತವನ್ನು ಈತ ಮುಂದುವರಿಸಿದ. ಜನಪದ ಕತೆಯೊಂದರ ಸೃಷ್ಟಿ ಮತ್ತು ಸಂಚಾರವನ್ನು ಈ ಕೆಳಗಿನಂತೆ ವಿವರಿಸಿರಿದ;

1. **ಪ್ರಶಾಂತ ಜಲವಿಸ್ತಾರದಮೇಲೆ ಕಲ್ಲೊಂದು ಬಿದ್ದರೆ ಹೇಗೆ ಅಲೆಯುಂಗುರಗಳು ಸುತ್ತಲೂ ವ್ಯಾಪಿಸುವುವೋ ಹಾಗೆ ಜನಪದ ಕಥೆಗಳು ವ್ಯಾಪಿಸುತ್ತವೆ.**
2. **ಜನಪದ ಕಥೆ ಸೃಷ್ಟಿಯಾದ ಮೇಲೆ ನೀರಿನ ಪ್ರವಾಹದಂತೆ ನುಗ್ಗಿ ದೂರಸಂಚಾರವನ್ನು ಕೈಗೊಳ್ಳುತ್ತದೆ.**

ಕಾರ್ಲೆ ಕ್ರಾಹ್ನನ ಈ ಪ್ರಮೇಯವು ಅತ್ಯಂತ ಟೀಕೆಗೂ ಗುರಿಯಾಯಿತು.

**ಆರ್ನೆ ಆಂಟಿ** ಫಿನ್ಲೆಂಡಿನ ಶ್ರೇಣಿಯ ಇನ್ನೊಬ್ಬ ಜಾನಪದ ವಿದ್ವಾಂಸ. ಈತ ಐತಿಹಾಸಿಕ ಭೌಗೋಳಿಕ ವಿಧಾನವನ್ನು ಅತ್ಯಂತ ಯಶಸ್ವಿಯಾಗಿ ಬಳಸಿದ. ಕಥೆಗಳ ಅಧ್ಯಯನ ನಿರತನಾಗಿ ಕಥಾವರ್ಗಗಳನ್ನು ಗುರುತಿಸತೊಡಗಿದ. ಇದಕ್ಕಾಗಿ ಜಗತ್ತಿನಾದ್ಯಂತ ಪರ್ಯಟನ ಮಾಡಿದ. ಯೂರೋಪಿನ ಎಲ್ಲ ಪ್ರಸಿದ್ಧ ಕತೆಗಳನ್ನೂ ಪ್ರತ್ಯೇಕ ವರ್ಗಗಳಾಗಿ ವಿಂಗಡಿಸಿ ಒಂದೊಂದಕ್ಕೂ ಸಂಖ್ಯೆಯನ್ನು ಕೊಟ್ಟ. ಜನಪದ ಕಥೆಯನ್ನೇ ಆಧರಿಸಿ ಬೆನ್ಫೆ ಹೇಳುವ ಭಾರತೀಯ ಮೂಲವನ್ನು ಸರಿಯೆಂದು ಆರ್ನೆ ತನ್ನ ಟಿಪ್ಪಣಿಯಲ್ಲಿ ಸಿದ್ಧಪಡಿಸಿದ. 1925ರಲ್ಲಿ ಆರ್ನೆ ಆಂಟಿ ತೀರಿಕೊಂಡ. ಸ್ಟಿತ್ ಥಾಂಸನ್ ಆರ್ನೆಯ ವರ್ಗಸೂಚಿಯನ್ನು ಪರಿಷ್ಕರಿಸಿ, ವಿಸ್ತರಿಸಿ ಇಂಗ್ಲಿಷಿಗೆ ಅನುವಾದಿಸಿ ಪ್ರಕಟಿಸಿದ.

**ವರ್ಗ (Tale) :** ಥಾಮ್ಸನ್ ಪ್ರಕಾರ 'ವರ್ಗವೆಂದರೆ ಅಸ್ತಿತ್ವದಲ್ಲಿರುವ ಸಾಂಪ್ರದಾಯಿಕ ಕತೆ". ಇದು ಸ್ವಯಂಪೂರ್ಣವಾಗಿದ್ದು ತನ್ನ ಅರ್ಥಕ್ಕಾಗಿ ಬೇರೊಂದು ಕತೆಯನ್ನು ಅವಲಂಭಿಸುವುದಿಲ್ಲ. ಇಂತಹ ಎಲ್ಲಾ ವರ್ಗದಲ್ಲೂ ಒಂದು ಅಥವಾ ತುಂಬ ಆಶಯಗಳಿರುತ್ತವೆ.['.........A traditional tale that has an independent existence. I may be told as a complete narrative and does not depend for its meaning on any other tale. It may indeed happen to be told with another tale, but the fact that it may appear alone attests its independence. It may consist of only one motif of many ..... . The ordinary Marchen (Tale like Cinderella of Snow white) are types consisting of many of them'. - **Thompson With 1951 : 415**] ಈ ಹಿನ್ನಲೆಯಲ್ಲಿ ಆರ್ನೆ ಥಾಮ್ಸನ್ ಜನಪದ ಕತೆಯ ವರ್ಗಗಳನ್ನು **Types of the folktale** ಎಂಬ ಬೃಹತ್ ಕೃತಿಯನ್ನು ತಯಾರಿಸಿದ್ದಾನೆ. ಇಂದರಿದಾಗಿ ಮುಂದೆ ಜಗತ್ತಿನ ಕತೆಗಳಿಗೆ ತೌಲನಿಕವಾದ ಅಧ್ಯಯನದ ಸಾಧ್ಯವಾಗುತ್ತದೆ.

ಕತೆಗಳನ್ನು ಐದು ವಿಭಾಗ ಮಾಡಿಕೊಂಡ ಅವರು ಎಲ್ಲಾ ವರ್ಗದ ಕತೆಗಳಿಗೂ ಅವುಗಳ ಜೊತೆಗೆ ಅದೇ ಸಂಬಂಧವಾದ ಬೇರೊಂದು ವರ್ಗದ ಕತೆಯನ್ನು ಕೊಟ್ಟಿದ್ದಾರೆ. ಯಾವುದೇ ಕತೆ ಯಾವ ದೇಶದ್ದು, ಯಾವ ಪುಸ್ತಕದಲ್ಲಿ ಹೇಳುವ ವಿವರವೆಂದು ತಿಳಿಯುತ್ತದೆ. ಕತೆಗಳಿಗೆ 1 ರಿಂದ 2499 ರವರೆಗೆ ವರ್ಗಸೂಚಿ ಸಂಖ್ಯೆಗಳನ್ನು ನೀಡಿದ್ದಾರೆ. ಕತೆಗಳನ್ನು ಅಧ್ಯಯನಿಸುವಾಗ ಈ ಕ್ರಮದ ವರ್ಗಸೂಚಿ ಒಂದು ಕತೆಯ ಮೂಲ ಪಾಠ, ಅದು ಬೆಳೆದ ಭಿನ್ನ ರೂಪಗಳು, ಅವು ಪ್ರಚಲಿತವಾಗಿರುವ ಪ್ರದೇಶ ಹೀಗೆ ಅನೇಕ ಉಪಯುಕ್ತ ಅಂಶಗಳು ಸಿಗುತ್ತವೆ. ಭಾಷಾ ಭೇದದ ಕಾರಣದಿಂದ ಪರಿಚಯ ಆಗದೇ ಉಳಿವ ಬೇರೆ ಬೇರೆ ದೇಶದ ಕತಾ ಸಂಪತ್ತು ಆರ್ನೆ ಥಾಮ್ಸನ್‌ರ ಪ್ರಯತ್ನದಿಂದ ಎಲ್ಲರಿಗೂ ಸಿಗುತ್ತದೆ. ಇಷ್ಟಾದರೂ ಇವರ ವರ್ಗಸೂಚಿ ಸಮಗ್ರವಾಗಿಲ್ಲದಿರುವುದು ಈ ಕೃತಿಯ ದೊಡ್ಡ ದೋಷ. ಆರ್ನೆ ಥಾಮ್ಸನ್ ವರ್ಗಸೂಚಿ

ತಯಾರಿಸುವ ಕಾಲದಲ್ಲಿ ಇನ್ನೂ ಬೇಕಾದಷ್ಟು ಜನಪದ ಕತೆಗಳ ಸಂಗ್ರಹವು ವ್ಯಾಪಕವಾಗಿ ನಡೆದಿರಲಿಲ್ಲ. ಜಗತ್ತಿನ ಎಲ್ಲಾ ಪ್ರದೇಶದ ಪ್ರಾತಿನಿಧಿಕ ಕತಾ ಸಂಗ್ರಹಗಳು ಬಂದಿರಲಿಲ್ಲ. ಹಾಗಾಗಿ ಇವರು ನೀಡುವ ವರ್ಗಸೂಚಿಯ ಕತೆಗಳ ಪಠ್ಯಗಳು ಅಧ್ಯಯನಕಾರರಿಗೆ ಸೀಮಿತವಾಯಿತು. ಈ ದಿನ ಆರ್ನೆ ಥಾಮ್ಸನ್‌ರ ವರ್ಗಸೂಚಿ ಒಂದು ಮಾರ್ಗದರ್ಶಕ ವರ್ಗಸೂಚಿಯಾಗಿ ಮಾತ್ರ ಸಹಕಾರ ಆಗುವುದು, ಆಕರ ಸಾಮಗ್ರಿಯಾಗಿ ಅಲ್ಲ. ಇತ್ತೀಚಿನ ದಿನಗಳಲ್ಲಿ ಕತೆಯ ವರ್ಗದ ಕಲ್ಪನೆಯನ್ನು ಅನೇಕರು ಒಪ್ಪದಿದ್ದರೂ ತುಲನಾತ್ಮಕ ಅಧ್ಯಯನಕ್ಕೆ ಈ ಬಗೆಯ ಕೆಲಸ ಸಹಕಾರಿಯಾಗುವುದೆಂದು ಹೇಳಲು ಮರೆಯಬಾರದು.

**ಪ್ರಾಣಿಕತೆಗಳು (Animal folktales)**

1. ಕಾಡು ಪ್ರಾಣಗಳ ವರ್ಗ – 1–99
2. ಕಾಡು ಪ್ರಾಣಿಗಳು ಮತ್ತು ಸಾಕಿದ ಪ್ರಾಣಿಗಳ ವರ್ಗ – 100–149
3. ಸಾಕಿದ ಪ್ರಾಣಿಗಳ ವರ್ಗ – 200–219
4. ಹಕ್ಕಿಗಳ ವರ್ಗ – 220–299

**ಸಾಮಾನ್ಯ ಕತೆಗಳು (Ordinary folktales)**

**ಅ. ಮಾಂತ್ರಿಕ ಕತೆಗಳು ವರ್ಗ– 300–749**

1. ಅತಿಮಾನುಷ ಅಡಚಣೆಗಳ ವರ್ಗ – 300–399
2. ಅತಿಮಾನುಷ ಗಂಡ–ಹೆಂಡತಿ–ಸಂಬಧಿಕರ ವರ್ಗ – 400–459
3. ಅತಿಮಾನುಷ ಸಹಾಯಕರ ವರ್ಗ – 500–559
4. ಮಾಂತ್ರಿಕ ವಸ್ತುಗಳ ವರ್ಗ – 560–649
5. ಸಾಮಾನ್ಯ ಶಕ್ತಿ ಅಥವಾ ಜ್ಞಾನ ವರ್ಗ – 650–699
6. ಬಹಿಷ್ಕಾರ ಆದ ಹೆಂಡತಿ ಅಥವಾ ಹೆಂಗಸಿನ ವರ್ಗ – 700–749

**ಆ. ಧಾರ್ಮಿಕ ಕತೆಗಳು ವರ್ಗ – 750–849**

**ಇ. ರಮ್ಯ ಕತೆಗಳು ವರ್ಗ– 850–999**

1. ಬುದ್ಧಿವಂತ ಸಲಹೆಗಾರರ ವರ್ಗ – 900–915
2. ವಿಧಿಯ ಕತೆಗಳ ವರ್ಗ – 930–949
3. ಕಳ್ಳ ಮತ್ತು ಕೂಲಿಗಾರರ ವರ್ಗ – 950–969

**ಈ. ಮೂರ್ಖ ರಾಕ್ಷಸ ಕತೆಗಳ ವರ್ಗ –1000–1199**

**ಹಾಸ್ಯ ಮತ್ತು ಹನಿಕತೆಗಳ ವರ್ಗ (Jokes and Anecdotes)**

1. ಪೆದ್ದರ ಕತೆಗಳ ವರ್ಗ – 1200–1349
2. ಅಜ್ಜಿಗೆ ಸಂಬಂಧಿಸಿದ ಹಾಸ್ಯಕತೆಗಳ ವರ್ಗ –
3. ಜಿಪುಣರಿಗೆ ಸಂಬಂಧಿಸಿದ ಕತೆಗಳ ವರ್ಗ –
4. ಅತ್ತೆ ಸೊಸೆಯರ ಕತೆಗಳ ವರ್ಗ –

ಸೂತ್ರದ ಕತೆಗಳವರ್ಗ(Formel folktales)

ಅಪೂರ್ವ/ಮುಗಿಯದ ಕತೆಗಳ ವರ್ಗ(Infinished folktales)

## ಭಾಗ 6

ಗ್ರಿಮ್ ಸಹೋದರರು– ಜಾಕಬ್ ಗ್ರಿಮ್ ಮತ್ತು ವಿಲ್‌ಹೆಲ್ಮ್‌ಗ್ರಿಮ್ ಅಣ್ಣತಮ್ಮಂದಿರು. ವಿಶ್ವದ ಜಾನಪದ ಅಧ್ಯಯನಕ್ಕೆ ವೈಜ್ಞಾನಿಕ ದೃಷ್ಟಿಯನ್ನು ಪ್ರಥಮ ಬಾರಿಗೆ ಮೂಡಿಸಿದವರು ಜರ್ಮನಿಯ ಗ್ರಿಮ್ ಸಹೋದರರು. ಮಾರ್‌ಬರ್ಗ್ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿಗಳಾಗಿದ್ದಾಗಲೇ ಜಾಕಬ್ ಮತ್ತು ವಿಲ್‌ಹೆಲ್ಮ್‌ಗ್ರಿಮ್ ಜನಪದ ಕಥೆಗಳಸಂಗ್ರಹ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. 1812ರಲ್ಲಿ ಜರ್ಮನಿಯಲ್ಲಿ ಅವರKinder-und Hausmarchenಕೃತಿ ಪ್ರಕಟವಾಯಿತು. ಈ ಕೃತಿ ಅನಂತರ ಫ್ರೆಂಚ್, ಇಂಗ್ಲಿಷ್‌ಗೂ ಅನುವಾದಿತವಾಯಿತು.Grimms' house hold talesಅಥವಾGrimms' Fairy talesಎಂಬ ಹೆಸರಿನಲ್ಲಿ ಹೆಚ್ಚು ಜನಪ್ರಿಯವಾಗಿ ಯೂರೋಪಿನ ಜನಪದ ಕಥೆಗಳ ಸಂಗ್ರಹಕ್ಕೆ ಹೊಸ ಚೈತನ್ಯ ತುಂಬಿತು. 1815ರಲ್ಲಿ ಗ್ರಿಮ್ ಸಹೋದರರ ಕಥೆಗಳ ಎರಡನೆಯ ಸಂಪುಟ ಪ್ರಕಟವಾಯಿತು. 'ಪಳೆಯುಳಿಕೆಗಳ ದೊಡ್ಡ ನಿಧಿ', 'ಸಂಶೋಧಕರ ಕಾಮಧೇನು' ಎಂದು ಭಾವಿಸಿ ಜನಪದ ಕಥೆಗಳನ್ನು ಅವರು ಕಲೆಹಾಕಿದರು. ಅವರ ಕಥೆಗಳು ರಾಷ್ಟ್ರೀಯ ಕಾವ್ಯದ ಒಂದು ಭಾಗವೇ ಆಗಿ ಪರಿಗಣಿಸಲ್ಪಟ್ಟವು' ಎಂದು 'ಫೋಕ್‌ಟೇಲ್ಸ್ ಆಫ್ ಜರ್ಮನಿ' ಕೃತಿಯಲ್ಲಿ ರಿಚರ್ಡ್ ಎಂ. ಡಾರ್ಸನ್ ಗ್ರಿಮ್ ಸಹೋದರರ ಸಂಗ್ರಹವನ್ನು ಉಲ್ಲೇಖಿಸಿದ್ದಾನೆ. ಜನಪದ ಕತೆಗಳನ್ನು ಸಂಗ್ರಹಕ್ಕೆ ತೊಡಗಿದ ಗ್ರಿಮ್ ಸಹೋದರರ ಬಗೆಗೇ ಒಂದು ಕಥೆಯಿದೆ. ಇವರು ಸಂಗ್ರಹಿಸಿದ ಕಥೆಗಳನ್ನುDorothea Wildಎಂಬ ಹದಿನಾರರ ಹರೆಯದ ಕನ್ಯೆ ನಿರೂಪಿಸಿದಳು. ಮುಂದೆ ವಿಲ್‌ಹೆಲ್ಮ್ ಅವಳನ್ನೇ ಮದುವೆಯಾದನು. ಜಾಕಬ್ ಬ್ರಹ್ಮಚಾರಿಯಾಗಿ ಉಳಿದನು.

ಇವರಿಬ್ಬರೂ ಜಾನಪದವಲ್ಲದೆ ಇತರ ಶಿಸ್ತುಗಳಲ್ಲೂ ಪರಿಣತರಾಗಿದ್ದರು. ಜಾಕಬ್ ಗ್ರಿಮ್ ಭಾಷಾಶಾಸ್ತ್ರದ ಕಡೆ ವಿಶೇಷ ದೃಷ್ಟಿ ಹರಿಸಿದರೆ, ವಿಲ್‌ಹೆಲ್ಮ್ ಸಾಹಿತ್ಯದ ಕ್ಷೇತ್ರದಲ್ಲಿ ದುಡಿದ. ಇದರ ಫಲಿತಾಂಶವಾಗಿ 1819ರಲ್ಲಿ ತಮ್ಮ ಕತೆಗಳನ್ನು ಅಪಾರ ಟಿಪ್ಪಣಿಗಳೊಂದಿಗೆ, ವಿವರಣೆಗಳೊಂದಿಗೆ ಪ್ರಕಟಿಸಿದರು. ಈ ವೇಳೆಗಾಗಲೇ ಯೂರೋಪಿನ ಸೆರ್ಬಿಯಾ ಮುಂತಾದ ಕಡೆ ಜನಪದ ಸಂಕಲನಗಳು ಪ್ರಕಟವಾದುವು. ಇವೆಲ್ಲವನ್ನು ಗಮನದಲ್ಲಿರಿಸಿಕೊಂಡು 1856ರಲ್ಲಿ ವಿಲ್‌ಹೆಲ್ಮ್ ಜನಪದ ಕತೆಗಳ ಮೂಲದ ಬಗೆಗೆ ಪ್ರಥಮವಾಗಿ ಎರಡು ಸಿದ್ಧಾಂತಗಳನ್ನು ಪ್ರತಿಪಾದಿಸಿದ. ಅವುಗಳು;

1. **ಪರಸ್ಪರ ಹೋಲಿಕೆ ತೋರಿ ಬರುವ ಎಲ್ಲ ಕತೆಗಳೂ ಒಂದೇ ಇಂಡೋ ಯೂರೋಪಿಯನ್ ಭಾಷಾಮೂಲದಿಂದ ಹರಡಿಕೊಂಡುವು.**

2. **ಕತೆಗಳೆಲ್ಲವೂ ಪುರಾಣಗಳ ಒಡೆದ ಚೂರುಗಳು; ಅವುಗಳು ಬಂದ ಮೂಲಪುರಾಣಗಳನ್ನು ಅರ್ಥಮಾಡಿಕೊಳ್ಳದ ಹೊರತು ಕತೆಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ.**

ಗ್ರಿಮ್ ಸಹೋದರರು ಜನಪದ ಕಥೆಗಳಿಗೆ ಆರ್ಯಮೂಲವೆಂದು ವಾದಿಸಿದರು.

ಥಾಂಸ್ ನೈಟ್‌ಲೇಯ್ಸ್ 1828 ರಲ್ಲಿ ಯೂರೋಪು ಮತ್ತು ಹೊರನಾಡಿನ ಜನಪದ ಕಥೆಗಳನ್ನು ಶೋಧಿಸಿ 'ದಿ ಫ್ಯಾರಿ ಮೈಥಾಲಜಿ' ಸಂಕಲನವನ್ನು ಪ್ರಕಟಿಸಿದ.

1842ರಿಂದ 1932ರ ಅವಧಿಯಲ್ಲಿ ಫ್ರಾನ್ಸ್ ಜನಪದ ಕತೆಗಳ ಅಧ್ಯಯನಕ್ಕೆ ತವರು ಮನೆಯಾಗಿತ್ತು. ಸೆಬಿಲ್ಲಾಟ್ ಎಂಬಾತನ ಸತತ ಪ್ರಯತ್ನದಿಂದ ಫ್ರಾನ್ಸಿನ ಜನಪದ ಕತೆಗಳ ಅನೇಕ ಸಂಪುಟಗಳು ಪ್ರಕಟವಾದವು. ಇಲ್ಲಿನ ಇನ್ನೊಬ್ಬ ಪ್ರಸಿದ್ಧ ಜಾನಪದ ವಿದ್ವಾಂಸ ಎಮ್ಯಾನ್ಯುಯಲ್ ಕಾಸ್ಕಿನ್. ಈತ ಗ್ರಿಮ್ ಸಹೋದರರ ಜೊತೆ ನೇರ ಸಂಪರ್ಕವನ್ನಿರಿಸಿಕೊಂಡಿದ್ದ. 1887ರಲ್ಲಿ 'ಕೊಂತೆಸ್ ಪಾಪ್ಯುಲರೀಸ್ ದೆ ಲೋರ್ರೈನ್' ಕಾಸ್ಕಿನ್ ಸಂಗ್ರಹಿಸಿದ ಫ್ರಾನ್ಸಿನ ಪ್ರಾತಿನಿಧಿಕ ಜನಪದ ಕತಾ ಸಂಗ್ರಹ. ಜರ್ಮನಿಯಲ್ಲಿ ಹೇಗೆ ಗ್ರಿಮ್ ಸಹೋದರರು ಪ್ರಸಿದ್ಧಿ ಪಡೆದಿದ್ದರೋ ಹಾಗೇ ಫ್ರಾನ್ಸಿನಲ್ಲಿ ಕಾಸ್ಕಿನ್ ಪ್ರಸಿದ್ಧನಾದನು. ಕಾಸ್ಕಿನ್ ಬೆನ್ಫೆಯ ಕಥೆಗಳಿಗೆ ಭಾರತೀಯ ಮೂಲ ಸಿದ್ಧಾಂತವನ್ನು ದೃಢಪಡಿಸಲು ಶ್ರಮಿಸಿದ. ಭಾರತೀಯ ಕತೆಗಿಂತಲೂ ಈಜಿಪ್ಟಿನ ಕತೆಗಳು ಪ್ರಾಚೀನವಾದವೆಂದು ಬೆನ್ಫೆಯ ವಾದವನ್ನು ಪರಿಷ್ಕರಿಸಿದ.

1814ರ ವೇಳೆಗೆ ಡೆನ್ಮಾರ್ಕಿನಿಂದ ಸ್ವಾತಂತ್ರ್ಯವನ್ನು ಪಡಕೊಂಡ ನಾರ್ವೆಯಲ್ಲಿ ರಾಷ್ಟ್ರೀಯ ಪ್ರಜ್ಞೆ ವಿಶೇಷವಾಗಿ ಬೆಳೆಯಿತು. ಗ್ರಿಮ್ ಸಹೋದರರ ಸ್ಫೂರ್ತಿಯಿಂದ ತಮ್ಮ ನಾಡಿನ ಕತೆ, ಗೀತೆಗಳನ್ನು ಸಂಗ್ರಹಿಸಿದರು. ಗ್ರಿಮ್ ಸಹೋದರರಂತೆ ಇಬ್ಬರು ಮಿತ್ರರು [ಕ್ರಿಷ್ಟಿಯನ್ ಅಸ್ಬ್‌ಜೊರ್ನ್‌ಸೆನ್ ಮತ್ತು ಜೊರ್ಗೆನ್ ಮೋಯೆ] ನಾರ್ವೆಯ ಸಂಗ್ರಹದಲ್ಲಿ ವಿಶೇಷ ಸಾಧನೆ ತೋರಿದರು. ಗ್ರಿಮ್ ಸಹೋದರರ ಆರ್ಯಮೂಲವನ್ನು ಸ್ಥಿರಪಡಿಸಲು ನಾರ್ವೆಯ ಕಥೆಗಳಲ್ಲಿ ನಿದರ್ಶನಗಳು ಲಭ್ಯವಾದರೂ ನಾರ್ವೆಯಲ್ಲಿ ಸಂಗ್ರಹವಾದ ಅಪಾರ ಕತೆಗಳಿಂದ ಇವರ ಅಭಿಪ್ರಾಯಗಳು ಬದಲಾದವು.

ಯೂರೋಪಿನ ಜಾನಪದವನ್ನು ಅಧ್ಯಯನ ಮಾಡುವವರು ಸ್ಪೆಯಿನ್ ದೇಶದ ಕಡೆ ವಿಶೇಷ ಒಲವನ್ನು ಹರಿಸಿದರು. ಆದರೆ ಸ್ಪೆಯಿನ್‌ನ ಜನಪದ ಕತೆಗಳ ಬಗೆಗೆ ಗಮನ ಹರಿದಿರುವುದು ಇತ್ತೀಚೆಗೆ. ಆರ್ನೆ, ಥಾಮ್ಸನ್ ತಮ್ಮ ವರ್ಗಸೂಚಿಯಲ್ಲಿ ಸ್ಪೆಯಿನಿನ ಕತೆಗಳಿಗೆ ಪ್ರಾತಿನಿಧ್ಯ ನೀಡಿರಲಿಲ್ಲ.

ಕೆಲ್ಟಿಕ್ ದೇಶಗಳಿಗೆ ಹೋದಾಗ ಐರ್ಲಂಡ್, ಸ್ಕಾಟ್‌ಲೆಂಡ್ ಕಡೆಗಳಲ್ಲಿ ಜನಪದ ಕತೆಗಳ ದೊಡ್ಡ ಸಾಗರವೇ ದೊರೆಯಿತು. 'ಐರ್ಲೆಂಡಿನ ವೃತ್ತಿಕಥೆಗಾರರು ಸಂಜೆಯಾದ ಕೂಡಲೇ ಒಂದು

ಕಡೆ ಸೇರುವರು. ಎಲ್ಲರೂ ತಮ್ಮ ತಮ್ಮ ಕತೆಗಳನ್ನು ಹೇಳುವರು. ಯಾರಾದರೊಬ್ಬನ ಕಥೆಯಲ್ಲಿ ವ್ಯತ್ಯಾಸ ಕಂಡುಬಂದರೆ ಎಲ್ಲರ ಕಥೆಗಳೊಡನೆ ಹೋಲಿಸಿ ಅದನ್ನು ಸರಿಪಡಿಸುವರು. ಹೀಗೆ ಜನಪದ ಕತೆಗಳು ಪರಂಪರಾನುಗತವಾಗಿ ಅಲ್ಲಿ ಅತ್ಯಂತ ಶುದ್ಧ ರೂಪದಲ್ಲಿ ಉಳಿದುಕೊಂಡು ಬರಲು ಸಾಧ್ಯವಾಗಿದೆ' (ಜೀಶಂಪ, 1970-xxiv). 1940ರ ಅವಧಿಯಲ್ಲಿ ಐರಿಷ್ ಫೋಕ್‌ಲೋರ್ ಕಮಿಷನ್ 5 ದಶಲಕ್ಷ ಪುಟಗಳ ಜನಪದ ಕತೆಗಳನ್ನು ಕಲೆಹಾಕಿತು.

ಮೊದಲು ಜಾನಪದ ಅಧ್ಯಯನವನ್ನು ಆರಂಭಿಸಿದವರು ಜರ್ಮನ್ನರು. ಆದರೆ ಜಗತ್ತಿ ಜಾನಪದ ಸಮಗ್ರ, ಸಂಶೋಧನೆಗಳಿಗೆ ಪ್ರೇರಕರಾದವರು ಆಂಗ್ಲ ವಿದ್ವಾಂಸರು. ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡ್‌ಗಳಲ್ಲಿ ಆರಂಭವಾದ ಇವರ ಅಧ್ಯಯನ ಕ್ರಮ ಜಗತ್ತಿನ ನಾನಾ ರಾಷ್ಟ್ರಗಳಿಗೂ ಹಬ್ಬಿದೆ. ಜನಪದ ಕತೆಗಳ ಕುರಿತಂತೆ ಇಂಗ್ಲೆಂಡಿನಲ್ಲಿ ಆಸಕ್ತಿ ಮೂಡಿದುದು 1820ರಿಂದ ಈಚೆಗೆ. ಜನಪದ ಕತೆಗಳ ಮೇಲೆ ಇಂಗ್ಲೆಂಡಿನಲ್ಲಿ ನಡೆದ ವಿಚಾರಮಂಥನ ಜಗತ್ತಿನ ಇನ್ನಾವ ರಾಷ್ಟ್ರದಲ್ಲಿಯೂ ನಡೆಯಲಿಲ್ಲ. ಕತೆಗಳ ಸಂಗ್ರಹಗಳಂತೂ ಅಪಾರ ಸಂಖ್ಯೆಯಲ್ಲಿ ಪ್ರಕಟಗೊಂಡವು. 1891ರಲ್ಲಿ ಲಂಡನ್ನಿನಲ್ಲಿ ನಡೆದ ಅಂತರರಾಷ್ಟ್ರೀಯ ಜಾನಪದ ಸಮ್ಮೇಳನವು ಜಗತ್ತಿನ ಜಾನಪದ ವಿದ್ವಾಂಸರ ಸಂಪರ್ಕವನ್ನು ಇಂಗ್ಲೆಂಡಿನ ಸಂಗ್ರಹಕರಿಗೆ, ವಿದ್ವಾಂಸರಿಗೆ ತಂದುಕೊಟ್ಟಿತು.

ರಷ್ಯಾದಲ್ಲಿ ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸುವ ಮೂಲಸಾಧನವಾಗಿ ಜಾನಪದವನ್ನು ಸಾರ್ಥಕವಾಗಿ ಬಳಸಿಕೊಳ್ಳಲಾಯಿತು. ರಷ್ಯಾದ ಪೂರ್ವ ಸ್ಲಾವಿಕ್ ಭಾಗದಿಂದ ಇನ್ನೆಲ್ಲಿಯೂ ಕಾಣಲಾಗದ ವಿಶಿಷ್ಟರೂಪದ ಕತೆಗಳನ್ನು ಸಂಗ್ರಹಿಸಲಾಯಿತು.

ಗ್ರೀಸ್ ಕೂಡ ಜನಪದ ಕತೆಗಳನ್ನು ಶಾಸ್ತ್ರೀಯವಾದ ಅಧ್ಯಯನ ನಡೆಸಿರುವ ಯೂರೋಪಿನ ರಾಷ್ಟ್ರಗಳಲ್ಲಿ ಒಂದು. ಗ್ರೀಕ್‌ನಲ್ಲೂ ರಾಷ್ಟ್ರೀಯ ಪ್ರಜ್ಞೆ, ಭಾಷೆಯ ವೈಜ್ಞಾನಿಕ ಅಧ್ಯಯನಕ್ಕಾಗಿ ಸ್ಥಳೀಯ ವಿದ್ವಾಂಸರು ತೀವ್ರವಾದ ಆಸಕ್ತಿಯಿಂದ ಜನಪದ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆ.

ಯೂರೋಪ್, ಏಷ್ಯಾ, ಉತ್ತರ ಆಫ್ರಿಕಾದ ಅನೇಕ ಭಾಗಗಳು ಮತ್ತು ಅಮೇರಿಕಾ ಮುಂತಾದ ಕಡೆ ಅತ್ಯಂತ ಶಾಸ್ತ್ರೀಯ ಅಧ್ಯಯನ ನಡೆಸಿದ ಆರ್ನೆ ಆಂಟಿ ಮತ್ತು ಸ್ಟಿತ್ ಥಾಮ್ಸನ್‌ರು ಸುಮಾರು 700 ಕತೆಗಳಿಗೆ ಕಥಾವರ್ಗ ತಯಾರಿಸಿದರು. ಈ 700 ಕಥಾವರ್ಗಗಳಲ್ಲಿ 50 ವರ್ಗಗಳು ಮಾತ್ರ ಭಾರತೀಯ ಮೂಲಕ್ಕೆ ಸಂಬಂಧಿಸಿದವುಗಳೆಂದು ವಿದ್ವಾಂಸರು ಅಭಿಪ್ರಾಯ ಪಟ್ಟರು. ಆದರೂ ಜನಪದ ಕತೆಗಳ ಮೂಲ ನೆಲೆ ಭಾರತೀಯ ಮೂಲವಲ್ಲವೆಂದು ಧೈರ್ಯವಾಗಿ ಹೇಳಿಬಿಡಲು ಇಂದಿಗೂ ಸಾಧ್ಯವಾಗಿಲ್ಲ. ಹಾಗಾಗಿ ಭಾರತೀಯ ಕಥೆಗಳ ಸಂಶೋಧನೆ ಇನ್ನೂ ಹೆಚ್ಚು ನಡೆದಿಲ್ಲ. ಇಲ್ಲಿನ ಕಥಾವರ್ಗಗಳ ಆಶಯಗಳ ಅಧ್ಯಯನ ಶಾಸ್ತ್ರೀಯವಾಗಿ ನಡೆದಿಲ್ಲ.

ಪೂರ್ವರಾಷ್ಟ್ರಗಳಲ್ಲಿ ಜಪಾನ್‌ನಲ್ಲಿ 1871ರಲ್ಲಿ 'ಟೇಲ್ಸ್ ಆಫ್ ಓಲ್ಡ್ ಜಪಾನ್' ಎಂಬ ಮೊತ್ತ ಮೊದಲ ಜನಪದ ಕತೆಗಳ ಸಂಗ್ರಹವು ಪ್ರಕಟವಾಯಿತು.

**ಅಮೇರಿಕಾ** ಜಾಗತಿಕ ಜಾನಪದ ಅಧ್ಯಯನ ಕೇಂದ್ರವೆಂದು ಕರೆಸಿಕೊಂಡಿದೆ. ಅಮೇರಿಕಾವು ಆರ್.ಎಸ್.ಬಾಗ್ಸ್, ರಿಚರ್ಡ್ ಎಂ. ಡಾರ್ಸನ್ ಮತ್ತು ಸ್ಟಿತ್ ಥಾಮ್ಸನ್ ಈ ಮೂವರು ಪ್ರಮುಖ ವಿದ್ವಾಂಸರನ್ನು ಜನಪದ ಕತೆಗಳ ಅಧ್ಯಯನ ಕ್ಷೇತ್ರಕ್ಕೆ ನೀಡಿದೆ. **ಆರ್. ಎಸ್. ಬಾಗ್ಸ್** ಜಾನಪದವನ್ನು ವೈಜ್ಞಾನಿಕವಾಗಿ ವರ್ಗೀಕರಿಸಿದವನು. ಈತ ಜನಪದ ಕತೆಗಳನ್ನು ಸಾಹಿತ್ಯಿಕ ವರ್ಗಕ್ಕೆ ಸೇರಿಸಿದ್ದಾನೆ. ಬಾಗ್ಸ್‌ನ ಪ್ರಕಾರ, 'ತಲೆಮಾರಿನಿಂದ ತಲೆಮಾರಿಗೆ ವಾಗ್‌ರೂಪದಲ್ಲಿ ಬಂದ ಕಥಾ ನಿರೂಪಣೆಯೇ ಜನಪದ ಕತೆ'. ಗದ್ಯ ರೂಪದಲ್ಲಿರುವ ಮೌಖಿಕ ಸಂಪ್ರದಾಯದ ಜನಪದ ಕತೆಗಳನ್ನು ಅವನು ಮತ್ತೆ ಪುರಾಣ, ಐತಿಹ್ಯ ಮತ್ತು ಕಥೆಗಳೆಂದು ಮೂರು ಭಾಗಗಳನ್ನಾಗಿ ವಿಂಗಡಿಸಿದ್ದಾನೆ. ಆತ ಕೊಡುವ ವಿವರಣೆಯಂತೆ, 'ಕಥೆಗಳು ಘಟನೆಗಳ ಸರಳವಾದ ಅಥವಾ ಸಂಕೀರ್ಣವಾದ ರಚನೆಯಾಗಿದ್ದು ಅದು ನಿರ್ದಿಷ್ಟ ವ್ಯಕ್ತಿ, ಕಾಲ, ಸ್ಥಳಗಳನ್ನು ಅವಲಂಭಿಸಿರುವುದಿಲ್ಲ'(ವಿಶ್ವನಾಥ ಬದಿಕಾನ, 1994–4). ಈ ಕಾರಣದಿಂದಾಗಿಯೇ ಜನಪದಕತೆ ಪುರಾಣ ಮತ್ತು ಐತಿಹ್ಯಗಳಿಂದ ಬೇರೆಯಾಗುತ್ತವೆ.

**ಸ್ಟಿತ್ ಥಾಮ್ಸನ್** 1966 ರಲ್ಲಿ ಜಾಗತಿಕ ಜನಪದ ಕಥೆಗಳ ಅಧ್ಯಯನಕ್ಕೆ ಹೊಸರೀತಿಯ ಬುನಾದಿಯನ್ನು ಕಲ್ಪಿದಾತ. ಜನಪದ ಕತೆಗಳನ್ನು 'ಮೋಟಿಫ್ ಇಂಡೆಕ್ಸ್ ಆಫ್ ಫೋಕ್‌ಲಿಟರೇಚರ್' ಎಂಬುದಾಗಿ 6 ಸಂಪುಟದಲ್ಲಿ ಪ್ರಕಟಿಸುತ್ತಾನೆ.

**ಆಶಯ(Motif)** :ಒಂದು ಅಂಶವನ್ನು ವಿಶ್ಲೇಷಣಾತ್ಮಕವಾಗಿ ಸೇರಿರುವ ಯಾವುದೇ ವಿಷಯವಾಗಿರಲಿ ಅವುಗಳನ್ನು ಕತೆಯ 'ಆಶಯ'ಗಳೆಂದು ಕರೆಯಬಹುದು. ಜನಪದ ಕತೆಗಳ ವಿನ್ಯಾಸ ಪ್ರಕಾರಗಳಿಗೆ ಸಂಬಂಧಿಸಿದ ಆಶಯಗಳಿರುತ್ತವೆ. ಜನಪದ ಸಂಗೀತ, ಕಬಿತ, ಪಾಡ್ದನ, ಸಂದಿ – ಇವುಗಳ ನಿರೂಪಣೆಯಲ್ಲಿ ಅವುಗಳ ರಚನೆಗೆ ಸಂಬಂಧಿಸಿದ ಆಶಯಗಳಿರುತ್ತವೆ. ಜಾನಪದದ ಯಾವುದೇ ಪ್ರಕಾರದ ಕನಿಷ್ಠ ಘಟಕವಾಗಿರುವ ಈ ಆಶಯಗಳು ಆಯಾ ಪ್ರಕಾರದ ಸ್ವರೂಪವನ್ನು ನಿರ್ಧರಿಸುತ್ತವೆ. ಒಂದು ಪ್ರಕಾರವನ್ನು ಬೇರೊಂದು ಪ್ರಕಾರದಿಂದ ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಲು ಆಶಯಗಳು ಸಹಾಯ ಆಗುತ್ತವೆ. ಸ್ಟಿತ್ ಥಾಮ್ಸನ್ ಕತೆಗಳನ್ನು ಗಮನಿಸಿದ'Motif Index of folk literature'ಹೇಳುವ ಆರು ಸಂಪುಟಗಳ ಬೃಹತ್ ಪುಸ್ತಕವೊಂದನ್ನು ತಯಾರಿಸಿದ[1964]. ಸ್ಟಿತ್ ಥಾಮ್ಸನ್ ಪ್ರಕಾರ, **'ಆಶಯ'** ಎಂದರೆ, 'ಪರಂಪರೆಯಲ್ಲಿ ಉಳಿದು ಬರುವ ಕತೆಗಳ ಕನಿಷ್ಟ ಘಟಕ'[“A motif is the smallest element in a tale having a power to persist in tradition. In order to have this power it must have something unusual and striking about it. Most motifs fall into three classes. First are the actors in a tale-gods, or

unusual animals ….. or conventionalized human characters like the favorites youngest child or the cruel step-mother. Second come certain items in the back ground of the action-magic objects, unusual customs, strange beliefs and the like. In the third place are single incidents-and these compose the great majority of motifs. It is this last class that can have an independent existence and that many therefore serve as true tale-types. By far the largest number of traditional types consist of these single motifs". –Thompson Stith 1951 : 415-516]

ಆಶಯವೆಂದು ಆಗಬೇಕಾದರೆ ಅದರಲ್ಲಿ ಏನೋ ಒಂದು ಅಸಾಮಾನ್ಯ ಅಥವಾ ವಿಶೇಷ ಇರಬೇಕಾಗುತ್ತದೆ. ಥಾಮ್ಸನ್‌ನ ಪ್ರಕಾರ ಜನಪದ ಕತೆಯ ಆಶಯಗಳ ವಿಶೇಷಗಳು ಈ ಕ್ರಮದಲ್ಲಿರುತ್ತವೆ. ಜಗತ್ತಿನಲ್ಲಿರುವ ಕತೆಗಳ ಆಶಯದಲ್ಲಿ ಇದೇ ಸಾಮ್ಯತೆಗಳು ತೋರುತ್ತವೆ. ವಸ್ತುಗಳ ಆಧಾರದಲ್ಲಿ ಆಶಯ, ವ್ಯಕ್ತಿಗಳ ಆಧಾರದಲ್ಲಿ ಆಶಯ, ಘಟನೆಗಳ ಆಧಾರದಲ್ಲಿ ಆಶಯ ಹೀಗೆ ಕತೆಗಳನ್ನು ಆಶಯದ ಆಧಾರದಲ್ಲಿ ವಿಭಾಗಿಸಬಹುದು. ಇಂಗ್ಲಿಷ್ ಅಕ್ಷರ ಮಾಲೆಯ ಖ.ಔ.ಗ. ಅಕ್ಷರಗಳನ್ನು ಬಿಟ್ಟು ಉಳಿದ 23 ಅಕ್ಷರಗಳಿಗೆ ಆಶಯಗಳನ್ನು, ಅವುಗಳ ಒಳವಿಭಾಗಗಳನ್ನು ಮಾಡಿ ಥಾಮ್ಸನ್ ಅವುಗಳಿಗೆ ಬೇರೆಯೇ ಹೆಸರನ್ನು ಕೊಟ್ಟಿದ್ದಾನೆ. ಅವುಗಳು;

**A. ಪೌರಾಣಿಕ ಆಶಯಗಳು(Mythological Motifs)**
**B. ಪ್ರಾಣಿಗಳು(Animals)**
**C. ನಿಷಿದ್ಧ(Taboo)**
**D.ಮಾಟ(Magic)**
**E. ಸಾವು(The Dead )**
**F. ಅದ್ಭುತಗಳು(Marvels)**
**G. ರಕ್ಕಸರು(Ogres)**
**H. ಪರೀಕ್ಷೆಗಳು(Tests)**
**J. ಬುದ್ಧಿವಂತರು ಮತ್ತು ಮೂರ್ಖರು(The wise and the foolish)**
**K. ಮೋಸಗಳು(Deceptions)**
**L. ವ್ಯತಿರಿಕ್ತವಾದ ಅದೃಷ್ಟ(Reversal of fortune)**
**M. ಭವಿಷ್ಯ ನಿರ್ಧರಿಸುವುದು(Ordaining the Future)**
**N. ಆಕಸ್ಮಿಕ ಹಾಗೂ ಅದೃಷ್ಟ(Chance and Fate)**
**P. ಸಮಾಜ(Society)**
**Q. ಬಹುಮಾನಗಳು, ಶಿಕ್ಷೆಗಳು(Rewards and Punishments)**
**R. ಬಂಧಿಗಳುಮತ್ತು ನಿರಾಶ್ರಿತರು(Captives and fugitives)**
**S. ಅಸಾಧ್ಯ ಕ್ರೌರ್ಯ(Unnatural Cruelty)**

T. ಲೈಂಗಿಕ/ಕಾಮ(Sex)
U. ಜೀವನ ಸ್ವರೂಪ(The Nature of Life)
V. ಧರ್ಮ(Religion)
W. ಸ್ವಭಾವ ವಿಶೇಷಗಳು(Tracits of Character)
X. ಹಾಸ್ಯ(Humor)
Z. ಇತರ ಆಶಯಗಳು(Miscellaneous groups of Motifs)

ಭಾಗ 7

ಜನಪದಕತೆಗಳ ಅಧ್ಯಯನದ ಜಾಗತಿಕ ನೆಲೆ

1. 19ನೆಯ ಶತಮಾನದ ಆದಿಯಿಂದ ಆರಂಭವಾದ ಆಧ್ಯಯನಗಳೆಲ್ಲವೂ ಜನಪದ ಕತೆಗಳನ್ನೇ ಆಧರಿಸಿ ಬಂದಿವೆ. ಮತ್ತು ಅವುಗಳು ಹೆಚ್ಚಾಗಿ ಜನಪದ ಕತೆಯ ಉಗಮವನ್ನೇ ಗಮನದಲ್ಲಿರಿಸಿಕೊಂಡು ಹುಟ್ಟಿಕೊಂಡಿವೆ. ಕತೆಯೊಂದರ ಮೂಲವನ್ನು ನಿರ್ಧರಿಸಲು ಹಲವಾರು ಸಿದ್ಧಾಂತಗಳನ್ನು ಅಳವಡಿಸಿಕೊಳ್ಳಲಾಗಿದೆ.
2. ರಾಷ್ಟ್ರೀಯ ಪ್ರಜ್ಞೆಯನ್ನು ಆಧರಿಸಿಕೊಂಡು ಜನಪದ ಕತೆಗಳ ಅಧ್ಯಯನ ನಡೆದದ್ದೇ ಹೆಚ್ಚು. ಆರಂಭದಲ್ಲಿ ಅಧ್ಯಯನಗಳು, ಯುದ್ಧದ ನಂತರ ದೇಶವನ್ನು ಪುನರ್ ಸಂಘಟಿಸುವ ಕಾರ್ಯವನ್ನು ಗಮನದಲ್ಲಿರಿಸಿಕೊಂಡು ತಯಾರಾಗಿವೆ. ಈ ರೀತಿಯ ಪ್ರಜ್ಞೆಗೆ ಎರಡು ರೀತಿಯ ಅರ್ಥ ಕಲ್ಪಿಸಬಹುದು. ಒಂದು, ರಾಷ್ಟ್ರೀಯ ಮಟ್ಟದಲ್ಲಿ ಮತ್ತೆ ಹಳೆಯ ಪಳೆಯುಳಿಕೆಯನ್ನು ಪುನರ್ ಸ್ಥಾಪಿಸಿ ಈಗಾಗಲೇ ಆಕ್ರಮಿಸಿಕೊಂಡವರಿಂದ ಸಂಸ್ಕೃತೀಕರಣ ವಾಗಿದ್ದರೆ ಸರಿಪಡಿಸಿಕೊಳ್ಳುವುದು. ಎರಡನೆಯದು, ಇತರ ದೇಶಗಳ ಆಳ್ವಿಕೆಯಿಂದ ತಪ್ಪಿಸಿಕೊಳ್ಳಲು ನಮ್ಮಲ್ಲೂ ಒಗ್ಗಟ್ಟಿದೆಯೆಂದು ಜಾನಪದ ಸಂಗ್ರಹವನ್ನು ಮಾಡುವುದು. ಉದಾ : ಭಾರತದಲ್ಲಿ ಬ್ರಿಟಿಷರಿಂದ ಬಿಡಿಸಿಕೊಳ್ಳಲು ಕನ್ನಡಿಗರು ತೋರಿದ ಪ್ರಯತ್ನ ಇಂತಹದ್ದು. ಈ ಸಂದರ್ಭದಲ್ಲಿ ಭಾರತಕ್ಕೆ ಬಂದ ವಿದೇಶಿ ಅಧಿಕಾರಿಗಳು, ವಿದ್ವಾಂಸರು ಸಂಗ್ರಹಕಾರ್ಯಕ್ಕೆ ತೊಡಗಿದರು.
3. ಭಾಷಾಶಾಸ್ತ್ರದ ಅಧ್ಯಯನಕ್ಕಾಗಿ ಜನಪದ ಕತೆಗಳ ಸಂಗ್ರಹವಾದದ್ದು ಇವೆ. ಭಾಷಾವರ್ಗೀಕರಣದ ಸಂದರ್ಭದಲ್ಲಿ ಜನಪದ ಕತೆಯ ಪ್ರಯೋಜನವನ್ನು ಗ್ರಿಮ್ ಸಹೋದರರೇ ಪಡೆಯುತ್ತಾರೆ. ಭಾಷಾಶಾಸ್ತ್ರದಲ್ಲೂ ಮೂಲಭಾಷೆಯನ್ನು ನಿರ್ಧರಿಸುವ ಪ್ರಯತ್ನಗಳು ಜಗತ್ತಿನಾದ್ಯಂತ ನಡೆದಿವೆ.
4. ಸಂಸ್ಕೃತಿಯ ಅಧ್ಯಯನಕ್ಕೋಸ್ಕರ ಕತೆಯೊಂದನ್ನು ಸಂಗ್ರಹಿಸಿದ ಅಗತ್ಯಗಳೂ ಇವೆ. ಭಾರತೀಯ ಸಂಸ್ಕೃತಿಯನ್ನು ಮೂಲವಾಗಿರಿಸಿಕೊಂಡು ಭಾರತೀಯ ಮೂಲವೆಂಬ ಸಿದ್ಧಾಂತ ಬಹಳಷ್ಟು ಚರ್ಚೆಗೆ ಒಳಗಾಗಿದೆ.

5. ಜನಪದ ಕತೆಗಳ ಬಗೆಗೆ ಮೊದಲು ಅಧ್ಯಯನ ಆರಂಭವಾದದ್ದೇ ಜರ್ಮನಿಯಲ್ಲಿ. ಆ ನಂತರ ಫ್ರಾನ್ಸ್, ಫಿನ್ಲೆಂಡ್, ಅಮೇರಿಕ, ಜಪಾನ್ ಇತ್ಯಾದಿ ದೇಶಗಳಿಗೆ ಹಬ್ಬಿತು. ಇಂತಹ ಸಂದರ್ಭದಲ್ಲಿ ಜನಪದ ಕತೆಗಳನ್ನು ಸಂಗ್ರಹಿಸುವುದು ಒಂದು ಶಿಸ್ತು ಎಂಬ ಯೋಚನೆ ಅಧ್ಯಯನಕಾರರಲ್ಲಿತ್ತು. ಜೊತೆಗೆ ಆಯಾ ದೇಶದ ಅಧ್ಯಯನಗಳಲ್ಲಿ ಜನಪದ ಕತೆಗಳು ಪ್ರಮುಖವಾದುವು. ಈ ರಾಷ್ಟ್ರಗಳಲ್ಲಿ ಜಾನಪದ ಸಾಹಿತ್ಯ ಪರಿಷತ್ತು ರಚನೆಯಾದದ್ದನ್ನು ಗಮನಿಸಬಹುದು.
6. ಪಾಶ್ಚಾತ್ಯರಿಗೆ ಹೋಲಿಸಿದರೆ ಕನ್ನಡಿಗರಲ್ಲಿ ಜನಪದ ಕತೆಗಳ ಅಧ್ಯಯನ ಆರಂಭವಾದದ್ದೇ 80ರ ದಶಕದಿಂದ ಈಚೆಗೆ. ಬಹಳಷ್ಟು ದೇಶಗಳಲ್ಲಿ ರಾಷ್ಟ್ರೀಯ ಪ್ರಜ್ಞೆಯಾಗಿ ಕತೆಗಳ ಅಧ್ಯಯನ ನಡೆಯಿತು. ಕನ್ನಡದವರು ರಾಷ್ಟ್ರೀಯತೆಗೆ ಜಾನಪದವನ್ನು ಭಾರತೀಯ ಸಂಸ್ಕೃತಿಯೆಂದು ಪ್ರತಿಬಿಂಬಿಸಿದರು. ಉದಾ: ಗರತಿಯ ಹಾಡು ಸಂಕಲನದ ತ್ರಿಪದಿಗಳನ್ನು ಪಾಶ್ಚಾತ್ಯ ಸಂಸ್ಕೃತಿಗೆ ಮುಖಾಮುಖಿಯಾಗಿಸಿದರು.
7. ರಾಷ್ಟ್ರೀಯತೆಯ ಪ್ರಶ್ನೆ ಬಂದಾಗ ಕನ್ನಡಿಗರು ಹೆಚ್ಚು ಕಾವ್ಯದ ಕಡೆಗೆ ಸ್ಪಂದಿಸಿದ್ದನ್ನು ಗಮನಿಸಬಹುದು.
8. 19ನೆಯ ಶತಮಾನದಲ್ಲಿ ಪಾಶ್ಚಾತ್ಯರಲ್ಲಿ ಜನಪದ ಕತೆಗಳ ಸಂಗ್ರಹವೆಂಬುದು ದೇಶ ದೇಶಗಳ ನಡುವೆ ಸ್ಪರ್ಧೆಯಂತೆ ನಡೆಯಿತು. ಇದರಿಂದಾಗಿ ಸಾವಿರಾರು ಸಂಗ್ರಹಗಳು ವಿದೇಶದಲ್ಲಿ ಪ್ರಕಟಗೊಂಡುವು. ಕರ್ನಾಟಕದಲ್ಲೂ ಹತ್ತಾರು ಸಂಗ್ರಹಗಳು ಪ್ರಕಟವಾದುವು.
9. ವರ್ಗ' ಮತ್ತು 'ಆಶಯಸೂಚಿ' ಬಂದ ನಂತರ ಕತೆಗಳು ಎಲ್ಲಾ ದೇಶದಲ್ಲೂ ಒಂದೇ ವರ್ಗವನ್ನು ಹೊಂದಿರುತ್ತವೆ. ವರ್ಗ ಮತ್ತು ಅಶಯ ಸೂಚಿ ಬಂದದ್ದರಿಂದಾಗಿ ಜಗತ್ತಿನ ಜನಪದ ಕತೆಗಳನ್ನು ಸಂಗ್ರಹಿಸುವ ದೃಷ್ಟಿಕೋನ ಬದಲಾಯಿತು. ಉದಾ : ಸುಳ್ಯ ಪರಿಸರದಲ್ಲಿ ನಾನು ಸಂಗ್ರಹಿಸಿದ 100 ಕತೆಗಳಲ್ಲಿ ಆರ್ನೆ ಥಾಮ್ಸನ್ ಗುರುತಿಸದೇ ಇರುವಂತಹ 7 ಹೊಸ ವರ್ಗವನ್ನು ಅಧ್ಯಯನಿಸುವುದಕ್ಕೆ ಸಾಧ್ಯವಾಯಿತು. ಅಂದರೆ ಜಾಗತಿಕ ನೆಲೆಯಲ್ಲಿ ಸುಳ್ಯದ ಅರೆಭಾಷೆಯ ಜನಪದ ಕತೆಗಳು ಪ್ರತ್ಯೇಕವಾಗಿ ತೋರಿ ಬರುತ್ತವೆ ಎಂದಾಯಿತು.

**ಡಾ. ವಿಶ್ವನಾಥ ಬದಿಕಾನ**
ಸಹ ಪ್ರಾಧ್ಯಾಪಕರು, ಸಂತ ಅಲೋಶಿಯಸ್ ಕಾಲೇಜು, ಮಂಗಳೂರು.
9449615474
badikana65@gmail.com

# ಪರಿವಿಡಿ

# ಅರೆಬಾಸೆನ ಅಜ್ಜಿಕತೆಗ

## 1. ಮೊಸಳೆ ಮತ್ತ್ ಮೊಲದ ಕತೆ

ಒಂದ್ ಮೊಲಕ್ಕೆ ಈಚೆ ಕಾಡ್‌ಲಿ ಮೇದ್ ಮೇದ್ ಅದ್ಕೆ ಅಲ್ಲಿ ಎಲ್ಲಾ ಮುಗ್ತ್. ತಿಂಡಿ, ತಿನಸ್, ಹುಲ್ಲು ಎಲ್ಲಾ. ಆಚೆ ಕರೆಗೆ ಹೊಕು. ಹೆಂಗೆ ಹೋದು? ಮೊಲಂಗೆ ದಾಟಿಕೆ ಎಲ್ಲಿ ಆದೆಯೊ ? ಆದ್ಲೆ. ಹೋಗಿ ಹಳ್ಳದ ಹಕ್ಕಲೆ ಸುಮ್ಮಂಗೆ ಕುದ್ದತ್. ಅಲ್ಲಿಗೆ ಒಂದ್ ದೊಡ್ಡ ಮೊಸಳೆ ಬಾತ್. 'ಯಾರ್'? 'ನಾ ಮೊಲ'. 'ಯಾಕೆ ಕುದ್ದದ್'? ಹೀಂಗೆ ಕುದ್ದದ್. ಮೊಸಳೆಗ ಎಷ್ಟ್ ಒಳೊಂತ ಹೇಳಿ ಲೆಕ್ಕ ಮಾಡಿಕೆ ಕುದ್ದದ್. 'ಕಾಡಿಲಿ ಮೃಗ ಹೆಚ್ಚೊ ಮೊಸಳೆಗ ಹೆಚ್ಚೋಂತ ಲೆಕ್ಕ ಮಾಡಿಕೆ ಕುದ್ದದ್'ಂತ ಮೊಸಳೆ ಹೇಳ್ತ್. 'ನಿನ್ನಂದ ಆಕಿಲ್ಲೆಪ್ಪ ಬುಡ್. ಹಳ್ಳಲಿ ಮೊಸಳೆ ಹೆಚ್ಚ್'ಂತ ಮೊಲ ಹೇಳ್ತ್, 'ನೀ ಬುಡು ಗುಡ್ಡೆಲಿ ಮೊಲ ಹೆಚ್ಚ್'. 'ಓ ಹಾಂಗೆಯ'. 'ನಿನ್ನ ಮೊಸಳೆಗ ಎಷ್ಟು ಒಳೊ ನೋಡಂತ ಹೇಳ್ತ್. ಇದ್ದಾ ದಿಕ್ಕಿನ ಮೊಸಳೆಗಳ ಎಲ್ಲಾ ತಂದ್ ಹಾಕಿತ್. ಮೊಸಳೆ ಕರ್ಕಂಡ್ ಬಾತ್. 'ನಂಗೆ ಮೊಲಗಳ ಲೆಕ್ಕ ಗೊತ್ತುಟು' ಇದ್ ಹೇಳಿಕನ್ತ್. ದೊಡ್ಡ ಇಲ್ಲೆಪ. ಸಾಲಾಗಿ ನಿಲ್ಲಿ ಈ ದಡಂದ ಆ ದಡಕ್ಕೆ ಸಾಲಾಗಿ ನಿಂತೊ. 'ಲೆಕ್ಕ ಮಾಡೋಕ'. 'ಮಾಡೊಕು'. 'ಆಚೆ ಕರೆಲಿ ಲೆಕ್ಕ ಹೇಳ್ದು'. ಒಂದು ಎರಡು ಮೂರು ನಾಲ್ಕುಂತ ಹೇಳಿ ಆಚೆಕರೆ ಗುಡ್ಡೆಗೆ ಹತ್ತಿತ್ ಅದ್. ಹಾರಿ ಅತ್ತ ಹೋತ್. ಅಲ್ಲಿ ನಿಂತ್‌ದ್ 'ನನ್ನ ಮೊಲಗ ಹೆಚ್ಚ್ ನೀ ಹೋಗ್'ಂತ ಹೇಳ್ತ್. ಈ ಮೊಸಲೆಗಳಿಗೆ ಬೇಕ ಈ ಕೆಲಸ. ಇದರ ಆಗಲೇ ಹಿಡ್ದ್ ತಿನ್ಬೇಡ ? ಅಲ್ಲಿಗೆ ಮುಗ್ತ್. [ಕಥಾ ನಿರೂಪಕಿ:ಹೊನ್ನಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 2. ಕುರೆ ಮತ್ತ್ ಮೊಸಳೆ ಕತೆ

ಒಂದ್ ಕುರೆ ಯಾಗೋಳು ಹಣ್ಣ್ ಹಂಪಲು ತಿಂಬೊದು. ಹಳ್ಳದ ಕರೆಲಿ ಕುದ್ಕಂಡ್ ತಿಂಬೊದು. ತಿಂದ್ ತಿಂದ್ ಆಕನ ಅದ್ ಯಾಕೆ ತಿಂಬೊದುಂತ ಈ ಮೊಸಳೆ ಅದ್ಕೆ ಪಾರ ಕಾಯ್ದು. ಮೇಲೆಂದ ಹಣ್ಣ್ ಬೀಳ್ಕನ ಮೊಸಳೆ ತಿಂದ್ ಕೊಂಬೊದು. ಕುರೆ ಮೇಲೆ ಏನ್ ಮಾಡ್ದು ? ಇನ್ನ್ ಮೊಸಳೆಗೆ ಇದರ ತಿನ್ನೊಕ್'ಂತ ಒಂದ್ ದಿನ ಉಪಾಯ ಮಾಡ್ತ್. 'ಬಾ ನಾವ್ಗೆ ಪಂಚಾತಿಗೆ ಉಟ್ಟು'ಂತ ಮೊಸಳೆ ಹೇಳ್ತ್. 'ಪಂಚಾತಿಗೆ ಸಣ್ಣದಪ್ಪಾ. ನೀನ್ ಬಾ ಇಲ್ಲಿ'. 'ಎಂತದ್ ? ಎಂತದ್ ?''ಏನಿಲ್ಲೆಪ್ಪ'. 'ಸಂತೋಷಲಿ ಬಾ ನನ್ನ ಮೇಲೆ ಕುದ್ದ್‌ರ್'. 'ಹಾಂ...ಹಾಂ....! ಅದೆಲ್ಲ ಆಕಿಲ್ಲೆ'. 'ಅಂದರೆ ನೀ ಸರಿ ನಿಲ್ಲೊಕು'. 'ಹ್ಞಾಂ ನಿಲ್ಲೊಕು'. 'ನಾ ಮರಲಿ ಒಂದ್ ಸಣ್ಣ ಸಾಮಾನ್ ಇಸಿಯೊಳೆ. ಅದು ಉಟ್ಟೊ ಇಲ್ಲೆಯ ನಾ ನೋಡಿ ಬುಟ್ನೆ. ಮತ್ತೆ ಬನ್ನೆ'. ಒಮ್ಮೆ ಹತ್ತಿದಂಗೆ ಮಾಡ್ತ್. ಹಣ್ಣ್ ತೀನ್ತ್. ಬಾತ್. 'ಕುದ್ರುಣ್ಣ'. ಕುರೆ

ಲಾಯ್ಕ್ ಕುದ್ದ್‌ಕನ್ತ್. ಅದ್ ಹೆಚ್ಚಿನಂಶ ಅರ್ಧ ಪಳ್ಳಂದ ಹಾರಿದ್ರು ಹಾರುವೆಂತ ಧೈರಲಿ ಕುದ್ದುಟು. ಮೊಸಳೆ ನಡೂ ಹಳ್ಳಕೆ ಎತ್ತಿಕನ ಏನ್ ಹೇಳ್ತ್ ? 'ಕುರೆ ನಿನ್ನ ಕರ್ಲ್ ನಂಗೆ ಬೇಕಾತ್'. 'ಯಾಕೆ ? ನೀ ಆಗಲೆ ಯಾಕೆ ಹೇಳದ್ದ್?' 'ನನ್ನ ಕರ್ಲ್ ಮರದ ಕೊಂಬೆಲಿ ಇರ್ದು'ಂತ ಕುರೆ ಹೇಳ್ತ್. ಮೊಸಳೆ ಕುರೆನ ಕುದ್ರಿಸಿಕಂಡ್ ಹಳ್ಳದ ಕರೆಗೆ ಬಾತ್. 'ಕುರೆ ಕರ್ಲ್ ಮರದ ಕೊಂಬೆಲಿ ಇರ್ದುಂತ ನಿಂಗೆ ಗೊತ್ತಿಲ್ಲೆನಾ ಮೊಸಳೆ'ಂತ ಹೇಳಿ ಕುರೆ ಆಚೆ ದಡಕೆ ಹಾರ್ತ್. ಹೋತ್. ಕತೆ ಆತ್. [ಕಥಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 3. ಬಿಸಿಲುನೂ ಮಳೆನೂ ಕುದ್ಕನ ಮೊದ್ವೆ ಕತೆ

ಒಂದು ಊರ್ಲಿ ಒಂದ್ ಕುದ್ಕ ಇತ್ತ್. ಆ ಕುದ್ಕಂಗೆ ಯಾಗೋಲು ಹೊಟ್ಟೆ ಇಸಿದೆಂತ ಕೋಳಿ ಹುಡ್ಕಿಕಂಡ್ ಹೋದು. ಎಲ್ಲವೂ ಗೂಡ್ಲಿ ಮುಚ್ಚಿ ಇಸಿದರಿಂದ ಕೋಳಿನ ಹಿಡಿಯಕೆ ಆತ್ಲೆ. ಕುದ್ಕಂಗೆ ಹೊಟ್ಟೆಇಸಿದರ್ಲಿ ಬೊತ್ತ್. ಬೇರೇನೂ ಆಹಾರನೂ ಸಿಕ್ಕುದ್ಲೆ. ಪ್ರಾಣಿನೂ ಸಿಕ್ಕುದ್ಲೆ. ಹಂಗೆ ಅಲ್ಲಿ ನೆರೆಕರೆಲಿ ಎರಡ್ ಮನೆಯವು ಒಳೊ. ಒಂದ್ ಮನೆಲಿ ಗೂಡೆ ಒಳದ್. ಮನೆ ಹುಕ್ಕ್ ಗಂಜಿ ತಿಂಬೊದು. ಒಂದ್ ದಿನ ಗೂಡೆನ ಮನೆಗೆ ಹೋದರೆ ಮತ್ತೊಂದ್ ದಿನ ಹೈದನ ಮನೆಗೆ ಹೋದು. ಗೂಡೆ ಹೈದನ ಮನೆಗೆ ಹೋಕನ ಕುದ್ಕ ಬಂದ್ ಗಂಜಿ ತಿಂಬೊದು. ಇದ್ ಗೂಡೆನ ಅಯ್ಯೆ ಅಪ್ಪಂಗೆನೂ ಹೈದನ ಅಯ್ಯೆಪ್ಪಂಗೆನೂ ಯಾಗೋಲು ಜಗಳ ಆದು. ಜಗಳ ಆಗಿ ಆಗಿ ಕೊನೆಗೆ ಏನಾತ್ಂತ ಹೇಳ್ರೆ ಅವು ನೋಡಿಕಂಡಿದ್ದಾಂಗೆ ಯಾರು ಹೋದು ಬಾದು ಗೊತ್ತಾದ್ಲೆ. ಮತ್ತೆ ಕೊನೆಗೆ ಇದ್ ಕುದ್ಕ ಆಗಿರಕುಂತ ಅವ್ ಅಂದಾಜ್ ಮಾಡ್ತೊ. ನಾಯಿಗ ಎಲ್ಲ ಬಾರಿ ಬೊಗೊಳ್ದು ಕೇಳ್ದೆ. ಇದ್ ಕುದ್ಕನೇ ಆಗಿರ್ದು. ಎಂತದ್? ಏನ್ಂತ? ಹೇಳಿ ಹೈದ ಅಟ್ಟಕೆ ಹತ್ತಿ ಕುದ್ದತ್. ಅಟ್ಟಕೆ ಹೈದ ಹತ್ತಿ ಕುದ್ರ್‌ಕನ ಕುದ್ಕ ಬಂದ್‌ದ್ ಇವ್ ಆಚೆ ಈಚೆ ಹೋಗೊಳೊಂತ ಕುದ್ಕ ಬಂದ್‌ದ್ ಗಂಜಿ ತಿಂಬಕೆ ನೋಡ್ತ್. ಇದ್ ಕುದ್ಕಂತ ಆತಲ್ಲ ಹೈದಂಗೆ.

ಮತ್ತೆ ಈ ಹೈದ ಏನ್ ಮಾಡ್ತ್ಂತ ಹೇಳ್ರೆ ಈ ಕುದ್ಕಂಗೆ ನಾ ಬುದ್ಧಿ ಕಲಿಸದೆ ಇರಿಕಿಲ್ಲೆ. ನಾ ಗೂಡೆನ ಪ್ರೀತಿಸ್ತ ಒಳೆ. ಅದ್ ನನ್ನ ಪ್ರೀತಿಸ್ತಾ ಉಟ್ಟು. ಹಾಂಗೆ ಆಕನ ನಮ್ಮ ಇಬ್ಬರ ಸಂಬಂಧ ಹಾಳಾದೆ ಅಲ್ಲ. ಅದ್ಕೆ ಕುದ್ಕಂಗೆ ನಾ ಬುದ್ಧಿ ಕಲಿಸಿನೆಂತ ಮತ್ತೊಂದ್ ದಿನ ಹಿಟ್ಟ್ ಎಲ್ಕಿಸುವ ಸಟ್ಟ್‌ಗೊ ಉಟ್ಟಲ್ಲ. ಅದರ ಒಂದ್ ಒಲೆ ಹಕ್ಕಲೆ ಇಸಿತ್. ಒಳ್ಳೊ ಕೆಂಡಕೆ ಇಸಿತ್. ಒಳ್ಳೊ ಕಾದದೆ. ಕಾಸಿ ಆಕ್ಕೆ ಆಕನ ಕುದ್ಕ ಬಾತ್. ಕುದ್ಕ ಬಂದ್ ತಿಂಬಕನ ಅದ್ ಮಡಿಕೆ ಒಳಗೆ ತಲೆ ಇಟ್ಟ್‌ದ್ ತಿಂಬೊದಲ್ಲ. ಇಂವ ಸಟ್ಟ್‌ಗೊನ ಹಿಂದೆಂದ ಕಾಸಿದ್ ಇಸಿತ್. 'ಜೊಯಂಕ'ಂತ ಕೇಳ್ತ್. ಅಯ್ಯಾವ್ವೊಂತ ಕುದ್ಕ ಹರಿ ಬಿದ್ದ್ ಓಡ್ತ್. ಓಡಿ ಹೋಗಿ ಎಲ್ಲೂ ತಡಿಯಕೆ ಬೊತ್ತದೆ ಹಳ್ಳಕೆ ಓಡ್ತ್. ಪಾರೆಕಲ್ಲ್ ಹಕ್ಕಲೆ ಓಡಿ ತಡಿಯಕೆ ಬೊತ್ತದೆ(ಹೊಟ್ಟೆಗೇನಿಲ್ಲೆ) ಕುದ್ದತ್. ಪಾರೆಕಲ್ಲ್‌ಲಿ ಕುದ್ದಾಕನ ಹಂಞ ತಂಪಾತ್. ತಂಪಾಗಿ ಅದ್ ಮೂಳಿಕೆ ಎಲ್ಲ ಸುರು ಮಾಡ್ತ್.

ಅಪ್ಪಾಕನ ಇದ್ ಹಂಞ ಹೊತ್ತಾಕನ ಕುಂಡೆನ ಅತ್ತ ಇತ್ತ ಹೊನ್ನಿಸಿರೆ ಹೊನ್ನಿಸಿರೆ ಅಂಟ್‌ನಂಗೆ ಆಗುಟು. ಇನ್ನೆಂತ ಮಾಡ್ದುಂತ ಎಲ್ಲಾ ಕುದ್ಕಂಗಳ ಕರ್‍ದೊ. ಎಲ್ಲಾ ಕುದ್ಕಂಗ ಬಂದ್ ಹೇಳ್ದೊ. ನಿಂಗೆ ಹಂಗೆ ಆಕು. ನಿಂಗೆ ಹಂಗೆ ಆಕು. ನಿಂಗೆ ಇದೇ ಬುದ್ಧಿಯೊಂತ ಹೇಳಿ ಬೊಯ್ಯಕೆ ಸುರುಮಾಡ್ದೊ. ನಿನ್ನಂದಾಗಿ ನಮ್ಮ ಜೀವ ಹೋದುಂತ ಹೇಳ್ದೊ. ಅಪ್ಪಾಕನ ಬಿಸಿಲ್‌ಮಳೆಂತ ಹೇಳಿ ಬಾತ್. ಹಂಞ ಹೊತ್ತಾಕನ ಕುಂಡೆಗೆ ನೀರಿನ ಪಸೆ ಮುಟ್ಟಿತ್. ಅಪ್ಪಾಕನ ಕುದ್ಕನ ಈ ಅಂಟಿದ್ ಎಲ್ಕಿ ಹೋತ್. ಅಲ್ಲಿಂದ ಮತ್ತೆ ಬಿಸಿಲುನು ಮಳೆನು ಕುದ್ಕನ ಮೊದುವೆಂತ ಆತ್. ಕೊನೆಗೆ ಕುದ್ಕ ಕದ್ದ್ ತಿಂಬೊದರ ಬುಟ್ಟಿತ್. ಆಗ ಅಲ್ಲಿದ್ದ ಕುದ್ಕಂಗ ಹೇಳ್ದೊ. ನಾವು ಇನ್ನ್ ಮುಂದೆ ಎಂತ ಕದಿಯುದಾದರೂ ಈ ಮೊನ್ಸಂತ ಹೇಳ್ದರ ನೋಡಿಕನೊಕು ಹಂಞ. ಅಲ್ಲಿಗೆ ಕತೆ ಮುಗ್ತ್. [ಕಥಾ ನಿರೂಪಕ:ಒಡ್ಯಪ್ಪಗೌಡ ಸ್ವರಂಜ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 4. ಕುರೆ ಸಹಾಯ ಮಾಡ್ದ ಕತೆ – ಪಠ್ಯ 1,

ಒಂದು ಊರ್‍ಲಿ ಒಂದ್ ಅರ್ಸು ಇತ್ತ್. ಅವಂಗೆ ಮೂರು ಜನ ಹೆಣ್ಣ್ ಮಕ್ಕ. ಅಂವಂಗೆ ಮಕ್ಕ ಇಲ್ಲೆ. ಅಂವ ಬೇಜಾರ್‍ಲಿ ಇದ್ದ್ ಒಂದು ದಿನ ಗದ್ದೆ ಕಡೆ ತಿರುಗಿಕಂಡ್ ಹೋತ್. ಹಂಗೆ ಹೊಕ್ಕಂಡ್ ಇರಿಕನ ಅಲ್ಲಿ ಎಸ್‌ಂಡ್‌ನ ಮೇಲೆ ಎಷ್ಟೋ ಮರಿಗ ಹರ್‍ಕಂಡ್ ಇತ್ತ್. ಅದರ ನೋಡಿ ಅವಂಗೆ ಬೇಜಾರ ಆತ್. ಬಾರಿ ಬೇಜಾರ ಆಗಿ, ಇಂತ ಎಸ್‌ಂಡ್‌ಗಾದರೂ ನೂರಾರ್ ಮಕ್ಕ ಒಳೊ. ನಂಗೆ ಮಕ್ಕ ಇಲ್ಲೆ ಅಲ್ಲೆಂತ ಬೇಜಾರಲಿ ಬಂದ್ ಮನೆಲಿ ಮಲಗಿತ್. ಹಂಗೆ ಇರಿಕೆ ಆಕನ ಹೆಣ್ಣ್ ಕೇಳ್ದೆ, 'ನೀವು ಯಾಕೆ ಬೇಜಾರಲಿ ಒಳರಿ? ಎಂತದ್? ಏನ್? ಊಟ ಆಗಿ ಹಿಂಗೆಲ್ಲಾ ಕೇಳ್ತ್. ಹಂಗೆ ಕೇಳಿ ಆಕನ ಏನಾದರೂ ಅಂವ ಎದ್ರುದೇ ಇಲ್ಲೆ.

ಹಂಗೆ ಮಲಕೊಂಡಿರುವ ಸಮಯಕೆ ಜೋಯಿಸ ಬಾತ್. ಜೋಯಿಸ ಬಂದ್ ಕರ್‍ತ್. 'ಅರ್‍ಸರೆ ಅರ್‍ಸರೆ ನೀವು ಏನ್ ಬಾರೀ ಬೇಜಾರಲಿ ಒಳರಿ? ಏನು ಮಾತಾಡ್ದುಲೆ? ನಂಗೆ ಏನಾರ್ ಕೊಡಿ ಬನ್ನಿ. ಮಾತಾಡಿ'ಂತ ಹೇಳ್ತ್. ಹಂಗೆ ಹೇಳಿ ಆಕನ ಅಂವ ಎದ್ದತ್. 'ಬೇಜಾರ ನಂಗೆ ಏನೂ ಇಲ್ಲೆ. ಒಂದ್ ಮೊದ್ವೆ ಆದೆ. ಅದರ್‍ಲಿನೂ ಮಕ್ಕ ಇಲ್ಲೆ. ಎರಡ್ನೆ ಮೊದ್ವೆ ಆದೆ. ಅದರ್‍ಲಿನೂ ಮಕ್ಕ ಇಲ್ಲೆ. ಮೂರ್‍ನೆ ಮೊದ್ವೆ ಆದೆ. ಅದರ್‍ಲಿನೂ ಮಕ್ಕ ಇಲ್ಲೆ. ಗದ್ದೆ ಕಡೆ ಹೋಕನ ಒಂದು ಎಸ್‌ಂಡ್‌ಗೆ ಎಷ್ಟೋ ಮರಿಗ ಒಳೊ. ಅದರ ನೋಡಿ ನಂಗೆ ಬಾರೀ ಬೇಜಾರ ಆತ್. ಹಂಗೆ ನಾ ಮಲಗಿದ್. ಮತ್ತೇನ್ ಇಲ್ಲೆ'ಂತ ಹೇಳ್ತ್. ಆಗ ಜೋಯಿಸ ಹೇಳ್ತ್. 'ಹಾಂಗಾರೆ ನಾ ಒಂದ್ ಉಪಾಯ ಹೇಳ್ನೆ. ನಾ ಹೇಳ್ದಾಂಗೆ ಮಾಡುವರಿಯೋ?' ಆದು ಮಾಡ್ನೆಂತ ಹೇಳ್ತ್. ಏಳ್ ಸಂದ್ರ ದಾಟಿಕೆ ಒಂದ್ ಚೋಳು ಸಂದ್ರ ಸಿಕ್ಕಿದೆ. ಆ ಚೋಳು ಸಂದ್ರ ದಾಟಿಕೆ ಆಕನ ಒಂದ್ ಮಾಯಿನ ಮರ ಸಿಕ್ಕಿದೆ. ಆ ಮಾಯಿನ ಮರದ ಅಡಿಲಿ ಮೂರ್ ಹೆಣ್ಣ್ ಮಕ್ಕ ತಲೆ ಮೈ ಮಿಂದ್ ಬಿಳಿ ಸೀರೆ ಉಟ್ಟ್ ಮಲಗ್ಯೊಳ. ಅದರ್‍ಲಿ ಮಾಯಿನ ಹಣ್ಣ್ ಉಟ್ಟು. ಕೋಳಿ ಕೂಂಗುವ

ಹೊತ್ತಿಗೆ ಆಕನ ಅದರಂದ ಒಂದ್ ಮಾಯಿನ ಹಣ್ಣ್ ಬಿದ್ದದೆ. ಆ ಮಾಯಿನ ಹಣ್ಣ್‌ನ ಇವ್ ಪಾಲ್ ಮಾಡಿ ತಿಂದ್ ಬರಲಿ. ಇವ್ಕೆ ಮಕ್ಕ ಹುಟ್ಟಿದೆಂತ ಆತ್.

ಹಂಗೆ ಕೇಳಿ ಆತ್‌ಂತ ಹೇಳ್ತ್. ಹೆಣ್ಮಕ್ಕಳ ಕರ್ದ್ ಹೇಳ್ತ್. 'ಹಿಂಗಿಂಗೆ ನೀವ್ ಹೋಕ್ಕು. ಏಳ್ ಸಂದ್ರದ ಆಚೆ ಚೋಳು ಸಂದ್ರ ಉಟ್ಟು. ಅಲ್ಲಿ ಒಂದ್ ಮಾಯಿನ ಮರ ಉಟ್ಟು. ಅಲ್ಲಿ ನೀವು ತಲೆ ಮೈ ಮಿಂದ್ ಮಲಗೊಕು. ಬೊಳ್ಪಾಕನ ಒಂದ್ ಮಾಯಿನ ಹಣ್ಣ್ ಬಿದ್ದದೆ. ಅದರ ನೀವು ಮೂರು ಜನ ಪಾಲ್ ಮಾಡಿ ತಿಂದ್ ಬರೊಕು'ಂತ ಹೇಳ್ತ್. ಹಾಂಗೆ ಅವು ಹೊರಟೊ ಹೋದೊ. ಅವು ಹೋಗಿ ಏಳು ಸಂದ್ರ ದಾಟಿದೊ. ಅಷ್ಟಾಕನ ಚೋಳು ಸಂದ್ರ ಸಿಕ್ಕಿತ್. ಮಾಯಿನ ಮರಕಂಡದೆ. ಮಾಯಿನ ಮರದ ಅಡಿಗೆ ಹೋದೊ. ನೋಡಿಕೆ ಆಕನ ತುಂಬಾ ಮಾಯಿನ ಹಣ್ಣ್ ಉಟ್ಟು. ಅಲ್ಲೆ ತಲೆ ಮೈ ಮಿಂದೊ ಮಾಯಿನ ಮರದ ಅಡಿಲಿ ಮಲ್ಗಿದೊ. ಕೋಳಿ ಕೂಂಗುವ ಹೊತ್ತಿಗೆ ಆಕನ ಮಾಯಿನ ಹಣ್ಣ್ ಬೀತ್. ಅಷ್ಟಾಕನ ಮುಂದೆನ ಇಬ್ಬರ್ ಹೆಣ್ಣ್‌ಗ ಪಾಲ್ ಮಾಡಿದೊ ತಿಂದೊ. ಅವು ಬಂದೊ. ಈ ಅಕೇರಿನ ತಂಗೆ ಅಲ್ಲಿ ಮಲಗಿದ್ ಅದಕ್ಕೆ ನಿದ್ದೆ ಬಂದುಟು, ಅದಕ್ಕೆ ಗೊತ್ತೇ ಇಲ್ಲೆ. ಅದ್ ಬೆಳಿಗ್ಗೆ ಎದ್ದ್ ನೋಡಿಕೆ ಆಕನ ಹಣ್ಣ್ ಇಲ್ಲೆ. ಅಕ್ಕಂದರೂ ಇಲ್ಲೆ. ಇನ್ನೆಂತ ಮಾಡ್ದು. ಎಲ್ಲಾರ್ ಹಣ್ಣ್ ಉಟ್ಟಂತ ಹೋಗಿ ಹುಡ್ಕಿನೆಂತ ಹೋಗಿ ಹುಡ್ಕಿಕನ ಒಂದ್ ಕುರೆ ತಿಂದ ಮಾಯಿನ ಹಣ್ಣ್ ಇತ್ತ್. ಅದರ ತೀನ್ತ್. ಬಂದ್ ಮೂರ್ ಹೆಣ್ಣ್‌ಗಳೂ ಮನೆಗೆ ಸೇರ್‍ದೊ.

ಹಂಞ ಸಮಯ ಕಳ್ತ್. ಬೊಸ್ರಾದೊ ತಿಂಗ ಆತ್. ಹೆರಿಗೆ ಆತ್. ಹೆರಿಗೆ ಆಗಿ ಆಕನ ಮಾಯಿನ ಹಣ್ಣ್ ತಿಂದವು ಎರಡ್ ಗಂಡ್ ಮಕ್ಕ ಹೆತ್ತೊ. ಕೊರೆಗ ತಿಂದ್‌ದರ ತಿಂದ್ ಒಂದ್ ಕುರೆನ ಹೆತ್ತತ್. ಕುರೆನ ಹೆತ್ತ್ ಆಕನ ಅರ್ರು ಹೇಳ್ತ್, 'ಇದ್ ಕುರೆನ ಹೆತ್ತತ್. ಇದ್ ನಾವ್ಗೆ ಈ ಮನೆಲಿ ಬೇಡ. ಅದರ ತಕಂಡ್ ಹೋಗಿ ಕೊಠಗೆಲಿ ಹಾಕಿ. ಅಲ್ಲಿ ಇರಲಿ'ಂತ ಹೇಳ್ತ್. ಹಾಂಗೆ ತಕಂಡೋಗಿ ಅದರ ಕೊಠಗೆಲಿ ಮಾಡ್ದೊ. ಅದ್ ಹಂಗೇ ಇತ್ತ್.

ಇತ್ತ ಮಕ್ಕ ದೊಡ್ಡಿತಾದೊ. ಶಾಲೆಗೆ ಹೋವ ಸಮಯ ಬಾತ್. ಶಾಲೆಗೆ ಕಳ್ಸಿದೊ. ಅರ್ರು ಸ್ಲೇಟ್ ಪುಸ್ತಕ ಎಲ್ಲ ಕೊಟ್ಟ್ ಮಕ್ಕಳ ಶಾಲೆಗೆ ಕಳ್ಸಿತ್. ಅಷ್ಟಾಕನ ಈ ಕುರೆ ಹೇಳ್ತ್. ಅವ್ವವ್ವ ಅಣ್ಣಂದಿರ್ ಶಾಲೆಗೆ ಹೋದವೆ. ನಂಗೇನೂ ಒಂದ್ ಸ್ಲೇಟ್ ಪುಸ್ತಕ ಕೊಡ್‌ಂತ ಹೇಳ್ತ್. ನಾ ಎಲ್ಲಿಂದ ಸ್ಲೇಟ್ ಪುಸ್ತಕ ತಾದುಂತ ಹೇಳಿಕಂಡ್ ಹೋತ್. ಇಂವನ ಹಠ ತಡಿಯಕೆ ಬೊತ್ತದೆ ಎಲ್ಲಿಂದಲೋ ತಂದ್ ಕೊಟ್ಟತ್. ಹಂಗೆ ಅವನೂ ಶಾಲೆಗೆ ಹೋತ್. ಹೋಕೆ ಆಕನ ಈ ಮಕ್ಕ ಕಲ್ಲ್ ಹೊಡ್ದ್ ಬೆರ್ರುದು. ಬೆರ್ರಿಕೆ ಆಕನ ಹಿಂದೆ ಹಿಂದೆ ನಿಂತ್ ಅಡಂಗಿ ಅಡಂಗಿ ಹೋತ್. ಎದ್‌ರ್‌ಗೆ ಹೋಕನ ಮಕ್ಕ ಕಲ್ಲ್ ಹೊಡಿಯಕೆ ಆತ್. ಹಂಗೆ ಅಂವ ಮಾಸ್ಟರ್ ಪಾಠ ಮಾಡಿಕನ ಶಾಲೆ ಹಿಂದೆ ಕುದ್ದ್‌ರ್ದು. ಬರ್ಕಂಡ್ ಬಿದ್ಕಂಡ್ ಇತ್ತ್.

ಹಂಗೆ ಇದ್ದ್ ಇದ್ದ್‌ದ್ ಅಂವ ಉಸಾರ್ ಆತ್ ಕುರೆ. ಈ ಮಕ್ಕಳ್ ದಡ್ಡರ್. ಕಲ್ಸಿರೆ ಕಲಿಯಕೆ ಆದ್ಲೆ. ಹಿಂಗೆ ಒಂದ್ ದಿನ ಅರ್‍ಸು ಮಾಸ್ಟ್‌ರಲ್ಲಿಗೆ ಹೋತ್. ಈ ಮಕ್ಕ ಎಲ್ಲ ಹೆಂಗೆ ಒಳೊ. ಉಸಾರ್ ಒಳೊನೊ. ಕಲ್ತೊಲನಾಂತ ಕೇಳಿಕೆ ಹೋತ್. ಅಷ್ಟೊತ್ತಿಗೆ ಮಾಸ್ಟ್‌ರ್ ಹೇಳ್ತ್. 'ಎಂತದ್ ಅರ್‍ಸರೆ?"ಈ ಮಕ್ಕಳಿಗೆ ಎಂತದೂ ಹೇಳ್ರೆನೂ ಬಾಯಿಗೆ ಬಾದ್ಲೆ. ಬರೇ ದಡ್ಡರ್. ಒಂದ್ ಕುರೆ ಉಟ್ಟು. ಹಿಂದೆ ಬರ್ಕಂಡ್ ಇದ್ದದೆ. ಅದ್ ಓದುದರ ಬರಿಯೊದರ ನೋಡೆಕು. ನಂಗೆ ಅದರ ನೋಡಿಕೆ ಆಕನ ಬಾರೀ ಆಶ್ಚರ್ಯ. ಅದಕ್ಕೆ ಯಾರ್ ಹೇಳಿ ಕೊಟ್ಟವೆ?"ಹೌದ ? ಇನ್ನ್ ಎಂತ ಮಾಡ್ದು?' ಹಂಗೆ ಹಿಂಬೊತ್ತ್ ಆಕನ ಮಕ್ಕ ಮನೆಗೆ ಬಂದೊ. ಮನೆಗೆ ಬಂದಾಕನ ಅರ್‍ಸು ಕೇಳ್ತ್, 'ಮಕ್ಕಳೆ ಮಕ್ಕಳೆ ನೀವು ಇಷ್ಟ್ ಸಮಯ ಶಾಲೆಗೆ ಹೋದರಿ. ನಿಮ್ಮ ಓದಿದರ ಎಲ್ಲ ನೋಡೊಣ ನನ್ನ ಎದ್ರ್ ಓದಿ'ಂತ ಹೇಳ್ತ್. ಆಗ ಇವ್ಕೆ ಓದಿರೆ ಓದಿಕೇ ಆದ್ಲೆ. ಇವು ಒಂದೊಂದೇ ಅಕ್ಷರ ತೆಗ್ದ್ ಓದುವೆ. ಅಷ್ಟಾಕನ ಕುರೆ ಹೇಳ್ತ್. 'ಅವ್ವವ್ವ ಅಣ್ಣನವು ಓದುವೆ. ನಾನೂ ಓದೊಕಾ'ಂತ ಹೇಳ್ತ್. 'ನೀ ಅಲ್ಲಿಗೆ ಹೋದರೆ ನಿನ್ನ ಕಲ್ಲ್ ಹೊಡ್ದ್ ಬೆರ್‍ಸಿಪೊ. ನೀ ಬೇಕರೆ ಇಲ್ಲಿಯೇ ಓದ್'ಂತ ಹೇಳ್ತ್ ಅವ್ವ. ಹಾಂಗೆ ಅಂವ ಅಲ್ಲೇ ಓದಿತ್. ಅದರ ಕೇಳಿ ಆಕನ ಅಂವಂಗೆ ಬಾರೀ ಬೆಚ್ಚ ಆತ್. ಛೆ! ಆ ಕುರೆ ಆದರೂ ಓದಿದೆ. ಬರ್ದದೆ. ಇವ್ಕೆ ಏನೂ ಬರಹ ಬಾದ್ಲೆ. 'ನೀವು ಹೋಗಿನಿ ಮಕ್ಕಳೆ ಕುಮೆರಿ ಕಡಿನಿ'ಂತ ಹೇಳ್ತ್. ಶಾಲೆ ಬೇಡ ಕುಮೆರಿ ಕಡಿನಿಂತ.

ಹಂಗೆ ಇವು ಕತ್ತಿ ತಕಂಡ್ ಕುಮೆರಿ ಕಡಿಯಕೆ ಹೋದೊ. ಕುಮೆರಿ ಕಡಿಯಕೆ ಹೋಗಿ ಕುಮೆರಿ ಎಲ್ಲ ಕಡ್ದೊ. ಕುಮೆರಿ ಕಡಿಯಕೆ ಆಕನ ಈ ಕುರೆ ಹೇಳ್ತ್, 'ಅವ್ವವ್ವ ಅಣ್ಣನವೆಲ್ಲ ಕುಮೆರಿ ಕಡಿಯಕೆ ಹೋದವೆ. ನಾನೂ ಹೋನೆ ಅವ್ವ. ನಂಗೆ ಒಂದು ಕತ್ತಿ ಕೊಡವ್ವ'ಂತ ಹೇಳ್ತ್. ಹಾಂಗೆ ಹೇಳಿದ್ ಕತ್ತಿ ತಕನ್ತ್ ಕುರೆನೂ ಹೋತ್. ಕುರೆನೂ ಕಾಡ್ ಕಡ್ತ್. ಕುಮೆರಿ ಕಡ್ದ್ ಎಲ್ಲ ಆತ್. ಮನೆಗೆ ಬಂದೊ. ಬಂದ್ ಸುಮಾರ್ ಸಮಯ್ ಆತ್. ಇವು ಕಿಚ್ಚಿ ಹಾಕಿಕೆ ಹೋದ. ಅಷ್ಟಾಕನ ಅಣ್ಣನವು ಕಿಚ್ಚಿ ಹಾಕಿಕೆ ಹೋದವೆ ಅವ್ವ. ನಾನು ಹೊನೆಂತ ಹೇಳ್ತ್. ಹಂಗೆ ಆದುಂತ ಹೇಳಿದ್ ಅವಂಗೆ ಒಂದ್ ಸೂಟೆ ಕಟ್ಟಿಕೊಟ್ಟತ್. 'ಅವ್ವ ನೀ ನನ್ನ ಬೀಲಕೆ ಸೂಟೆನ ಕಟ್ಟಿ ಕಿಚ್ಚಿಕೊಡು. ನಾ ಹೋಗಿ ಕಿಚ್ಚಿ ಹಾಕಿ ಬನ್ನೆ'ಂತ ಹೇಳ್ತ್. ಹಾಂಗೆ ಬೀಲಕ್ಕೆ ಸೂಟೆ ಕಟ್ಟಿ ಕಿಚ್ಚಿ ಕೊಟ್ಟ್ ಬುಟ್ಟತ್. ಇದರ ಎಳ್ಕಂಡ್ ಹೋಗಿ, ನಡು ನಡೂವಿಗೆ ಹಾರಿ ಹಾರಿ, ಚೋಡಿನ ನಡೂವಿಗೆ ಬಂದ್ ಬಿದ್ದತ್. ಅವರ ಕುಮೆರಿಗಳಿಂದಲೂ ಬಾರಿ ಲಾಯಿಕ್ ಹೊತ್ತಿತ್. ವಾಪಾಸ್ ಬಂದೊ ಆದರ ಪೂಜೆ ಲಾಯ್ಕ್ ಮಾಡ್ದೊ. ಕುಮೆರಿ ಬಿತ್ತಿಕೆ ಹೋದೊ. ಅಷ್ಟಾಕನ ಕುರೆ ಹೇಳ್ತ್, 'ಅವ್ವವ್ವ ಅಣ್ಣಮೆನಿ ರಾಗಿ ಬಿತ್ತಿಕೆ ಹೋದವೆ. ನಂಗೆನೂ ಕುಮೆರಿ ನಡೂಲಿ ಕುಕ್ಕೆಲಿ ರಾಗಿ ತಂದಿಸ್ ನಾನೂ ಬಿತ್ತಿನೇ'ಂತ ಹೇಳ್ತ್. 'ನೀ ಹೇಂಗೆ ಬಿತ್ತುವ ಮಂಜ'. 'ನಾ ಹೇಂಗಾರು ಬಿತ್ತಿನೆ. ನೀ ತೆಕೊಂಡು ಬಂದ್ ಇಸ್ ಅಲ್ಲಿ'ಂತ ಹೇಳ್ತ್. ಹಂಗೆ ಕುಕ್ಕೆಲಿದ್ದ ರಾಗಿನ ತಕೊಂಡೋಗಿ

ನಡು ಕುಮೇರಿಲಿ ಇಸಿತ್. ಈ ಕುರೆ ಜೋಡಿಗೆ ಹಾರ್ದು, ಕುಕ್ಕೆಗೆ ಬಿದ್ದ್ ರಾಗಿನ ಕುಡ್ಕಿಕೊಂಡ್ ಹೋದು. ಹಂಗೇ ಹೋಗಿ ಹೋಗಿ ಇಡೀ ಕುಮೇರಿ ಬಿತ್ತಿ ಬಾತ್. ಇಂವನ ಕುಮೆರಿ ಲಾಯಕ್ ಹುಟ್ಟಿತ್. ಇವರದ್ದೆಲ್ಲ ಓರೆಓರೆ ಅಲ್ಲಲ್ಲಿ ಬುಟ್ಟ್‌ಬುಟ್ಟ್ ಹುಟ್ಟಿತ್. ಹಂಗೆ ಆಗಿ ಅದ್ ಬೆಳ್ತ್. ದೊಡ್ಡದಾತ್. ದೊಡ್ಡದಾಗಿ ಕದ್‌ರ್ ಹೋತ್. ಕದ್‌ರ್ ಹೊಕ್ಕೆ ಆಕನ ಅವು ಮಾಡ್‌ಕೋಲ್ ಕಟ್ಟಿಕೆ ಹೋದೊ. ಮಾಡ್‌ಕೋಲ್ ಕಟ್ಟಿಕೆ ಹೋಕನ 'ಅವ್ವವ್ವ ಅಣ್ಣಮೆನಿ ಮಾಡ್‌ಕೋಲ್ ಕಟ್ಟಿಕೆ ಹೋದವೆ. ನಾನೂನು ಹೋನೇ'ಂತ ಹೇಳ್ತ್. ಹಾಂಗೆ ಹೋನೆಂತ ಹೇಳ್ತ್. ಕತ್ತಿ ತಕನ್ತ್ ಇಂವ ಒಂದ್ ಬಲ್ಲೆನ ಹಿಡ್ದ್ ಬಗ್ಗಿಸಿತ್. ಅವು ಮಾಡ್‌ಕೋಲ್ ಕಟ್ಟಿದೊ ಬಂದೋ. ಬಂದ್ ಯಾಗೋಲು ಪಾರ ಮಲಗ್ಗಿಕೆ ಹೋದು. ಹಗಲೂ ರಾತ್ರಿ ಹೋದು. ಹಂಗೆ ಹೊಕ್ಕಂಡು ಇರಿಕೆ ಆಕನ ಅಲ್ಲಿ ಈ ಕುರೆ ಹಗಲ್ ಇಡೀ ಬಿದ್ದ್ ನಿದ್ದೆ ಮಾಡ್ದು. ರಾತ್ರಿ ಈ ಮಕ್ಕಳ ಕುಮೆರಿನ ತಿಂದ್, ಎಲ್ಲ ಹಾಳಾತ್. ಕುರೆದ್ ಬಾರಿ ಲಾಯಿಕ್ ಇತ್ತ್. ಹಾಂಗೆ ಇದ್ದ್ ಕೊಯ್ಯಕೆ ಆತ್. ರಾಗಿ ಕೊಯ್ಯಕೆ ಹೋದೊ. 'ಅವ್ವವ್ವ ಅವು ಎಲ್ಲ ರಾಗಿ ಕೊಯ್ಯಕೆ ಹೋದವೆ. ನಾವುನೂ ಪೋಯಾ'ಂತ ಹೇಳ್ತ್. ಹಂಗೆ ಗೋಣಿ, ಕುಕ್ಕೆ, ಕತ್ತಿ ತಕಂಡ್ ಹೋದೊ. ರಾಗಿ ಕೊಯ್ದೊ. ಕುರೆ ದೊಡ್ಡಾ ಕದ್ಕೆಲಿ ರಾಗಿ ಕಟ್ಟಿತ್. 'ನೀವು ಎಂತ ಮಕ್ಕಳೆ, ನಿಮ್ಮ ರಾಗಿ ಎಲ್ಲಿ ಉಟ್ಟು, ಆ ಕುರೆ ನೋಡ್ ದೊಡ್ಡ ಕದ್ಕೆಲಿ ತುಂಬಾ ರಾಗಿ ತುಂಬ್ಸಿ ಇಸಿಟು. ನೀವು ಏನು ಪ್ರೆಯೋಜನ ಇಲ್ಲೆ? ಎಂತದಕ್ಕೂ ಆಕಿಲ್ಲೆ? ನೀವು ನಡಿನಿ. ಹೋಗಿ ದೇಶಾಂತ್ರ ಹೋಗಿ. ಮನೆಲಿ ಇರ್ಬೇಡೀಂತ ಹೇಳಿ ಅರಸು ಬೆರ್ಸಿತ್.

ಹಂಗೆ ಮಕ್ಕ ಹೊರಟ್ ಮರ್ಸ್ಟಕಂಡ್ ಹೋದೊ. ಹೋಕೆ ಆಕನ ಈ ಕುರೆ ಹೇಳ್ತ್. 'ಅವ್ವವ್ವ ಅಣ್ಣಮೆನಿ ದೇಶಾಂತ್ರಿ ಹೋದೊ. ನಾನೂ ಅವರೊಟ್ಟಿಗೆ ಹೋದು. ನಾ ಬುಡಿಕಿಲ್ಲೆ ಅವರ. ಒಟ್ಟಿಗೆ ಹೋನೆ'ಂತ ಹೇಳ್ತ್. ನೀ ಹೋಗ್ಬೇಡಪ್ಪ. ನಿನ್ನ ಬೆರ್ಸುವೊ, ನಿಂಗೆ ಕಲ್ಲ್ ಹೊಡಿವೊ. ಹೋಬೆಡ. ಯಾಕೆ ಹೋದಿಯ. 'ಇಲ್ಲೆ ನಾ ಹೋನೆ'ಂತ ಅವರೊಟ್ಟಿಗೆ ಹೋತ್. ಹೊಕ್ಕೆ ಆಕನ ನೀ ನಮ್ಮೊಟ್ಟಿಗೆ ಬರ್ಬೇಡ. ನಿನ್ನಂದ ಆಗಿ ಅಲ್ಲ ನಾವಿಗೆ ಇಷ್ಟೆಲ್ಲ ಕಷ್ಟ ಆದ್ದ್. ನೀ ನಮ್ಮೊಟ್ಟಿಗೆ ಬಾಕೆ ಬೊತ್ತ್‌ಂತ ಹೇಳಿ ಹೊಡ್ದ್ ಬೆರ್ಸಿದೊ. ಅವು ಮುಂದೆಂದ ಹೋಕನ ಇಂವ ಅವು ಕಾಂಬಾಂಗೆ ಹೋತ್. ಹೋಗಿ ಹೋಗಿ ಆಕನ ಒಂದು ದೊಡ್ಡಾ ಬೈಲ್ ಸಿಕಿತ್. ಆ ಬೈಲ್‌ಲಿ ಚಾಲೆಲಿ ಬೆಂಡ ತುಂಬ ಉಟ್ಟು. ಮಕ್ಕಳಿಗೆ ಹೊಟ್ಟೆ ಇಸಿದ್ ತಡಿಯಕೆ ಬೊತ್ತು. 'ಅಣ್ಣಣ್ಣ ಈ ಚಾಳೆಲಿ ತುಂಬಾ ಬೆಂಡ ಉಟ್ಟಣ್ಣ. ಕುರೆಣ್ಣ ಇದ್ದಿದ್ದರೆ ನಾವಿಗೆ ಕೊಟ್ಟಿತ್ತ್. ನಾವಿಗೆ ತಿಂಬಕೆ ಆಗಿತ್ತಲ್ಲಾ'ಂತ ಹೇಳ್ತ್. 'ಯಾಕೆಣ್ಣ? ಯಾಕೆಣ್ಣ? ನಾ ಇಲ್ಲಿ ಒಳೆ'. 'ಅಲ್ಲಣ್ಣ ಈ ಚಾಳೆಲಿ ಬೆಂಡ ಉಟ್ಟು. ನಾವಿಗೆ ಹೊಟ್ಟೆ ಇಸಿದ್ ಬೊತ್ತ್ ನೀ ಕೊಯ್ದ್ ಕೊಡುವನಾ'ಂತ ಹೇಳ್ತ್. 'ನಾ ಕೊಯ್ದ್ ಕೊಟ್ನೆ'ಂತ ಹೇಳ್ತ್. ಚಾಳೆಗೆ ಹತ್ತಿತ್. ಬೆಂಡ ಎಲ್ಲ ಕೊಯ್ದ್ ಕೊಯ್ದ್ ಬೇಕಷ್ಟ್ ಹಾಕಿತ್ ಅವುಕ್ಕೆ. ಅಂವ ಅಲ್ಲಿ ಬೇಕಷ್ಟ್ ಚಾಳೆಲೇ ತೀನ್ತ್. ಇಳಿಯಕೆ ಆಕನ ನಿಂಗೆ ಪಾಲು

ಇಲ್ಲೆ. ನೀ ಹೋಗುಂತ ಕಳ್ಸಿದೊ. ನಂಗೆ ಬೇಡ ನಾ ತಿಂದೊಳೆಂತ ಹೇಳ್ತ್. ಹಿಂದೆಂದ ಬೆನ್ನ್‌ಗೆ ಹೋತ್. ಹೋಗಿ ಆಕನ ಒಂದು ಹಲ್ಸಿನ ಮರಲಿ ಹಲ್ಸಿನ ಕಾಯಿ ಉಟ್ಟು. 'ಅಣ್ಣಣ್ಣ ಕುರೆಣ್ಣ ಇದ್ದಿದ್ದರೆ ಹಲ್ಸಿನ ಕಾಯಿ ಕೊಯ್ದ್ ಕೊಟ್ಟಿತ್ತ್. ನಾವಿಗೆ ತಿಂಬಕೆ ಆಗಿತ್ತಲ್ಲಾ'ಂತ ಹೇಳ್ತ್. 'ಯಾಕಣ್ಣ? ಯಾಕಣ್ಣ? ನಾ ಇಲ್ಲಿ ಒಳೆ ಬಾ ಅಣ್ಣ'. 'ಇಂದ ಹಲ್ಸಿನ ಮರಲಿ ಹಲ್ಸಿನ ಕಾಯಿ ಉಟ್ಟು. ನೀ ಬಂದ್ ಕೊಯ್ದ್ ಕೊಡ್. ನಾವು ತಿಂಬೊಣಾ'ಂತ ಹೇಳ್ತ್. ಹಂಗೆ ಹಲ್ಸಿನ ಕಾಯಿ ಕೊಯ್ದ್ ಕೊಟ್ಟತ್. ಕುರೆಗೆ ಬೇಕಷ್ಟು ಮರಲಿ ತೀನ್ತ್. ಅಲ್ಲಿಂದ್ ತಿಂದ್ ಹೊಟ್ಟೆ ತುಂಬಿಸಿ ಹೋದೊ. ಹಂಞ ಮುಂದೆ ಹೋಗಿ ಆಕನ ಒಂದು ಮಾಯಿನ ಮರ ಸಿಕ್ಕಿತ್. 'ಕುರೆಣ್ಣ ಇದ್ದಿದ್ದರೆ ಮಾಯಿನ ಕಾಯಿ ಕೊಯ್ದ್ ಕೊಟ್ಟಿತ್ತಲ್ಲಾ. ಯಾಕಣ್ಣ? ಯಾಕಣ್ಣಾ? ನಾ ಇಲ್ಲಿ ಒಳೆ'. 'ಒಂದು ಮಾಯಿನ ಮರಲಿ ತುಂಬ ಹಣ್ಣ್ ಉಟ್ಟು. ಅದರ ಕೊಯ್ದ್ ಕೊಡ್'ಂತ ಹೇಳ್ತ್. ಹಂಗೆ ಇಂವ ಮರಕ್ಕೆ ಹತ್ತಿತ್, ಬೇಕಷ್ಟ್ ಹಣ್ಣ್ ಕೊಯ್ದ್ ಹಾಕಿತ್. ಅಂವಂಗೆ ಬೇಕಷ್ಟ್ ತಿಂದ್‌ಕನ್ತ್. ಇವು ಹೋದೊ. ಕತ್ತಲೆ ಆತಲ್ಲ ಎಂತ ಮಾಡ್ದು. ನಾವ್ಗೆ ಗೊತ್ತಿದ್ದಷ್ಟು ಹೋದುಂತ ಹೇಳಿ ಮತ್ತೂ ಹೋದೊ. ಹೋಕನ ಒಂದ್ ಜಾಗೆಲಿ ಬೆಳಕ್ (ದೀಪ)ಕಂಡದೆ. ಬೆಳಕ್ ಕಂಡಾಕನ ಮಕ್ಕೊ ಹೇಳ್ದೊ. 'ಅಣ್ಣಣ್ಣ ಕುರೆಣ್ಣ ಇದ್ದಿದ್ದರೆ ಹಂಞ ಜಾಗೆ ಕೇಳಿತ್ತಲ್ಲ. ನಾವಿಗೆ ಮಲಗಿಕೆ. ಈಗ ರಾತ್ರಿ ಆತಲ್ಲ ಮಲಗೊಕಲ್ಲ ಎಂತ ಮಾಡ್ದು'ಂತ ಹೇಳ್ತ್. ಯಾಕಣ್ಣ? ಯಾಕಣ್ಣ? ನಾ ಇಲ್ಲಿ ಒಳೆ'ಂತ ಹೇಳ್ತ್. 'ಇಂದಣ್ಣ ಅಲ್ಲಿ ಒಂದ್ ದೀಪ ಕಂಡದೆ. ಅಲ್ಲಿ ಹೋಗಿ ನೀ ಹಂಞ ಜಾಗ ಕೇಳುವೊನಾಂತ ಹೇಳ್ದೊ. ನಾವು ರಾತ್ರಿ ಮಲಗಿಕೆ'ಂತ ಹೇಳ್ತ್. 'ಓ ನಾ ಕೇಳ್ನೆ'ಂತ ಹೇಳ್ತ್. ಇವರ ಕರ್ಕನ್ತ್ ಹೋತ್. ಹೋಕೆ ಆಕನ ಒಂದ್ ರಕ್ಕಸ ಅಜ್ಜಿನ ಮನೆ. 'ಓ ಯಾರ್ ಮಕ್ಕಳೆ ಬಂದರಿಯಾ'ಂತ ಹೇಳಿದ್ ಮಕ್ಕಳ ಮಾತಾಡ್ಸಿತ್. ಅಷ್ಟಾಕನ ಮಕ್ಕಳೆ ಕೊಟ್ಟನೆಂತ ಹೇಳಿ ಮೀಯಕೆ ನೀರ್, ಊಟ ಎಲ್ಲಕೊಟ್ಟತ್. ಹಾಸಿಗೆ ಎಲ್ಲ ಹಾಕಿ ಎಲ್ಲ ಕೊಟ್ಟ್ ಅವರ ಮಲಗಿಸಿತ್.

ಮಲಗಿಸಿ ಆಕನ ಅದರ ಆಲೋಚನೆ. ನಂಗೆ ಇದೇ ಒಂದ್ ಸಂದರ್ಭ. ಮಕ್ಕ ಕೈಗೆ ಸಿಕ್ಕಿದಂಗಾತ್‌ಂತ ಗೇನ ಮಾಡ್ತ್. ಮಲ್ಗಿದ ಕೂಡ್ಲೆ ಇದ್ ಕತ್ತಿ ಹರಿ ಮಾಡಿಕೆ ಸುರು ಮಾಡ್ತ್. 'ಆರಾಳ್ ಪಿನ್ನೆ ಪಂದ್ರಾಂಡಾಳ್ ಗರಗರಾ'ಂತ ಹೇಳ್ತ್. ಅಷ್ಟೊತ್ತಿಗೆ 'ಅಯ್ಯೋ ಅವ್ವ ನಿದ್ದೆ ಬಾದೇ ಇಲ್ಲೆ'. 'ಏನು ಕುರೆ ನಿಂಗೆ ನಿದ್ದೆ ಬಾದುಲ್ಲೆ ?"ನನ್ನವ್ವ ಅಟ್ಟಂದ ಕೊಪ್ಪರಿಕಾಯಿ ತೆಗ್ದ್ ಅಕ್ಕಿ ಹೊರ್ದ್ ಕೊಡ್ದು. ನಾ ತಿಂಬೊದೂ'ಂತ ಹೇಳ್ದೆ. ಹಂಗೆ ಇದ್ ಅಟ್ಟಕ್ಕೆ ಹತ್ತಿ ಕೊಪ್ಪರಿಕಾಯಿ ತೆಗ್ತ್. ಅಕ್ಕಿ ಹೊರ್ತ್. ಕುರೆಗೆ ಕೊಟ್ಟತ್. ಕುರೆ ಹೇಳ್ತ್ ಹಂಞ ಹೊತ್ತಾಕನ ಹಿಂದಕ್ಕೆ ಕೇಳ್ತ್ ? ಆತವ್ವಾಂತ. 'ಆರಾಳ್ ಪಿನ್ನೆ ಪಂದ್ರಾಂಡಾಳ್ ಗರಗರಾ'ಂತ ಹೇಳ್ತ್. 'ಓ ಅವ್ವ ನಿದ್ದೆ ಬಾದೇ ಇಲ್ಲೆ'ಂತ ಹೇಳ್ತ್. 'ಏನ್ ಕುರೆ ನಿದ್ದೆ ಬಾದ್ಲೆ?"ನನ್ನ ಅವ್ವ ಕಾಪುಲಿದ್ದ ಹೆಂಟೆನ ಹೊಡ್ದ್ ಗೈಪು ಮಾಡಿ, ರೊಟ್ಟಿಮಾಡಿ

ಕೊಡ್ದು. ನಾ ತಿಂಬೊದೂ'ಂತ ಹೇಳ್ತ್. ರಕ್ಕಸಜ್ಜಿ ಕಾಪುಂದ ಹೆಂಟೆ ತೆಗ್ತ್. ಕೊಂದ್ ಗೈಪು ಮಾಡ್ತ್, ರೊಟ್ಟಿ ಮಾಡ್ತ್. ಅಷ್ಟೊತ್ತಿಗೆ ಈ ಕುರೆ ಹೋಗಿ ಮಕ್ಕಳೊಟ್ಟಿಗೆ ಹೇಳ್ತ್. 'ಸಂಗತಿ ಹಿಂಗಿಂಗೆ ಉಟ್ಟು. ನೀವು ಇಲ್ಲಿ ಇದ್ದರೆ ಆಕಿಲ್ಲೆ. ನೀವು ಎದ್ದ್‌ದ್ ಈ ಮನೆಂದ ಹೊರಗೆ ಹೋಗಿ ಅಲ್ಲಿ ಇರಿನಿ. ನೀವು ಮಲಗಿದ ಜಾಗೆಲಿ ತೋಟಂದ ಎರಡ್ ಬಾಳೆ ಕಡ್ದ್‌ದ್ ತಕಂಡ್ ಬಂದ್ ನೀವು ಮಲಗಿದ್ದಲ್ಲಿ ಅದರ ಇಸಿ, ಅದ್ಕೆ ನಿಮ್ಮ ಒಳ್ಳಿನ ಕೋಸಿ. ನೀವು ಹೊರಗೆ ಇರಿ. ಇಲ್ಲರೆ ನಿಮ್ಮ ಈ ರಕ್ಕಸಿ ಅಜ್ಜಿ ತಿಂದದೆಂತ ಆತ್. ಹಾಂಗೆ ಹೇಳಿಕೆ ಆಕನ ಅವು ಎದ್ದೊ. ಬಾಳೆ ಕಡ್ಕಂಡ್ ತಂದ್ ಇಸಿದೊ. ಇವು ಎದ್ದ್ ಹೊರಗೆ ಹೋದೊ. ಈ ಕುರೆ ರೊಟ್ಟಿ ಕೋಳಿಗೈಪು ಸಮಾ ತಿನ್ತ್. ತಿಂದಾಗಿ ಕುರೆ ಮಲಗಿತ್. ಅಷ್ಟೊತ್ತಿಗೆ ಹಿಂದಕೆ ಕತ್ತಿ ಮಸೆಯಕೆ ಸುರು ಮಾಡ್ತ್. ಅಷ್ಟೊತ್ತಿಗೆ 'ಓವ್ವ ನಿದ್ದೆ ಬಾದೇ ಇಲ್ಲೆ'ಂತ ಹೇಳ್ತ್. 'ಏನ್ ಕುರೆ ನಿಂಗೆ ನಿದ್ದೆ ಬಾದುಲ್ಲೆ ? 'ನಂಗೆ ಹಂಗೆ ಅಲ್ಲ. ಅವ್ವ ಎದ್ದ್‌ದ್ ಅವ್ವನ ಪಟ್ಟೆಸೀರೆ ಉಡ್ಸಿ, ಅವ್ವನ ಕೆಬಿದು, ಕಾಲ್‌ಗೆಜ್ಜೆ ಎಲ್ಲ ಹಾಕಿ ನನ್ನ ಪೊರ್ಲು ಸಿಂಗರ್ಸುದು. ನಾ ಕುಣಿಯೊದು ಅವ್ವ ನೋಡ್ದು'ಂತ ಹೇಳ್ತ್. ಅಜ್ಜಿ ಪಟ್ಟೆ ಸೀರೆ, ಚಿನ್ನ ಎಲ್ಲ ತೆಗ್ತ್, ಸೀರೆ ಉಡ್ಸಿ ಚಿನ್ನ ಎಲ್ಲಾ ತಲೆಂದ ಕಾಲ್ ವರೆಗೆ ಹಾಕಿ ಸಿಂಗರ್ಸಿತ್. ಸಿಂಗರ್ಸಿ ಆಕನ 'ಅವ್ವ ನಾ ಇಲ್ಲಿ ಕೊಣ್ದನೆ. ನನ್ನ ನೀ ನೋಡೋಕು'ಂತ ಕುರೆ ಹೇಳ್ತ್. ಹಂಗೆ ಇಂವ ಕೊಣ್ತ್. ಮನೆ ಒಳಗೆ ಕೊಣ್ತ್. ಅಲ್ಲಿಂದ ಅಂಗಳಕೆ ಇಳ್ತ್. ಅಂಗಳಲಿ ಕೊಣ್ತ್. ಅಲ್ಲಿಂದ ಮಾಡ್‌ಗೆ ಹತ್ತಿತ್. ಅಲ್ಲಿನ್ ಕೊಣ್ತ್. 'ನೀ ಹಂಗೆಲ್ಲ ಹೋಗಿ ಅತ್ತತ್ತಲೆ ಹೋಗಬೇಡಪ್ಪ. ನನ್ನ ಚಿನ್ನಾಭರಣಗಳ ಕೊಟ್ಟ್ ಹೋಗೂ'ಂತ ಹೇಳ್ತ್. 'ಇಲ್ಲೆ ಅವ್ವ ನಾ ಹೋದ್ಲೆ. ನಾ ಇಲ್ಲಿ ಬಂದ್ ನಿಂಗೆ ಕೊಟ್ಟೆ ಹೋನೆ'ಂತ ಹೇಳ್ತ್. ಅಲ್ಲಿಂದ ಮಾಡ್ ಮೇಲೆ ಹತ್ತಿತ್. ಮರಕ್ಕೆ ಹತ್ತಿತ್. ಕೊಣ್ಕಂಡ್ ಕೊಣ್ಕಂಡ್ ಕುರೆ ಸೀದಬಾತ್. ಈ ಮಕ್ಕಳಿಗೆ ಬೊಳ್ಪಾದ ಕೂಡಲೆ ಎದ್ದೊ. ಅವು ಸೀದಾ ಬಂದೊ. ಈ ರಕ್ಕಸಿ ಅಲ್ಲಿಂದ ಎದ್ದತ್ ಹೋತ್. ಕುರೆ ಹೋದರೆ ಹೋಗಲಿ, ಎರಡ್ ಮಕ್ಕ ಒಳೊ ಅಲ್ಲೆಂತ ಹೇಳಿ ಕತ್ತಿ ಹರಿ ಮಾಡ್ತ್, ಬೇರಿ ಕಡ್ತ್. ಕಡ್ದ್ ನೋಡ್ರೆ ಎಂತದ್ ಬಾಳೆದಂಡ್. ನಂಗೆ ಈ ಮಕ್ಕಳ್ ಮೋಸ ಕೊಟ್ಟತ್ತಲ್ಲಂತ ಹೇಳ್ತ್ ಬೊಬ್ಬೆ ಹೊಡ್ಕಂಡ್ ಓಡಿತ್. ಈ ಮಕ್ಕಳೂ ಕುರೆನೂ ವಾಪಾಸ್ ಊರಿಗೆ ಬಂದೊ. ಊರಿಗೆ ಬಂದ್ ಎಲ್ಲ ವಿಷಯ ಹೇಳ್ದೊ. ಈ ಕುರೆಣ್ಣಂದಾಗಿ ನಾವು ಬದ್ಕಿದೊ. ಹಿಂಗೆಲ್ಲ ಆತ್‌ಂತ ಅರ್ಸನೊಟ್ಟಿಗೆ ಹೇಳ್ದೊ. ಹಾಂಗೆ ಕುರೆನೂ ಎಲ್ಲ ಹೇಳ್ತ್. ಅಲ್ಲಿಗೆ ಕತೆ ಮುಗ್ತ್. [ಕಥಾ ನಿರೂಪಕಿ:ತಾರಾಮಣಿ ಜತ್ತನ ಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 5. ಕುರೆ ಸಹಾಯ ಮಾಡ್ದ ಕತೆ – ಪಠ್ಯ 2

ಒಂದಾನೊಂದು ಊರ್ಲಿ ಒಂದು ಅರ್ಸು ಇತ್ತ್‌ಗಡ. ಅರ್ಸ್‌ಗೆ ಒಂದು ಮದುವೆ ಆತ್. ಮದುವೆ ಆಗಿ ಅದಕ್ಕೆ ಮೂರು ಮಕ್ಕೊ ಹುಟ್ಟಿದೊ. ಮೂರು ಮಕ್ಕಳ ಎಡೆಲಿ ಒಂದು ಕುರೆನ

ಏನ್ ಮಾಡ್ತ್. ಇವು ಏನ್ ಹೇಳ್ದೊ, 'ಮಕ್ಕಳೆ ನಾವು ಬೇಸಾಯ ಮಾಡೋಕು, ಕುಮೇರ್ ಮಾಡೊಕು'ಂತ ಹೇಳ್ದೊ. ಯಾರ್? ಅರ್ಸ್‌ಗ. ಅರ್ಸ್‌ಗ ಹೇಳಿದ್ ಮಕ್ಳೊ ಎಲ್ಲ ಕುಮೇರ್ ಮಾಡ್ದೊ. ಕುಮೇರ್ ಮಾಡಿ ಬಿತ್ತಿದೊ. ಬಿತ್ತಿದ್ ಆಗಿದ್ ಕುರೆನೂ ಹೋಗಿ ಕೆಳಗೆ ಬಿತ್ತಿದ್ ಬಾತ್. ಒಂದು ಒಳ್ಳ ದೊಡ್ಡ ಆರಾದ್ರೆ ಮಳೆ ಬಾತ್. ಮಳೆ ಬಂದ್, ಮೇಲೆನ ಬಿತ್ತ್ ಬೀಜ ಎಲ್ಲ ಕೆಳಗೆ ಹುಟ್ಟಿತ್. ಕೆಳಗೆ ಹುಟ್ಟಿದ್ ಎಲ್ಲ ಪೈರ್ ಕುರೆದರಲ್ಲಿ ಆತ್. ಅಷ್ಟೊತ್ತಿಗೆ ಅಪ್ಪ ಬಂದ್‌ದ್ 'ಹೇಕ್ ಸೂಳೆ ಮಕ್ಕಳೆ. ನೀವು ನನ್ನ ಮನೇಲೇ ಇರಿಕೆ ಬತ್ತ್'ಂತ ಹೊಡ್ದ್ ಬೆರ್ಸಿತ್. ಯಾರನ್ನ? ಆ ಮಕ್ಕಳ. ಅಷ್ಟೊತ್ತಿಗೆ ಕುರೆನೂ ಒಟ್ಟಿಗೆ ಹೋತ್. 'ನಾನು ಬನ್ನೆ ಅಣ್ಣ ನಾನು ಬನ್ನೆ'ಂತ. ಕುರೆಗೆ ಕಲ್ಲ್ ಕೊದಂಟಿ ಹೊಡ್ಕಂಡ್ ಅವು ಹೋದೊ. 'ನಿನ್ನಂದಾಗಿ ಅಲ್ಲ ನಾವು ಪೆಟ್ಟ್ ತಿಂದದ್' ಅಂತ.

ಮತ್ತೆ ಅವು ಅಲ್ಲೇ ಹೋಕನ ಇವುಕೆ ಹೊಟ್ಟೆಇಸಿದ್ ಕಾಡ್‌ಲೇ ಹೋದೊ. ಹೊಟ್ಟೆಇಸಿದ್ ಏನ್ ಬೊತ್ತ್. ಅಷ್ಟೊತ್ತಿಗೆ ಅಯ್ಯೋ ತೋಟಲಿ ಒಂದ್ ಬಾಳೆಗೊನೆ ಉಟ್ಟು. 'ಅಯ್ಯೋ ನಮ್ಮ ಕುರೆ ಆದರ್ ಇದ್ದಿದ್ದರೆ ಅದರ ಎಳ್ದ್ ಕೊಟ್ಟದ್ದಿತ್ತ್'ಂತ ಹೇಳ್ತ್. 'ಓ ಒಳೆಣ್ಣ ಒಳೆಣ್ಣ'ಂತ ಹೇಳಿದ್ ಆ ಗೊನೆನ ಹೋಗಿ ಎಳ್ದ್ ಹಾಕಿತ್. ಎಳ್ದ್ ಹಾಕಿದ ಕೂಡ್ಲೆ ಮನೆವು ಬಂದ್‌ದ್ ಸಮಾ ಗುದ್ದು ಹಾಕಿದ್ ತಕಂಡೋಗಿ ಟೇಷನಿಗೆ ಹಾಕಿದೊ. ಟೇಷನಿಗೆ ಹಾಕಿದಾಕನ ಇಂವ ಹೋಗಿ ಬೀಲಲಿ ಬೀಗ ರಟ್ಟಿಸಿದ್ ಇದರ (ಮಕ್ಕಳ) ಕರ್ಕಂಡ್ ಹೋತ್. ಕರ್ಕಂಡ್ ಹೋಗಿದ್ ಹಿಂಗೆ ಸುಮಾರ್ ದೂರ ಹೋಗಿ ಆಕನ ಒಂದು ಕಡೆ ಹಲ್ಸಿನಕಾಯಿ ಉಟ್ಟು. ಈ ಕುರೆ ಇವರೊಟ್ಟಿಗೆ ಹಿಂದೆ ಉಟ್ಟು ಹೋತ್ಲೆ. ಮಕ್ಕಳಿಗೆ ಹೊಟ್ಟೆಇಸಿದ್ ಏನ್ ಬೊತ್ತ್. 'ಅಯ್ಯೋ ನಮ್ಮ ಕುರೆ ಆರ್ ಇದ್ದಿದ್ದರೆ, ನಾವುಗೆ ಹೊಟ್ಟೆಇಸಿದ್ ಏನ್ ಬೊತ್ತ್‌ದಲ್ಲಯ ಅಣ್ಣಾ'ಂತ ಹೇಳ್ತ್. ಅಷ್ಟೊತ್ತಿಗೆ 'ಒಳೆಣ್ಣ ಒಳೆಣ್ಣ'ಂತ ಹೇಳಿಕಂಡ್ ಓಡ್ತ್. ಓಡಿ ಹೋಗಿ ಹಲ್ಸಿನಕಾಯಿ ಎಳ್ದ್ ಹಾಕಿತ್. ಎಳ್ದ್ ಹಾಕಿದ ಕೂಡ್ಲೆ ಮನೆವು ಬಂದ್ ಗುದ್ದು ಹಾಕಿದೊ. ಅಂವ ಮರಂದ ಮರ ಹಾರಿ ಹೋತ್. ಕುರೆ ಅಲ್ಲಿಂದ ಸೀದಾ ಹೋಗಿದ್ ಇವರ ತಕಂಡ್ ಹೋಗಿ ಟೇಷನಿಗೆ ಹಾಕಿದೊ. ಹಾಕಿ ನಾಲ್ಕ್ ಗುದ್ದು ಹಾಕಿದೊ. ಹಾಕಿದಾಕನ ಇರ್ಲ್ ಹೋಗಿ ಕುರೆ ಬೀಲಲಿ ಇದರ ಬೀಗ ರಟ್ಟಿಸಿದ್ ಕುರೆ ಕರ್ಕಂಡ್ ಹೋತ್.

ಕರ್ಕಂಡ್ ಹೋಗಿ ಹಿಂಗೆ ಸುಮಾರ್ ಹೋದೊ. ಹೋಗಿ ಹೋಗಿ ಹೋಗಿ ಕುರೆನೊಟ್ಟಿಗೆ ಹೇಳ್ದೊ. 'ಎಲ್ಲಾರ್ ಮನೆ ಕಂಡದೆನ ನೋಡ್'ಂತ. ಅಂವ ಮರದ ಕೊಡಿಗೆ ನಿಲ್ಲಿಕನ ಒಂದು ಗುಳಿ(ಹೊಂಡ) ಕಂಡದೆ. ಅಲ್ಲಿ ಸ್ವಲ್ಪ ಹೊಗೆ ಹೋದೆ. ಹೊಗೆ ಹೋಕನ ಅಲ್ಲಿ ಮನೆ ಉಟ್ಟುಂತ ಹೇಳಿ ಅಲ್ಲಿಗೆ ಹೋದೊ. ಅಷ್ಟೊತ್ತಿಗೆ ಅಲ್ಲಿ ಅದ್ ಒಂದು ರಕ್ಕಸಜ್ಜಿ ಮನೆ. ರಕ್ಕಸಜ್ಜಿ ಹೇಳ್ತ್. 'ಅಯ್ಯೋ ನೀವೆಲ್ಲಿಂದ ಬಂದರಿ ಮಕ್ಕಳೇ. ಅರಸು ಮಾಕ್ಕಾಗಿರೊಕು ನೀವು. ಏನಾಗಿ

ಬಂದರಿ?' ಬಹಳ ಖುಷಿ ಆತ್. ಬಹಳ ಗಮತ್ತ್ ಎಲ್ಲ ಮಾಡಿ ಕೊಟ್ಟತ್. ಅಷ್ಟೊತ್ತಿಗೆ ಗಮ್ಮತ್ ಮಾಡಿ ತಿಂದೊ. ಮಲಗಿದೊ ಇವು.

ಮಲಗಿ ಆಕನ ಇರ್ಲ್ ರಕ್ಕಸಿ ಅಜ್ಜಿ ಕತ್ತಿ ಮಸಿಯಕೆ ಸುರುಮಾಡ್ತ್. ಕತ್ತಿ ಮಸಿಯಕ್ಕೆ ಸುರು ಮಾಡ್ಕನ ಕುರೆ ಕೇಳ್ತ್ 'ಕರ್‍ಯೊಂ ಕಿರ‍್ಯೊಂ ಅಜ್ಜಿ ಕತ್ತಿ ಮಸ್ದೆಯಾ'ಂತ. 'ಅಯ್ಯೋ ಕುರೆಣ್ಣ ನಿಂಗೆ ನಿದ್ದೆ ಬಾತ್ಲೆಯಾ'ಂತ ಕೇಳ್ತ್. 'ನಂಗೆ ನಿದ್ದೆ ಬರಕಾದರೆ ಒಂದು ಸೇರ್ ಅಕ್ಕಿ ಹುರಿಯೊಕು. ಒಂದು ಕೊಪ್ಪರಕಾಯಿ ಒಡಿಯೊಕು. ಅದರ ತಿಂದರೆ ಬಾರೀ ಲೈಕ್‌ನ ನಿದ್ದೆ ಬಂದದೆ ಅಜ್ಜಿ'ಂತ ಹೇಳ್ತ್. ಅಜ್ಜಿ ಒಂದು ಕೊಪ್ಪರಕಾಯಿ ಒಡ್ತ್, ಅಕ್ಕಿ ಹುರ್ತ್. ತಿಂದೊ ಮಕ್ಕ, ಹಿಂದಕೆ ಬರಬರಬರಂತ ಕತ್ತಿ ಮಸಿಯಕೆ ಸುರುಮಾಡ್ತ್. 'ಅಯ್ಯೋ ಕುರೆಣ್ಣ ನಿಂಗೆ ನಿದ್ದೆ ಬಾತ್ಲೆಯೊ'ಂತ ಹೇಳ್ತ್. 'ನಂಗೆ ನಿದ್ದೆ ಬರೊಕಾರೆ ಅಜ್ಜಿ ಒಂದು ಕಟ್ಟದ ಕೋಳಿನ ಕೊಲ್ಲೊಕು. ಒಂದು ಕೊಂಡೆ ಅಕ್ಕಿಯ ರೊಟ್ಟಿ ಮಾಡೊಕು. ರೊಟ್ಟಿ ಮಾಡಿ ತಿಂದರೆ ನಂಗೆ ಉಜ್ಜಾಲ್‌ಲಿ ಮಲಗಿದಂತ ನಿದ್ದೆ ಬಂದದೆ'ಂತ ಹೇಳ್ತ್. ಅಷ್ಟೊತ್ತಿಗೆ ಒಂದು ಬಳ್ಳ ಅಕ್ಕಿನ ಪದನ್ಸಿಕೆ ಹಾಕಿತ್. ರೊಟ್ಟಿ ಮಾಡ್ತ್. ಕೋಳಿ ಕೊಂದತ್. ಮಕ್ಕಳಿಗೆನ್ ಕೊಟ್ಟ್ ತಿಂದ್ ಮಲಗಿದೊ. ಹಿಂದಕೆ ಆಕನ ಸುಮಾರ್ ಹೊತ್ತಾಕನನು ಕುರೆಗೆ ನಿದ್ದೆ ಬಾತ್ಲೆ. ಹಿಂದಕೆ ಕತ್ತಿಮಸೆಯೊಕೆ ಸುರುಮಾಡ್ತ್. 'ಕರ‍್ಯೊ ಕುರ‍್ಯೊ ಅಜ್ಜಿ ಕತ್ತಿ ಮಸ್ದಿಯಾ'ಂತ ಕುರೆ ಹೇಳ್ತ್. 'ಅಷ್ಟೊತ್ತಿಗೆ ಅಯ್ಯೋ ಕುರೆಣ್ಣ ನಿಂಗೆ ನಿದ್ದೆ ಬಾತ್ಲೆಯೊ'ಂತ ಹೇಳ್ತ್. 'ನಂಗೆ ನಿದ್ದೆ ಬರೊಕಾರೆ ಅಜ್ಜಿ ನನ್ನ ಮೈಲಿ ಎಲ್ಲಾ ಚಿನ್ನ ಹಾಕೊಕು. ಚಿನ್ನ ಹಾಕಿರೆ ನಂಗೆ ಉಜ್ಜಾಲ್‌ಲಿ ಒಚ್ಚಿದಷ್ಟ್ ನಿಂದೆ ಬಂದದೆ'ಂತ ಹೇಳ್ತ್. ರಕ್ಕಸಜ್ಜಿ ಚಿನ್ನ ಎಲ್ಲ ಹಾಕಿತ್. ಚಿನ್ನ ಎಲ್ಲಿ ಹಾಕಿ (ಮಕ್ಕ ಉಟ್ಟಲ್ಲೆ ಕೊಲ್ಲಿಕಾಗಿ) ಈ ಅಜ್ಜಿ ಮಲಗಿತ್.

ಮಲಗಿದ ಕೂಡಲೇ ಈ ಕುರೆ ಮೆಲ್ಲ ಹರ್ಕಂಡ್ ಹೋತ್. ಇವರ ಬುಟ್ಟ್‌ದ್ ಇದರ ಹಿಡ್ಕಂಡ್ ಹೋಗಿಂತ ಹೇಳಿ ಒಲೆನ ಬಡಕೆ ಹೋತ್. 'ಏನ್ ಕುರೆಣ್ಣ ನಿಂಗೆ ನಿದ್ದೆ ಬಾತ್ಲೆಯ ತಿನ್ನೊಕ ಸೂಳೆ ಮಂಜ'ಂತ ಬೆರ್ಸಿತ್. ಬೆರ್ಸಿಕನ ಬೆಸೆಗೆಗೆ ಹತ್ತಿತ್. ಬೆಸೆಗೆ ಹತ್ತಿಕನ ಅಜ್ಜಿನು ಬೆಸೆಗೆಗೆ ಹತ್ತಿತ್. ಮಾಡಿಗೆ ಹತ್ತಿಕನ ದೊಡ್ಡ ಒಂದು ಚಾಳೆ ಇತ್ತ್. ಚಾಳೆಗೆ ಹತ್ತಿತ್. ಚಾಳೆಗೆ ಹತ್ತಿದ್ ಅಜ್ಜಿನ ತಲೆಗೆ ರಾಗಿಕಲ್ಲ್‌ನ ಹಾಕಿತ್. ಅಜ್ಜಿ ಸತ್ತೋತ್. ಇಲ್ಲಿಗೆ ಮುಕ್ತ್. [ಕಥಾ ನಿರೂಪಕ:ಲಿಂಗಪ್ಪ ಗೌಡ; ಸ್ಥಳ:ಮನೆ; ಸಮಯ:ರಾತ್ರಿ 8 ಗಂಟೆ; ವರ್ಷ–1991]

## 6. ಹುಲಿ ಮತ್ತ್ ಕುದ್ಕನ ಕತೆ

ಒಂದ್ ಕಾಡ್‌ಲಿ ದೊಡ್ಡ ಒಂದ್ ಹುಲಿ. ಹುಲಿಗೆ ಅಲ್ಲೆ ಹಕ್ಕಕ್ಕಲೆ ಇರುವ ದನ, ನಾಯಿ, ಆಡ್ ಇಂತದ್ದೆಲ್ಲ ತಿಂದ್ ತಿಂದ್ ಸಾಕಾತ್. ಇದ್ಕೆ ಏನಾತ್‌ಂತ ಹೇಳ್ರೆ ಈ ಹುಲಿ ಬಾರಿ ಭಯಂಕರ. ಅಲ್ಲಿಗೆ ಒಂದ್ ಕುದ್ಕ ಹೋತ್. ಇಂವನ ಪರೀಕ್ಷೆ ಮಾಡಿಕೆ. ಹುಲಿ ಹೋಗಿ ಆಕನ ತಿಂಬಕೆ ಬಾತ್‌ಂತ ಓಡ್ತ್. ಇನ್ನೂ ಓಡ್ತ್. ಬಚ್ಚಿತ್, ಓಡ್ತ್ ಓಡ್ತ್ ಈ ಬಾಮಿನ ಚಿಂಟೆ ಮೇಲೆ

ಸರಳ್ ಉಟ್ಟಲ್ಲ ಕುದ್ಕ ಸಿಕ್ಕಿಕನ್ತ್. ಹುಲಿಂತ ಇದ್ಕೆ ಅತ್ತ ಹೋಕೂ ಬೊತ್ತ್ ಇತ್ತ ಹೋಕೆ ಬೊತ್ತ್. 'ಯಾಕೆ ಅಲ್ಲಿ ಕುದ್ದದ್? ನೀ ಬೆರ್ಸುದೆ'ಂತರ. ನಿನ್ನಾಂಗೆ ಇದ್ದದರ ಅಡಿಲಿ ನೋಡಿಕಂಡೆ. ಅದರ ನೋಡಿಕಂಡೇ ನಾ ಕುದ್ದದ್. ಇಂದಾ ನೋಡ್ ನೋಡಣ್ಣ'. 'ನಿಂಗೆ ಹುಚ್ಚ್'. 'ನಿನ್ನಂದ ಹುಷಾರ್‌ನದ್ ಉಟ್ಟಲ್ಲಿ. ಮತ್ತೆ ಅದ್ ಎಂತದ್ ನೋಡ್? ನೀ ತೀರ್ರೆ ಅಂವನ ಹಿಡಿ'ಂತ ಹೇಳ್ತ್. ಅತ್ತ ನೋಡ್ತ್ ಇತ್ತ ನೋಡ್ತ್. ಹೌದು ಬೊಗ್ಗಿ ನೋಡ್ತ್. ನೋಡ್ಕನ ಇದರ ಅಲ್ಲಿ ಕಂಡರೆ ಈ ಹುಲಿಯೇ ಅಲ್ಲಿ. ಈ ಕುದ್ಕ ಅಗಿಯಕೆ ಬಾದು. ಅದೂ ಅಗಿಯಕೆ ಬಾದು. ಸುತ್ತ ಬಂದ್ ತೆಗ್ದ್ ಹಾರ್ತ್. ಕೆರೆ ಒಳಗೆ ಬೀತ್. ಅಲ್ಲಿಂದ 'ಹುಕ್ಯೋ..... ಹುಕ್ಯೋ....... ಹುಕ್ಯೋ'ಂತ ಹೇಳ್ತ್. ಬಡ್ಚಿ ಓಟ ಹಾಂಗೆ ಹುಕ್ಯೋ....... ಹೋಂತ ಹೇಳ್ದು. ಹುಲಿನ ಸೋಲ್ಸಿದಕೆ.

[ಕಥಾ ನಿರೂಪಕ:ಸುಬ್ಬಮ್ಮ ಪಾನತ್ತಿಲ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 7. ಕುರೆ – ಗೂಡೆ – ರಕ್ಷಸನ ಕತೆ

ಒಂದ್ ಊರ್‌ಲಿ ಒಬ್ಬ ಅಜ್ಜ ಮತ್ತ್ ಅಜ್ಜಿ ಮತ್ತೊಂದ್ ಮಗ ಇದ್ದೊ. ಅವು ಹಿಂಗೆ ಇರ್ಕನ ನೆಟ್ಟಿ ಗದ್ದೆಲಿ ಗೆಳ್ಸ್ ಹಾಕಿದೊ. ಅಜ್ಜ ಅಜ್ಜಿನವು ಅಲ್ಲಿ ಕೆಲಸ ಮಾಡಿಕೆ, ಗೂಡೆ ಅಡಿಗೆ ಮಾಡಿಕೆ. ಆಗ ಒಬ್ಬ ಕುರೆ ಕೊಣ್ಸಂವ ನಟ್ಟಿ ಗದ್ದೆಕರೆನ ದಾರಿಲಿ ಬಾತ್. ಆಗ ಅಜ್ಜಿ ಹೇಳ್ತ್. 'ಇಂದೆನಿ ನಾ ಬೆಸೆಗೆ ಅಡಿಲಿ ದುಡ್ಡುನ ಗಂಟ್‌ಕಟ್ಟಿ ಇಸೊಳೆ. ಅದರ ಗೂಡೆ ಕೊಡ್ದಾ!' ಹಿಂಗೆ ಹೇಳ್ತ್. ಈ ಮಾತ್ ಕುರೆ ಕೊಣ್ಸವಂಗೆ ಕೇಳ್ತ್. ಅಂವ ಸೀದಾ ಗೂಡೆನ ಮನೆಗೆ ಬಂದ್ 'ಅಜ್ಜ ಅಜ್ಜಿ ಹೇಳ್ಯೊಲೊ. ಅ ಬೆಸಗೆ ಅಡಿಲಿ ದುಡ್ಡುನಗಂಟ್ ಉಟ್ಟುಗಡ. ಅದರ ನೀ ಕೊಡಕಡ'ಂತ ಹೇಳ್ತ್. ಆಗ ಆ ಗೊಡೆ ಸತ್ಯಾಂತಾ ನೆನ್ಸಿ ಆ ದುಡ್ಡುನ ಕೊಟ್ಟಿತ್. ಅದರ ತಕಂಡ್ ಕುರೆ ಕೊಣ್ಸಂವ ಹೋತ್. 'ಅಜ್ಜಿ ಓಡಿ ಬಂದ್ ಬೆಸೆಗೆ ಅಡಿನ ಗಂಟ್ ನೋಡಿ ಗೂಡೆನೊಟ್ಟಿಗೆ ಎನಾತ್'ಂತಾ ಕೇಳ್ತ್. ಆಗ ಗೂಡೆ ಹೇಳ್ತ್, 'ಅದ್ರ ನೀವ್ ಕುರೆ ಕೊಣ್ಸಂವಂಗೆ ಕೊಡಿಕೆ ಹೇಳ್ಯೊಳರಿಗಡ. ಅಂವ ಬಂದ್ ಕೇಳ್ತ್. ನಾ ಕೊಟ್ಟೆ'ಂತಾ ಗೂಡೆ ಹೇಳ್ತ್. ಆಗ ಅಜ್ಜ ಅಜ್ಜಿಗೆ ಸಿಟ್ಟ್ ಬಂದ್ ಗೂಡೆಗೆ ಸರಿ ಹೊಡ್ದ್ ಮನೆಂದ ಬೆರ್ಸ್‌ದೊ. ಆ ಗೂಡೆ ಸಿದಾ ಹೋತ್. ಅಲ್ಲಿ ಒಂದೇ ದಾರಿ ಇರ್ದು. ಅದರಲ್ಲಿ ಕುರೆ ಕೊಣ್ಸಂವನ ಕಾದ್ ಮರ್ರ್‌ಕಂಡ್ ಕುದ್ದತ್. ತುಂಬಾ ಹೊತ್ತ್ ಕಳ್ದ್ ಅಂವ ಬಾತ್. ಏನ್ ಇಲ್ಲಿ ಮರ್ರ್‌ಕಂಡ್ ಕುದ್ದದ್‌ಂತ ಹೇಳ್ಕನ ಗೂಡೆ ಹಿಂಗೆ ಹೇಳ್ತ್. 'ನಿಂಗೆ ದುಡ್ಡುನ ಗಂಟ್ ಕೊಟ್ಟದಕೆ ನಂಗೆ ಅಜ್ಜ ಅಜ್ಜಿ ಬೊಡ್ದ್ ಮನೆಂದ ಹೊರಗೆ ಹಾಕಿದೊ'. ಈಗ ಅಂವ ನೀ ನನ್ನೊಟ್ಟಿಗೆ ಬಾ ಅಂತ ಕರ್ಕಂಡ್ ಹೋತ್. ಹೋಗಿ ಒಂದ್ ಮರದ ಬುಡಲಿ ಕುರೆನ ಗೂಡೆನ ನಿಲ್ಸಿತ್. ಕುರೆ ಯಾಗೋಳು ಅಡ್ಗಗೆ ಸೌದೆ ತಾಕೆ ಹೋದು. ಗೂಡೆ ಅಡ್ಗೆ ಮಾಡ್ದು. ದನ ಕಾಯುವ ಮಕ್ಕ ಕೋಲಾಟ ಆಡಿ ಕೋಲು ಚಿಂಟೆ ಬುಡಲಿ ಅಡಂಗಿಸಿ ಮನೆಗೆ ಹೋಕನ ಕುರೆ ಅದರ ಕಟ್ಟಿಕಂಡ್ ಮನೆಗೆ ಬಾದು. ಹಿಂಗೆ ಯಾಗೊಳು ಮಾಡ್ತಾ ಇತ್.

ಒಂದ್ ದಿನ ದನ ಕಾಯುವ ಮಕ್ಕಳಿಗೆ ಗೊತ್ತಾಗಿ ಕೋಲ್ ಅಲ್ಲಿ ಇಸದೆ ಮನೆಗೆ ತಕಂಡ್ ಹೋಕೆ ಸುರುಮಾಡ್ದೊ. ಕುರೆ ಸೌದೆ ಹುಡ್ಕಿಕಂಡ್ ಕಾಡ್‌ಲಿ ಹೋಕನ ಒಂದ್ ದೊಡ್ಡ ಮನೆ ಕಂಡತ್. ಆ ಮನೆಲಿ ಒಂದ್ ರಕ್ಕಸ. ಅವಂಗೆ ಆರ್ ತಿಂಗ ನಿದ್ದೆ ಆರ್ ತಿಂಗ ಎಚ್ಚರ. ಕುರೆ ಹೋಕನ ಅವಂಗೆ ನಿದ್ದೆ ಇತ್ತ್. ಕುರೆ ಮನೆ ಮೇಲೆ ಹೋಗಿ ಒಂದ್ ಹಂಚಿ ಪೊರ್ಕ್ಸ್‌ತ್. ಅಲ್ಲಿ ಭತ್ತದ ಕದ್ಕೆ. ಇನ್ನೊಂದ್ ಹಂಚಿ ಪೊರ್ಕ್ಸ್‌ತ್. ಮೊನ್ಸನ ತಲೆ ಇತ್ತ್. ಮತ್ತೊಂದ್ ಹಂಚಿ ಪೊರ್ಕ್ಸ್‌ತ್ ದುಡ್ಡ್‌ನ ಕದ್ಕೆ. ದೊಡಾಂತ ಹಾರ್ತ್. ಬೇಕಾದಷ್ಟ್ ದುಡ್ಡು ಬಾಚಿಕಂಡ್ ಮನೆಗೆ ಬಾತ್. ಬಂದ್ ಗೂಡೆಗೆ ತೋರ್ಸಿ ಕುಷಿ ಮಾಡ್ದೊ.

ಇದೇ ರೀತಿಲಿ ಇನ್ನೊಮ್ಮೆ ಹೋತ್. ದುಡ್ಡು ತಾತ್. ಮತ್ತೊಮ್ಮೆ ಹೋತ್ ಒಂದ್ ಹಂಚಿ ಪೊರ್ಕ್ಸ್‌ತ್ ಭತ್ತದ್ದ ಕದ್ಕೆ. ಮತ್ತೊಂದ್ ಹಂಚಿ ಪೊರ್ಕ್ಸ್‌ತ್ ಮೊನ್ಸನ ತಲೆ. ಇನ್ನೊಂದ್ ಹಂಚಿ ಪೊರ್ಕ್ಸ್‌ತ್ ದುಡ್ಡ್‌ನ ಕದಿಕೆ. ದೊಡಾಂತ ಹಾರ್ತ್. ಆಗ ರಕ್ಕಸಂಗೆ ಎಚ್ಚರಾತ್. ಯಾರ್? ಯಾರ್? ಯಾರ್‌ಂತ ರಕ್ಕಸ ಕೇಳ್ಕಂಡ್ ಬಾತ್. ಆಗ ಕುರೆ 'ನಾ ಬಾವ, ನಾ ಬಾವ, ನಾ ಬಾವ. ನೀವ್ಗೆ ಒಂದ್ ಗೂಡೆನ ಹುಡ್ಕಿಕೆ ಬಂದದ್'ಂತ ಹೇಳ್ತ್. ಆಗ ಕುರೆನ ಕರ್ಕಂಡ್ ಹೋಗಿ ಲೈಕ್ ಮಾತಾಡ್ಸಿತ್. 'ನಂಗೆ ಗೂಡೆ ತಾಂಬ'ಂತ ಹೇಳ್ತ್. ಆಗ ಕುರೆ ಹಿಂಗೆ ಹೇಳ್ತ್, 'ಗೂಡೆ ತಾಕೆ ದುಡ್ಡು ಬೇಕ್'ಂತ ಹೇಳ್ತ್. ಆಗ ರಕ್ಕಸ ಕುರೆಗೆ ಕೈತುಂಬ ದುಡ್ಡ್‌ನ ಕೊಟ್ಟತ್. 'ಇನ್ನೊಮ್ಮೆ ಬಾಕನ ನಾ ಗೂಡೆ ತನ್ನೆ'ಂತ ಹೇಳಿ ಹೋತ್.

ಕುರೆ ಸೀದಾ ಸಂತೆಗೆ ಹೋಗಿ ಗೊಂಬೆ ಮೂರ್ತಿ ತಕನ್ತ್. ತಂದ್ 'ಇದರ ನಾಲ್ವತ್ತೆಂಟ್ ದಿನ ಮುಟ್ಟಿಕೆ ಬೊತ್ತ್, ಮಾತಾಡ್ಸಿಕೆ ಬೊತ್ತ್'ಂತಾ ಹೇಳ್ತ್. 'ಒಲೆಚಿಂಟೆ ಮೇಲೆ ಇಸ್'ಂತ ಹೇಳಿ ಕುರೆ ಬಾತ್. ಕುರೆ ಹೋಗಿ ನಲ್ವತ್ತೆಂಟ್ ದಿನ ಕಳ್ತ್. ಮಾತಾಡಿಸಿರೆ ಮಾತಾಡ್ದುಲೆ. ಕರ್ದರೆ ಮಾತಾಡ್ದುಲೆ. ಬೊಡ್ಡರೆ ಮಾತಾಡ್ದುಲೆ. ಜಾಲಿಗೆ ಹೆರ್ಕಿ ಹೊಡ್ತ್, ರಕ್ಕಸ. ಆಗ ಬಾನಲಿ ಶಿವ ಪಾರ್ವತಿ ಇದರ ನೋಡಿ ಕೆಳಗೆ ಬಂದ್ 'ಎರಡು ಸೀಳಾದ ಗೊಂಬೆನ ಕೂಡ್ಸಿ ನೀ ರಕ್ಕಸ ಬಾಕನ ಅಡ್ಗೆ ಮಾಡಿ ಮೆಟ್ಟ್‌ಲಿ ಇಸ್. ಯಾಗೋಳು ಬಾಕೆ ಹೇಳ್'. ಶಿವ ಪಾರ್ವತಿ ಹೊರ್ಟ್ ಹೋದೊ. ಇವಳ್ ಹಾಂಗೆ ಮಾಡ್ತಾ ಇತ್ತ್. ರಕ್ಕಸ ಯಾಗೋಳು ಉಂಡು ಹೊಗ್ತಿತ್ತ್. ಒಂದ್ ದಿನ ಯಾರ್ ಊಟ ಮಾಡಿ ಮೆಟ್ಟಲ್‌ಲಿ ಇಸುದುಂತಾ ನೋಡ್ತ್. ನೋಡ್ಕನ ಬಾಗಿಲ್ ಮೂಲೆಲಿ ಗೂಡೆ ನಿಂತ್‌ಕಂಡ್ ಉಟ್ಟು. ಮತ್ತೆ ರಕ್ಕಸ ಬುದ್ದಿ ಹೇಳಿ 'ನೀ ಯಾಕೆ ನಿಂತದ್'ಂತ ಎಲ್ಲಾ ಹೇಳಿ ಕರ್ಕಂಡತ್. ಒಂದ್ ದಿನ ಕುರೆ ಬಂದ್ 'ಬಾವ–ಅಕ್ಕ ಏನ್ ಮಾಡುವೆ'ಂತಾ ನೋಡಿಕೆ ಬಾತ್. 'ನಮ್ಮಲ್ಲಿಗೆ ಸಮ್ಮನಕೆ ಕಲ್ಸ್'ಂತ ಹೇಳಿ ಕರ್ಕಂಡ್ ಹೋತ್ತ್. ಹೋಗಿ ದೊಡ್ಡ ಕೆಂಡರಾಶಿ ಮಾಡಿ 'ಅಕ್ಕ ಸತ್ತತ್ ಬಾವಾ'ಂತ ಕರ್ದ್ ಹೇಳ್ತ್. ಆಗ ರಕ್ಕಸ ಓಡೋಡಿ ಬಾತ್. ಓಡಿ ಬಂದ್ ಕೆಂಡಕೆ ಹಾರಿ ಸತ್ತ್ ಹೋತ್.

ಕುರೆನಾ ಹೆಂಗೆ ಸಾಯ್ಸುದೂಂತ ನೆನ್ಸಿ ಮಡಿವಾಳನ ಹಕ್ಕಲೆ ಹೋಗಿ ಕೇಳ್ದೊ. ಆಗ ಮಡಿವಾಳ ಹೇಳ್ದೊ. ನೀ ಮೂರು ಹೂಂಸ್ ಹೂಂಸ್‌ಕನ ಸತ್ತಿಯಾತ. ಅದಕ್ಕೆ ಹಿಂಗೆ ಹೇಳ್. 'ನೀನ್ ಒಂದ್ ದೊಡ್ಡ ಗುಂಡಿ ತೆಗಿ. ಒಂದ್ ಗುಂಡಿ ತೆಗಿಕನ ಒಂದ್ ಹೂಂಸ್ ಹೋದೆ. ಎರಡ್ ಗುಂಡಿ ತೆಗಿಕನ ಎರಡು ಹೂಂಸ್ ಹೋದೆ. ಮತ್ತೆ ಅದರಲ್ಲಿ ಕುದ್ದ್‌ರ್ಕನಾ ಮೂರ್ ಹೂಂಸ್ ಹೋದೆ. ಆಗ ನೀ ಸತ್ತಿಯಾಂತ'. ಕುರೆ ಹಿಂಗೆ ಮಾಡ್ತ್. ಹಂಞ ಗುಂಡಿ ತೆಗೆಕನ ಒಂದ್ ಹೂಂಸ್ ಹೋತ್. ಮತ್ತೆ ಹಂಞ ಗುಂಡಿ ತೆಗೆಕನ ಮತ್ತೊಂದ್ ಹೂಂಸ್ ಹೋತ್. ಮತ್ತೆ ಅದರಲ್ಲಿ ಕುದ್ದ್‌ರ್‌ಕನ ಮೂರನೆ ಹೂಂಸ್ ಹೋಗಿ ಸತ್ತ್ ಹೋತ್. ಅದಕ್ಕೆ ಮಣ್ಣು ಮುಚ್ಚಿ ನಾವು ಬರೋಮಾ? [ಕಥಾ ನಿರೂಪಕ:ಲಿಂಗಪ್ಪ ಗೌಡ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 8. ಕುದ್ಕ ಮತ್ತ್ ಕುರೆ ಕತೆ

ಒಂದ್ ಕುರೆ ಕುಮೇರಿ ಕಡ್ದದ್. ಕುಮೇರಿ ಕಡ್ದ್‌ದ್ ಬೇಕಷ್ಟ್ ಸೋಂತೆಕಾಯಿ ಆತ್. ಕುದ್ಕ ಯಾಗೋಳು ಹೋಗಿ ಅವನ ಅಲ್ಲಿ ಪೀಡ್ಸುದು. ದೊಡ್ಡ ಮಾರಿ ಅಗ್ಟೆ ಹಾಕಿ ಕುರೆ ಕುದ್ದುಟು. ಕುದ್ದಾಕನ ಕುದ್ಕ ಹೋತ್. ಒಲೆಗೆ ಅಡ್ಡ ಮಲಗಿತ್. ಕುದ್ಕ ಬೇಕಷ್ಟು ಸೋಂತೆ ಕಾಯಿ ತೀನ್ತ್. ತಿಂದಾಗಿ ಯಾಗೋಲು ಕುದ್ಕ ಒಲೆಗೆ ಅಡ್ಡ ಮಲ್ಗುದು. ಈ ಕುರೆ ಹೇಳ್ರು ಇಂವ 'ನನ್ನ ತಿಕ ತೊರ್ಸು ತೊರ್ಸು'ಂತ. ಇಂವ ಯಾಗೋಳು ಇದರ ತೊರ್ಸುದೇ ಕೆಲ್ಸ. ಹೋಕನ ಸೋಂತೆ ಕಾಯಿ ತೀನ್ತ್. ಬೇಕಾದ್ ತಕನ್ತ್, ಹಿಂಗೆ ಆಗಿ ಆಗಿ ಬೇಕಷ್ಟ್ ಇಂವನ ಕಷ್ಟ ಬರ್ಸಿ ಆತ್. ಯಾರ್ ? ಕುರೆನ. ಇವಂಗೆ ಇದರ ಕುಂಡೆ ತೊರ್ಸುದು. ಯಾಗೋಲು ತೊರ್ಸುದರ್ಲೆ ಆತ್.

ಅಲ್ಲಿಗೆ ಮತ್ತೊಂದು ಕುದ್ಕ ಬಾತ್. ಈ ಕುದ್ಕಂಗೂ ಆ ಕುದ್ಕಂಗೂ ಸರಿ ಇಲ್ಲೆ. 'ನೀ ಯಾಗೋಲು ಒಂದೇ ಸಮ ತೊರ್ಸುದಲ್ಲಾ. ನೀ ಒಳ್ಳೊ ಕಬ್ಬಿಣದ ಕೋಲು ಮಾಡೊಕು ಉದ್ದದ್. ಅದರ ಅಗ್ಟೆಲಿ ಹಾಕಿ ಇಸಿಕ. ಈ ತೊರ್ಸಿಕೊಂಡಿರಿಕನ ಅಗ್ಟೆಲಿ ಹಾಕಿ ಇಸಿಕ. ಕೆಂಪಾಕನ ತೆಗ್ದ್ ಇಸ್. ಕುದ್ಕ ಓಡ್ದೆ'ಂತ ಆತ್. ಇದ್ ಹೌದು ಸುಮಾರ್ ಆಲೋಚನೆ ಮಾಡ್ತ್ ಕುರೆ. ಹೋಗಿ ಆಚಾರಿನ ಕೇಳ್ತ್. ನಂಗೆ ಒಂದ್ ಕೋಲಾಕಲ್ಲೆ? ಆತ್. ತಕಂತ್ ಬಂದ್ ಅಗ್ಟೆಲಿ ಇಸಿತ್. ಇದ್ ಬಾತ್ ದೂರಂದಲೇ ಹುಕ್ಯಾಹುವ್ವಾಂತ್ ಹೇಳ್ತ್. ಏನ್ ಏನ್ ಬಂದದ್? ಒಹೋ ಕುದ್ಕಂಗೆ ಕೆನಿ ಹೆಚ್ಚಲ್ಲ. ಇಂವ ಸೌದೆ ಕೊಲ್ಲಿ ಅಡ್ಡ ಮೆಲ್ಲ ಇಸಿತ್. ಹ್ಞಾಂ. ತೊರ್ಸೂಂತ ಹೇಳ್ತ್. ಬೇಕಸ್ಟ್ ತೊರ್ಸಿತ್. ತೊರ್ಸಿ ತೊರ್ಸಿ ತೆಗ್ದ್ ಇಸಿತ್. ಕುದ್ಕ ಬಡ್ಚಿ ಓಡ್ತ್. ಅಲ್ಲಿಗೆ ಕತೆ ಮುಗ್ತ್. [ಕಥಾ ನಿರೂಪಕ:ಓಡ್ಯಪ್ಪ ಗೌಡ, ಸ್ವರಂಜ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 9. ಕುದ್ಕ ಸತ್ತ್ ಬದ್ಕಿದ ಕತೆ

ಒಂದ್ ಅಪ್ಪನೂ ಎರಡ್ ಜನ ಮಂಜಂದಿರು ಒಂದ್ ಮನೆಲಿ ಇರ್‍ದು. ಇದಾಗಿ ಆಕನ ಅವುಕೆ ಬೇಸಾಯ ಕೆಲಸ. ಗದ್ದೆ ಎಲ್ಲ ಕೊಯಿದ್ದಾತ್. ಗೈಪುಗೆ ಏನಿಲ್ಲೆಂತ ಆತ್. ಏನ್ ಮಾಡ್ದು. ಗದ್ದೆಲಿ ಸೋಂತೆ ಹಾಕಮಂತ್ ಹೇಳ್ದೊ. ಗದ್ದೆಲ್ಲ ಕೊಯ್ದಿ, ಸಾಲ್ ಮಾಡಿ ಸುಟ್ಟ್ ಸೋಂತೆ ಹಾಕಿದೊ. ಸೋಂತೆ ಲಾಯಿಕಾತ್. ಸೋಂತೆ ಮಿಡಿ ಬುಟ್ಟಾಕನ ಕುದ್ಕ ಬಾಕೆ ಸುರುಮಾಡ್ತ್. ಕುದ್ಕಂಗೆ ಇನ್ನೆಂತ ಉಪಾಯಂತ ಹೇಳ್ದೊ? ಗದ್ದೆ ಸುತ್ತ ಗೋಡೆ ಇಸಿದ್ ಕಲ್ಲ್ ಬರೆ ಮಾಡ್ದೊ. ಗದ್ದೆ ಸುತ್ತ ಮಾಡ್ರು ಒಂದು ದಿಕ್ಕ್‌ಲಿ ಈ ಸೋಂತೆ ಹಿತ್ಲಿಗೆ ನೀರ್ ಬರೊಕು. ಅದ್ಕೆ ಒಂದು ತೂಂಬು ಇಸಿದೊ. ಅದಲ್ಲಿ ನೀರ್ ಬಂದದ್ದರ ಹೊಯ್ಯುದು. ಅತ್ತಂದ ಚೊಂಟೆನೀರ್ ಬಂದ್ ಈ ಕಂಡಿಲೆ ಬಂದದ್ದರ ಹೊಯ್ಯುದು.

ಒಂದು ದಿನ ಸೋಂತೆಕಾಯಿ ತಿಂಬಕೆ ಕುದ್ಕ ಬಾತ್. ಇದ್ ವರ್ಸಾಲು ತಿಂದ್ ಅಭ್ಯಾಸ ಇದ್ದದಲ್ಲ. ನೋಡ್ರೆ ಎಲ್ಲ ಗೋಡೆ ಎಲ್ಲ ಸುತ್ತ್ ಬಾತ್. ಈ ಕಂಡಿ ಉಟ್ಟು. ಈ ಕಂಡಿಲಿ ಹುಕ್ಕತ್. ಹುಕ್ಕ್ ಬೇಕಸ್ಟ್ ಸೋಂತೆ ತೀನ್ತ್. ತಿಂದಾಕನ ಹೊಟ್ಟೆ ಬರಾಬರಿ ಬಾತ್. ಬಂದ್ ಈ ಕಂಡಿಲಿ ಹುಗ್ಗಿಕೆ ಹೋಕನ ಹುಗಿಕೆ ಬೊತ್ತ್. ಕೋಳಿ ಕೂಂಗಿತ್. ಕೋಳಿ ಕೂಂಗಿಕನ ಬೊಳ್ಪಾತ್. ಹೆಣ್ಮಕ್ಕ ಎದ್ದೊ. ಬತ್ತ ಮಿಜಿದೊ. ಬೊಳ್ಪು ಕಂಡತ್. ಇನ್ನ್ ನಾ ಹೋಗದಿದ್ದರೆ ನನ್ನ ಬೊಡ್ದು ಕೊಂದವೆ.

ಅಷ್ಟೊತ್ತಿಗೆ ಈ ಸೋಂತೆ ಮಾಡ್ದಂವ ಮಾಡ್ದಂವ. ಒಳ್ಳೊ ಬೊಳ್ಪಾಗುಟು. ನೋಡ್ರೆ ಎಲ್ಲ ಬೊಳ್ಳಿ, ಸೋಂತೆಕಾಯಿ ತಿಂದ್ ಹಾಳಾಗುಟು. ನಾವು ಇಷ್ಟ್ ಬಂಗ ಬಂದ್ ಸೋಂತೆ ನಟ್ಟಿ ಮಾಡಿ ಎಲ್ಲಾ ಹಾಳಾತಲ್ಲೆ. ಎಲ್ಲಿ ಬಾತ್‌ಂತ ಈ ಗೋಡೆ ಕರೇಲಿ ಬಾತ್. ಬಾಕನ ಈ ಕಂಡಿ ಹಕ್ಕಲೆ ಕುದ್ಕ ಬಿದ್ದ್ ಕೊಂಡೊಟು. ಸತ್ತ್ ಹೋಗುಟು! ಹೆಂಗೆ ಸತ್ತತ್? ಒಂದ್ ಇಷ್ಟ್ ದೊಡ್ಡ ಸೋಂತೆಕಾಯಿನ ಅರ್ಧ ಬಾಯೊಳಗೆ ನುಂಗಿ ಅರ್ಧ ಹೊರಗೆ ಉಳ್ಸಿ ಬಿದ್ದ್ ಕೊಂಡುಟು. ಸತ್ತತ್ಲೆ ಇದ್. ಸತ್ತಾಂಗೆ ಬಿದ್ದ್‌ಕೊಂಡುಟು. 'ಬೋಳಿಮಗನೆ ಇಲ್ಲಿ ಸೋಂತೆಕಾಯಿ ತಿಂದ್ ಬಿದ್ದ್ ಸತ್ತೋಳ'. ನೋಡ್ತ್. ಹಿಡ್ದೆಲ್ಲ ಪೂಜಿತ್. ಒಳ್ಳ ಲಾಯಿಕ್ ಉಟ್ಟುಂತ ಎಲ್ಲ ತಟ್ಟಿತ್.

ಅಷ್ಟೊತ್ತಿಗೆ ಈ ಹೆಣ್ಮಕ ಏನ್ ಮಾಡ್ದೊ. ಒಳ್ಳೊ ಬೊಳ್ಪು ಆದ್ದಲ್ಲ. ಹಟ್ಟಿಗೆ ದರ್‍ಗಿಗೆಂತ ಉಂಡ್‌ದ್ ಕುಕ್ಕೆ ಹೊತ್ತ್‌ಕಂಡ್ ಐದಾರು ಜನ ಹಿತ್ಲ್ ಕರೆಲಿ ಹೋದವೆ. 'ಓಯಿ ಅಕ್ಕಂದರೆ ಒಂದ್ ಕುದ್ಕನ ನೋಡ್ಯೊಲರಿಯ'. 'ಎಲ್ಲಿಟು?''ಇಂದೆನಿ ಇಲ್ಲಿ ಸತ್ತುಟು'. 'ಎಲ್ಲಿ ನೀ ಸುಳ್ಳು ಹೇಳ್ದಪ್ಪ?''ಇಂದೆನಿ ಇಲ್ಲಿ ಬಿದ್ದುಟು. ಓ ಇಲ್ಲಿ ಬಂದ್ ನೋಡಿ. ನೋಡ್ರೆ ಬಿದ್ದುಟು'. ಹಿಂಗೆ ನಿಲ್ಕಿ ನೋಡ್ಕನ ಅತ್ತ ಕಾಂಬೊದ್ಲೆ ಅವುಕೆ. ಒಂದ್ ಹನಿಹನಿ ಕಂಡದೆ. ಕುದ್ಕನ ಕೈಲಿ ಕಾಲ್‌ಲಿ ಹಿಡ್ದ್ ತೆಗ್ದ್ ಈಚೆಗೆ ಹೊರಗೆ ಹಾಕಿತ್. ಮಜಲ್ ಗದ್ದೆಗೆ. ಹೆಣ್ಣ್ ಮಕ್ಕಳಿಗೆ ಬಾರೀ ಸಂತೋಷ ಆತ್. ಎಲ್ಲ ಹಿಡ್ದ್ ಪೂಜಿದೊ. ಬೆನ್ನ್ ಗಿನ್ನ್ ಎಲ್ಲ ಪೂಜಿ ಒಳ್ಳ ಕುದ್ಕ! ಇದ್ ಮೆಲ್ಲ ಕಣ್ಣ್ ಬುಟ್ಟ್

ನೋಡ್ದೆ. ಸತ್ತುಟ? ಸತ್ತುಟ? ಏನಿಲ್ಲೆ ಇದ್ಕೆ ಹೋಕ್ಕಾಗುಟು? ಅತ್ತ ಬಿದ್ದಾಕನ ಏನಿಲ್ಲೆ.

ಇನ್ನೆನು ಮಾಡ್ದು? ನಂಗೆ ನೀರ್ ಹೊಯ್ದಾಗಲಿ. ಅತ್ತ ಗುಂಡಿ ತೆಗ್ದ್ ಹಾಕಿನೆಂತ ಇಂವ ಹೇಳ್ತ್. ಇಂವ ಅತ್ತ ನೀರ್ ಹೊತ್ತ್‌ಕಂಡ್ ಹೋತ್. ಇವು ಅತ್ತ ದರ್‍ಗ್ಗೆ ಹೋದೊ. ಅವು ಹೋದರೆ ಇಂವ ಮೆಲ್ಲ ಕಣ್ಣ್ ಬುಟ್ಟ್ ನೋಡ್ತ್. ಯಾರ್? ಕುದ್ಕ. ಅವು ಅತ್ತ ಹೋದೊ ಇಂವ ಇತ್ತ ಹೋತ್. ಎದ್ದ್ ಒಂದೇ ಓಟ. ಎಲಾ ಮಹಾಶಿವ! ಇಂತ ಕತೆ ಆಗಿ ಹೋತಲ್ಲೆ? ನಾವು ಅದರ ಕೊಲ್ಲೊಕಾತಲ್ಲೆ. ಕುದ್ಕ ಹೋತ್. [ಕಥಾ ನಿರೂಪಕ:ಲಿಂಗಪ್ಪ ಗೌಡ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 10. ಕುದ್ಕನ ವಂಶ ನಾಶ ಆತ್ ಕತೆ

ಒಂದ್ ಊರ್‍ಲಿ ಒಂದ್ ಊರ್‌ಗೌಡನ ಮನೆಲಿ ಎರಡ್ ಜನ ಕೆಲ್ಸಕೆ ಇದ್ದೊ. ಒಂದ್ ಹಂದಿನು ಒಂದ್ ಕುದ್ಕನು. ಅವ್ ಇಬ್ಬರ್ ಜೋಸ್ತಿಗ. ಅವ್ಕೆ ಇಬ್ಬರಿಗೆ ಊರ್ ಗೌಡನಲ್ಲಿ ಕೆಲ್ಸ ಕೊಡಕಲ್ಲ? ಹಂಗೆ ಒಂದ್ ದಿನ ಗದ್ದೆ ಎಳ್ಳೊಂಬಾಂತ ಆತ್. ಕುದ್ಕಣ್ಣನ ಅಂದಾಜಿಗೆ ಗದ್ದೆ ಎಳ್ಳಿಕೆ ಬುಟ್ಟೊ. ಗದ್ದೆ ಎಳ್ಳಿ ಸುಮಾರ್ ದಿನ ಕಳ್ದಾಕನ ಒಂದ್ ಕಲ್ಲ್ ಸಿಕ್ಕಿತ್. ಕಲ್ಲ್‌ನ ಹೊಡ್ದರೂ ಎಳ್ಳಿದರೂ ಎಳ್ಳಿ ಬಾಂವ ಅಂದಾಜಿಲ್ಲೆ. ಇದ್ಕೆ ಇನ್ನೇನ್ ಮಾಡ್ದು? ಇದಕ್ಕೆ ಇನ್ನ್ ತೋಟೆ ಹಾಕೊಕ್. ಅಷ್ಟೆ. ಮತ್ತೇನ್ ಮಾಡಿಕೂ ಉಪಾಯ ಇಲ್ಲೆ ಅಲ್ಲ. ಊರುಗೌಡನೊಟ್ಟಿಗೆ ಬಂದ್ ಹೇಳ್ದೊ ಕೆಲಸದವ್. ಅದಕ್ಕೆ ತೋಟೆ ಹಾಕದೆ ಕಲ್ಲ್ ಎಳ್ಳಿಕಿಲ್ಲೆಂತ. ಹಂಗೆ ಜನರ ಕರ್‍ಸಿದ್ ತೋಟೆ ಹಾಕಿದೊ. ತೋಟೆ ಹಾಕಿ ತೋಟೆಗೆ ಕಿಚ್ಚಿ ಕೊಡಕಲ್ಲ. ಅಷ್ಟಾಕನ ಕುದ್ಕಣ್ಣ ಹೇಳ್ತ್. ಯಾರ್‍ಗೆ? ಹಂದಿಗೆ. 'ನೀ ಹೋಗಿ ತೋಟೆಗೆ ಕಿಚ್ಚಿ ಕೊಡಕ್'. ಕಿಚ್ಚಿ ಕೊಡಿಕನ ಮಾತ್ರ ಇದ್ ಓಡಿ ಬಾಕೆ ಹೇಳ್ತಲೆ. ಇದ್ ಕಿಚ್ಚಿ ಕೊಟ್ಟ್ ಅಲ್ಲೆ ನಿಂತ್‌ಕನ್ತ್. ಕಿಚ್ಚಿ ಕೊಟ್ಟ್ ತೋಟೆ ಹೊಡ್ತ್. ಹಂದಿನ ಎರಡ್ ಕಣ್ಣ್ ಹೋತ್. ಕಣ್ಣ್ ಹೋದ ಮೇಲೆ ಹಂದಿಗೆ ಬಾಕೆ ಆದೆನಾ? ಕುದ್ಕ ಒಂದ್ ದೊಣ್ಣೆ ತೆಕನ್ತ್, 'ಇಂದಾ ಈ ದೊಣ್ಣೆ ಹಿಡ್ಕ ಮೆಲ್ಲಂಗೆ ಪೋಯಿ'. ಇವ್ ಮೆಲ್ಲಾಂಗೆ ಬಂದೊ.

ಬಾಕನ ಈ ಊರ್ ಗೌಡನ ಮನೆನ ಅಂಗಳಲಿ ಬಾಕೆ ಉಟ್ಟು. ಅಣ್ಣ ಇಲ್ಲಿ ಸಮದಾರಿ ಲಾಯ್ಕ್ ಉಟ್ಟಂತ ಕೇಳ್ತ್? ದೊಣ್ಣೆ ಕೊಟ್ಟತ್. ಹಂದಿ ಬಾವ ಪೋರ್ಸ್‌ಲಿ ಬಾಮಿನೊಳಗೆ ಬಿದ್ದತ್. ಇಂವ ಓಡಿ ಹೋಗಿ ಹೇಳ್ತ್. 'ಊರ್‌ಗೌಡನ ಬಾಮಿಗೆ ಹಂದಿ ಬಿದ್ದುಟೊ! ಹಂದಿ ಬಿದ್ದುಟೊ!' ಅಂತ ಊರಿಗೆಲ್ಲ ಬೊಬ್ಬೆ ಹೊಡ್ಕಂಡ್ ಹೋತ್. ಊರವೆಲ್ಲಾ ಬಂದೊ. ಬಂದ್ ಹಂದಿನ ತೆಗ್ದೊ. ತೆಗ್ದೊ ಹುಲೆಲ್ಲ ಕೂಡ್ಸಿ ಕಿಚ್ಚಿ ಹಾಕಿದೊ. ತಕಂಡೋಗಿ ಅಜಿಕಳ ಮಾಡ್ದೊ. ಮಾಡಿ ಇದರ ಮಾಸೊ ಮಾಡಕಲ್ಲ? ಹಂಗೆ ಕೊಟಗೆಲಿ ಅಜಿಕಲ ಮಾಡ್ದೊ. ಎಲ್ಲಾ ಮಾಸೊ ಕೊಯ್ದ್ ಎಲ್ಲಾ ಪಾಲ್ ಹಂಗೆ ಅಂದಾಜ್ ಉಟ್ಟಲ್ಲ. ಪಾಲ್ ಹಾಕಿದೊ. ಪಾಲ್ ಹಾಕಿ

ಒಬ್ಬೊಬ್ಬಂಗೆ ಕೊಡುವ ಅಂದಾಜ್ ಆತ್. ಅಷ್ಟಾಕನ ಈ ಕುದ್ಕ ಊರ್‌ಗೌಡನ ಮನೆಗೆ ಹೋತ್. ಬೆಂಕಿ ಬಿತ್ತೋಂತ ಹೇಳಿ ಆರ್ಬಟೆ ಕೊಟ್ಟತ್. ಇವು ಹಂದಿ ಮಾಸ ಪೂರ ಬುಟ್ಟ್ ಓಡ್ದೊ.

ಕುದ್ಕ ಬಾತ್. ಬಂದ್ ಬೇಕಾದಷ್ಟ್ ಎಲ್ದ್ ಬಲ್ದ್‌ಂತ ತೀನ್ತ್. ತಿಂದ್ ತಿಂದ್ ಆಕನ ಇದಕ್ಕೆ ಸಾಕಾತ್. ಕೈಲಿ ಚುರ್ಕನ್ತ್, ನಾಲ್ಕ್ ನಡೆಲಿ ಚುರ್ಕನ್ತ್, ಹಿಡ್ದ್ ನೋಡ್ರೆ ಮತ್ತೂ ಮಾಸ ಉಟ್ಟು. ಬೀಲಲೂ ಚುರ್ಕನ್ತ್. ಅಲ್ಲಿಂದ ಓಡ್ತ್. ಈಗ ಊರ್ ಬುಡದೆ ಉಪಾಯೆ ಇಲ್ಲೆ ಅಲ್ಲ? ಇಷ್ಟೆಲ್ಲ ಮಾಡ್ದ ಮೇಲೆ? ಓಡ್ತ್ ಓಡಿ ಓಡಿ ಓಡಿ ಆಕನ ಸುಮಾರ್ ದೂರ ಎತ್ತಿತ್. ಹೋಗಿ ಒಂದ್ ಪಾರೆ ಮೇಲೆ ಕುದ್ದತ್. ಪಾರೆ ಮೇಲೆ ಕುದ್ದ್ ನೋಡ್ರೆ ಇದ್ರ ಕೈಲೂ ಇಲ್ಲೆ ಮಾಸ, ಕಾಲ್‌ಲೂ ಇಲ್ಲೆ. ಓಡ್ದ ಪೋರ್ಸ್‌ಲಿ ಬೀಲ ನೋಡ್ರೆ ಬೀಲಲೂ ಇಲ್ಲೆ. ಎಲ್ಲಾ ಕಾಲ್‌ಂದಲೂ ಉದುರಿ ಹೋತಪ್ಪ. ಈ ಬೀಲ ಯಾಕೆ ಬುಟ್ಟತ್‌ಂತ ಕಲ್ಲ್ ತಕನ್ತ್. ಸಿಟ್ಟ್ ಬಾತ್ ಇದ್ಕೆ. ತಗ್ತ್ ಪಾರೆ ಮೇಲೆ ಇಸಿ ಪೋರ್ಲ್ ಬೀಲಕ್ಕೆ ಗುದ್ದಿತ್. ಇಷ್ಟೆಲ್ಲಾ ತಿಂದರೂ ಅದಕ್ಕೆ ಸಿಟ್ಟ್ ಬಾತ್. ಇದ್ಯಾಕೆ ಬುಟ್ಟದ್‌ಂತ ಹೇಳಿದ್ ? ನೀ ಯಾಕೆ ಬುಟ್ಟದ್‌ಂತ ಹೇಳಿ? ಸಿಟ್ಟ್ ಬಾತ್. ಗುದ್ದಿ ಗುದ್ದಿ ಗುದ್ದಿ ಬೊಜ್ಜಿಮಾಡ್ತ್. ಸಿಟ್ಟ್‌ನ ಭರಲಿ ಅದರ ಬೀಲಂತ ಅದಕ್ಕೆ ಗೊತ್ತಾದೆನ?

ಆ ಊರ್ಲಿ ದೊಡ್ಡ ಒಬ್ಬ ಭಟ್ಟನ ಮನೆಂತ ಹೇಳಕ್. ಅಲ್ಲಿ ಒಂದ್ ಮೊದ್ವೆ ಉಟ್ಟು. ಆ ಮೊದ್ವೆಗೆ ತುಪ್ಪ ಆಕ್ಕ್ ಹಂಗೆ ಒಬ್ಬನ ಕೈಲಿ ದುಡ್ಡ್ ಪಾತ್ರೆ ಎಲ್ಲಾ ಕೊಟ್ಟ್ ಕಳ್ಸಿದೊ. ಮಾರ್ನೆದಿನ ಈ ಬೀಲ ಅಷ್ಟ್ ತೋರ ಆಗುಟ್. ಈ ಸೆನಿ ಹಿಡ್ದಂವ ಅಲ್ಲಿ ಬಾತ್. ನೀ ದೂರ ಹೊರಟದಣ್ಣ? ನಂಗೆ ಹನೀಸ್ ತುಪ್ಪ ಆಕಾಗಿತ್ತ್. ಎಲ್ಲಿಗೆ? ಅದ್ ನಮ್ಮೂರ ಭಟ್ರಲ್ಲ ಅವ್ಕೆ. ಎಷ್ಟ್ ಬೇಕ್? ಇದರ್ಲಿ ಒಂದ್ ತುಂಬ ಬೇಕ್. ದುಡ್ಡ್‌ನ ಲೆಕ್ಕಾಚಾರ ಏನೂ ಇಲ್ಲೆ ಅಲ್ಲಿ? ಹಂಗೆ ಯಾಗ ಬರೋಕ್? ಎರಡ್, ಮೂರ್, ದಿನಲಿ ಬಾ. ಮಾಡಿ ರಡಿ ಇಸಿನೆಂತ ಹೇಳ್ತ್. ಇದ್ ಏನ್ ಮಾಡ್ದು. ಯಾಗೊಳ್ ಬೆಳಿಗ್ಗೆ ಎದ್ರ್‌ದು. ಬೀಲ ಗಡಿಗೆ ಬಾಯಿಗೆ ಹಿಂಟುದು. ಹಿಂಟಿದ್ ಬಾಕನ ರಡೀ ಮಾಡಿ ಗಡಿಗೆ ಬಾಯಿ ಕಟ್ಟಿ ತುಂಬಿ ಇಸಿತ್. ಇಂವ ಬಾತ್. ಬಂದ್ ಹೆಂಗೆ ? ಆಗುಟಾ ಓ! ರಡಿ. ನೋಡಲ್ಲಿ ಗಡ್ಗೆ ತೋರ್ಸಿತ್. ಮಾತ್ರ ಸಭೆ ನಡುಲಿ ಬಿಚ್ಚೊಕ್ ಹೊರ್ತ್ ಮತ್ತೆ ಎಲ್ಲಿನೂ ಬಿಚ್ಚಿಕೆ ಬೊತ್ತ್. ಇದರ ಬಳ್ಸುವ ಹೊತ್ತಿಗೆ ಹೊರ್ತ್ ಅದ್ಕೆ ಮುಂದೆ ಬಿಚ್ಚಿಕೆ ಬೊತ್ತ್‌ಂತ ಹೇಳ್ತ್. ಇಂವ ಹೊತ್ತ್‌ಕಂಡ್ ಹೋತ್. ಹೋಗಿ ಸಭೆ ಎಲ್ಲ ಸೇರ್ದೊ. ಮೊದ್ವೆ ಊಟ ಉಪಚಾರಕೆ ಕುದ್ದೊ. ಒಂದ್ ಕಡೆಲಿ ಬಳ್ಸಿಕಂಡ್ ಹೋದೊ. ಒಂದ್ ಕಡೆಲಿ ನೀರ್ ಕೊಟ್ಟ್‌ಕಂಡ್ ಹೋದೊ. ಅದರ್ಲಿ ಒಂದ್ ಪಾಪದ ಕೂಸ್ ಹೇಳ್ತ್. ಅದಕ್ಕೆ ತುಳುಬಾಯಿ 'ಅಪ್ಪೆ ನಾದುಂಡು, ಅಪ್ಪೆ ನಾದುಂಡು'. 'ಈ ದಾಯ್ತಾವು ಬಗ್‌ಲಾಂದೆ ಉಣ್‌ಂದ್'ಂತ ಜೋರ್ ಮಾಡ್ತ್. ಅಷ್ಟಾಕನ ಈ ನೆಲಗ ಟೈಯಿಂ ಟುಂಯಿ ಮಾಡ್ಕನ ಎಲ್ಲವೂ ಬುಟ್ಟು ಎದ್ರಿಕೆ ಸುರ್ ಮಾಡ್ದೊ. ಅಕೇರಿಗೆ ಹಂತ್ಯೆಲಿ ನೋಡ್ರೆ ಒಂದ್

ಜನನೂ ಇಲ್ಲೆ. ಇದ್ ಎಲ್ಲಿಂದ ತಂದ ತುಪ್ಪ ? ಏನ್ ಕತೆ ? ಇಂವಂಗೆ ಜೋರ್ ಮಾಡ್ರೊ. ಇಂವ ಊರ್ ಬುಟ್ಟ್ ಓಡುವಂಗೆ ಆತ್. ಮತ್ತೆಂತ ಮಾಡ್ದು? ಈ ಕುದ್ಕನ ಹಿಡಿಯೊ ಕತೆ ಹೆಂಗೆಂತ? ಇಂವ ಆಲೋಚನೆ ಮಾಡ್ತ್. ಆಗ ಗೊತ್ತಾತ್ ನನ್ನ ಕುದ್ಕ ಸೋಲ್ಸಿತ್‌ಂತ.

ಇಂವ ಅಂಗಡಿಗೆ ಹೋತ್. ಅಂಗಡಿಗೆ ಹೋಗಿ ಒಂದ್ ಮಣ ಮಾಯಣ ತಾತ್. ಮಾಯಣ ತಂದ್‌ದ್ ಮೊನ್ಸನಾಂಗೆ ಮಾಡ್ತ್. ಹೋತ್. ಹೋಗಿ ಇಂವ ಅದ್ ಇದ್ದ ಅಂದಾಜಿ ಉಟ್ಟಲ್ಲ. ಹೋಕನ ಇಂವ ಕಾಂಬಕೆ ಸಿಕ್ಕಿತ್. ಕಾಂಬಕ್ಕೆ ಸಿಕ್ಕಿದ್ ಅಡ್ಗಿತ್. ಇಂವ ಮೆಲ್ಲ ಅಲ್ಲೆ ಇಸಿತ್ ಬಾತ್. ಅದ್ಕೆ ಅಂದಾಜ್ ಆಗುಟು. ಇಂವ ನನ್ನ ಮೋಸ ಮಾಡ್ತ್‌ಂತ ಒಂದ್ ಹೊಡ್ತ್. ಹೊಡ್ದಾಕನ ಅತ್ತ ತಿರ್ಗಿತ್. ಅತ್ತ ತಿರ್ಗಿತ್‌ಂತ ಇತ್ತಂದ ಹೊಡ್ತ್. ಇತ್ತ ತಿರ್ಗಿತ್. ಅಂತೂ ಇಂತು ಇದರ ಕೈ ಮೆಯಿ ಪೂರ ಮಾಯಣ ಆತ್. ಅಲ್ಲಿಂದ ಹರಿ ಬಿದ್ದ್ ಓಡ್ತ್. ಓಡ್ರೆ ಆಗ ಚಗ್ತೆಬಲ್ಲೆ. ಈ ಚಗ್ತೆಬಲ್ಲೆ ಹಣ್ಣ್ ಸೊಪ್ಪ್ ಇದರ ಮೈ ಪೂರಾ ಅಂಟಿತ್. ಈ ಬಟ್ಟೆ ನೇಯುವವು ನೀಲಿ ಮಾಡ್ವೆ ಅಲ್ಲ. ಆ ನೀಲಿ ಪಾತ್ರೆಗೆ ಓಡ್ದ ಫೋರ್ಸಿಲಿ ಬೀತ್. ಅಲ್ಲಿಂದಲೂ ಈ ಬಣ್ಣ ಬುಟ್ಟ್ ಓಡ್ತ್. ಇದ್ ಬಣ್ಣ ಎಲ್ಲ ಸೇರಿಕನ ಚೇಂಜ್ ಕಂಡದೆ ಅಲ್ಲ?

ನಾ ಒಂದ್ ಊರಿನ ಅರ್ಸ. ಹಾಂ..ಅಂತ ಹೇಳಿಕೆ ಕುದ್ಕ ಸುರ್ ಮಾಡ್ತ್. ಹಂಗೆ ಎಲ್ಲಾ ಮೃಗಗಳ ಸೇರ್ಸಿತ್. ಆನೆ, ಎಲಿ, ಕುದ್ಕ, ಕಾಡಂದಿ, ಜಿಂಕೆ, ಕಾಟಿ, ಎಮ್ಮೆಂತ ಹೇಳಿ ಎಲ್ಲಾ ಮೃಗಗ ಸೇರ್ರೊ. ಸೇರಿ ಪಂಚಾತಿಗೆ ಆತ್. ಪಂಚಾತಿಗೆ ಆಗಿ ಅಪ್ಪು ಹೊತ್ತಿಗೆ ಇಂವಂಗೆ ಒಂದ್ ನೆನ್ಪಾತ್. ಹಿಂಗೆ ಮಾಡಿರೆದೆ ಆಕಿಲ್ಲೆ ? ಇವರ ಜಾತಿಯವರೊಟ್ಟಿಗೆ ಹೇಳಿ ಒಂದ್ ಕೋಲ ಕೊಡುವ ಹಂಗೆ ಮಾಡಕು. ನಿಮ್ಮ ಜಾತಿಯವರದ್ದ್ ಒಂದ್ ದೆವ್ವ ಉಟ್ಟ್. ಇಂತ ಜಾಗೆಲಿ ಹಂಗೆ ಒಂದ್ ಹತ್ತ್ ಐವತ್ತ್ ಜನದ ಅಂದಾಜ್ ಸೇರಿ ಒಂದ್ ಪಟ್ಟಕಟ್ಟಿದೊ. ದೊಡ್ಡ ಒಂದ್ ಅಡ್ಕಲಿ ಪಟ್ಟಕಟ್ಟಿ ಇಂತ ದಿನಾಂತ ಕುದ್ಕನೊಟ್ಟಿಗೆ ನಿಶ್ಚಯ ಎಲ್ಲ ಮಾಡ್ರೊ. ಇದೇ ಜಾತಿಯವರೊಟ್ಟಿಗೆ ಹೇಳೊಕ್ ಹಿಂಗೆ ಹಿಂಗೆಂತ. ಅಪ್ಪೊತ್ತಿಗೆ ಇವ್ ಏನ್ ಮಾತಾಡ್ರೊ? ಮನೆಯವ್ಕೆಲ್ಲ ಸೂಚನೆ ಕೊಟ್ರೊ. ನೀವ್ ಕತ್ತಿಬೆಡಿ ಎಲ್ಲ ಜೋಡ್ಸಿ ಕಂಡ್ ಬರೇಕ್. ಇಂತ ಜಾತ್ರೆ ಉಟ್ಟ್. ಇವೆಲ್ಲ ಜೋಡ್ಸಿಕಂಡ್ ಹೋದೊ. ಹಾಂಗೇ ನಮ್ಮ ಊರ್ಲಿ ಎಲ್ಲ ದೆವ್ವ ಕಟ್ಟಂವ ಪರವಂತೇಳಿ ಉಟ್ಟಲ್ಲ. ಅಂವಂಗೆ ಹೇಳ್ರೊ. ಇಂತ ದಿನ ದೆವ್ವ ಕಟ್ರೊಕ್. ಹಿಂಗೆ ಇಂತದೊಂದ್ ಉಟ್ಟ್. ಕುದ್ಕನ ದೆವ್ವಂತ ಹೇಳಿ.

ಹಂಗೆ ಎಲ್ಲ ಸೇರ್ರೊ. ಕಲ್ಲ್ ಕೋಟೆ ಕಟ್ಟಿ ಅದರ ಮೇಲೆ ಮುಳ್ಳ್ ಬೇಲಿ ಮಾಡೊಕ್. ಅದ್ ದೆವ್ವ ಕಟ್ಟಂವನೊಟ್ಟಿಗೆ ಹೇಳ್. ವಿಷಯ ಹಿಂಗೆ ಹಿಂಗೆ. ೦ಂಗೆ ಹಿಂಗೆ ಸಂದಿ ಹೇಳೊಕ್. ಇದ್ಕೆ ತಪ್ಪಿರೆ ಜೋರ್ ಮಾಡಕ್. ಹಂಗೆ ಎಲ್ಲ ಸೇರ್ರೊ. ಸಾಧಾರಣ ಎಂಟೊಂಬತ್ತ್ ಹತ್ತ್ ಗಂಟೆ ಆಕನ ಅಲ್ಲೆಲ್ಲಾ ಕೂಡ್‌ವಂತವ್ ಕೂಡ್ರೊ. ಹಂಗೆ ಇಂವ ಅರ್ದಳ ಎಲ್ಲ ಕಟ್ಟಿ ದೆವ್ವ ಹೊರಡ್ವ ಅಂದಾಜ್ ಆತ್. ಆಗ ಹಾಡ್ತನ (ಪದ) ಹೇಳಿಕೆ ಸುರ್‌ಮಾಡ್ರೊ.(ದೆವ್ವ ಹೊರಡ್ಕನ ಹೇಳುವಂತಾದ್ ಉಟ್ಟಲ್ಲೆ ಸಂದಿ ಹೇಳ್ದು) "ಕಲ್ಲ್ ಕೋಟೆ ಮುಳ್ಳ್ ಬೇಲಿ ಕುದ್ಕ ಬಲ್ಲಾಳ ಬತ್ತ್‌ದ್

ಭೂತೊ ಕೊರಿಯೆರ್"ಂತ ಹೇಳ್ತ್. ಸುಮಾರ್ ಹೊತ್ತ್ ಕಳ್ದಾಕನ "ಕಲ್ಲ್ ಕೋಟೆ ಮುಳ್ಳ್ ಬೇಲಿ ಕತ್ತಿ ಬೆಡಿತ್ತಗ್ಲ್ ಎರ್ಕೆರ್ಕ ಬರಡೆ"ಂತ ಹೇಳ್ತ್. ದಾಯ್ತ ಪನ್ಪ ಸೂಳೆಮಗ ? ಈಯಿ ದಾಯ್ತ ಪನ್ಪಂತ ? ಜೋರ್ ಮಾಡ್ದೊ. 'ಹ್ಣಂ ....ಹ್ಣಾಂ ....ತತ್ರ್ ಪೋಂಡ್ ತತ್ರ್ ಪೋಂಡ್'ಂತ ಸಮದಾನ ಮಾಡ್ತ್. "ಕಲ್ಲ್ ಕೋಟೆ ಮುಳ್ಳ್ ಬೇಲಿ ಕುದ್ಕ ಬಲ್ಲಾಳ್ ಬತ್ತ್‌ದ್ ಭೂತೊ ಕೊರಿಯೆರ್"ಂದ್ ಹೇಳ್ತ್. "ಕಲ್ಲ್ ಕೋಟೆ ಮುಳ್ಳ್ ಬೇಲಿ ಕತ್ತಿ ಬೆಡಿತಗ್‌ಲ್ ಎರ್ಕೆರ್ಕ ಬರಡೆ"ಂತ ಹೇಳ್ತ್. 'ಎಕಡ್ ಪಂಡ್‌ನ ದಾಯ್ತುವ್ ಅಯಿನೇ ಪನ್ಪುನಾಂದ್' ಹೇಳಿ ಜೋರ್ ಮಾಡ್ತ್. "ಕಲ್ಲ್ ಕೋಟೆ ಮುಳ್ಳ್ ಬೇಲಿ ಕುದ್ಕ ಬಲ್ಲಾಳ ಬತ್ತ್‌ದ್ ಭೂತ ಕೊರಿಯೆರ್", "ಕಲ್ಲ್ ಕೋಟ್ ಮುಳ್ಳ್ ಬೇಲಿ ಕತ್ತಿ ಬೆಡಿತಗ್‌ಲ್ ಎರ್ಕೆರ್ಕ ಬಲೇಂ"ತ ಹೇಳ್ದೆ ತಡ ಕುದ್ಕಂಗಲ ಎಲ್ಲಾ ಆಗ ಪೊಡಿ ಪೊಡಿ ಪೊಡಿ ಪೊಡಿ ಮಾಡ್ದೊ. ಅದರ್ಲಿ ಒಂದ್ ಕುದ್ಕ ಒಳ್ದುಟ್ಟ್. ಅದ್ ಈಗ ಊರ್ಲಿ ಸಂಚಾರ ಮಾಡ್ದೆ. ಅದರ ನೋಡಿ ಕಂಡ್ ಬರಕಡ. [ಕಥಾ ನಿರೂಪಕಿ:ತಾರಮಣಿ ಜತ್ತನಮನೆ; ಸ್ಥಳ: ಮನೆ; ಸಮಯ:ಹಗಲು; ವರ್ಷ–1991]

## 11. ಕುದ್ಕ ಹುಲಿನ ಸೋಲ್ಸಿದ ಕತೆ

ಒಂದ್ ಹುಲಿ ಒಂದ್ ಚೊಂಬ್‌ನ ಹಿಡ್ಕಂಡ್ ದಾರಿಲಿ ಹೋಗ್ತಾ ಇತ್ತ್. ಅಷ್ಟಾಕನ ಕಡ್ಡೆ ಕೇಳ್ತ್, 'ಅಣ್ಣಣ್ಣ ನೀ ಎಲ್ಲಿಗೆ ಹೋದು'ಂತ? 'ನಾ ಕಾಶಿಗೆ ಪುಣ್ಯ ಪಡಿಯಕೆ ಹೋದು'ಂತ ಹೇಳ್ತ್. 'ಅಣ್ಣಣ್ಣ ನಾನೂ ಬನ್ನೆ ನಿನ್ನೊಟ್ಟೆ'ಗೆಂತ ಕಡ್ಡೆ ಹೇಳ್ತ್. ಹಾಂಗೆ ಹೇಳಿ ಕಡ್ಡೆನೂ ಹೊರ್ಟತ್. ಕಡ್ಡೆ ಹೋಗಿ ಅದರಂದ ಹನೀ ಆಚೆ ಹೋಕನ, 'ಅಣ್ಣಣ್ಣ ನೀವು ಎಲ್ಲಿಗೆ ಹೋದು'ಂತ? ಹಂದಿ ಕೇಳ್ತ್. 'ನಾ ಕಾಶಿಗೆ ಪುಣ್ಯ ಪಡಿಯಕೆ ಹೋದು'ಂತ ಹೇಳ್ತ್. 'ಅಣ್ಣಾ ನಿಮ್ಮ ಜೊತೆ ನಾನೂ ಬನ್ನೆ'ಂತ ಹೇಳ್ತ್. ಮೋಯಿಂತ ಆತ್. ಅದರಿಂದ ಹನೀ ಮುಂದೆ ಹೋಕನ ಕೆಂಪ ಕೇಳ್ತ್, 'ಅಣ್ಣಣ್ಣ ನೀವು ಎಲ್ಲಿಗೆ ಹೋದು'ಂತ ? 'ನಾ ಕಾಶಿಗೆ ಪುಣ್ಯ ಪಡಿಯಕೆ ಹೋದು'ಂತ ಆತ್. ಅಣ್ಣ ನಿಮ್ಮ ಜೊತೆಲಿ ನಾನೂ ಬನ್ನೆಂತ ಆತ್. ಆತ್ ಮೋಯಿಂತ ಹೇಳ್ತ್. ಅದರಂದ ಹಂಞ ಮುಂದೆ ಹೋಕನ ಸಾರಂಗ ಕಾಂಬಕೆ ಸಿಕ್ಕಿತ್. 'ಅಣ್ಣಣ್ಣ ನೀವು ಎಲ್ಲಿಗೆ ಹೋದರ್‍ಯ'ಂತ? ಕೇಳ್ತ್. 'ನಾ ಕಾಶಿಗೆ ಪುಣ್ಯ ಪಡಿಯಕೆ ಹೋದು'ಂತ ಹೇಳ್ತ್. ಅಣ್ಣ ನಿಮ್ಮೊಟ್ಟಿಗೆ ನಾನೂ ಬನ್ನೆಂತ ಹೇಳ್ತ್. ಆತ್ ಮೋಯಿಂತ ಆತ್. ಅದರಂದ ಹಂಞ ಮುಂದೆ ಹೋಕನ ಬರಿಕ್ಕ ಕಾಂಬಕೆ ಸಿಕ್ಕಿತ್. 'ಅಣ್ಣಣ್ಣ ನೀವು ಎಲ್ಲಿಗೆ ಹೋದರ್‍ಯ'ಂತ ? ಕೇಳ್ತ್. 'ನಾವು ಕಾಶಿಗೆ ಪುಣ್ಯ ಪಡಿಯಕೆ ಹೋದು'ವೆಂತ ಆತ್. ಅಣ್ಣ ನಾನೂ ಬನ್ನೆಂತ ಹೇಳ್ತ್. ಮೋಯಿಂತ ಆತ್. ಅದರಂದ ಮುಂದೆ ಹೋಕನ ಮೊಲ ಕಾಂಬಕೆ ಸಿಕ್ಕಿತ್. 'ಅಣ್ಣಣ್ಣ ನೀವು ಎಲ್ಲಿಗೆ ಹೋದು'ಂತ? 'ನಾವು ಕಾಶಿಗೆ ಪುಣ್ಯ ಪಡಿಯಕೆ ಹೋದುಂತ ಆತ್. ನಾನೂ ಬನ್ನೆಂತ ಆತ್. ಅದರಂದ ಹಂಞ ಮುಂದೆ ಹೋಕನ ಏಮೆ ಕಾಂಬಕೆ ಸಿಕ್ಕಿತ್. 'ಅಣ್ಣಣ್ಣ ನೀವೆಲ್ಲ ಎಲ್ಲಿಗೆ ಹೊರ್ಟದ್?' 'ನಾವು

ಕಾಶಿಗೆ ಪುಣ್ಯ ಪಡಿಯಕೆ ಹೋವವು'. ನಾನು ಬನ್ನೆ ಹಂಗಾರೆ. ಅದರಂದ ಹಂಞ ಮುಂದೆ ಹೋಕನ ಕುದ್ಕ ಕಾಂಬಕೆ ಸಿಕಿತ್. 'ಅಣ್ಣಣ್ಣ ನೀವು ಎಲ್ಲಿಗೆ ಹೋದರ್ಯ?'. 'ನಾವೆಲ್ಲವೂ ಕಾಶಿಗೆ ಪುಣ್ಯ ಪಡಿಯಕೆ ಹೋದು'ವೆಂತ ಆತ್. ಅಣ್ಣ ನಿಮ್ಮೊಟ್ಟುಗೆ ನಾನೂ ಬನ್ನೆ ಪೋಯಿಂತ ಆತ್. ಪೋಯಿಂತ ಹೇಳ್ದೊ ಎಲ್ಲವು ಹೋದೊ. ಹೋಗಿ ಹೋಗಿ ಹೋಗಿ ದೊಡ್ಡಾ ಒಂದು ಹುಲಿ ಬಾಂಜರಕೆ ಹೋದೊ. ಈ ಹುಲಿ ಎಲ್ಲವರ ಹುಗ್ಗ್‌ಸಿತ್. ಬಾಂಜರದ ಬಾಗಿಲ್‌ಲಿ ಕುದ್ದತ್. ಇದ್ ಎಲ್ಲ ದಿನ ಲೆಕ್ಕ ಹಾಕಿತ್. 'ಇಷ್ಟ ದಿನಕೆ ನಂಗೆ ಇಂತಿಂತದ್'ಂತ. ಅಷ್ಟೊತ್ತಿಗೆ ಕುದ್ಕ ಏನ್ ಹೇಳ್ತ್ ? 'ಅಣ್ಣಾ ನನ್ನದೊಂದು ಡ್ಯಾನ್ಸ್ ಉಟ್ಟು. ನಾ ಒಂದ್ ಲಾಯ್ಕ್‌ಲಿ ಕೊಣ್ದನೆ'ಂತ. ಆತ್ ಕುಣಿಂತ ಎಲ್ಲವು ಹೇಳ್ದೊ. ಎಲ್ಲವು ಕುದ್ದೊ. ಕುದ್ಕ ಕೊಣ್ತ್. ಕೊಣ್ದ್ ಕೊಣ್ದ್ ಆಕನ ಹುಲಿನೊಟ್ಟಿಗೆ ಹೇಳ್ತ್, 'ಅಣ್ಣಾ ನೀ ಹಂಞ ಸೈಡ್ ಬುಡ್'ಂತ'. ಆತ್'ಂತ ಸೈಡ್ ಬುಟ್ಟತ್. ಹನೀ ಆಚೆಗೆ ಕುದ್ದುರುಂತ ಹೇಳ್ತ್. ಹುಲಿನ ಹಾಂಗೆ ಕರೆಗೆ ಕರೆಗೆ ಕುದ್ರಿಸಿ ಕುದ್ರಿಸಿ ಕುದ್ಕ ಕೊಣ್ದ್ ಕೊಣ್ದ್ ಓಡಿಯೇ ಬುಟ್ಟತ್. ಈ ಹುಲಿ ಕುದ್ಕನ ಬೆರ್ಸಿಕಂಡ್ ಹೋತ್. ಕುದ್ಕನ ಬೆರ್ಸಿಕಂಡ್ ಹೋಕನ ಇವೆಲ್ಲ ಹೊರ್ಟ್ ಹೋದೊ. ಹುಲಿ ಅವರ ಬೆರ್ಸಿ ಬಾಕೆ ಅಕನ ಯಾಮೆ ಒಂದೆ ದಾರಿ ಕರೆಲಿ ಹೋದೆ. ಹ್ಞಾಂ.. ಎಲ್ಲವೂ ಹೋದೊ. ನೀ ಒಬ್ಬ ಬಾಕಿ ಒಳೊನ. ನಿನ್ನ ಒಬ್ಬನ ನಾ ತಿನ್ನದೆ ಬುಡಿಕಿಲ್ಲೆಂತ ಹೇಳ್ತ್. 'ಅಣ್ಣಾ ನೀ ನನ್ನ ಹಾಂಗೆ ಅಲ್ಲ ತಿಂಬೊದು'. 'ನೀ ನೀರ್‌ಲಿ ಕಂತಿಸಿ ಪಾರೆ ಮೇಲೆ ಇಸ್. ಮತ್ತೆ ನೋಡ್ ನೀಂಗೆ ಕಾಯಿ ಹೋಲ್ ತಿಂದಾ'ಂಗೆ ಆದೆಂತ. ಹೌದ್'ಂತ ಹುಲಿ ಹೇಳ್ತ್. ನೀರಿಗೆ ತಕಂಡೋತ್. ಕಂತಿಸಿತ್ ಪಾರೆ ಮೇಲೆ ಇಸಿತ್. ಪಾರೆ ಮೇಲೆ ಇಸಿಕನ ಹೇಳ್ತ್. ನೋಡಣ್ಣ ಅಲ್ಲಿ ಕುದ್ಕಣ್ಣ ಬಂದದೆಂತ ಆತ್. ಹುಲಿ ತಿರ್ಗಿ ನೋಡ್ಕನ ಈ ಯಾಮೆ ಹೊನ್ಕಿದ್ ನೀರಿಗೆ ಬೀತ್. ಹುಲಿಗೆ ಅಕೇರಿಗೆ ಎಂತದೂ ಇಲ್ಲೆ. ಅಲ್ಲಿಗೆ ಕತೆ ಮುಗ್ತ್. [ಕಥಾ ನಿರೂಪಕ:ಸಣ್ಣಮನೆ ಕೃಷ್ಣಪ್ಪ ಗೌಡ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 12. ಮುಚ್ಚ – ಕುದ್ಕ – ಹುಲಿ ಕತೆ

ಒಂದ್ ಗುಹೆಲಿ ಒಂದ್ ಹುಲಿ ಮೂರು ಮರಿಗಳ ಇಸಿತ್‌ಗಡ. ಮರಿಗಳ ಇಸಿ ಆಕನ ಆ ಹುಲಿ ಮರಿಗಳಿಗೆ ತೆನಸ್ ತಂದ್ ಕೊಡಕುಂತ ಹೇಳಿ ಊರಿಗೆಲ್ಲ ಹೋಗಿ ದನಕರುಗಳ ಹಿಡಿಯೊದು. ಆಮೇಲೆ ಎಲಿಗಳ ಹಿಡಿಯೊದು. ಹಂದಿಗಳ ಹಿಡಿಯೊದು. ತಾದು ಗುಹೆಲಿ ತಂದು ಕೊಟ್ಟ್ ಹೋದು. ಸುಮಾರ್ ಸಮಯ ಕಳ್ದ್ ಆಕನ ಹುಲಿನ ಕೊಲ್ಲಿಕೆ ಬೇಕಾಗಿ ಊರ್ಲಿದ್ದ ಮೊನ್ಸರೆಲ್ಲ ಬೆಡಿ ತಕಂಡ್ ಕಾಡಿಗೆ ಬಂದ್ ಕಾಡ್ ಬೇಟೆ ಮಾಡಿಕೆ ಸುರು ಮಾಡ್ದೊಗಡ. ಈ ಹುಲಿ ಅದರ ಎಲ್ಲ ಬುಟ್ಟತ್‌ಗಡ. ಬುಟ್ಟದ್ ಕಾಡ್ ಪ್ರಾಣಿಗಳ ತಿನ್ನೊಕುಂತ ಹೇಳಿ ಹಟ ಮಾಡ್ತ್ ಗಡ. ಹಟ ಮಾಡಿ ಮರಕೆ ಹತ್ತಿ ಈ ಮುಚ್ಚ ಬಾಂವ ಕಾಡ್‌ಲಿ ಹೋಗಿ ಕುದ್ರುದುಗಡ. ಮುಚ್ಚಂಗ ಹಾರಿಕಂಡ್ ಬಾಕನ ಅದರ ಹಿಡ್ದು ತಿಂಬೊದು. ಹಂಗೆ ತಿಂದ್‌ಕಂಡ್ ಇರಿಕೆ ಆಕನ ಗುಡ್ಡೆಲಿದ್ದ

ಮುಚ್ಚಂಗ ಎಲ್ಲ ಮುಗ್ದೊ. ಕಡೆಗೆ ಒಂದು ಮುಚ್ಚ ಹೇಳ್ತ್‌ಗಡ. 'ನಮ್ಮ ಹಿಂಗೆ ಅದ್ ತಿ
ಅಲ್ಲೆ. ಹಿಂಗೆ ನಮ್ಮ ಪ್ರಾಣಿಗಳ ಸಣ್ಣ ಮರಿಗಳ ಹಿಡ್ದ್ ತಿಂದದೆ ಅಲ್ಲ'. ಹಿಂಗೆ ಮಾಡಿಕೆ
ಇದರ ಏನಾರು ಒಂದು ಉಪಾಯಲ್ಲಿ ಕೆನ್ನೊಕು? ಅಂತ ಹೇಳಿ ಮುಚ್ಚ ಬೇಜಾ
ಕುದ್ದ್‌ಕಂಡಿತ್ತ್ ಗಡ. ಕುದ್ಕ ಬಾತ್ ಗಡ. ಕುದ್ಕ ಬಂದ್ 'ಏಕೆ ಮುಚ್ಚಣ್ಣ ನೀ ಬೇ
ಕುದ್ದದ್‌ಂತ?"ಅಯ್ಯೋ ಮಾರಾಯ ನಮ್ಮ ಸಂತಾನವೇ ಮುತ್ತಿತ್. ಇದೊಂದು ಹು
ದೆಸೆಂದಾಗಿ ಊರ್ಲಿದ್ದವುಕೆ ಯಾರಿಗೂ ಸಿಕ್ಕುದಿಲ್ಲೆ. ದೊಡ್ಡಾ ಗುಹೆನೊಳಗೆ ಹುಕ್ಕು ಕುದ್ದ್‌ಕ
ಉಟ್ಟಲ್ಲೆ. ಅದ್ ನಮ್ಮ ಮುಚ್ಚ ಸಂತಾನ, ಪ್ರಾಣಿ ಸಂತಾನ ಮುತ್ತಿಸಿದೆ. ಅದರ ಯಾವ ರೀ
ಯಾರೂ ಕೊಲ್ಲುದಿಲ್ಲಂತ ಹೇಳುವಂತದೆ ನಂಗೆ ಬೇಜಾರ'ಂತ ಹೇಳ್ತ್. ಅಯ್ಯೋ ಮಾರ
ಅದಕ್ಕೆ ನಾ ಒಂದು ಉಪಾಯ ಮಾಡ್ನೆ. ನನ್ನ ಬೀಲನೂ ನಿನ್ನ ಬೀಲನೂ ಅರ್ಕಟ್ ಹಾಕ
ನಾವು ಹುಲಿ ಇದ್ದ ಬಾಂಜಾರದ ಹಕ್ಕಲೆ ಪೋಯಿ. ಹೋಗಿದ್ ನೀ ಅದ್ಕೆ ಹೆದರ್ದು ಏನೂ ಬೆ
ನಾ ಹುಲಿ ಬಾಂಜಾರ್ನ ಹಕ್ಕಲೆ ಹುಲಿನೊಟ್ಟಿಗೆ ಕರ್ದ್ ಹೇಳ್ನೆ 'ನಾವು ಮುಚ್ಚನೂ ಕುದ್ಕನೂ ಇಬ್ಬ
ಬಂದೊಲ. ನಿನ್ನ ಮೊರಿಗಳಿಗೆ ತಿನಸ್. ನಿಂಗೆ ಎಷ್ಟು ಬೇಕರ್ ನಾಳೆಗೂ ಮುಟ್ಟ ಬಾದು.
ತಿನಸ್‌ನ ತಕನೊಕು. ನಮ್ಮ ಇಬ್ಬರ್ನ ತಿನ್ನ್‌ಂತ ನಾ ಹೇಳ್ನೆ'ಂತ ಹೇಳ್ತ್ ಗಡ ಕುದ್ಕ. 'ಹೌದಾ
ಹೌದು ! ಅದ್ಕೆ ನೀ ಏನ್ ಮಾಡಿಯಾ ? ನಾವು ಮತ್ತೆ ದೊಡ್ಡ ಹೊಂಡಕೆ ಹಾರಮ. ಆಗ ನ
ನೋಡಿ ಹುಲಿ ಕೂಡ ಹಾರ್ದೆ. ಹುಲಿ ಹಾರಿಕೆ ಆಕನ ನಾವು ಮೇಲೆ ಹತ್ತಮ. ಹುಲಿ ಅದರೊ
ಇದ್ದದೆ. ಮತ್ತೆ ಅದ್ಕೆ ಕಲ್ಲು ಹಾಕಿ ಕೊಲ್ಲಿಕೆ ಊರ್ನವರೊಟ್ಟಿಗೆ ಹೇಳೊಮ'ಂತ ಕುದ್ಕ ಹೇಳ್ತ್ ಗಡ.

ಕುದ್ಕ ಹೇಳ್ದಕೆ ಮುಚ್ಚ ಒಪ್ಪಿತ್. ಮುಚ್ಚ ಒಪ್ಪಿ ಇಂವನ ಕರ್ಕಂಡ್ ಹೋತ್. ಕರ್ಕಂ
ಹೋತ್. ಅಲ್ಲಿಗೆ ಹೋಕನ ಬೀಲಕೆ ಅರ್ಕಟ್ ಹಾಕಿತ್ ಗಡ. ಪೊರ್ಲು ಸುಂದಿ ಅರ್ಕಟ್ ಹ
ಹಿಡ್ಕನ್ತ್. ಕುದ್ಕ ಮುಂದೆ, ಮುಚ್ಚ ಹಿಂದೆಂದ ಹೋದೊ. ಹೋಗಿ ಗುಹೆನ ಕರೆಲಿ ಕರ್ತ್‌ಗ
'ಯಾರಿಯ ನಿಂತ ಕೇಳ್ತ್? ನಾ ಕುದ್ಕಣ್ಣ. ನೀ ಏಕೆ ಬಂದದ್? ನಾ ಮುಚ್ಚಣ್ಣ. ನಿ
ನೋಡೊಕುಂತ ಬಂದದ್. ನಿನ್ನ ಜೋಸ್ತಿ ಮಾಡೊಕುಂತ ನಾವ್ ಬಂದದ್. ಅಯ್ಯೋ
ಮಾರಾಯ ನೀ ಯಾಕೆ ಬಂದ ಮುಚ್ಚ. ಇಂವ ನಂಗೆ ಹದ್ನಾರ್ ಮುಚ್ಚಂಗಳ ಕೊಡಿಕೆ ಉ
ತಂದರೆ ನಾ ಎಂತ ಮಾಡ್ದು'ಂತ ಹೇಳ್ತ್‌ಗಡ. ಕುದ್ಕನೊಟ್ಟಿಗೆ ನೀ ಹದ್ನಾರ್ ಕೊಡಿಕೆ ಉ
ಮಾರಾಯ. ಒಮ್ಮೆ ಹದ್ನಾರ್ ಕೊಟ್ಟರೆ ಹದ್ನಾರ್ ದಿನಕ್ಕೆ ಬಾದುಂತ ಹೇಳ್ತ್‌ಗಡ. ಅಷ್ಟೊತ್ತಿಗೆ ಮು
ನನ್ನ ಕೊಲ್ಲಿಕೆ ತಂದದ್‌ಂತ ಹೇಳಿ ಹಾರಿಬಿದ್ದ್ ಕುದ್ಕನ ಎಲ್ಕಂಡ್ ಓಡ್ತ್‌ಗಡ. ಓಡಿಹೋಗಿ ಮು
ಕುದ್ಕನ ಏನೆಲ್ಲ ಮಾಡಿ ಕೊಂದತ್‌ಗಡ. ಹೌದಯಣ್ಣ! ನಾ ಅಷ್ಟ್ ಓಡಿ ಬಾಕನ ನೀ ಎಲೆ ಅ
ತಿಂದ್‌ಕಂಡ್ ಬಂದದಾಂತ ಹೇಳ್ತ್‌ಗಡ. ಹಂಗೆ ಇದ್ ನೋಡಿಕೆ ಆಕನ ಕುದ್ಕ ಸತ್ತೋತ್ ಗ
ಕುದ್ಕ ಸತ್ತು ಹೋದ ಮೇಲೆ ಮುಚ್ಚ ಅವನ ಸಂಸಾರದವರೊಟ್ಟಿಗೆ ಹೇಳ್ತ್‌ಗಡ. ಅಯ್ಯೋ
ಮಾರಾಯ ಕುದ್ಕನ ಪಂಚಾತಿಗೆ ಕೇಳಿ ನನ್ನ ಕೊಂದು ಬುಡ್ತಿತ್ತಲ್ಲ. ಅಂವ ಹುಲಿಬಾಯಿಗೆ ಸ

ತಿಂಬಕೆ ತಕಂಡೋದು. ಅಂವ ಹುಲಿಗೆ ಹದ್ನಾರ್ ಮುಚ್ಚಂಗಳ ಕೊಡಿಕೆ ಸಾಲ ಉಟ್ಟುಗಡ. ನನ್ನ ಒಬ್ಬನ ತಕಂಡೋಗಿ ಕೊಡ್ತಿತ್ತ್. ನಾ ಎಳ್ದ್ ಓಡಿ ಬಂದರಿಂದಾಗಿ ಕುದ್ಕ ಸತ್ತದ್. ಹಂಗೆ ಹೇಳಿಕೆ ಆಕನ ಅವನ ಮುಚ್ಚಂಗ ಎಲ್ಲ ಸೇರ್‍ದ್ದೊ ಗಡ. ಕೂಡಿ ಅವನ ಬಾರಿ ಶೃಂಗಾರ ಮಾಡ್ದೊಗಡ. ಅವನ ಮತ್ತೆ ಇದ್ದದರಲ್ಲಿ ದೊಡ್ಡ ಒಂದ್ ಯಜಮಾನ ಮುಚ್ಚಂತ ಮಾಡ್ದೊ. ಇದ್ದವರ ಎಲ್ಲ ಕಾಯಕೆ ಬುಟ್ದೊಗಡ. ಅಲ್ಲಿಗೆ ನಮ್ಮ ಕತೆ ಮುಗ್ತ್. [ಕಥಾ ನಿರೂಪಕಿ:ಲೀಲಾವತಿ ಪಡ್ಪು ಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 13. ಮೊಸಳೆ ಮತ್ತ್ ಹಾರಂವನ ಕತೆ

ಪುರಾತನ ಕಾಲಲಿ ಎಲ್ಲವು ಕಾಶಿಗೆ ಹೋದೊ. ಕಾಶಿಗೆ ಹೋಕನ ಒಬ್ಬ ಹಾರಂವನೂ ಪುಣ್ಯಕಟ್ಟಿಕೆ ಬೇಕಾಗಿ ನಾನೂ ಕಾಶಿಗೆ ಹೋನೆಂತ ಹೇಳ್ತ್. ಕೈಲಿ ಒಂದ್ ಚೊಂಬು ಹಿಡ್ಕನ್ತ್ ಹೋತ್ ಕಾಶಿಗೆ. ಹಿಂಗೆ ಕಾಶಿಗೆ ನಡ್ಕಂಡ್ ಹೋಕನ ದೂರಲಿ ಮಳೆ ಬಂದ್ ಅಲ್ಲಿ ಪಳ್ಳಗ ಆಗುಟು. ಆ ಪಳ್ಳಲಿ ತುಂಬ ನೀರುಟು. ಈ ಮೊಸಳೆ ಹೋದ್ದ್ ಆ ಪಳ್ಳಲಿ ಸೇರಿಕನ್ತ್. ಸೇರಿಕಂಡ್ ಕಪ್ಪೆಗಳ ತಿಂದ್‌ಕಂಡ್ ಅಲ್ಲಿ ಇತ್ತ್. ಮೂರು ನಾಕ್ ದಿನ ಕಳಿಯಕನ ಮಳೆ ಹೋತ್. ಪಳ್ಳಲಿ ನೀರಿ ಆರ್ತ್. ಹಳ್ಳದ ಮೊಸಳೆಗೆ ಪಳ್ಳ ಆದೆನ. ಇದ್ ಚೋಳ್‌ಲಿ ಬಿದ್ದ್ ಹೊರ್‍ಳಾಡ್ತ್. ಅಷ್ಟಾಕನ ಈ ಹಾರಂವ ಆ ಪಳ್ಳದ ಕರೆಲೆ ಹೋದೆ. ಆಗ ಮೊಸಳೆ ಕೇಳ್ತ್. 'ಅಣ್ಣ ನೀ ಎಲ್ಲಿಗೆ ಹೋದೂಂತ? ನಾ ಕಾಶಿಗೆ ಹೋದು. ಯಾಕಾಗಿ? ಪುಣ್ಯ ಪಡಿಯಕಾಗಿ. ಎಲ್ಲವೂ ಹೋದವೆ ? ನಾನ್ ಪುಣ್ಯ ಪಡಿಯಕಾಗಿ, ಮಾರಾಯ ನೀ ಕಾಶಿಗೆ ಹೋಗ್ಬೇಡ? ಪುಣ್ಯ ಪಡಿಯಕಾಗಿ ಇಲ್ಲಿ ಏನ್ ಪುಣ್ಯ ಉಟ್ಟು ? ಇಂದ ನನ್ನ ಜೀವ ಹೋದೆ ಈಗ. ನನ್ನ ನೀ ಹೊತ್ತ್‌ಕಂಡ್ ಹೋಗಿ ಹಳ್ಳಕೆ ಬುಟ್ರೆ ನೀ ಕಾಶಿಗ ಹೋದದರಿಂದಲೂ ನಿಂಗೆ ದೊಡ್ಡ ಪುಣ್ಯ ಉಟ್ಟು. ನಿಂಗೆ ನಿಂತಲ್ಲೇ ಕಾಶಿಗೆ ಹೋಕ್. ನೀ ಅಷ್ಟ್ ಕಷ್ಟಪಟ್ಟ್‌ಕಂಡ್ ಹೋಗ್ಬೇಡ'ಂತ ಮೊಸಳೆ ಹೇಳ್ತ್. ಆತ್‌ಂತ ಹಾರಂವ ಹೇಳ್ತ್. ಮೊಸಳೆನ ಹೆಗ್ಲ್ ಮೇಲೆ ಹೊತ್ತ್‌ಕನ್ತ್ ಹೋತ್.

ಅಷ್ಟಾಕನ ಹಳ್ಳ ಸಿಕ್ಕಿತ್. ಹಳ್ಳ ಸಿಕ್ಕಿ ಆಕನ ಹಳ್ಳದ ಕರೆಲಿ ಇಳ್ಸಿತ್. ಮೊಸಳೆಣ್ಣ ಇನ್ನ್ ನಾ ಹೋನೆಂತ ಹಾರಂವ ಹೇಳ್ತ್. ಅಯ್ಯೋ ಮಾರಾಯ. ಅಲ್ಲಿಂದ ಇಲ್ಲಿಗೆ ಹೊತ್ತ್‌ಕಂಡ್ ಬಂದ. ನನ್ನನ್ನ ಸ್ವಲ್ಪ ಅತ್ತ ತಕಂಡೋಗುಂತ ಹೇಳ್ತ್. ಎಲ್ಲಿಗೆ? ಮೊಣಕಾಲ್ ಉದ್ದ ನೀರಿಗೆ ತಕಂಡೋಗ್. ಆತ್ ಮೊಣಕಾಲ್ ಉದ್ದನೀರಿಗೆ ತಕಂಡ್ ಹೋನೆ. ಇಲ್ಲೆ ನನ್ನ ನೀ ಸೊಂಟದಷ್ಟ್ ನೀರಿಗೆ ತಕಂಡೋಗು. ಅಲ್ಲಿಗೆ ಸೊಂಟದಸ್ಟ್ ಎತ್ತರಕೆ ತಕಂಡೋತ್. ಇಲ್ಲೆ ಇನ್ನ್ ಒಂದ್ ಹನೀ ಮುಂದೆ ಹೋಗ್. ಎದೆಗೆ ನೀರ್ ಮುಟ್ಟಲಿ ನಂಗೆ ಗುಂಡಿಗೆ ಹೋಕೆ ಬೊತ್ತಾದೆ. ಆ ಗುಂಡಿಗೆ ಆ ಗುಂಡಿಗೆ ಹಿಂಗೆ ಹೋಕೆ ಆಕನ ಹಾರಂವನ ಮೊಸಳೆ ಮೊಗ್ಚಿದ್ ಹಿಡ್ತ್. 'ಓ ಮಾರಾಯ. ನಾ ನಿನ್ನ ಪಾಪ ಪುಣ್ಯನೋಡಿ ಅಲ್ಲಿಂದ ಇಲ್ಲಿಗೆ ಹೊತ್ತ್‌ಕಂಡ್

ಬಂದೆ. ನೀ ಮೊಗ್ಗಿ ನಂಗೆ ಕಚ್ಚಿಬುಟ್ಟ ಅಲ್ಲೆಂತ ? ಅದ್ ಈಗನ ಕಾಲಲಿ ಹಂಗೆ ನೋಡ್. ಪಾಪಪುಣ್ಯ ಎಂಬುದು ಹಂಗೆ. ಆದರೆ ನಾ ಒಬ್ಬ ಹಿಂಗೆ ಮಾಡ್ದೆಂತ ಹೇಳಿ ನಿಂಗೆ ಕಚ್ಚುದು ಮಾತ್ರ ಅಲ್ಲ. ಎಷ್ಟೊ ಜಂತುಗಳಿಗೆ ನೀ ಮೊಸ್ಸ ಮಾಡ್ದ್ ಉಟ್ಟು ನೋಡ್. ಆ ಮೊಸ್ಸ ಮಾಡ್ದರ ನೋಡಿ ನಾ ಕಲ್ತದ್. ಏನ್ ನೋಡ್? ನಿಂಗೆ ಅದರ ಪರಿಚಯ ಉಟ್ಟು. ಹೇಳಿ ತೊರ್ರೊಕ?ನೋಡ್ ಮಾಯಿನ ಮರಕೆ ಫಲ ಹೋದೆ. ಮಿಡಿಯಾದೆ. ಅದ್ ಇಷ್ಟ ತೋರ ಮಿಡಿಯಾಕನ ಮಕ್ಕಳ್, ದೊಡ್ಡವು, ಸಣ್ಣವು ಎಲ್ಲಾ ಕಲ್ಲ್ ಕೊದಂಟಿ ದೊಣ್ಣೆ ಎಲ್ಲ ಹಾಕಿ ಹಾಕಿ ಎಲ್ಲಾ ಕೊಯ್ದೊ. ಆ ಮಾಯಿನ ಕಾಯಿ ಮುಗ್ತ್. ಆ ಮೇಲೆ ಆ ಮರ ಯಾರಿಗೆ ಬೇಕ್ ? ಯಾರಿಗೂ ಬೇಡ ? ಹಾಂಗೆ ಆಕನ ಅದ್ಕೆ ಅವು ಗೊಬ್ಬರ ಹಾಕ್ವೆನ. ಅವು ಅದ್ಕೆ ನೀರ್ ಹೊಯಿದವೆನ. ಆ ಮರ ಯಾರಿಗೂ ಬೇಡ ಅಲ್ಲ?' ಹಂಗೆನೆ ನೋಡ್.

ಅದೂ ಅಲ್ಲದೆ ಇನ್ನ್ ಒಂದ್ ಉಟ್ಟ್ ನೋಡ್. 'ಒಂದ್ ಎಮ್ಮೆನ ತಕಂಡ್ ಬಂದೆ ನಾ. ಬೇಕಾಷ್ಟ್ ಹಾಲ್ ಕರ್ದೆ ಉಂಡೆ. ನಾವು ಅದ್ಕೆ ಹಿಂಡಿ, ಹುಲ್ಲು ಗಿಲ್ಲು ಎಲ್ಲ ಕೊಟ್ಟ್ ಬಾರೀ ಪೋಷಣೆ ಮಾಡ್ದೊ. ಅದ್ ಕರ್ ಬುಡ್ದು ಕೈದಾತ್. ಅದರ ಉರ್ಗಲಿಂದ ಹೊರಗೆ ಹೋಡ್ದ್ ಉರ್ಗಲ್ ಗೇಟ್ ಹಾಕಿ ಮಾಡ್ದ್ ಅತ್. ಅದ್ ಹೋತ್. ಅದ್ಕೆ ಎಂತ ಉಟ್ಟ್? ತೆಲಿ ಉಟ್ಟ. ಮಡ್ಡಿ ಉಟ್ಟ. ಏನುಟು? ಸಾಯಕೆ ಬಿದ್ದದೆ. ಪ್ರಾಣಿಗಳ ಅಂತ ಪರಿಸ್ಥಿತಿಗೆ ಎಲ್ಲ ಮೊಸ್ಸ ಮಾಡ್ವೆ ನಾ ಮಾಡ್ದ್ ದೊಡ್ಡದಾಂತ ಮೊಸಳೆ ಕೇಳ್ತ್?' ಏನು ಮಾಡ್ದು? ನಾ ಹೆಡ್ದ್ ಬಿದ್ದೆ ಅಲ್ಲ? ಅಂತ ಹೇಳಿ ಹೇಂಗಾರ್ ಮಾಡಿ ಮೊಸಳೆಂದ ತಪ್ಪಿಸಿ ಹಾರಂವ ಬಾತ್. [ಕಥಾ ನಿರೂಪಕಿ:ಲೀಲಾವತಿ ಪಡ್ಪುಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 14. ಕುದ್ಕಂದ ಮೋಸ ಹೋದ ಮೊಸ್ಸನ ಕತೆ

ಒಂದ್ ಊರ್ಲಿ ಒಂದ್ ಅಯ್ಯೆ ಅಪ್ಪಂಗೆ ಮೂರ್ ಗಂಡ್ ಮಕ್ಕೊ ಇದ್ದೊ. ಇವ್ ಗದ್ದೆ ಹೂಡಿ, ಸೋಂತೆ ಸಾಲ್ ತೆಗ್ದ್ ಸೋಂತೆ ಹಾಕಿದೊ. ಈ ಸೋಂತೆನ ತಿಂಬಕೆ ಕುದ್ಕಂಗ ಜೋರಾಗಿ ಬಂದವೆ. ಹಿಂಗೆ ಒಂದ್ ದಿನ ಆಲೋಚನೆ ಮಾಡ್ದೊ. ಏನ್ ಮಾಡ್ದು ಇದಕ್ಕೆ? ಅಷ್ಟಾಕನ ಒಬ್ಬಂಗೆ ಆಲೋಚನೆ ಆತ್. ದಿನಾ ಹೋಗಿ ಒಬ್ಬೊಬ್ಬ ಪಾರಕುದ್ದರೆ ಆದುಂತ. ಇಂದ್ ಬಂದರೆ ಏನ್ ಕತೆ? ಏನ್ ತಿಂಬೊದು? ಹಂಗೆ ಮಾಡಕೋಲ್ ಎಲ್ಲ ಕಟ್ಟಿದೊ. ಆ ದಿನ ಕತ್ತಲೆಗೆ ಸ್ವಲ್ಪ ಸೌದೆ ಎಲ್ಲ ಕೂಡಿ ಇಸಿದೊ. ಅಲ್ಲಿ ಮಾಡಕೋಲ್ ಅಡಿಲಿ ಆಗ ಕತ್ತಲೆಗೆ ಊಟ ಮಾಡಿ ಒಬ್ಬ ಹೋತ್.

ಒಂದ್ ಅಂಡಟ್ಟೆ ಎಲ್ಲ ತಯಾರಿಸಿದೊ. ಹಂಗೆ ಇಂವ ಸುಮಾರ್ ಹೊತ್ತ್ ಅಂಡಟ್ಟೆ ಎಲ್ಲ ಹೊಡ್ತ್. ಅಂಡಟ್ಟೆ ಹೊಡ್ದ್ ಸುಮಾರ್ ಹೊತ್ತಾಕನ ನಿದ್ದೆ ಬಾತ್. ಇಂವ ಮಲಗಿತ್. ಬೊಳ್ಪಿಗೆ ಎದ್ದ್ ನೋಡ್ರೆ ಯಾಗೋಳ್‌ನ ಹಂಗೆ ಇದ್ ತಿಂದ್‌ಕಂಡ್ ಹೋದು. ಮಾರನೆ ದಿನ ತಮ್ಮ

ಬಾತ್. ನೀ ಎಂತದ್? ನೀ ಹೋಗಿ ಸೋಂತೆಕಾಯಿ ಪೂರಾ ಇದ್ದದರ ಹೊತ್ತ್‌ಕಂಡ್ ಹೋಗೊಳೊ. ಬೆಳ್ದದ್ ಒಂದೂ ಇಲ್ಲೆ? ಅಣ್ಣಂಗೆ ಜೋರ್ ಮಾಡ್ತ್ ತಮ್ಮ. ಅಂದರೆ ನೀ ಹೋಗ್‌ಂತ ಅಣ್ಣ ಹೇಳ್ತ್.

ಮಾರನೆ ದಿನ ತಮ್ಮ ಹೋತ್. ಇಂವ ಹೋತ್ ಹಂಗೆ ಕುದ್ದತ್. ಸುಮಾರ ಹೊತ್ತ್ ಕುದ್ದ್‌ದ್ ಪಾರಕಾತ್. ಪಾರಕಾದಾಕನ ಚಳಿ ಹಿಡ್ತ್. ಹನೀಸ್ ಕಿಚ್ಚಿ ಹಾಕಮಂತ ಅತ್. ಕಿಚ್ಚಿ ಹಾಕಿತ್. ಸುಮಾರ್ ಹೊತ್ತ್ ಕುದ್ದತ್. ಕುದ್ದ್ ಕುದ್ದ್ ಇವಂಗೆ ಸಾಕಾತ್. ಇದ್ ಯಾಗ ಬಾದುಂತ ಹೇಳಿ ಪಾರಕಾತ್. ಅಷ್ಟಾಕನ ನಿದ್ದೆ ಬಾತ್. ಇಂವ ಮಲಗಿತ್. ಮಲಗಿ ಘೋರವಾದ ನಿದ್ದೆ ಆತ್. ಬೊಳ್ಪಿಗೆ ಎದ್ದ್ ನೋಡ್ರೆ ಕತೆ ಅವಂದೂ ಹಂಗೆ ಆತ್. ಬೊಳ್ಪಿಗೆ ಮತ್ತೊಬ್ಬ ತಮ್ಮ ಬಂದ್ ಅಣ್ಣಂಗೆ ಜೋರ್ ಮಾಡ್ತ್. ನೀನ್‌ನೂ ಹಿಂಗೆ ಮಾಡ್ದ ಮಾರಾಯ? ಇದ್ದ ಸೋಂತೇನ ಎಲ್ಲಾ ಅಣ್ಣ ತೀಂಸಿತ್. ಲಾಯಿಕ್ ಆತ್.

ಮಾರನೆ ದಿನ ಇನ್ನೊಬ್ಬ ತಮ್ಮ ಇನ್ನ್ ನಾನೆ ಹೊನೆ ನೋಡೊಂಬಂತ ಹೋತ್? ಇಂವ ಒಂದ್ ಬರಂಗೋಲ್ ತಕನ್ತ್. ಒಂದ್ ಕೊಳಲೂ ಮಾಡ್ತ್. ಕತ್ತಲೆಗೆ ಊಟಮಾಡಿ ಹೋತ್. ಹೋಗಿ ಮಾಡಕೋಲ್ ಅಡಿಲಿ ಅಗುಟೆಗೆ ಕಿಚ್ಚಿ ಹಾಕಿತ್. ಈ ಬರಂಗೋಲ್ ತೆಗ್ದ್ ಕೆಚ್ಚಿಗೆ ಇಸಿತ್. ಇಸಿದ್ ಇಂವ ಕೊಳಲ್ ಊದಿಕಂಡ್ ಕುದ್ದತ್. ಕುದ್ದ್ ಸುಮಾರ್ ಹೊತ್ತಾಕನ ಬಾತ್. ಬಂದ್ ಇಂವನ ಕೊಳಲ್ ಉರ್ಗುದರ ನೋಡಿ ಕುದ್ಕಣ್ಣಂಗೆ ಬಾರಿ ಖುಷಿಯಾತ್. ಕುದ್ಕಣ್ಣ ಹಕ್ಕಲೆ ಬಾತ್. ಬಂದ್ 'ಅಣ್ಣಣ್ಣ ನಿನ್ನ ಕೊಳಲೊಮ್ಮೆ ನಂಗೆ ಉರ್ಗೊಕಾಗಿತ್ತ್? ಕೊಟ್ಟಿಯ ನಂಗೆ? ನೀ ಕೂಡ್. ನಾ ಉರ್ಗುದರ ಹಂಞ ಲಾಯಿಕ್‌ಲಿ ಕೇಳ್. ತಿರ್ಗಿ ಜೋರ್ ಮಾಡ್ತ್. ಹಂಗೇ ಇಂವ ಉರ್ಗುದು. ಯಾರ್ ? ಕುದ್ಕ. ಇದ್ ಕೇಳ್ದು. ಇಂವಂಗೆ ಹಂಞ ತಿರ್ಗಿ ತಿರ್ಗಿ ಕುದ್ದ್‌ರ್ ಎಂತದ್ ಉರ್ಗಿದರನ್ನೇ ಉರ್ಗುದು ? ಕೇಳಿದರನ್ನೇ ಕೇಳ್ದು ? ಅಂತ ಕುದ್ಕನೊಟ್ಟಿಗೆ ಹೇಳ್ತ್. ಇಂವ ಮೆಲ್ಲ ಬರಂಗೋಲ್ ತೆಗ್ತ್. ಅದ್ ಅತ್ತ ತಿರ್ಗುದುನು ಇಂವ ಮೆಲ್ಲ ಪುಕ್ಕುಳಿ ಒಟ್ಟೆಗೆ ಚಿರ್ತ್. ಚಿರಿಯಕನ ಇದ್ ಹರಿ ಬಿದ್ದ್ ಓಡ್ರೆ ಉಟ್ಪಲೆ.

ಓಡಿಕೆ ಆಕನ ಅತ್ತಂದ ಒಂದ್ ಬೊಸ್‌ರಿನ ಕುದ್ಕ ಇಲ್ಕಂಡ್ ಬಂದದೆ. 'ಎಂತದಣ್ಣ? ಎಂತದಣ್ಣಂತ? ಎಂತದಣ್ಣ ಇದ್ ಎಂತದಣ್ಣ? ಎಂತದಣ್ಣ'ಂತ ಕೇಳಿಕೆ ಗೊತ್ತ್‌ಟ. ಇದಕ್ಕೆ ಈ ಉರಿನ ಹೊತ್ಕಂಡ್ ಓಡುದೇ ಒಂದ್ ಕೆಲಸ. ಈ ಬೊಸ್‌ರಿನ ಕುದ್ಕ ಅಲ್ಲಿಂದತ್ತ ಮೆಲ್ಲಂಗೆ ಓಡ್ತ್. ಮತ್ತೆಂತ ಅದಕ್ಕೆ ಓಡಿಕೆ ಆದೆನ? ಹೋಕನ ಒಂದ್ ಹಾಲ್ ಬಳ್ಳಿನ ಸಿಡಿ ಬಿಗಿದ್ ಹಾಕಿಕಂಡ್ ಹೋತ್. ಅದಕೆ ಒಂದ್ ಆನೆ ಬಂದ್ ಅಲ್ಲದವರ ಹಾಂಗೆ ಕಾಲ್ ಇಸಿ ಮಲಗಿತ್. ಮಾರನೆ ದಿನ ಕುದ್ಕ ಬಂದ್ ಎದ್ದ್ ನೋಡ್ಕನ ಆನೆ ಬಿದ್ದ್‌ಕೊಂಡುಟಲ್ಲ. ಇದ್ ಇದರ ಜಾತಿಯವ್ಕೆ ಎಲ್ಲಾ ಹೇಳ್ತ್. ನಾ ಒಂದ್ ದಾರ್ಲಿ ಸಿಡಿ ಹಾಕಿ ಇಸಿದ್ದೆ. ಒಂದ್ ಆನೆ ಬಂದ್ ಬಿದ್ದುಟುಂತ. ಹಂಗೆ ಒಂದ್ ಏಳೆಂಟ್ ಹತ್ತ್ ಕುದ್ಕಂಗ ಬಂದೊ. ಒಂದ್ ನಾಲ್ಕೈದ್ ಆಚೆ ಮೈಗೆ ಬೀತ್. ಅಣ್ಣಣ್ಣಣ್ಣಾ

ನೂಕ್ಬೆಡಿ! ನೂಕ್ಬೆಡಿ! ನೂಕ್ಬೆಡಿ! ನೂಕ್ಬೆಡಿಂತ ಹೇಳ್ಕನ ಈಚೆ ಮೈಲಿದ್ದವ್ ಪೂರ ಚಟ್ನಿ. ಅಷ್ಟಾಕನ ಮೆಲ್ಲ ಈಚೆ ಮೈಂದ ಮಗ್ದ್ ಆಚೆ ಮೈಗೆ ಬೀತ್. ಅಣ್ಣಣ್ಣಣ್ಣಾ ಎಂತ ನೀವ್ಗೆ ಕೇಳ್ದುಲೆನ ? ಅಂತ ಹೇಳ್ದೊ. ಅದರ್ಲಿ ಒಂದ್ ಕುದ್ಕ ಅತ್ತತ್ತ ರೆಟ್ಟೆ ಒಳ್ದೋತ್. ಇದ್ ಬುಟ್ಟತ್ ಓಡ್ತ್. ಓಡ್ಯಾಕನ ದೊಡ್ಡೋ ಒಂದ್ ಅಡ್ಕಲಿ ಒಂದು ಆನೆ ಬಿದ್ದ್ ಸತ್ತೆ ಹೋಗುಟ್. ಪುಕ್ಕುಳಿ ಅರಳಿ ದೊಡ್ಡ ಇದರಂಗೆ ಆಗುಟ್. ಹೊರಗೆ ತಿಂದರೆ ಆಕಿಲ್ಲೆಂತ ಹೇಳ್ತ್. ಪುಕ್ಕುಳಿ ದೊಡ್ಡದ್ ಕಂಡದೆ ಅಲ್ಲಂತ ಒಳಗೆ ಹುಕ್ಕತ್. ಒಳಗೆ ಕುದ್ದು ತಿಂದ್ ತಿಂದ್ ಆಕನ ಈ ಪುಕ್ಕುಳಿ ಒಟ್ಟೆ ಅಡ್ದ್ ಹೋಗಲಿ! ಈ ದನ ಮಕ್ಕ ದನ ಮೇಯ್ಸಿಕಂಡ್ ಹೋಕನ ಇದ್ ಕರೀದು. 'ಮಕ್ಕಳೇ ಮಕ್ಕಳೇ ಇಲ್ಲಿ ಬನ್ನಿ ಇಲ್ಲಿ ಬನ್ನಿ'ಂತ ಕರೀದು. ಇದ್ಕೆ ಒಟ್ಟರೆ ಬಾಗಲ್ ತೆಗ್ದ್ ಹೊರಗೆ ಬರೊಕ್. ಇದೆಂತಪ್ಪ ಕರೀದು ಹಿಂಗೆಂತ ಮಕ್ಕ ಹೋದೊ. 'ನೀವ್ ಮನೆಲಿ ಹೋಗಿ ಹೇಳೊಕ್, ಕತ್ತಿ–ಬೆಡಿ–ನಾಯಿ–ದೊಣೆ–ಎಣ್ಣೆ–ತುಪ್ಪ–ಬೆಣ್ಣೆ ಎಲ್ಲ ತಕಂಡ್ ಬರೊಕ್. ನಾಳೆ ಬೆಳಿಗ್ಗೆ ಆನೆ ದೇವರ್ ಹೊರ್ಟವೆ'. ಹಿಂಗೆ ಹೇಳೊಕ್‌ಂತ ಆತ್. ಆತಪ್ಪ ನಾವು ಹೇಳ್ವೆಂತ ಆತ್. ಹಂಗೆ ಈ ಮಕ್ಕ ಎಲ್ಲ ಹೋಗಿ ಹೇಳ್ದೊ. ಮನೆಗೆಲ್ಲ ಹಿಂಗಿಂಗೆ ನಾಳೆ ಆನೆ ದೇವರ್ ಹೊರ್ಟವೆ. ಕತ್ತಿ ಬೆಡಿ ಎಣ್ಣೆ ತುಪ್ಪ ಹೊತ್ತ್‌ಕಂಡ್ ಹೋಕ್‌ಂತ ಆತ್. ನಾಯಿಗಳ ಸಮೇತ ಕರ್ಕಂಡ್ ಹೋಕ್‌ಂತ ಎಲ್ಲ ತಕಂಡ್ ಹೋಗಿ ನಿಂತೊ. ಒಳಗೆಂದ ಇದ್ ಹೇಳ್ತ್, 'ಎಣ್ಣೆ ತುಪ್ಪ ಬೆಣ್ಣೆನೆಲ್ಲ ಆ ಆನೆ ದೇವರ ಪುಕುಳಿಗೆ ಹೊಯ್ಯಿನಿ'. ಹಂಗೆ ಎಲ್ಲ ಹೊಯ್ದೊ. 'ಮತ್ತೆ ಕತ್ತಿ ಬೆಡಿ ಏನಾರ್ ತಂದೊಳರಿಯೊ? ಅದರ ಎಲ್ಲ ದೂರ ಇಸಿನಿ'. ನಾಯಿ ಉಟ್ಟ? ಕೆಬಿನ ಕುಡಂಗೆ (ಈಗ ಅರ್ಗೀಲಿನ ಕುಡಂಗೆ) ನಾಯಿಗಳೆಲ್ಲ ಕಟ್ಟಿಕಣಿ'ಂತ. ಆತ್. ಇಂವ ಹಾಡ್ತನ ಸುರ್ ಮಾಡ್ತ್. 'ಆನೆ ದೇವ್ರ್ ಹೊರ್ಟವೆ'ಂತ ಮೂರ್ ಮೂರ್ ಸಲ ಹೇಳಿಕಂಡತ್. ಹೇಳಿ ಹೇಳಿ ಆಕನ ಪುಕ್ಕುಳಿ ಅರಳಿಕೊಂಡ್ ಬಾತ್. ಎಣ್ಣೆ ತುಪ್ಪ ಹೊಯ್ದದಲ್ಲ! ಆನೆ ದೇವರ ಪುಕ್ಕುಳಿ ಅರಳಿ ಕೊಂಡ್ ಬಾತ್. ಇದ್ ಹೊರ್ಡುವ ಅಂದಾಜಿಗೆ ಆಕನ ಹರಿ ಬಿದ್ದ್ ಓಡ್ತ್. ಓಡಿ ಆಕನ ಈ ನಾಯಿಗಳ ಕೊಡಂಗೆಗೆ ಕಟ್ಟಿದಲ್ಲ. ನಾಯಿಗ ಹೊನ್ನಿ ಹಾರಿ ಬಿದ್ದ್ ಓಡ್ರೆ ಇವರ ಕೆಬಿ ಎಲ್ಲ ಹರ್ದೇ ಹೋತ್. ಇವ್ ಕತ್ತಿ ಬೆಡಿನ ಹೆಗ್ಲಿಗೆ ಹಾಕಿದೊ ಕೆಬಿಗೆ ಕೈ ಹಿಡ್ಕಂಡೊ. ಮನೆಗೆ ಹೋದೊ. ಅವರ ಹೋಗಿ ನೀವ್ ನೋಡಿಕಂಡ್ ಬರಕಡ. [ಕಥಾ ನಿರೂಪಕ:ರಾಮಯ್ಯ ಗೌಡ, ಕಕ್ಕೆಬೆಟ್ಟು; ಸ್ಥಳ:ಮನೆ; ಸಮಯ:ಸಾಯಂಕಾಲ 6ಗಂಟೆ; ವರ್ಷ–1991]

## 15. 'ಜಾಣ ಕುಂಡತನ ಬಾಲ ಮುರ್ತ್' ಕತೆ

ಒಂದ್ ಕುಂಡತ ಬೇಲಿ ಕರೇಲಿ ಹೋಕನ ಒಬ್ಬ ಬೇಲಿ ಹಾಕಿಕಂಡುಟ್. ಅಷ್ಟಾಕನ ಕುಂಡತನ ಬೀಲಕೆ ಮುಳ್ಳ್ ಹೆಟ್ಟಿತ್. ಮುಳ್ಳು ಹೆಟ್ಟಿಕನ ಹೇಳ್ತ್. 'ಅಣ್ಣಣ್ಣಾ ನನ್ನ ಬೀಲಕೆ ಮುಳ್ಳ್ ಹೆಟ್ಟಿತಲ್ಲೆಂತ. ನೀವ್ ಒಮ್ಮೆ ತೆಗಿನಿ ಅಣ್ಣಾ'ಂತ. 'ಏ! ನಿನ್ನ ಬೀಲ ಮುರ್ದ್ ಹೋದರೆ ನನ್ನ ಕತ್ತಿ

ೇಳ್ವ'ಂತ ಹೇಳ್ತ್?  'ನಾ ಕೇಳಿಕಿಲ್ಲೆ ಅಣ್ಣಾ'ಂತ ಹೇಳ್ತ್. ಹೇಳಿ ತೆಗ್ತ್ ಮುಳ್ಳ್. ತೆಗಿಯಕನ ೀಲ ಮುರ್ದ್ ಹೋತ್. 'ಅಣ್ಣಾಣ್ಣ ನನ್ನ ಬೀಲ ಕೊಟ್ಟಿಯಾ? ನಿನ್ನ ಕತ್ತಿ ಕೊಟ್ಟಿಯಾ'ಂತ ೇಳ್ತ್? ಕತ್ತಿಕೊಟ್ಟತ್.

ಕತ್ತಿ ತಕಂಡ್ ಹೋತ್. ಹೋಕನ ಒಬ್ಬ ಕುಂಬಾರ ಮೊಣ್ಣ್ ಮಾಂದಿದೆ. 'ಏ ಅಣ್ಣಣ್ಣ ನೀ ೖಲಿ ಎಷ್ಟ್ ಮೊಣ್ಣ್ ಮಾಂದುದ್? ಇಂದ ನನ್ನ ಕತ್ತಿ'ಂತ ಹೇಳ್ತ್. 'ಕತ್ತಿ ಮುರ್ದ್ ಹೋದರೆ ನನ್ನ ಗಡ್ಗೆ ಕೇಳ್ವ'ಂತ ಹೇಳ್ತ್? 'ನಾ ಕೇಳಿಕೆ ಇಲ್ಲೆ'ಂತ ಹೇಳ್ತ್. ಹಾಂಗೆ ಮೊಣ್ಣ್ ಹೊಡ್ತ್. ಅಷ್ಟಾಕನ ಕತ್ತಿ ಮುರ್ದ್ ಹೋತ್. 'ಹ್ಣಾ... ನನ್ನ ಕತ್ತಿಕೊಟ್ಟಿಯಾ? ಇಲ್ಲೆ ನಿನ್ನ ಗಡಿಗೆ ಕೊಟ್ಟಿಯಾ?' ಗಡಿಗೆ ತಕಂಡ್ ಹೋತ್.

ಹೋಗಿ ಆಕನ ಒಬ್ಬ ಸೋಂತೆಗೆ ಕೈಲೇ ನೀರ್ ಹೊಯ್ಯುದು. 'ಅಣ್ಣಣ್ಣಾ ನೀ ಕೈಲೆ ಎಷ್ಟ್ ನೀರ್ ಹೊಯಿವೊ ? ಇಂದಣ್ಣ ನನ್ನ ಗಡ್ಗೆ'ಂತ ಹೇಳ್ತ್. 'ನಿನ್ನ ಗಡ್ಗೆ ಒಡ್ದರೆ ನೀ ಸೋಂತೆಕಾಯಿ ಕೇಳ್ವೊ? ನಾ ಕೇಳಿಕಿಲ್ಲೆ'ಂತ ಹೇಳ್ತ್ ಇಂವ. ನೀರ್ ಹೊಯ್ತ್. ಎರಡ್ ಸರ್ತಿಗೆ ಗಡಿಗೆ ಒಡ್ದ್ ಹೋತ್. 'ನನ್ನ ಗಡಿಗೆ ಕೊಟ್ಟಿಯಾ? ಇಲ್ಲೆ ಸೋಂತೆಕಾಯಿ ಕೊಟ್ಯಾ'ಂತ ಕೇಳ್ತ್? ಇಂವ ಸೋಂತೆಕಾಯಿ ಕೊಟ್ಟತ್. ಹೋತ್ತ್‌ಕಂಡ್ ಹೋಗಿ ಹೋಗಿ ಒಂದ್ ಅಡ್ಕಕೆ ಎತ್ತಿಕನ ಅಲ್ಲಿ ತುಂಬ ದನ ಮಕ್ಕ. ದನ ಮೇಸಿಕಂಡ್ ಒಳೊ. 'ಅಣ್ಣಾಣ್ಣ ನಂಗೆ ಕುಡಿಯಕ್ಕಾಗಿ ಬೊತ್ತ್‌ಲೆ'ಂತ ಹೇಳ್ತ್. 'ನಿಂಗೆ ಕುಡಿಯಕೆ ಆದರೆ ಈ ಗುಡ್ಡೆ ಮೊಗ್ದ್ ಆಚೆಗುಡ್ಡೆಗೆ ಹೋಕ್ಕ್'ಂತ ಹೇಳ್ಳೊ. ಇಂವ ಗುಡ್ಡೆಗೆ ಹೋತ್. ಸೊಂತೆಕಾಯಿನ ಇಸಿದ್. ಇಂವ ನೀರ್ ಎಲ್ಲ ಕುಡ್ದ್ ಬಾತ್. ಬಂದಾಕನ ಈ ಮಕ್ಕ ಸೊಂತೆಕಾಯಿನ ತಿಂದ್ ಇದರ ಬಿತ್ತ್ ಚೋಲಿನ ದನಂಗಳಿಗೆ ಕೊಟ್ಟೊಳೊ. 'ಏ ನನ್ನ ಸೋಂತೆಕಾಯಿ ಎಲ್ಲಿಟು ಅಣ್ಣ? ಉಮ್ಮ? ನಾವ್ಗೆ ಗೊತ್ತಿಲ್ಲೆ? ನಾವ್ಗೆ ಗೊತ್ತಿಲ್ಲೆ? ನೀವ್ ತಿಂದೊಳರಿ. ನಿಮ್ಮ ದನಂಗಳ ಎಲ್ಲ ಕರಿನಿ'ಂತ ಹೇಳ್ತ್. ದನಂಗ ಎಲ್ಲ ಬಂದ್ ನಿಲ್ಸಿದೊ. ಇಂವ ಬಾಯಿ ಬುಡ್ಸಿ ನೋಡ್ತ್. ನೋಡ್ಕನ ಒಂದ್ ಎತ್ತ್‌ನ ಬಾಯ್ಲಿ ಉಟ್ಟ್. 'ಆಗ ನಿನ್ನ ಎತ್ತ್ ಕೊಟ್ಟಿಯಾ ? ನನ್ನ ಸೋಂತೆಕಾಯಿ ಕೊಟ್ಟಿಯಾ?' ಎತ್ತ್‌ನ ಕೊಟ್ಟೊ. ಮತ್ತೆ ಹೋಡ್ಕಂಡ್ ಹೋತ್.

ಹೋಕನ ಒಬ್ಬ ಗಾಣಿಗ ಒಂದ್ ಎತ್ತ್‌ನ ಕಟ್ಟಿ ಗಾಣಮಾಡ್ದೆ. 'ಅಣ್ಣಣ್ಣಾ ಗಾಣದ ಎತ್ತ್‌ನೊಟ್ಟಿಗೆ ನನ್ನದೊಂದ್ ಎತ್ತ್ ಗಾಣಮಾಡಿಕೆ'ಂತ. 'ನಿನ್ನ ಎತ್ತ್ ಸತ್ತೋದರೆ ನನ್ನ ಗಾಣದ ಎತ್ತ್‌ನ ಕೇಳ್ವಾ'ಂತ ಹೇಳ್ತ್? 'ನಾ ಕೇಳಿಕಿಲ್ಲೆ'ಂತ ಹೇಳ್ತ್. ಕುಂಡತನ ಎತ್ತ್ ಎರಡ್ ಸುತ್ತ್ ಬಾಕನ ಎತ್ತ್ ಸತ್ತೋತ್. 'ಗಾಣದೆತ್ತ್‌ನ ಕೊಟ್ಟಿಯಾ ? ನನ್ನ ಎತ್ತ್‌ನ ಕೊಟ್ಟಿಯಾ'ಂತ ಕೇಳ್ತ್? ಇಂವ ಗಾಣದೆತ್ತ್‌ನ ಕೊಟ್ಟತ್. ಅತ್ತ ಹೋಕನ ಒಬ್ಬ ಡೋಲು ಗಗ್ಗರ ಬೊಟ್ಟಿಕಂಡುಟು. ಹಾಡ್ತನ ಹೇಳಿಕಂಡ್‌ಟು ಒಬ್ಬ ದಿಕ್ಕ. 'ಅಣ್ಣಾಣ್ಣ ನೀ ಒಬ್ಬನೇ ಹಾಡ್ತನ ಹೇಳಿಕಣೊಕ್, ಡೋಲ್ ಬೊಟ್ಟಿಕನಕ್, ಗಗ್ಗರ ಆಡಿಸಿಕಣೊಕ್. ಇಂದ ನನ್ನ ಗಾಣದೆತ್ತ್‌ನ ತಕ'ಂತ ಹೇಳ್ತ್. 'ನಿನ್ನ

ಗಾಣದೆತ್ತ್ ಸತ್ತರೆ ಡೋಲ್ ಗಗ್ಗರ ಕೇಳ್ವ'ಂತ ಹೇಳ್ತ್. 'ನಾ ಕೇಳಿಕೆ ಇಲ್ಲೆ'ಂತ ಹೇಳ್ತ್. ಇಂವ ಡೋಲ್ ಗಗ್ಗರ ಎಲ್ಲ ಕೊಟ್ಟತ್. ಕುಂಡತ್ ತಕನ್ತ್ ಬಾತ್. ಬೇಲಿಕರೆಲಿ ನಿಂತ್‌ಕಂಡ್ – 'ನಾ ಕತ್ತಿಲಿ ಗೆದ್ದೆ ಥೈ ಥಕ್ಕ ಥೈ'ಂತ ಹೇಳಿ ಕುಣೀದು. 'ನಾ ಎತ್ತ್‌ಲಿ ಗೆದ್ದೆ ಥೈ ಥಕ ಥೈ', 'ಗಾಣದೆತ್ತಿಲಿ ಗೆದ್ದೆ ಥೈ ಥಕ ಥೈ', 'ಡೋಲ್ ಗಗ್ಗರಲಿ ಗೆದ್ದೆ ಥೈ ಥಕ ಥೈಂ'ತ ಹೇಳಿ ಕೊಣ್ತ್. ಆತ್. [ಕಥಾ ನಿರೂಪಕಿ:ಬೊಮ್ಮಕ್ಕ, ಸ್ಥಳ:ಮನೆ, ಸಮಯ:ಬೆಳಿಗ್ಗೆ, ವರ್ಷ–1991]

## 16. ಹುಲಿ ಎಲಿಗೆ ಹೆದರ್ದು ಕತೆ

ಒಂದ್ ಊರ್ಲಿ ಒಂದ್ ನಾಲ್ಕ್ ದನ ಮಕ್ಕ ಇದ್ದೊ. ಈ ದನ ಮಕ್ಕ ದನ ಮೇಸಿಕೊಂಡ್ ಇರಿಕನ ಒಂದ್ ಎಲಿ ಓಡ್ತ್‌ಂತ ಹೇಳಿ ಎಲಿನ ಒಂದ್ ಹುಲಿ ಓಡ್ಸಿಕಂಡ್ ಹೋತ್. ಬೆರ್ಸಿಕಂಡ್ ಹೋಗಿ ಎಲಿ ಓಡಿ ಹೋಗಿ ಮಾಟೆಗೆ ಹುಕ್ಕತ್. ಮಾಟೆಗೆ ಹುಕ್ಕ್‌ದಾಕನ ಈ ಹುಲಿ ಸುತ್ತ್ ಮುತ್ತ್ ಬಾದು. ಏನ್ ಮಾಡಿಕೆ ಕಾಂಬೊದ್ಲೆ? ಅದಕ್ಕೆ ಹುಗ್ಗಿಕೆ ಆದೆನ? ಪರ್ಡಿತ್ ಹಿಡ್ತ್ ಏನ್ ಮಾಡ್ರೊ ಆತ್ಲೆ? ನಿನ್ನ ಅಜ್ಜಿಗೆ ದೂಂಗಿತ್‌ಂತ ಹೇಳ್ತ್ ಹುಲಿ ಮೆಲ್ಲ ಬೀಲನ ಹುಗ್ಸಿತ್. ಮಾಟೆಯೊಳಗೆ ಬೀಲನ ಹೆಟ್ಟಿಕನ ಎಲಿ ಏನ್ ಮಾಡ್ತ್ ಗೊತ್ತುಟ ಮಾಟೆಲಿ ಬೇರ್ ಸಿಕ್ಕಿತ್. ಬೇರ್‌ಗೆ ಇದರ ಬೀಲನ ಸಿಕ್ಸಿತ್. ಹಿಡ್ದ್ ಕಟ್ಟಿ ಹಾಕಿತ್. ಕಟ್ಟಿ ಹಾಕಿದ್ ಇದ್ ಬಾಲ ಹೆಟ್ಟಿಕೆ ಹೆಟ್ಟಿಟು ತೆಗಿಯಕೆ ಆದ್ಲೆ? ಎದ್ದ್‌ದ್ ಕುದ್ರುದು.

ಈ ಶನಿ ಹಿಡ್ದ ಮಕ್ಕೊ ದನ ಮೇಸಿಕೆಂತ ಅಲ್ಲಿ ಹೋದೊ. ಈ ದನ ಮಕ್ಕಳ ಹುಲಿ ಕರೀದು. ಈ ಹುಲಿ ಕರ್ದರೆ ಮಕ್ಕ ಹೋಕೆ ರಡೀ ಒಳೊನ? ಅಕೇರಿಗೆ ಇದ್ ದಮ್ಮಯ ದಕ್ಕಯ ಹಾಕಿತ್. ಆಣೆ ಭಾಷೆ ಕೊಟ್ಟ್‌ದ್ ಇಪ್ಪತ್ತ್ಯೆದ್ ದೇವರ ಹೆಸರ್ ಹೇಳ್ಸಿತ್. ಹೆಂಗೆಲ್ಲಾ ಮಾಡಿ ಒಬ್ಬ ಹೈದಂಗೆ ಸುಟ್ಟೋಗಲಿ ನೋಡಂತ ಮನಸ್ಸಾತ್. ಪೊಯಿ ನೋಡೊಮ. ಇವ್ ಹೋದೊ. ಹೋಗಿ ಸಂಗತಿ ಎಂತದ್. ಹಿಂಗೆಂತ ಹೇಳ್ತ್. 'ಯಾರ್? ಹುಲಿ. ಇದ್ದೆನ? ಇಸ್ಟೆನ? ಇದರ ಹೆಂಗಾರ್ ಬುಡೊಕಲ್ಲ? ಅದರಲ್ಲಿನೂ ಕೇಳಿಕಂಡೊ ಮಕ್ಕ. ನಿನ್ನ ಇಂದ್ ಬುಟ್ರೆ ನಾಳೆ ನಾವ್ಗೆ ಏನಾರ್ ಉಪದ್ರ ಮಾಡ್ವನಾಂತ? ಅದೇನ್ ಮಾಡಿಕಿಲ್ಲೆ'. ಮಕ್ಕ ಮಾಟೆನ ಎಳ್ಳಿದೊ. ಎಳ್ಳಿ ನೋಡಿಕನ ಮಾಟೆಯೊಳಗೆ ಬೀಲನ ಕಟ್ಟಿಸಿ ಉಟ್ಟು. ಕಟ್ಟಿ ಇಸಿದರ ಬಿಚ್ಚಿ ಬುಟ್ಟ್ ಆಕನ ಹುಲಿ ಹೇಳ್ತ್. 'ನೀವ್ ಮನೆಲಿ ಮನಿಹೋಗಿ ಹೇಳ್ಬೇಡಿ. ಹಿಂಗಿಂಗೆ ಸಂಗತಿ ನಡ್ದುಟ್ಟ್‌ಂತ ಹೇಳ್ಬೇಡಿ'. ಆತ್ ಆತ್ ನಾವ್ ಹೇಳಿಕಿಲ್ಲೆ. ಒಬ್ಬಂದೊಬ್ಬ ಮಕ್ಕೊ ಹೇಳಿದೊ. ಅದು ತೊಪ್ಪಿ ಹೋತ್.

ಆ ದನ ಮಕ್ಕಳ ಮನೆಲಿ ಅಪ್ಪದಿಟ್ಟ್ ಮಾಡ್ಯೊಳೊ. ಈ ಅಪ್ಪದಿಟ್ಟ್‌ನ ಮಕ್ಕ ಬೇಕಾದಷ್ಟ್ ತಿಂದೊ. ತಿಂದ್ ತಿಂದ್ ಕೆಲವು ಜನ ಬಿದ್ದ್ ಮಲ್ಗಿದೊ. ಒಬ್ಬಂಗೆ ಎಚ್ಚರಾತ್. ಅಂವ ಶರ್ಟ್ ಹಾಕಿತ್. ಶರ್ಟ್‌ನ ಜೇಬಿಗೆ ಒಂದೆರಡರ ಚುರ್ಕೊನ್ತ್. ಹಿಂಗೆ ಬೆಂಚಿ ಇತ್ತ್. ಬೆಂಚಿಲಿ ಮಲಗಿ

ನಿಲ್ಗಿತ್. ಅಷ್ಟಾಕನ ಇವಂಗೆ ಮಲ್ಗಿದಲ್ಲಿಂದ ಎಚ್ಚರಿಕೆ ಆತ್. ಇವು ಯಾರ್ ಮಲ್ಗಿತ್ಲೆ. ಮಕ್ಕಳಿಗೆ ಆಗ ನಿದ್ದೆ ಬಾತಲ್ಲ. ಇಂದ್ ಒಂದ್ ಸಂಗತಿ ಆದದ್ದ್ ಗೊತ್ತುಟಾಂತ ಜೋರ್ ಕರ್ದ್ ಹೇಳ್ತ್. ಎಂತ? ಎಂತ? ಎಂತದ್? ಮನೆಯವ್ ಕೇಳಿಕೆ ಸುರ್ ಮಾಡ್ದೊ. ಎಂತರಂತೇಳ್ದು?"ಎಲಿ ಹೋತ್‌ಂತ ಹೇಳಿ ಹುಲಿ ಹೋಗಿ ಮಾಟೆಗೆ ಬೀಲ ಹೆಟ್ಟಿದ್ ಕುದ್ದ್‌ಕನ್ತ್. ಅಗ ಎಲಿ ಹುಲಿನ ಬೀಲನ ಕಟ್ಟಿ ಇಸಿತ್. ಹುಲಿಗೆ ಎದ್ರಿಕೆ ಬೊತ್ತ್. ಓಡಿಕೆ ಬೊತ್ತ್. ಇಷ್ಟೇನೊ. ಇವು ಸುಮ್ಮನೆ ಆಕಂಡೊ. ಈ ಹುಲಿ ಕತ್ತಲೆ ಆಕನ ಬಂದುಟ್. ಬಂದ್ ಬಾಳೆ ತೋಟಲಿ ಈ ಮಕ್ಕ ಹೇಳ್ವೆಂತ ಗೊತ್ತಾಗುಟು. ಹೇಳಿ ಬುಟ್ಟರೆ ಹೋತಲ್ಲ ಇದ್. ಬಂದ್ ಕುದ್ದುಟು.

ಸುಮಾರ್ ಹೊತ್ತಾಕನ ಇದಕ್ಕೆ ಹೇಳ್ದ್ ಕೇಳ್ತಲ್ಲ. ಇಂವ(ಹುಲಿ) ಮಧ್ಯರಾತ್ರೆಗೆ ಬಾತ್. ಬಂದ್ ಹೈದ ನಿಲ್ಗಿದ ಬೆಂಚಡಿಗೆ ಹುಕ್ಕತ್. ಹುಕ್ಕತ್ ಬೆನ್ನ ಮೇಲೆ ಹಾಕಿತ್ ಒಂದೇ ಬರ. ಬೆಂಚಿ ಮೇಲೆ ಇಂವ ಉಟ್ಟು. ಯಾರ್? ಈ ಹೈದ. ಆ ದಿನ ತಿಂಗಳ್ ಉಟ್ಟು. ಸ್ವಲ್ಪ ಸುಮಾರ್ ಇಲ್ಲಿಂದ ತೊಡಿಕಾನ ಅಷ್ಟ್ ದೂರ ಎತ್ತಿಕನ ಇವಂಗೆ ಎಚ್ಚರಿಕೆ ಆತ್. ಮೂರ್ ನಾಲ್ಕ್ ಮೈಲ್‌ನಷ್ಟ್ ಅಂದಾಜಿಗೆ. ನೋಡ್ಕನ ಹೋದ್ ಕಂಡದೆ. ನಾವ್ ಕಾರ್‍ಲಿ ಹೋಕನ ಬಸ್ಸ್‌ಲಿ ಹೋಕನ ಹೋಂವ ರೀತಿಲಿ ಹೋದ್ ಕಂಡದೆ. ಇಂವನ ಅಂದಾಜಿಗೆ ಆಕನ ಮರ ಸಿಕ್ಕಿತ್.ಒಂದ್ ಗೆಲ್ಲ್‌ಲಿ ಕೋಸಿಕನ್ತ್. ಇಂವನ ಕೈಗೆ ಅಂದಾಜಿಗೆ ಸಿಕ್ಕಿತ್. ಸಿಕ್ಕಿಕನ ಮೆಲ್ಲ ಮರಕೆ ಹತ್ತಿತ್. ಮರಕೆ ಹತ್ತಿ ಮರದ ಕೊಡಿಲಿ ಕುದ್ದತ್. ಹುಲಿ ಹೋಗ್ತಾ ಉಟ್ಟು. ಇದಕ್ಕೆ ಸಂಗತಿಯೇ ಗೊತ್ತಿಲ್ಲೆ. ಇಂವ ಉಟ್ಟುಂತೇ ಗೊತ್ತ್. ಇದ್ ಹೋಂವ ಬರ ಅಲ್ಲಾ! ಇದ್ಕೆ ಹೋಂವ ತುರ್ತಲ್ಲ! ಸೀದ ಹೋತ್. ಸಾಧಾರಣ ಚೆಂಬೂರ್ಗೆ ಎತ್ತಿಕಾಕನ ಇನ್ನ್ ಇಸಿನೆ ಇಲ್ಲಿಂತ ಇಸಿತ್. ಎಂತ ಉಟ್ಟು ಇದರ್‍ಲಿ? ಏನೂ ಇಲ್ಲೆ? ಬೆಂಚಿ ಖಾಲಿ!

ಹುಲಿ ತಿರ್‍ಗಿ ಓಡಿ ಬಾತ್. ಓಡಿ ಬಾಕನ ಇಂವ ಮರದ ಕೊಡೀಲಿ ಕಂಡದೆ. ತಿಂಗೊಳ್ ಬೊಳ್ಪಲ್ಲ. ಕಂಡದೆ ಅಲ್ಲಿಂದ. ಪಸ್ಟಿಗೆ ಇದಕ್ಕೆ ದೃಷ್ಟಿ ಹಾಕಿತ್. ಇವನ ಜೋಬ್ ದಪ್ಪ ಕಂಡದೆ. 'ಅಣ್ಣ ಅಣ್ಣ ಆ ಜೋಬ್‌ಲಿ ಎಂತದ್‌ಂತ ಕೇಳ್ತ್? ಅಷ್ಟೊತ್ತಿಗೆ ಇಂವಂಗೂ ನೆಂಪಾತ್. ಅದ್ ಎಂತದ್? ಅದ್ ಎಲಿ ಮರಿ. ಅಯ್ಯೋ ದಮ್ಮಯಣ್ಣ ಎಲ್ಲಾರ್ ಬುಡ್‌ಬಡಾಂತ. ದಮ್ಮಯಣ್ಣ ಎಲ್ಲಾರ್ ಎಲಿಮರಿನ ಬುಡ್‌ಬೇಡಾಂತ. ಎಲಿನ ನಾ ಈಗ ಬುಡ್ದು ಬುಡ್ದೇಂತ ಇವಂದ್ ಜೋರಾತ್. ನಾ ಈಗ ಬುಟ್ಟನೆ'ಂತ ಹೇಳ್ತ್. ಇವಂಗೆ ಹೆದ್ರಿಕೆ ಉಟ್ಟಲ್ಲೆ. ಹಂಗೆ ಹುಲಿ ಓಡ್ದ ಬಲಲಿ ಓಡ್ದೇ ಓಡ್ದ್. ಇಂವನ ಅಪ್ಪದ ಹಿಟ್ಟ್ ಇಂವನ ಜೋಬ್ಲಿ ಇದ್ದದರಂದ ಇಂವ ಬದ್ಕಿತ್. ಇಲ್ಲರೆ ಇಂವನ ಹುಲಿ ತೀನ್ತಿತ್ತ್. ಸಂಗತಿ ಇಷ್ಟೆ. [ಕಥಾ ನಿರೂಪಕ:ಲಿಂಗಪ್ಪ ಗೌಡ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 17. ಸಹಾಯ ಮಾಡ್ದ ಹಾವ್‌ನ ಕತೆ

ಒಂದು ಊರ್ಲಿ ಗಂಡ ಹೆಣ್ಣ್ ಇಬ್ಬರ್. ಅವ್ ಸುಖ ಜೀವನ ಮಾಡ್‌ತಾ ಇದ್ದೊ. ಹೆಣ್ಣ್ ಬೊಸ್ರಿ ಆತ್. ಹೆಣ್ಣಿಗೆ ಮಾಯಿನ ಹಣ್ಣ್ ತಿಂಬಕೆ ಆಸೆ ಆತ್. ಆ ಊರ್‌ಲಿ ಎಲ್ಲೂ ಮಾಯಿನ ಮರ ಇತ್ಲೆ. ಹೆಣ್ಣ್‌ಗೆ ಆಸೆ ಹಿಡ್ದ್ ಮೈ ನೀರ್ ಹಿಡ್ತ್. ಗಂಡ ಮಾಯಿನ ಹಣ್ಣ್ ಹುಡ್ಕಂಡ್ ಹೋತ್. ಹೋಗಿ ಹೋಗಿ ಒಂದ್ ಮರ ಸಿಕ್ಕಿತ್. ಆ ಮರಲಿ ಒಂದ್ ಹಣ್ಣ್ ಕಾಂಬತಿತ್ತ್. 'ಮಾಯಿನ ಮರ ಮಾಯಿನ ಮರ ನಂಗೊಂದ್ ಹಣ್ಣ್ ಕೊಡುಂತಾ' ಬೇಡಿತ್. ಆದರೂ ಮಾಯಿನ ಹಣ್ಣ್ ಬೀತ್ಲೆ. ಆ ಮಾಯಿನ ಮರಲಿ ಒಂದ್ ನಾಗರ ಹಾವ್ ಇತ್ತ್. ಅದರ ಒಟ್ಟಿಗೆ ಕೇಳ್ತ್. ಆಗ ಆ ಹಾವ್ ಯಾಕೆ ನಿಂಗೆ ಹಣ್ಣ್‌ಂತಾ ಕೇಳ್ತ್. ನಂಗೆ ನನ್ನ ಹೆಣ್ಣ್ ಬೊಸ್ರಿ ಆಗಿ ಮೈ ನೀರ್ ಹಿಡ್ತ್. ಅದಕ್ಕೆ ಒಂದ್ ಮಾಯಿನ ಹಣ್ಣ್ ಕೊಡುಂತಾ ಕೇಳ್ತ್. ಆಗ ನಾಗರ ಹಾವು ಹೇಳ್ತ್. ನಿನ್ನ ಹೆಣ್ಣ್, ಹೆಣ್ಣ್ ಹೆತ್ತರೆ ಆ ಕೂಸುನ ನಂಗೆ ಕೊಡುವನಾಂತಾ? ಇದಕ್ಕೆ ಅಂವ ಒಪ್ಪಿತ್. ಹಾವ್ ಒಂದ್ ಹಣ್ಣ್‌ನ ಹಾಕಿತ್.

ಹಣ್ಣ್‌ನ ತಕಂಡ್ ಬಂದ್ ಹೆಣ್ಣ್‌ಗೆ ಕೊಟ್ಟತ್. ಆ ಹೆಣ್ಣ್ ತೀಂತ್. ಆಗ ಮೈಯ ನೀರ್ ಎಲ್ಲಾ ಇಳ್ದ್ ಹೋತ್. ಗಂಡ ಆದ ಸಂಗತಿ ಹೇಳ್ತ್. ನಿನ್ನ ಕೂಸ್ ಹೆಣ್ಣಾದರೆ ಅದರ ಆ ಹಾವ್ಗೆ ಕೊಡಕಡಾಂತಾ. ಅದಕ್ಕೆ ಹೆಣ್ಣ್ ಹೆದರಿ ಗಂಡೇ ಆದರೆ ಸಾಕ್‌ಂತ ಆಲೋಚನೆ ಮಾಡ್ತಾ ಇತ್ತ್. ಒಂದ್ ದಿನ ಹೆಣ್ಣ್ ಹೆತ್ತತ್. ಅದ್ ಹೆಣ್ಣ್ ಕೂಸು. ಇದರ ಹಾವ್ಗೆ ಹೇಳುದೇ ಬೇಡಂತ ಕೂಸುನ ಅಣಂಗಿಸಿ ಇಸಿತ್. ಆ ಕೂಸು ದೊಡ್ಡದಾಗಿ ಬೆಳಿತಾ ಇತ್ತ್. ಒಂದ್ ದಿನ ಹಾವ್ಗೆ ಗೊತ್ತಾತ್. ಒಂದ್ ದಿನ ಮನೆ ಹಕ್ಕಲೆ ಬಾತ್. ಬಂದ್ ಒಳಗೆ ಹುಗ್ಗುಕನ ಆ ದೊಡ್ಡ ಗೂಡೆ ಹೊರಗಡೆ ಓಡ್ತ್. ಆ ಹಾವ್ ಗೂಡೆನ ಓಡ್‌ಸ್ತಾ ಇತ್ತ್. ಗೂಡೆಗೆ ಓಡಿ ಓಡಿ ಬಚ್ಚಿತ್. ಗೂಡೆನ ಕಾಲ್ಗೆಜ್ಜೆ ಬಿಚ್ಚಿ ರೆಟ್ಟೆ ಅಲ್ಲೆ ಗುಡ್ಡೆಲಿ ಕುದ್ದ ಮೊಲದ ಗಂಟಲಿಗೆ ಸಿಕ್ಕಿತ್. ಮೊಲ ಓಡಿಕೆ ಸುರು ಮಾಡ್ತ್. ಆ ಹಾವ್ ಮೊಲದ ಹಿಂದೆನೇ ಓಡ್ತ್. ಗೂಡೆ ಹಾವ್‌ಂದ ತೊಪ್ಸಿಕನ್ತ್. ಮೊಲ ಓಡ್ದರ ನೋಡಿ ಆಕಾಶಲಿ ಸೂರ್ಯ ಚಂದ್ರರು ನಗಡಿಕೆ ಸುರು ಮಾಡ್ದೊ. ಮೊಲಕೆ ಓಡಿ ಓಡಿ ಬೊಚ್ಚಿತ್. ಸೂರ್ಯ ಚಂದ್ರಂಗೆ ಕನಿಕರ ಬಂದ್ ಒಂದು ನೂಲುನ ಕೆಳಗೆ ಬುಟ್ಟೊ. ಆ ನೂಲುನ ಹಿಡ್ದ್ ಮೊಲ ಹತ್ತಿಕಂಡೆ ಸೂರ್ಯ ಚಂದ್ರರ ಹಕ್ಕಲೆ ಬಾತ್. ಹಾವ್ ಆ ನೂಲುನ ಮಡಚಿಕೊಂಡೆ ಸೂರ್ಯ ಚಂದ್ರರ ಹಕ್ಕಲೆ ಬಾತ್. ಹಿಂಗೆ ಸೂರ್ಯ ಚಂದ್ರರ ಹಕ್ಕಲೆ ಹಾವ್‌ನೂ ಮೊಲನೂ ಸುಖವಾಗಿ ಇದ್ದೊ. [ಕಥಾ ನಿರೂಪಕಿ:ಸುಬ್ಬಮ್ಮ ಪಾನತ್ತಿಲ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 18. ಕ್ರೂರ ಹಂದಿ ಕತೆ

ಒಂದ್ ಊರ್ಲಿ ಒಂದ್ ಅಜ್ಜಿ ಇತ್ತ್. ಅಜ್ಜಿಗೆ ಮೂರ್ ಮಕ್ಕ ಇದ್ದೊ. ಮಕ್ಕಳಿಗೆ ಯಾಗೊಳ್ ಬೇಟೆ ಕೆಲ್ಸ. ಬೇಟೆ ಕೆಲ್ಸಂತ ಹೇಳಿಕನ ಕತ್ತಲೆಗೆ ಯಾಗೆಲ್ ಗೈಪಿಗೆ ಎಂತಂತ ಒಬ್ಬಂದ ಒಬ್ಬ

ಳಿಕಂಬೊದ್. ಆಗ ಅಯ್ಯೆ ಹೇಳ್ದು ನೀ ತಂದ ಕಡ್ಡೆ. ಮತ್ತೊಬ್ಬ ಹೇಳಿಕೆ ಆತ್ ನೀ ತಂದ
ಂಪ. ಮತ್ತೊಬ್ಬ ಹೇಳಿಕೆ ಆತ್ ನೀ ತಂದ ಸಾರಂಜ. ಹಿಂಗೇ ಚರ್ಚೆ ಮಾಡ್ತಾ ಇದ್ದೊ. ಈ
ವ್ವ ಯಾಗೊಲ್ ಹೇಳ್ದೆ. ಇದರ ಹುಳಿ ರಗಳೆಂತ ಹೇಳಿ ಒಂದಿನ ಕಾಡಿಗೆ ಹೋದೊ. ಕಾಡಿಗೆ
ೋಗಿ ಹೋಗಿ ಹೋಗಿ ಎಲ್ಲಿ ಹೋದರೂ ಇವುಕೆ ಏನೂ ಕಾಂಬಕೆ ಸಿಕ್ಕುದ್ಲೆ.

ಒಂದ್ ದೊಡ್ಡಾ ಬೆಟ್ಟದಡಿಗೆ ಹೋದೊ. ಹೋಕನ ದೊಡ್ಡಾದೊಂದ್ ಬೇಟೆ ಆಡಿ ಆಕನ, ಾಪ್ಸಿಗೆ ಇವರ ಹಂದಿ ನುಂಗಿತ್. ಒಬ್ಬನ ನುಂಗಿತ್, ಇಬ್ಬರ ನುಂಗಿತ್, ಮೂರನೆಯವನನೂ ುಂಗಿತ್. ಲಾಯಿಕಾತ್. ಇವ್ಕೆ ಮನೇಲಿದ್ದವ್ಕೆ ಯಾರಿಗಾದರೂ ಗೊತ್ತುಟ ! ಅದರ್ಲಿ ೊಡ್ಡಂವನ ಹೆಣ್ಣ್ ಬೊಸ್‌ರಿ ಹೆಂಗ್ಸ್. ಅದ್ ತಿಂಗ ಬರ್ತಿಯಾಗಿ ಹೆತ್ತತ್. ಹೆತ್ತ್ ಆಕನ ಗಂಡ್ ೂಸ್. ಸುಮಾರ್ ಸಮಯ ಒಂದ್ ವರ್ಷ ಎರಡ್ ವರ್ಷ ಕಳ್ದಕೂಡ್ಲೆ ಕೂಸ್‌ನ ಶಾಲೆಗೆ ಳ್ಸಿದೊ. ಶಾಲೆಗೆ ಕಲ್ಸಿ ಈ ಶಾಲೆಲಿ ಎಲ್ಲಾ ಮಕ್ಕಳಿಂದ ಇಂವ ಉಷಾರ್. ಎಲ್ಲವೂ ಇಂವಂಗೆ ೋಕ್ ಮಾಡ್ದು. 'ನೀ ಎಷ್ಟ್ ಉಷಾರಿದ್ದರೆ ಏನಾತ್ ನಿನ್ನ ಅಪ್ಪಂದರ ಮೂರ್ ಜನನ ಹಂದಿ ುಂಗಿಟು' ಹಿಂಗೆ ತಮಾಷೆ ಮಾಡ್ದು. ಹೈದ ಯಾಗೊಲ್ ನೆಂಪು ಮಾಡಿಕಂಡು ಮನೆಗೆ ೋದು. ಮನೆಗೆ ಹೋಕನ ಇವಂಗೆ ನೆನಪೇ ಬಾರಟ ಇಲ್ಲೆ.

ಒಂದ್ ದಿನ ಈ ಮಕ್ಕ ಹೇಳ್ಕನ ಉಗ್‌ರ್‌ನ ಬ್ಲೇಡ್ ತಕಂಡ್ ಬೆರ್ಲ್ ಕೊಯ್ಕನ್ತ್. ಕೊಯ್ದ್ ತ್ತಲೆಗೆ ಮೀದ್ ಊಟ ಮಾಡಿಕನ ಗೈಪ್‌ಗೆ ಕೈ ಹಾಕಿಕನ ಕೈ ಉರ್ತ್. ಅಷ್ಟಾಕನ ಅವ್ವನ ಕರ್ತ್ ಂವ. 'ಅವ್ವವ್ವ ಹಿಂಗೆ ಶಾಲೆಲಿ ಯಾಗೊಲ್ ಮಕ್ಕ ನನ್ನ ತಮಾಷೆ ಮಾಡ್ವೆ. ಎಂತದ್ ಾದೊ? ಅದರ ಈಗ ಹೇಳೊಕ್ ಮರ್ಬ್ಕಂಡ್ ಹೇಳ್ತ್. ಏನ್ ಮಾಡ್ದು ಮಂಜ ನಮ್ಮ ಣೇಬರ? ಯಾರೂ ನೋಡವ ಇಲ್ಲೆ? ಹುಡ್ಕವ್ ಇಲ್ಲೆ'. ಅಕೇರಿಗೆ ಇಂವ ವಿದ್ಯಾಭ್ಯಾಸ ಲ್ಲ ಕಲ್ತ್ ದೊಡ್ಡಾ ಬುದ್ಧಿವಂತ ಆತ್. ಅಕೇರಿಗೆ ಹಂಗೆ ಚಿಟ್ಟೆಕ್ಕಿ ಬಿಲ್ಲ್ ಮಾಡಿ ಕೊಡಕವ್ವಾಂತ ವ್ವನೊಟ್ಟಿಗೆ ಒತ್ತಾಯ ಮಾಡ್ತ್. ಮಕ್ಕಳ ಒಂದೊಂದ್ ಅಭ್ಯಾಸ ಉಟ್ಟಲ್ಲ ಹಂಗೆ ಒಂದಿನ ಚಿಟ್ಟೆಕ್ಕಿ ಲ್ಲ್ ಎಲ್ಲ ಮಾಡಿ ಕೊಟ್ಟೊ ಇವಂಗೆ.

ಇಂವ ಒಂದಿನ ಎರಡ್ ನಾಯಿಗಳ ಕರ್ಕಂಡ್ ಹೋತ್. ಹೋಗಿ ಹೋಗಿ ಹೋಗಿ ುಮಾರ್ ದೂರ ಹೋತ್. ಹೋಗಿ ಹೋಗಿ ಆಕನ ಇವಂಗೆ ಕುಡಿಯಕೆ ಆಗಿದ್ ಏನೂ ೂತ್ತ್. ನಾಯಿಗಳೊಟ್ಟಿಗೆ ಜೋರ್ ಮಾಡ್ತ್. ಹೋಗಿ ನಾಯಿಗಳೆ ಎಲ್ಲಿಯಾದರ್ ನೀರಿದ್ದರೆ ುಡ್ಕಂಡ್ ಬನ್ನಿ. ಹಂಗೆ ನಾಯಿಗ ಹೋಗಿ ಹುಡ್ಕಿದೊ. ಹುಡ್ಕಿ ಆಕನ ಒಂದ್ ಹೆಂಗ್ಸ್‌ನ ಮನೆ ಕ್ಕಲೆ ಹೋದೊ. ಇಂವನ ಕರ್ಕಂಡ್ ಹೋಗಿ ಆ ಮನೆ ಹಕ್ಕಲೆ ಹೊಂಡ ಉಟ್ಟ್. ಹೊಂಡಲಿ ಂತರ ಕುಡೀದಪ್ಪ? ಅವರ ಮನೆಗೆ ಹೋಗಿ ಕುಡೀವಪ್ಪ ಅಂತ ಹೇಳಿ, ಮನೆಗೆ ಹೋಗಿ ಇಂವ ತ್ತಿಕಂಡ್ ಹೋತ್. ಹೋಗಿ 'ಯಾರ್ ಮನೆಯವು ? ಯಾರ್ ಮನೆಯವು? ಅಂತ ಕರ್ದೊ. ಂಗೆ ಒಂದು ಗ್ಲಾಸ್ ಕುಡಿಯಕ್ ಬೇಕ್‌ಂತ ಹೇಳ್ದೊ. ಕುಡಿಯಕೆಲ್ಲ ತಂದ್ ಕೊಟ್ಟೊ.

ಕುಡ್ಡೊ. ಕುಡ್ದ್ ತಿರ್ಗಿ ಬಂದೊ.

ಕುಡ್ದ್ ಬಂದ್ ಅರ್ಧ ಮೈಲ್ ಒಂದ್ ಮೈಲ್ ಸುತ್ತಿದೊ. ಸುತ್ತಿಯಾಕನ ಹಂದಿ ಕಾಂಬಕೆ ಸಿಕ್ಕಿತ್. ಹಂದಿ ಜೋರ್ ಮಾಡಿಕಂಡ್ ಹೋತ್ ನಾಯಿ ಎದ್‌ರ್. ಆಗ ಇಂವ ಬಿಲ್ಲ್‌ಕಲ್ಲ್ ಎಲ್ಡ್ ಬುಟ್ಟತ್. ಹಂದಿನ ಹಣೇನ ನಡೂಗೆ. ಹಂದಿ ಬೀತ್. ಹಂದಿ ಬಿದ್ದ ಕೂಡ್ಲೆ ಹಂದಿನ ಹೊಟ್ಟೆ ಬಾರೊಕಲ್ಲ. ಈಗ ಏನ್ ಮಾಡ್ದುಂತ ಹೇಳಿ ಒಂದ್ ಅಂದಾಜ್ ಮಾಡಿ ಹೊಟ್ಟೆ ಬಾರ್ತ್. ಹೊಟ್ಟೆ ಬಾರಿ ಸುಮಾರ್ ಹೊತ್ತಾಕನ ಅಪ್ಪನವ್ ಸಿಕ್ಕಿದೊ. ಇವಂಗೆ. ನೋಡ್ಕನ ಜೀವಲಿ ಒಳೊ. ಇವ್ಕೆ ಒಂದ್ ದೇವರ ಶಾಪ ಉಟ್ಟ್. ದೇವರ ಶಾಪಕೋಸ್ಕರ ಮೂರ್ ಕಲ್ಲಿತ್ತ್. ಆ ಕಲ್ಲ್‌ನ ತೆಗ್ದ್ ತಲೆ ಕಡ್ಪ ಹೆರ್ಕಿ ಇಟ್ಟತ್. ಆಗ ಇವು ಅಯ್ಯಪ್ಪಂತ ಮೂರ್ ಜನ ಎದ್ದ್ ಕುದ್ದೊ. ಹಂಗೆ ಮನೆಗೆ ಹಂದಿನ ಹೊತ್ತ್‌ಕಂಡ್ ಇವು ಅಯ್ಯೆ ಮಕ್ಕಂತ ಹೇಳಿ ಬಂದೊ. ಬಂದ್ ಕತ್ತಲೆಗೆ ಹಿಂಗೆ ಈ ಕತೆನ ಹೇಳಿ ಅವು ಸುಖ ಸಂತೋಷಲಿ ಒಳೊ. – ಹೋಗಿ ನೀವು ನೋಡಿಕಂಡ್ ಬರಕಡ,

[ಕಥಾ ನಿರೂಪಕ:ರಾಮಯ್ಯ ಗೌಡ; ಸ್ಥಳ:ಮನೆ; ಸಮಯ:ಸಾಯಂಕಾಲ 6ಗಂಟೆ; ವರ್ಷ–1991]

## 19. ಹೆಬ್ಬುಲಿ ಬೇಟೆ ಕತೆ

ಒಂದ್ ಹುಲಿ. ಬಲಿಪ್ಪಾಂತ ಹೇಳ್ದುಲ್ಲೆ ಅಂತಾ ಹುಲಿ. ಅದ್ ಇದ್ದ ಒಂದ್ ದಿಕ್ಕ್‌ಲಿ ಇದ್ದಾ ಹೆಣ್ಣ್ ಎಲ್ಲ, ದಾರಿ ಹೋವ ಮಕ್ಕ ಮರಿಂತ ಎಲ್ಲಾ ಒಟ್ಟು ಹಿಡ್ದ್ ತಿಂಬೊದು. ಇಂಥಾ ಹುಲಿ ಹೋಗಿ ಹೋಗಿ ಒಂದ್ ಕಾಡ್‌ಲಿ ಹಾಲೇರಿ ಮಠಾಂತ ಉಟ್ಟು. ಅಲ್ಲಿ ಒಂದ್ ದೊಡ್ಡ ಗುಹೆ ಉಟ್ಟು. ಅದರೊಳಗೆ ಸೇರಿಕನ್ತ್ ಇದ್. ಆಗ ಆ ಊರ್‌ಲ್ಲಿ ಇದ್ದವ್ಕೆ ಎಲ್ಲಿಯೂ ಹೋಕೆ ಆದ್ಲೆ. ಆಗ ಅಲ್ಲಿ ಒಬ್ಬ ಕರಿರಾಜ ಬಂಟಂತ ಹೆಸರಿನವ. ಅಂವನ ಜಾತಿ ಬಂಟ. ಅವಂಗೆ ಓಲೆ ಬಾತ್. ಇಡೀ ಊರು ಹುಡಿ ಮಾಡಿ ಬಂದಂತಹ ಹೆಬ್ಬುಲಿ ಹಾಲೇರಿ ಮಠಲಿ ವಾಸವಾಗುಟು. ಅದರ ಬೇಟೆಗೆ ಬರೊಕುಂತ. ನೋಡಿಕನ್ತ್, ಹೋಗದೆ ಉಪಾಯ ಉಟ್ಟ ? ಹೆಣ್ಣ್ ಆಗ ಬೊಸುರಿ ಹೆಂಗ್ಸ್. ಒಬಂತ್ತ್ ತಿಂಗ. ಹೆಣ್ಣ್‌ನೊಟ್ಟಿಗೆ ಹೇಳ್ತ್. 'ನೋಡು ಹಾಲೇರಿ ಮಠಲಿ ಮೂರ್ಖ ಹೆಬ್ಬುಲಿ ವಾಸವಾಗುಟು. ಅದರ ಹೊಡಿಯಕೆ ನಂಗೆ ಓಲೆ ಬಂದುಟು. ನಾ ಹೋನೆ. ಅಂಗ್ಯೆ ವರ್ಣದ ಬುತ್ತಿ ಕಟ್ಟೊಕು. ಕಟ್ಟಿಕೊಡೊಕು ನಾ ಹೋನೆ'ಂತ. ಆಗ ಹೇಳ್ತದ್, 'ಹೌದು ನಾ ನೋಡಿ ಒಂಬತ್ತ್ ತಿಂಗಳ ಬೊಸುರ್ರಿ. ನೀವು ಹೆಬ್ಬುಲಿ ಬಾಯಿಗೆ ಹೋಗಿ ಬಾವೆರಿ, ಬಾಕಿಲ್ಲೆನಂತ ಹೇಳ್ವ ಧೈರ್ಯ ಇಲ್ಲೆ ನಂಗೆ. ನಂಗೆ ಗತಿಯಾರ್? ಅದಾಕಿಲ್ಲೆ ಹೋನೆ'ಂತ. ಏನ್ ಮಾಡ್ದು? ಹಾಂಗೆ ಹೊರಟತ್.

ಅಷ್ಟೊತ್ತಿಗೆ ಅಯ್ಯೆ ಉಟ್ಟು ಮುದಿ. ಈಗ ನಾ ದೊಣ್ಣೆ ಊರ್ನೆ ಅಲ್ಲ. ಅದೇ ರೀತಿ ನಡಿವ ಅಜ್ಜಿ. ಅವ್ವನೊಟ್ಟಿಗೆ ಕೇಳ್ತ್. ಆಗ ಅವ್ವನೂ ಹೇಳ್ತ್ 'ಹಾಂಗೆ ನೀ ಹೋದರೆ ಮಂಜ ನಿನ್ನ ಹೆಣ್ಣ್ ನೋಡ್ ಬೊಸುರಿಯಲ್ಲ. ನಾ ನೋಡ್ ದೊಣ್ಣೆ ಮೇಲೆ ನಡೀದಲ್ಲ. ನಮ್ಮ ಸಾಂಕಂವ

ಯಾರ್? ಯಾರ್ ಒಳೊ ಇಲ್ಲಿ?' ಹಾಂಗೆ ಹೇಳ್ತ್. ಅಯ್ಯೆ ಬಂದ್ ರಟ್ಟೆ ಮೇಲೆ ಹಿಡ್ತ್. ಅಯ್ಯೆನ ದೂಡಿ ಹಾಕಿತ್ ಆಚೆ. ಹೆಣ್ಣ್ ಬಾತ್ ಕಾಲ್ ಮೇಲೆ ಹಿಡ್ತ್. ಅದರ ಮೆಟ್ಟಿ ಹಾಕಿತ್. ಇಂವ ಬೆಡಿ ತೆಕನ್ತ್ ಹೋತ್. ಹೋಕನ ದೊಡ್ಡಾ ಮೈದಾನ ಅಡ್ಕಲಿ ಸಣ್ಣ ಸಣ್ಣ ಮಕ್ಕ ಎಲ್ಲ ದನ ಮೇಸಿಕಂಡೊಳೊ. ಇವಂಗೆ ದಾರಿ ಗೊತ್ತಿಲ್ಲೆ. ಅವರೊಟ್ಟಿಗೆ ಹೋಗಿ ಕೇಳ್ತ್. 'ಏ ಹುಡುಗರೇ ಹಾಲೇರಿ ಮಠಕೆ ದಾರಿ ಯಾವುದು? ಹಾಲೇರಿ ಮಠಕೆ ಹೋಗ್ಬೇಡ ನೀ. ಅಲ್ಲಿ ಇಂತಾ ಒಂದ್ ಹುಲಿ ಉಟ್ಟು. ನೀ ಹೋದರೆ ನಿನ್ನ ಮಡಗಿಕಿಲ್ಲೆ. ಅದಾಕಿಲ್ಲೆಯ? ಅದ್ ಮಾತ್ರ ಅಲ್ಲ? ನಿನ್ನ ಅವ್ವ ಮುದಿ, ಹೆಣ್ಣ್ ಬೊಸುರಿ. ಅವರ ಬುಟ್ಟು ಹೋದರೆ ಹಂಗೆ ಹೇಳ್ರೆ ನಿನ್ನ ಮೇಲೆ ಗುಂಡಾಕಿ ಬುಡುವೆಂತ ಹೇಳ್ತ್. ಆತಪ್ಪ ಇದರ್ಲಿ ಹೋಗ್. ಹೋಕನ ಇವು ಏನ್ ಹೇಳ್ದೊ? ನೀ ಕಾಲ್ ಕೊಟ್ಟ್ ತಲೆ ತಕಂಡ್ ಬರ್ಬೇಡ. ತಲೆ ಕೊಟ್ಟ್ ಕಾಲ್ ತಕೊಂಡ್ ಬಾ'ಂತ ಹೇಳ್ದೊ ದನ ಮಕ್ಕ.

ಹೋತ್, ಹೋಗಿ ಹೋಗಿ ಅಲ್ಲಿಗೆ ಮುಟ್ಟಿತ್. ಮುಟ್ಟಿ ಆಕನ ದೊಡ್ಡ ಗುಹೆಲಿ ಕಂಡದೆ ಮಲ್ಕಂಡಿಂವ. ಹೊರಗೆ ನಿಂತ್ ಕರ್ತ್. 'ಏಯ್ ಏಳ್ ಮುಖದ ಹೆಬ್ಬುಲೀಂತ. ಹೊರಗೆ ಬಾ. ಆಗ ಅದ್ ಹೇಳ್ತ್. ಮಾರಾಯ ನನ್ನ ಚೇಷ್ಠೆ ಬೇಡ ನಿಂಗೆ. ನನ್ನ ತಳ್ಳಿ ಬೇಡ ನೀ ಹೋಗು. ನಿನ್ನ ಹೆಣ್ಣ್ ಬೊಸುರಿ, ನಿನ್ನ ಆಯ್ಯೆ ಮುದಿ. ನನ್ನ ಕೆಣಕಿರೆ ನಿನ್ನ ನಾಕ್ ಊರಿಗೆ ನಾಕ್ ಸೀಂತ್ ಮಾಡಿ ಹಾಕುವೆ. ಬೇಕಾದಷ್ಟ್ ಅದುನು ಹೇಳ್ತ್. ಇವನೂ ಹೇಳ್ತ್. ಅಕೇರಿಗೆ ಹೇಳ್ತ್ 'ಸತ್ತ ನಾಯಿನ ತಿಂಬ ಹೆಬ್ಬುಲಿ ಬಾ'ಂತ. ಇವಂಗೆ ಸಿಟ್ಟ್‌ಬಾತ್. ಯಾರ್ಗೆ? ಹುಲಿಗೆ. ಮೀಸೆನ ಎಲ್ಲ ಕುತ್ತಮಾಡ್ತ್, ಕಣ್ಣ್ ಕೆಕ್ಕರಿಸಿತ್ ಹೊರ್‍ಬರಟ್ ಬಾತ್. ಬಂದಾಂಗೆ ಹಿಡ್ದದ್ ಈ ನಾಕ್‌ನಡೆ ನಾಕ್ ರಾಜ್ಯಕೆ ಹೆರ್ಕಿ ಇಟ್ಟತ್. ಇಂವ ಉಟ್ಟ! ಇಂವ ಹೋತಲ್ಲ. ಇಲ್ಲಿ ಹೆಣ್ಣೂ ಅಯ್ಯೆನೂ ದಾರಿನೋಡ್ರೆ ಇಂವ ಎಲ್ಲಿಟು?

ಇದ್ಕೆ ಒಂಬತ್ತ್ ತಿಂಗ ಕಳ್ದ್ ಹತ್ತ್ ತಿಂಗ ಹಿಡ್ತ್ ಇದ್ ಹೆರಿಗೆ ಆತ್. ಹೆರಿಗೆ ಆಗಿ ಆ ಕೂಸುನ ಪ್ರಾಯಕೆ ಬಂದಾಂಗೆ ಶಾಲೆಗೆ ಹಾಕಿದೊ. ಶಾಲೆಗೆ ಹೋಗ್ತಾ ಇತ್ತ್. ಶಾಲೆಲಿ ಎಷ್ಟ್ ಮಕ್ಕ ಇದ್ದರೂ ಅವರಿಂದ ಒಂದ್ ಫೀಟ್ ಇಂವ ಮುಂದೆ. ಹಿಂಗೆ ಆಕನ ಅವು ಹೇಳಿಕಂಡಿದ್ದೊ. 'ತೆಕ್ಕ್ ನೀ ಎಷ್ಟ್ ಉಷಾರಾದರೇನ್, ನಿನ್ನಪ್ಪನ ಹಾಲೇರಿ ಮಠಲಿ ಹೆಬ್ಬುಲಿ ಸೀಳಿಸಿಟು. ನೀ ದೊಡ್ಡ ಪೌರುಷ ಕೊಚ್ಚುದೆಂತರ?' ಹಿಂಗೆ ಇದ್ದ್ ಇದ್ದ್ ಬಾತೀತ್. ಮರ್‍ತೋದು ಹೈದಂಗೆ. ಒಂದು ದಿನ ಅಷ್ಟ್ ಹೇಳ್ದ ಕೂಡ್ಲೆ ಉಂಬಕ್ಕೆನ ಬೆರ್ಲ್ ಕೊಯ್ಕನ್ತ್ ಬಾತ್. ಬಂದ್ ಊಟಕೆ ಕೈ ಹಾಕಿಕನ ಗೈಪುಗೆ ಕೈ ಹಾಕಿಕನ ಉರ್ತ್. ತೆಗ್ದ್ ಅಯ್ಯೆನ ಜುಟ್ಟು ಮೇಲೆ ಹಿಡ್ಕನ್ತ್. 'ನನ್ನ ಅಪ್ಪ ಏನಾದ್ದ್ ಹೇಳ್? ಹಾಲೇರಿ ಮಠಲಿ ಹೆಬ್ಬುಲಿ ಸೀಳಿಟುಗಡ. ಹೌದೊ ? ಹೌದು. ಹಂಗಾರೆ ನಾಳೆನ ದಿನಲಿ ನಾ ಹೋನೆ. ನನ್ನ ಕಳ್ಸೊಕು ನೀ. ಅಯ್ಯೋ ನೀ ಸಣ್ಣ ಕೂಸು. ನೆತ್ತಿ ಎಣ್ಣೆ ಆರ್‍ತ್ಲೆ. ಅಮೆ ಮೂರಿ ಹೋತ್ಲೆ. ಅಪ್ಪ ಹೋಗಿ ಹೆಬ್ಬುಲಿ ಬಾಯಿಗೆ

ಹೋಗೊಳೊ. ನಿನ್ನಂದ ಮತ್ತೆ ಎಲ್ಲಿಂದ ತೀರ್ದು ಮಂಜ. ಅದೇನ್ ಆಕಿಲ್ಲೆ ? ನಂಗೆ ಇಷ್ಟ
ಕಟ್ಟಿಕೊಡ್, ಬೆಡಿ ಒಂದು ಕೊಡ್ ನಾ ಹೋನೆ'. ಏನ್ ಮಾಡ್ದು? ತಡಿಯಕಾದೆಯಾ.

ಮಾರ್ನೆ ದಿನ ಇಂವ ಬುತ್ತಿಕಟ್ಟಿಕನ್ತ್. ಬೆಡಿಯೂ ತೆಕನ್ತ್ ಹೋತ್. ದಾರಿ ಕೇಳಿ ಕೇಳಿ ಹೋತ್. ಹೋಕನ ಉಟ್ಟು ಇಂವ ಮಲ್ಕಂಡ್. ಹೋಗಿ ಅಲ್ಲಿ ಹೇಳ್ತ್, 'ಹೆಬ್ಬುಲಿ ಬಾ. ಅಪ್ಪನ ನೀ ಕೊಂದೊಳೊ ಗಡ. ಹಂಗೆ ನಿನ್ನ ನೋಡೊಕುಂತ ನಾ ಬಂದದ್. ಎದ್ದ್ ಬಾಂತ. ಹೋಗು ಮಾರಾಯ. ನೀ ಸಣ್ಣ ಹಸ್ ಗೂಸಲ್ಲ. ನೀ ಯಾವ ಲೆಕ್ಕ? ಅಪ್ಪನೇ ಬಲಾಡ್ಯ ಗೆತಿ ಏನಾಗುಟು ನೋಡು ? ನಿನ್ನಂದ ನನ್ನೊಟ್ಟಿಗೆ ಆಕಿಲೆ ? ಹೋಗು ಆಕಿಲೆ. ನಾ ಹೋ ಒಂದೋ ನಿನ್ನ ಕೈಲಿ ನಾ ಸಾಯುದು. ಇಲ್ಲಾರೆ ನಾ ನಿನ್ನ ಕೊಲ್ಲುದು'. ಹೇಳಿ ಇಂವನ ಹಾಂ ಮಾತಾಡ್ದ್. ಇದ್ಕೆ ಸಿಟ್ಟ್ ಬಾತ್. ಯಾರಿಗೆ? ಹುಲಿಗೆ. ಎದ್ದ್ ಗುಹೆಂದ ಹೊರಗೆ ಹೊರಡೊ ಇಂವ ಮೂರು ಗುಂಡು ಹೊಡ್ತಲ್ಲಿಗೆ. ಅಂವ ಡಂಗುರ ಹೊಡ್ಕಂಡೇ ಬಾತ್. ಇಂವ ಬಂದ ಊರ್ನವ್ಕೆ ಹೋಗಿಂತ ಹೇಳ್ತ್. ಕೆಲವು ಜನ ಹೋದು. ದೂರಂದ ನೋಡ್ದು. ಓಡ್ದು. ಉಟ್ಟುಂತ ಹೇಳಿ ಹುಲಿ ಮೊನ್ನನ ತಿಂದೋಗುಟು. ಅಲ್ಲಿಂದ ಬಂದ್ ಅಯ್ಯೆ ಹಕ್ಕಲೆ ಬಾಕನ ಸಂತೋಷ ಆತ್. ಅಯ್ಯೆಗೆ ಇಂವ ಬಂದ್ ಬುಡ್ತ್. ಹುಲಿನ ಕೊಂದತ್. ಉಪಕಾರಿಯಾತ್‌ಂತ್ ಹೇಳಿ ಊರ್ನವು ಸಹ ಈ ಹೈದನ ಕೊಂಡಾಡ್ದೊ. ಹುಲಿ ಅಲ್ಲಿ ಸತ್ತತ್. ಮನೆಸೇರ್ತ್. ಮುಗ್ತ್. [ಕಥಾ ನಿರೂಪಕ:ಲಿಂಗಪ್ಪ ಗೌಡ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1

## 20.ಚೋರೆಕ್ಕಿನ ಜಾಣತನದ ಕತೆ ಪಠ್ಯ 1

ಒಂದ್ ಊರ್‌ಲಿ ಚೊರೆಕ್ಕ ದಾರಿಕರೇಲಿ ಮೂರ್ ಮೊಟ್ಟೆ ಹಾಕಿತ್. ಅದರ ಮೇಲೆ ಮಲಕ ಕಾವುಕೊಡುತ್ತಾ ಇತ್ತ್. ಅದೇ ದಾರಿಲಿ ಒಬ್ಬ ಮೋಂಟಣ್ಣ ಸಂತೆಗೆ ಹೋಂವವ ಬಾತ್. 'ಚೊ ಚೊರೆಕ್ಕ ನಾ ಸಂತೆಗೆ ಹೋಗಿ ಬಾಕನ ಕತ್ತಲೆ ಆತ್. ನಂಗೆ ಮಲ್ಗಿಕೆ ಹಂಞ ಕೊಡುವನಾಂತ'? ಆಗ ಚೊರೆಕ್ಕಾ ಹೇಳ್ತ್ – 'ದಾರಿಕರೆಲಿ ಮೊಟ್ಟೆ ಹಾಕೊಲೆ ಅದರ ಮೇಲ ಮಲಗೊಳೆ. ನನ್ನ ಮೇಲೆ ಮಲ್ಕೊತಾ ಹೇಳ್ತ್'. ಅವನ್ ಮಲಗಿತ್.

ಮತ್ತೊಬ್ಬ ಶ್ಯಾಮಣ್ಣ ಬಾತ್. 'ಅಂಗಡಿಗೆ ಹೋಗಿ ಬಾಕನ ಕತ್ತಲೆ ಆತ್. ನಂಗೆ ಮಲ್ಗಿಕೆ ಜಾಗ ಕೊಡುವನಾಂತ'? ಆಗ ಚೊರೆಕ್ಕ–'ಮೊಟ್ಟೆ ಮೇಲೆ ನಾ ಮಲಗ್ಯೊಳೆ. ಅದರ ಮೆ ಸಂತೆಗೋದಂವ ಮಲ್ಗುಟು. ಅದರ ಮೇಲೆ ಮಲಕೋಂತಾ' ಹೇಳ್ತ್.

ಹಿಂಗೆ ಜಾತ್ರೆಗೆ ಹೋದಂವ ಗುರುವಣ್ಣ ಬಾತ್. ಬಂದ್ 'ಚೊರೆಕ್ಕ ಚೊರೆಕ್ಕ ನಾ ಜಾತ್ರೆಗೆ ಬಾಕನ ಕತ್ತಲೆ ಆತ್. ನಂಗೆ ಮಲಗಿಕೆ ಸ್ವಲ್ಪ ಜಾಗ ಕೊಡುವನಾಂತ'? ಆಗ ಚೊರೆಕ್ಕಾ – 'ಮೆ ಮೇಲೆ ನಾ ಮಲ್ಗಿಯೊಳೆ. ಅದರ ಮೇಲೆ ಸಂತೆಗೆ ಹೋದಂವ ಮಲ್ಗಿತ್. ಅದರ ಮೆ ಅಂಗಡಿಗೆ ಹೋದಂವ ಮಲ್ಗಿತ್. ಅದರ ಮೇಲೆ ನೀ ಮಲಕೋಂತಾ'. ಹೀಂಗೆ ಇ

ಅನೇಕರ್ ಬಂದ್ ಮಲ್ಗಿದೊ.

ಬೊಳ್ಪು ಆತ್ ಚೊರೆಕ್ಕಾ ಎದ್ದ್ ಭತ್ತ ಮಿಜಿತಾ ಇತ್ತ್. ಉಸ್‌ಹಾಂ.... ಉಸ್... ಉಸ್... ಉಸ್... ಹುಂ.... ಹುಂತಾ ಶಬ್ದ ಮಾಡಿಕೊಂಡು. ಮಕ್ಕಳ್ ಮಲ್ಕೊಂಡೆ ಇದ್ದೊ. ಎಲ್ಲವೂ ಎದ್ದ್ ಹೋದೊ ಮೋಂಟಣ್ಣ ಮಾತ್ರ ಅಲ್ಲೆ ಒಲೆ ಬುಡಲಿ ಚಳಿ ಕಾದ್‌ಕ್ಕಂಡ್ ಇತ್ತ್. ಚೊರೆಕ್ಕಾ ಭತ್ತ ಮಿಜಿತಾ ಇತ್ತ್. ಮೋಂಟಣ್ಣ ಕಟ್‌ಕುಟೂಂತ ಶಬ್ದ ಮಾಡ್ತ್. 'ಎಂತಾ ಮೊಂಟಣ್ಣಾಂತಾ'? ಚೋರೆಕ್ಕ ಕೇಳ್‌ಕನ ನಂಗೆ ಚಳಿ ಹಿಡ್ದದೆ. 'ಮತ್ತೊಂದು ಬಾರಿ ಕಟುಂಕುಟಂತಾ ಶಬ್ದ ಮಾಡಿಯಾ'. 'ನಾ ನಿನ್ನೆ ಸಂತೆಗೆ ಹೋಗಿ ಬಾಕನ ಮೂರು ಕಡ್ಲೆ ತಂದಿದ್ದೆ. ಅದರ ಒಂದ್ ತಿಂದ್ ಆತ್. ಇನ್ನ್ ಎರಡ್ ಉಟ್ಟುಂತಾ' ಹೇಳ್ತ್. ಚೊರೆಕ್ಕ ಉಸ್.... ಉಸ್.... ಉಸ್‌ಂತಾ ಭತ್ತ ಮಿಜಿತಾ ಇತ್ತ್. ಮತ್ತೆ ಕಟುಂಕುಟುಂತಾ ಶಬ್ದ ಕೇಳ್ತ್. ಆಗ ಚೋರೆಕ್ಕಾ 'ಎಂತಾ ಮೊಂಟಣ್ಣಾ ಬಾರಿ ಕಟುಂಕುಟುಂತಾ ಶಬ್ದ ಮಾಡಿಯಾಂತ'? ಹೇಳ್‌ಕನ 'ನಿನ್ನೆ ಸಂತೆಗೆ ಹೋಗಿ ಮೂರು ಕಡ್ಲೆ ತಂದೊಳೆ. ಅದರ್ಲಿ ಎರಡ್ ಆತ್. ಇನ್ನ್ ಒಂದು ಉಟ್ಟುಂತಾ'. ಚೊರಕ್ಕ ಉಸ್.... ಉಸ್.... ಉಸ್‌ಂತಾ ಭತ್ತ ಮಿದ್ದ್‌ಕೊಂಡ್ ಇತ್ತ್. ಮತ್ತೊಮ್ಮೆ ಕಟುಂಕುಟುಂತಾ ಶಬ್ದ ಕೇಳ್ತ್. ಆಗ ಚೊರೆಕ್ಕ–'ಎಂಥಾ ಮೋಂಟಣ್ಣ ಬಾರಿ ಕಟುಂಕುಟುಂತಾ ಶಬ್ದ ಮಾಡಿಯಾಂತ' ? ಹೇಳ್ತ್. 'ನಾ ನಿನ್ನೆ ಸಂತೆಗೆ ಹೋಗಿ ಬಾಕನ ಮೂರು ಕಡ್ಲೆ ತಂದಿದ್ದೆ. ಅದನ್ನ್ ಈಗ ತಿಂದ್ ಮುಕ್ಕ್‌ಸಿದೆ'. ಚೊರೆಕ್ಕ ಭತ್ತ ಮಿಜಿತಾ ಇತ್ತ್. ಮೋಂಟಣ್ಣ ನಾ ಹೋನೆ ಅಕ್ಕಾಂತಾ ಹೇಳಿ ಹೊರಟತ್. ನಿಲ್ಲ್ ಊಟಾಗಿ ಹೋಗುಂತಾ ಚೊರೆಕ್ಕಾ ಒತ್ತಾಯ ಮಾಡ್ತ್. ನಾ ಹೋನೆಂತಾ ಹೊರಟ್ ಹೋತ್.

ಚೊರೆಕ್ಕ ಭತ್ತ ಮಿದ್ದ್ ಹೊಡ್ಕಿ ಅಕ್ಕಿ ಮಾಡಿ ತಾತ್. ತಂದ್ ಹಾಲ್ ಕೊಡಿಕೆಂತ ನೋಡ್‌ಕನ ಮುರೂ ಮೊಟ್ಟೆ ಇಲ್ಲೆ. ಮರಡ್ತಾ ಆಚೆ ಮನೆಲಿ ಈಚೆ ಮನೆಲಿ ಕೇಳ್ತ್. ಎಲ್ಲಿನೂ ಇಲ್ಲೆ. ಅಲ್ಲಿಂದ ನಿನ್ನೆ ಬಂದವರ ಮನೆಗೆಲ್ಲಾ ಹೋತ್. ಮೊದಲ್ ಗುರುವಣ್ಣನ ಮನೆಗೆ ಹೋತ್. ಅಲ್ಲಿ ಅಂವ ಹೇಳ್ತ್ –

'ಎಂದೂ ಬಾರದ ಚೊರೆಕ್ಕ ಬಾತ್,
ನೀರ್ ಕೊಡುನಿ ಮಕ್ಕಳೆಂತಾ'.

ಆಗ ಚೊರೆಕ್ಕ–'ನಿನ್ನ ನೀರ್ ಗೀರ್ ಏನೂ ಬೇಡ. ನನ್ನ ಮಕ್ಕಳ ತಿಂದೊಳ ನೀಂತ ಹೇಳ್ತ್. ಅಯ್ಯೋ ನಾ ತೀನ್ತ್‌ಲೆಂತಾ ಹೇಳ್ತ್ ? ನಾಡಿದು ನಾ ಬಾಳೆದಂಬೆ ಪಾಲಹಾಕಿ ಅದರ ಕೆಳಗೆ ಬೆಂಕಿ ಹಾಕಿನೆ. ಅದರಲ್ಲಿ ನೀವು ನಡ್ಯೋಕು. ನೀವು ಸತ್ಯ ಮಾತಾಡೊಕುಂತಾ' ಕೇಳಿ ಶ್ಯಾಮಣ್ಣನ ಮನೆಗೆ ಹೋತ್. ಆಗ ಶ್ಯಾಮಣ್ಣ ಒಳಗಿಂದ ಓಡಿ ಬಂದ್–

'ಮಕ್ಕಳೇ ನೀರ್ ತನ್ನಿರೋ.
ಎಂದೂ ಬಾರದ ಚೊರೆಕ್ಕ ಇಂದ್ ಬಾತ್

ನೀರ್ ಕೊಡಿನಿ ಮಕ್ಕಳೇಂತ' ಹೇಳ್ತ್.

ಆಗ ಚೊರೆಕ್ಕ–'ನಿನ್ನ ನೀರ್ ಗೀರ್ ಬಿಸಾಕ್. ನನ್ನ ಮಕ್ಕಳ ಕೊಡೂಂತ' ಕೇಳ್ತ್. 'ಓ ದೇವರೇ ನಾ ತಿಂತ್ಲೆಂತಾ ಹೇಳ್ತ್. 'ಅಂದರೆ ನಾ ನಾಡಿದ್ದು ಬಾಳೆ ಪಂಬೆ ಪಾಲಹಾಕಿ, ಅದರ ಕೆಳಗೆ ಬೆಂಕಿ ಹಾಕಿನೆ. ಆ ಪಾಲ ಮೇಲೆ ನಡ್ಯೊಕುಂತಾ' ಹೇಳಿ ಮೋಂಟಣ್ಣನ ಮನೆಗೆ ಹೋತ್. ಮೋಂಟಣ್ಣನ ಎದೆ ಡಬ ಡಬಂತ ಶಬ್ದ ಕೇಳ್ತ್ ಇತ್ತ್. ಹೋಕನ ಗಡಿಬಿಡಿ ಮಾಡ್ತಾ –

'ಓ ಮಕ್ಕಳೇ ನೀರ್ ತನ್ನಿ ನೀರ್ ತನ್ನಿ! ಎಂದೂ ಕಾಣದ ಚೊರೆಕ್ಕಗೆ ಇಂದ್ ನನ್ನ ಮನೆಗೆ ದಾರಿ ಸಿಕ್ತ್. ನೀರ್ ಕೊಡಿನೇಂತಾ' ಹೇಳಿ ಬೆಂಚ್‌ನ ಒರ್ಸಿ ಇಸಿತ್. ನಿನ್ನ ನೀರ್ ಗೀರ್ ಸುಮ್ಮನೆ ತೋಡಿಗೆ ಹಾಕ್ ? ನಂಗೆಬೇಡ. ನನ್ನ ಮಕ್ಕಳ ಕೊಡುಂತಾ' ಹೇಳ್‌ಕನ 'ನಾ ತಿಂದತ್‌ಲೆಂತ?' ಹೇಳ್ತ್. 'ಅಂದರೆ ನಾಡಿದ್ ಬಾಳೆ ಪಂಬೆನ ಪಾಲ ಹಾಕಿ ಕೆಳಗೆ ಬೆಂಕಿ ಕೆಂಡದ ರಾಶಿ ಮಾಡ್ನೆ. ಅದರ ಮೇಲೆ ನೀ ನಡೆಕುಂತಾ' ಹೇಳಿ ಬಾತ್.

ಬಂದ್ ದೊಡ್ಡ ಕೆಂಡದ ರಾಶಿ ಮಾಡ್ತ್. ಅದರ ಮೇಲೆ ಬಾಳೆ ಪಂಬೆನ ಪಾಲ ಹಾಕಿತ್. ಎಲ್ಲರೂ ಬಂದೋ. ಬಂದ್‌ದ್ ಒಬ್ಬೊಬ್ಬನೇ ಆ ಪಾಲ ದಾಟಿದೋ. ಕೊನೆಗೆ ಹೆದರಿಕೊಂಡ್ ಮೋಂಟಣ್ಣ ದಾಟಿತ್. ಆಗ ಕೆಂಡದೊಳಗೆ ಬಿದ್ದ್ ಕರಿಕರಿ ಆತ್. ಎಳ್ದ್ ಅವನ ಹೊಟ್ಟೆ ಸೀಳಿ ಚೋರೆಕ್ಕಾ ತನ್ನ ಮಕ್ಕಳ ತಕೊಂಡ್ ಹೋತ್. ಸುಖವಾಗಿ ಸಾಕ್ತಾ ಇತ್ತ್. ಅದರ ನೋಡಿಕೆ ಹೋಕಡ. [ಕಥಾ ನಿರೂಪಕಿ:ತಾರಾಮಣಿ ಪಡ್ಪು ಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 21. ಚೋರೆಕ್ಕಿನ ಜಾಣತನದ ಕತೆ ಪಠ್ಯ 2

ಒಂದ್ ಚೋರಕ್ಕಿ ಗಡ. ಅದ್ ಕೇರಿ ಮೂರ್ ಕೊಕ್ಕ್ ಹಾಕಿತ್‌ಗಡ. ಕೊಕ್ಕ್ ಮೇಲೆ ಮೂರ್ ಮೊಟ್ಟೆ ಇಸಿತ್ ಗಡ. ಮೊಟ್ಟೆ ಮೇಲೆ ಅದ್ ಕುದ್ದತ್‌ಗಡ. ಈ ಮಧ್ಯ ರಾತ್ರಿ ಆಕನ ಸಂತೆಗೆ ಹೋದ ಕಡ್ಡೆ ಬಾತ್‌ಗಡ. ಅದ್ಕೆ ಬಂದಾಕನ ಸಳಿ ಹಿಡ್ತ್‌ಗಡ. ಚೋರಕ್ಕ ಚೋರಕ್ಕ ನಂಗೆ ಸಳಿ ಹಿಡ್ದದೆ. ಸಳಿ ಕಾಯಕೆ ಜಾಗ ಕೊಡ್‌ವನಾಂತ ಕೇಳ್ತ್ ಗಡ. ಹಂಞ ಕೊಡೆಕ್‌ಂತ ಹೇಳಿ ಕಿಚ್ಚಿ ಎಲ್ಲ ಹಾಕಿ ಚಳಿ ಕಾಯಕೆ ಜಾಗೆ ಕೊಟ್ಟಿತ್ ಗಡ. ಆ ಚಳಿಕಾದ್ ಎದ್ದತ್. ನಾ ಹೋನೆ ಚೊರೆಕ್ಕಾಂತ ಹೇಳ್ತ್. ಅದ್ ಅಣ್ಣಂತ ಹೇಳ್ತ್. ಅಂವ ಹೋತ್.

ಹೋಗಿ ಹಂಞ ಹೊತ್ತಾಗಿ ಆಕನ ಮೊಲಣ್ಣ ಬಾತ್‌ಗಡ. ಮೊಲಣ್ಣನೂ ಬಂದ್ ಚೊರೆಕ್ಕ ಚೊರೆಕ್ಕ ಸಳಿಯಾದೆ ಹನೀಸ್ ಜಾಗೆ ಕೊಡ್‌ವನಾಂತ ಕೇಳ್ತ್‌ಗಡ. ಹಾಂಗೆ ಕಿಚ್ಚಿ ಎಲ್ಲ ಒಟ್ಟ್‌ತ್‌ಗಡ. ಅವಂಗೆ ಸಳಿ ಕಾಯಕೆ ಜಾಗ ಕೊಟ್ಟತ್‌ಗಡ. ಅಂವ ಸಳಿಕಾದ್ ನಾ ಹೋನೆ ಚೊರೆಕ್ಕಾಂತ ಹೇಳ್ತ್.

ಅಂವನೂ ಹೋತ್ ಕಡೆಗೆ ಈ ಕುದ್ಕಣ್ಣ ಬಾತ್‌ಗಡ. ಕುದ್ಕಣ್ಣ ಬಂದ್‌ದ್ ಚೋರೆಕ್ಕ ಚೋರೆಕ್ಕ ನಂಗೆ ಚಳಿಕಾಯಕ್ಕೆ ಜಾಗ ಕೊಡ್‌ವನಾಂತ ಕೇಳ್ತ್‌ಗಡ. ಕೊಡಕ್‌ಂತ ಹೇಳ್ತ್‌ಗಡ

ಂಗೆ ಕಿಚ್ಚಿ ಎಲ್ಲ ಒಳ್ಳೊ ಒಟ್ಟ್‌ತ್ ಗಡ. ಸಳಿ ಕಾಯಕೆ ಜಾಗೆ ಕೊಟ್ಟ್‌ತ್‌ಗಡ. ಇಂವ ಕಾದ್‌ಕಂಡ್ ಇರ್ಕನ ಇದ್ ಹೋಗಿ ಭತ್ತ ಮಿಜಿಯಕೆ ಹೋತ್‌ಗಡ. ಭತ್ತ ಮಿಜಿಯಕೆ ಹೋಗಿ ತ್ತ ಮಿಜಿಯಕೆ ಹಾಕಿತ್. ಭತ್ತ ಊಂಹ್ಣು ಊಂಹ್ಣುಂತ ಹೇಳ್ಕನ ಕಟ್‌ಕಟ್‌ಂತ ಕೇಳ್ತ್‌ಗಡ. ಏನ್ ದ್ಕಣ್ಣ ಬಾರೀ ಜಗಿಯೊದೂಂತ ಹೇಳ್ತ್‌ಗಡ. 'ಸಂತೆಗೆ ಹೋಗಿ ಬರುವಾಗ ಮೂರು ಜಿಬ್ರಡಿಕೆ ಳು ಹೋಳು ತಂದಿದ್ದೇನೆ ಅದರಲ್ಲಿ ಒಂದು ತಿಂದಾಯ್ತು. ಇನ್ನು ಎರಡು ಉಂಟು'. ರೇಕ್ಕ ಊಂಹ್ಣಂತ ಮಿದ್ದತ್ ಗಡ. ಹಾಂಗೆ ಹಿಂದಕ್ಕೊಮ್ಮೆ ಕಟ್‌ಕಟ್‌ಂತ ಹೇಳ್ತ್‌ಗಡ. ಏನ್ ದ್ಕಣ್ಣ ಬಾರೀ ಜಗೀತೀಂತ? ಹೇಳ್ತ್‌ಗಡ. 'ಸಂತೆಹೋಗಿ ಬರುವಾಗ ಮೂರು ಜಿಬ್ರಡಿಕೆ ಂದಿದ್ದೇನೆ. ಎರಡು ತಿಂದಾಯ್ತು. ಇನ್ನು ಒಂದುಂಟುಂತ' ಹೇಳ್ತ್‌ಗಡ. ಹಿಂದಕ್ಕೆ ಇದ್ ಭತ್ತ ದ್ದತ್. ಹಿಂದಕ್ಕೆ ಕಟ್‌ಕಟ್‌ಂತ ಹೇಳ್ತ್‌ಗಡ. ಹಿಂದಕ್ಕೆ ಕೇಳ್ತ್, ಏನು ಕುದ್ಕಣ್ಣ ಬಾರೀ ಗಿಯುತ್ತೀಂತ? 'ಸಂತೆ ಹೋಗಿ ಬರುವಾಗ ಮೂರು ಜಿಬ್ಬಡಿಕೆ ತಂದಿದ್ದೇನೆ. ಮೂರೂ ಂದಾಯ್ತುಂತ' ಹೇಳ್ತ್‌ಗಡ. ಇದ್ ಹೋತ್ ಕುದ್ಕ.

ಇದ್ ಇದರ ಮಕ್ಕಳ ನೋಡಿಕೆ ಆಕನ ಮಕ್ಕ ಇಲ್ಲೆ ಅಲ್ಲ. ಇನ್ನೇನ್ ಮಾಡ್ದುಂತ ಳ್ತ್‌ಗಡ. ಮುಂದೆ ಕಡ್ಡಣ್ಣ ಬಂದದಲ್ಲ ಅಲ್ಲಿಗೆ ಹೋತ್‌ಗಡ ಇದ್. ಅಲ್ಲಿಗೆ ಹೋಗಿ ಆಕನ,

"ಹೊಸ್ತೂಂತ ಬಾರ ಹಬ್ಬಾಂತ ಬಾರ,

ಇಂದೇಕೆ ಬಂದೆ?

ನೀರ್ ಚಾಪೆ ತನ್ನಿರೋ ಮಕ್ಕಳಿರಾಂತ" ಹೇಳ್ತ್‌ಗಡ.

ನಿನ್ನ ನೀರ್‌ಚಾಪೆ ತೆಗ್ದ್ ಬೆಂಕಿಗೆ ಇಸ್. ನನ್ನ ಮಕ್ಕಳ ತಿಂದ್‌ದರ ಇಚಾರ್ಸಿ ಕೊಡ್‌ಂತ? ಹೇಳ್ತ್‌ಗಡ. "ಬಾಳೆ ಪಾಪಾಕ್, ನೂಲ್ ಕೈತಾಂಗ್ ಕೂಡ್, ಅಳೆತ್ತರ ಕೆಂಡಕೂಡ್, ಲ್ಲಿಗೊಂದೇ ಸತ್ಯ ಇಡ್‌ಂತ" ಹೇಳ್ತ್‌ಗಡ. ಅಲ್ಲಿಂದ ಮತ್ತೆ ಮೊಲಣ್ಣನ ಮನೆಗೆ ಹೋತ್‌ಗಡ. ಲ್ಲಿಯೂ ಹೋಕನನೂ,

"ಹಬ್ಬಾಂತ ಬಾರ,

ಹೊಸ್ತೂಂತ ಬಾರ ಚೊರಕ್ಕ,

ನೀರ್‌ಚಾಪೆ ತನ್ನಿರೋ ಮಕ್ಕಳಿರಾಂತ" ಹೇಳ್ತ್‌ಗಡ.

ನಿನ್ನ ನೀರ್ ಚಾಪೆ ತೆಗ್ದ್ ಬೆಂಕಿಗೆ ಇಡ್. ನನ್ನ ಮಕ್ಕಳ ತಿಂದ್‌ದರ ಇಚಾರ್ಸಿ ಕೊಡ್‌ಂತ ಹೇಳ್ತ್‌ಗಡ. "ಬಾಳೆಪಾಪಕ್, ನೂಲ ಕೈ ತಾಂಗಾಕ್, ಅಳೆತ್ತರ ಕೆಂಡಕೂಡ್ ಅಲ್ಲಿ ಬಂದ್ ಸತ್ಯ ಹೇಳ್ನೆಂತ" ಹೇಳ್ತ್‌ಗಡ. ಅಲ್ಲಿಂದ ಸೀದ ಕುದ್ಕಣ್ಣನ ಮನೆಗೆ ಹೋತ್‌ಗಡ. ಅಲ್ಲಿ ಹೋಕನ,

"ಹಬ್ಬಾಂತ ಬಾರ, ಹೊಸ್ತೂಂತ ಬಾರ,

ಇಂದೇಕೆ ಬಂದೆ ಚೋರೆಕ್ಕಾ?

ನೀರ್ ಚಾಪೆ ತನ್ನಿರೋಮಕ್ಕಳಿರಾಂತ" ಹೇಳ್ತ್‌ಗಡ.

ನಿನ್ನ ನೀರ್‌ಚಾಪೆ ತೆಗ್ದ್ ಬೆಂಕಿಗೆ ಇಟ್ಟ್, ನನ್ನ ಮಕ್ಕಳ ತಿಂದ್‌ದರ ವಿಚಾರ್‍ಸಿಕೊಡ್‌ಂತ ಹೇಳ್ತ್‌ಗಡ. "ಬಾಳೆ ಪಾಪಾಕ್, ನೂಲ ಕೈತಾಂಗ್‌ಕಟ್ಟ್, ಆಳೆತ್ತರ ಕೆಂಡಕೂಡ್, ಅಲ್ಲಿ ಬಂದ್ ಸತ್ಯ ಹೇಳ್ನೇಂತ" ಹೇಳ್ತ್‌ಗಡ.

ಹಾಂಗೆ ಮತ್ತೆ ಇದ್ ಬಾತ್‌ಗಡ ಸೀದ. ಬಂದ್ ಆಳೆತ್ತರ ಕೆಂಡ ಕೂಡ್ತ್‌ಗಡ. ಬಾಳೆ ಪಾಪ್ ಹಾಕಿತ್‌ಗಡ ನೂಲ ಕೈತಾಂಗ್ ಕಟ್ಟಿತ್ ಗಡ. ಮತ್ತೆ ಇವರೆಲ್ಲರ ಬಾಕೆ ಮಾಡ್ತ್‌ಗಡ. ಇವ್ ಒಬ್ಬೊಬ್ಬನೇ ಬಂದ್, "ಬಾಳೆ ಪಾಪ್, ನೂಲಕೈತಂಗ್, ಆಳೆತ್ತರ ಕೆಂಡಂತ ತೆಗ್ದ್ ಹಾರ್‍ದೊಗಡ". ಹಾರಿದ್ ಕಡ್ಡೆಣ್ಣ, ಮೊಲಣ್ಣ ಅವೆಲ್ಲ ಹೋದೊ ಅಕೇರಿಗೆ ಕುದ್ಕಣ್ಣ, ಬಾತ್‌ಗಡ. ಬಂದ್ –

"ಬಾಲೆ ಪಾಪೊ,

ನೂಲಕೈತಂಗೋ,

ಆಳೆತ್ತರ ಕೆಂಡೊಂತ" ತೆಗ್ದ್ ಹಾರ್‍ತ್‌ಗಡ.

ಹಾರಿ ಕೆಂಡದ ನಡೂವಿಗೆ ಹಾರ್‍ತ್. ಕೆಂಡಂದ ತೆಗ್ದ್‌ದ್ ಹೊಂಡಲಿ ಹಾಕಿತ್ ಗಡ. ಅದರ ನೋಡಿಕೆ ಹೋಕಡ. [ಕಥಾ ನಿರೂಪಕ:ಸುಬ್ಬಮ್ಮ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 22.ರಕ್ಷಸಿ ಅಜ್ಜಿ ಕತೆ ಪಠ್ಯ 1

ಒಂದು ಊರ್‌ಲಿ ಒಂದು ಅಜ್ಜಿಗೆ ಒಂದು ಮಂಜ. ಅವು ಹಿಂಗೆ ಇದ್ದೊ. ಒಂದು ದಿನ ಕಡ್ಬು ಮಾಡ್ದೊ ಆ ಅಜ್ಜಿನ ಮಂಜ ಆ ಕಡುಬುನ ಒಂದು ಪೇರ್‍ಲೆ ಮರಕ್ಕೆ ಹತ್ತಿ ತಿನ್ನುತ್ತಾ ಇತ್ತ್. ಅಲ್ಲೆ ಒಂದು ರಾಕ್ಷಸಿ ಅಜ್ಜಿ ಬಾತ್. ಆ ರಾಕ್ಷಸಿ ಅಜ್ಜಿ ಆ ಹೈದನೊಟ್ಟುಗೆ ಹೇಳ್ತ್. 'ಮಂಜ ಮಂಜ ನಂಗೊಂದು ಪೇರ್‍ಲ ಹಣ್ಣು ಕೊಯ್ದ್ ಕೊಡುವಣಾಂತ' ಕೇಳ್ತ್. ಆಗ ಆ ಹೈದಾ ಒಂದು ಪೇರ್‍ಲ ಹಣ್ಣ್‌ನ ಕೊಯ್ದ್ ಕೈಗೆ ಹಾಕಿತ್. ಆಗ ಅಜ್ಜಿ ಹೇಳ್. 'ಮಂಜ ಮಂಜ ಇನ್ನೊಂದು ಕೊಯ್ದ್ ಹಾಕ್. ಅದ್ ಉಚ್ಚೆ ಗುಂಡಿಗೆ ಬೀತ್‌ಂತ' ಹೇಳ್ತ್. ಹೈದಾ ಇನ್ನೊಂದು ಕೊಯ್ದ್ ಹಾಕಿತ್. ಆಗ ಅಜ್ಜಿ ಹೇಳ್ತ್. 'ಮಂಜ ಮಂಜ ಇದ್ ಹೇಲ್ ಗುಂಡಿಗೆ ಬೀತ್. ನೀ ಒಂದು ಕೊಯ್ದ್ ಕೈಲ್ಲೇ ಹಿಡ್ದ್ ಮೆಲ್ಲಗೆ ಮರಂದ ಇಳ್ದ್ ಬಾ. ಈ ಗೋಣಿ ಚೀಲದೊಳಗೆ ಹಾಕ್‌ಂತ ಹೇಳ್ತ್' ಅಜ್ಜಿ. ಹೌದಾ! ಒಂದು ಹಣ್ಣ್ ಕೊಯ್ದ್ ಮರಂದ ಇಳ್ದ್ ಆ ಗೋಣಿ ಒಳಗೆ ಹುಕ್ಕ್ ಪೇರ್‍ಲ ಹಣ್ಣ್ ಹಾಕಿತ್.

ಆಗ ಅಜ್ಜಿ ಗೋಣಿಚೀಲ ಬಾಯಿಕಟ್ಟಿ ಹೋತ್. ಹೋಗಿ ಮಗಳೊಟ್ಟಿಗೆ ಹೇಳ್ತ್. ಮಗಳೆ ಇಂದ್ ಗಮ್ಮತ್ ಊಟ ಮಾಡಕು. ನೀ ಇದರ ಗೈಪು ಮಾಡ್. ನಾ ಪೇಟೆಗೆ ಹೋಗಿ ಬನ್ನೆತಾ ಹೇಳಿ ಅಜ್ಜಿ ಹೊರಟ್ ಹೋತ್. ಗೂಡೆ ಅಜ್ಜಿ ತಂದ ಕಟ್ಟ್‌ನ ನೋಡ್ತ್. ನೋಡ್‌ಕನ ಒಂದು ಲಾಯಿಕ್‌ನ ಹೈದ. ಅವನ ತಲೆಕೂದಲ್ ತುಂಬಾ ಚುಂಗುರಾಗಿತ್ತ್. ಇದರ ನೋಡ್‌ಕನ ಗೂಡೆಗೆ ಆಸೆ ಆತ್. 'ಅಣ್ಣ ಅಣ್ಣಾ ಈ ನಿನ್ನ ತಲೆಕೂದಲ್ ಹಿಂಗೆ ಹೇಂಗೆ ಆತ್‌ತಾ ಕೇಳ್ತ್? ಆಗ ಹೈದ

ಹೇಳ್ತ್. 'ನನ್ನ ಅವ್ವ ಯಾಗೋಳು ನೊರ್ಗುಳಿಲಿ ತಲೆ ಇಸಿಕೆ ಹೇಳ್ದು. ಮತ್ತೆ ಅವ್ವ ಒಣಕೇಲಿ ನನ್ನ ತಲೆ ಮೇಲೆ ಮಿಜುದು. ಆಗ ಹಿಂಗೆ ಆದೆಂತ' ಹೇಳ್ತ್. ಆಗ ಗೂಡೆ ಹೇಳ್ತ್. ಅಂದರೆ ನನ್ನ ಕೂದಲ್‌ನ ಹಂಗೆ ಮಾಡುವನಾಂತ ಕೇಳ್ತ್? ಆತ್ ನಾ ಮಾಡಿ ಕೊಟ್ಟನೆಂತ ಹೈದ ಹೇಳ್ತ್. ಗೂಡೆ ಒನಕೆ ಎಲ್ಲಾ ತಂದ್ ಕೊಟ್ಟತ್. ನೊರಗುಳ್‌ಲಿ ತಲೆ ಇಸಿತ್. ಹೈದ ಬೇರಿ ಒಣಕೆಲಿ ಮಿದ್ದತ್. ಗೂಡೆ ಸತ್ತೇ ಹೋತ್!

ಹೈದ ಅದರ ಗೈಪು ಮಾಡಿ ಒಲೆ ಚಿಂಟೆಲಿ ಇಸಿತ್. ಅಟ್ಟದ ಮೇಲೆ ಹತ್ತಿ ಒಂದು ರಾಗಿ ಕಲ್ಲ್ ಹಕ್ಕಲೆ ಇಸಿ ಕುದುಕನ್ತ್. ಅಜ್ಜಿ ಬಾತ್. ಬಂದ್ ಗೈಪು ನೋಡ್ತಾ ಬಾರಿ ಲಾಯಿಕ್ ಆಗುಟುತಾ ಹೇಳ್‌ಕಂಡ್ ತಿನ್ತಾ ಇತ್ತ್. ಆಗ ಒಂದು ಕಕ್ಕೆ ಮನೆನ ಅಟ್ಟದ ಮೇಲೆ ಕುದ್ದ್ 'ತನ್ನ ಮಾಸ ತಾನೇ ತಿಂದೆ ಮುಂಡೆ ಥೂ....ತಾ' ಹೇಳ್ತ್. ಇದ್ ಎಂಥಾ ಕಕ್ಕೆ. ಊಟಕ್ಕೆ ಸಹ ಬುಡುದುಲ್ಲೆಂತ ಹೇಳಿಕಂಡ್ ಹಂಞ ಅಗುಳ್ ತೆಗ್ದ್ ಆ ಕಕ್ಕೆಗೆ ಹಾಕಿತ್. ಅಂದರೂ ಕೂಡ ಆ ಕಕ್ಕೆ 'ತನ್ನ ಮಾಂಸ ತಾನೇ ತಿಂದೆ ಥೂ..... ಮುಂಡೆ ಥೂ.....ಅಂತ' ಹೇಳ್ತಾ ಇತ್ತ್. ಊಟ ಆತ್. ಊಟ ಆಗಿ ಈ ಕಕ್ಕೆನ ಹೊಡ್ದು ಕೊಲ್ಲಮತಾ ಆತ್. ಅಜ್ಜಿ ಗೂಡೆನ ಕರಿಯುತ್ತಾ ಇತ್ತ್. ಗೂಡೆ ಎಲ್ಲೂ ಕಾಂಬೊದುಲೆ. ಅಟ್ಟಲಿ ಶಬ್ದ ಕೇಳ್ತ್. ಗೂಡೆ ಅಟ್ಟಲಿ ಉಟ್ಟುತಾ ಅಟ್ಟಕೆ ಅಜ್ಜಿ ಹತ್ತಿತ್. ಹತ್ತ್‌ಕನ ಹೈದ ರಾಗಿ ಕಲ್ಲ್‌ನ ತೆಗ್ದ್ ಅಜ್ಜಿನ ತಲೆ ಮೇಲೆ ಹಾಕಿತ್. ರಾಕ್ಷಸಿ ಅಜ್ಜಿ ಸತ್ತೇ ಹೋತ್. ಹೈದಾ ಅಟ್ಟಂದ ಇಳ್ದ. ತನ್ನ ಮನೆಗೆ ಹೋಗಿ ಅಂವನು ಅಂವನ ಅವ್ವನು ಸುಖವಾಗಿ ಇಳೊ. – ಅವರ ನೋಡಿಕೆಗೆ ನೀವು ಹೋಕಡ [ಕಥಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 23.ರಕ್ಷಸಿ ಅಜ್ಜಿ ಕತೆ ಪತ್ಯ 2

ಒಂದು ಹೈದ. ಒಂದು ಪೇರ್ಲ ಬಿತ್ತ್ ಹಾಕಿತ್. ಪೇರ್ಲ ಬಿತ್ತ್ ಹಾಕಿದ್ ಆಕನ ಹೇಳ್ತ್, 'ನಾಳೆ ಹುಟ್ಟಿದಾ ಹುಟ್ಟಿದ, ಹುಟ್ಟದಿದ್ದರೆ ನನ್ನ ಅಪ್ಪನ ಕತ್ತಿಲಿ ಕಡ್ದ್ ಹಾಕುವೆಂತಾ' ಹೇಳ್ತ್. ಮಾರನೆ ದಿನಕೆ ಹುಟ್ಟುಟು. ಅಷ್ಟೊತ್ತಾಕನ ಮಾರನೆ ದಿನ ಬಂದ್ ಹೇಳ್ತ್. 'ನಾಳೆ ದೈ ಆದಾ ಆದ. ಇಲ್ಲಾರೆ ನನ್ನ ಅಪ್ಪನ ಕತ್ತಿಲಿ ಕಡ್ದ್ ಹಾಕುವೆಂತ' ಹೇಳ್ತ್. ಅದ್ ಮಾರನೆ ದಿನ ದೈ ಆಗುಟು. ಮಾರನೆ ದಿನ ಬಂದ್ ಹೇಳ್ತ್, 'ನಾಳೆ ಬಾಕನ ಪೇರ್ಲ ಮಿಡಿ ಆದಾ ಆದ. ಹೂಮಿಡಿ ತುಂಬ ಆಕುಂತ' ಹೇಳ್ತ್. ಬಾಕನ ಆಗುಟು. ಮಾರನೆ ದಿನ ಏನ್ ಹೇಳ್ತ್ ನಾಳೆ ಬಾಕನ ಹಣ್ಣ್ ಬೆಳ್ದ್ ತುಂಬ ಆಕ್ಕು. ಇಲ್ಲಾರೆ ನನ್ನ ಅಪ್ಪನ ಕತ್ತಿಲಿ ಕಡ್ದ್ ಹಾಕ್ವೆಂತ' ಹೇಳ್ತ್. ಹಾಂಗೆ ಹೇಳಿ ಮಾರನೆ ದಿನ ಬಾಕನ ಹಣ್ಣ್ ಬೆಳ್ದ್ ತುಂಬ ಆಗುಟ್ಟು.

ಇಂವ ಪೇರ್ಲಮರ ಹತ್ತಿ ಕೊಯ್ದ್ ತಿಂದ್‌ಕಂಡ್ ಉಟ್ಟು. ಹತ್ತಿ ಕೊಯ್ದ್

ತಿಂದ್‌ಕೊಂಡಿರಿಕನ ಒಂದು ರಕ್ಕಸಜ್ಜಿ ಬಾತ್. ರಕ್ಕಸಜ್ಜಿ ಬಂದ್‌ದಾಕನ 'ಯಾರ್ ಮಂಜ ಮರಲೀಂತ?' ಕೇಳ್ತ್. ನಾ ಅಜ್ಜಿ. 'ನಂಗೆ ಒಂದು ಪೇರ್ಲಕಾಯಿ ಕೊಯ್ದ್ ಹಾಕ್‌ಂತ' ಹೇಳ್ತ್. ಒಂದು ಕೊಯ್ದ್ ಹಾಕಿತ್. 'ಅದ್ ಚೋಳ್ ಹೊಂಡಕೆ ಬೀತ್‌ಂತ' ಹೇಳ್ತ್. ಮತ್ತೊಂದು ಕೊಯ್ದ್ ಹಾಕಿಕನ 'ಅದ್ ಹೇಲ್ ಹೊಂಡಕೆ ಬೀತ್‌ಂತ' ಹೇಳ್ತ್. ಇನ್ನೊಂದು ಎರಡ್ ಕೊಯಿದ್ದಾಕ್‌ಂತ ಹೇಳ್ತ್. 'ಅದ್ ಚೋಂಕರ್ ಹೊಂಡಕೆ ಬೀತ್‌ಂತ' ಹೇಳ್ತ್. ಆಗ ಹೇಳ್ತ್ 'ನೀ ಮೊಟ್ಟೆ ತುಂಬ ಕೊಯಿದ್ ಇಳಿ ಮಂಜಂತ' ಹೇಳ್ತ್. ಇಂವ ಏನ್ ಮಾಡ್ತ್ ಮೊಟ್ಟೆ ತುಂಬ ಕೊಯ್ತ್ ಇಳ್ತ್. ಇಳಿಯಕನ ಇದ್ ಕುಂಞಕತ್ತಿ, ಕಾಯಿಗಡಿ ಒಂದು ಗೋಣಿಲಿ ತಕೊಂಡೋಗುಟ್ಟು. 'ಅದರ್ಲಿ ನನ್ನ ಕುಂಞಕತ್ತಿ ಕಾಯಿಗಡಿ ಉಟ್ಟು. ಅದರ ಹುಕ್ಕ್ ತೆಗೀಂತ' ಹೇಳ್ತ್. ಹುಕ್ಕ್ ತೆಗಿಯಕನ ಗೋಣಿನ ಬಾಯಿ ಗಟ್ಟಿಕಟ್ಟಿತ್. ಬಾಯಿಕಟ್ಟಿದ್ ಹೊತ್ತ್‌ಕಂಡು ಹೋತ್.

ಹೋಗಿ ಹೋಗಿ ಹೋಕನ ಅಜ್ಜಿಗೆ ಕುಡಿಯಕೆ ಆಗಿ ಏನೂ ಬೊತ್ತ್. ಅಲ್ಲಿ ದನ ಮೇಯಿಸುವ ಮಕ್ಕ ಒಳೊ. ಆ ದನ ಮೇಯಿಸುವ ಮಕ್ಕಳೊಟ್ಟಿಗೆ ಹೇಳ್ತ್ 'ನೀರೆಲ್ಲಿಟ್ಟು ಮಕ್ಕಳೇಂತ?' ನೀರೋ ಈಚೆ ಗುಡ್ಡೆ ಮಗ್ಗ್ದ ಆಚೆ ಗುಡ್ಡೆ ಮಗಿಯಕನ ನೀರ್ ಸಿಕ್ಕಿದೇಂತ. ಈ ಕಟ್ಟ್‌ನ ಮುಟ್ಟ್ ಬೇಡಿ. ನಾ ಇಸಿ ಹೋನೆಂತ ಹೇಳ್ತ್ ಇದ್ ಒಡ್ತ್. ಇದ್ ಅಲ್ಲಿ ಕುಡಿಯಕೆಂತ ಓಡ್ತ್. ಕುಡ್ದ್‌ಬಾಕನ ಅದರ ಮೆಲ್ಲ ಬಾಯಿ ಬಿಚ್ಚಿ ಎಂತ ಇದ್‌ಂತ ನೋಡ್ಡೊ. ಹೈದನ ಬುಟ್ಟೊ. ಇದ್ಕೆ ಕಲ್ಲ್ ಮುಳ್ಳು ತುಂಬ್ಸಿದೊ. ತುಂಬಿ ಹಂಗೆ ಕಟ್ಟಿ ಇಸಿದೊ. ರಕ್ಕಸಿ ಅಜ್ಜಿ ಬಾತ್ ಹೊತ್ತ್‌ಕನ್ತ್ ಹೋತ್. ಹೊಕ್ಕನ ಇದ್ಕೆ ಕಂತಿ ಕಂತಿ ಇಸಿದೆ. 'ಕಂತಿಕಂತಿ ಇಸಿಯ ನಿನ್ನ ತುಂಡು ತುಂಡು ಅಗಿವೆಂತ' ಹೇಳ್ತ್. ಹೋಗಿ ತಕಂಡ್ ಮಗಳ ಕೈಲಿ ಕೊಟ್ಟತ್. ಮಗಳ ಕೈಲಿ ಕೊಟ್ಟ್ ಹೇಳ್ತ್. 'ಇಂದ ಇದರ ಲಾಯಿಕ್ ಗೈಪು ಮಾಡಿ ಇಸ್. ನಾ ಕಳ್ಳ್ ತಕೊಂಡು ಬನ್ನೆಂತ' ಹೇಳಿ ಓಡ್ತ್. ಹೋಗಿದ್ ಅಜ್ಜಿ ಬಾಕತ್. ಇದ್ ಎಂತರ ಗೈಪು ಮಾಡ್ದು? ಇದರ್ಲಿ ಕಲ್ಲ್ ಮುಳ್ಳು! ರಕ್ಕಸಿ ಅಜ್ಜಿ ಬಾತ್. 'ಗೈಪು ಆತೋಂತ ಕೇಳ್ತ್'. 'ಇಲ್ಲೆ ನಿನ್ನ ಸಾವುಟ್ಟ ಅದರ್ಲಿ'. ಕಲ್ಲ್ ಮುಳ್ಳುಟು ಮತ್ತೆಂತ ಇಲ್ಲೆ.

ದನಮಕ್ಕ ಮೋಸ ಕೊಟ್ಟೊ ನಂಗೆಂತ ಹೇಳ್ತ್. ವಾಪಾಸ್ ಹೋತ್. ವಾಪಾಸ್ ಹೋಕನ ಇಂವ ಮರಲಿ ಉಟ್ಟು. 'ಯಾರ್ ಮಂಜ ಮರಲೀಂತ ಕೇಳ್ತ್?' ನಾ ಅಜ್ಜಿ. 'ನಂಗೊಂದು ಪೇರ್ಲಕಾಯಿ ಕೊಯ್ದ್ ಹಾಕ್'. ಒಂದು ಕೊಯ್ದ್ ಹಾಕಿತ್. 'ಅದ್ ಉಚ್ಚೆ ಹೊಂಡಕೆ ಬಿತ್'. ಮತ್ತೊಂದು ಕೊಯ್ದ್ ಹಾಕ್. 'ಅದ್‌ಹೇಲ್ ಹೊಂಡಕೆ ಬೀತ್‌ಂತ' ಹೇಳ್ತ್. ಮೊಟ್ಟೆ ತುಂಬ ಕೊಯ್ದ್ ಇಳಿಂತ ಹೇಳ್ತ್. ಹಾಂಗೆ ಇಂವ ಮೊಟ್ಟೆ ತುಂಬ ಕೊಯ್ದ್ ಇಳ್ತ್. 'ಹೈದ ಅದರ ಹುಕ್ಕ್ ತೆಗಿಂತ' ಹೇಳ್ತ್. ಹುಕ್ಕ್‌ಕನ ಇದ್ ಕಟ್ಟಿಕಂಡ್ ಬಾತ್. ಬಾಕನ ನಿನ್ನೆ ಬಂದ ದಾರ್ಲಿ ಬಂದರೂ

ರನ ಮಕ್ಕ ಒಳೊ. ಕುಡಿಯಕೆ ಆತ್. ಇದ್ಕೆ ಒಳ್ಳೊ ಕುಡಿಯಕೆ ಆದರ್‍ರೂ ಇದ್ ಇಸಿತ್ಲೆ. ಸೀದ ಹೊತ್ತ್‌ಕಂಡ್ ಹೋತ್.

ಹೇಳ್ತ್ ಮಗಳೊಟ್ಟಿಗೆ 'ನಾ ಇಂದ್ ಎಲ್ಲಿ ಇಸಿತ್ಲೆ ಮಗ. ನಾ ಸೀದಾ ಹೊತ್ಕಂಡ್ ಬಂದೆ. ನೀ ಇದರ ಗೈಪು ಮಾಡ್. ನಾ ಕಳ್ಳ್ ತಕೊಂಡು ಬನ್ನೆಂತ' ಹೇಳಿ ಹೋತ್. ಬಿಚ್ಚಿ ನೋಡ್ಕನ ಒಳ್ಳೊ ಹೈದ. ಅವನ ತಲೆಕೂದಲ್ ಕಾಲಿಗೆ ಮುಟ್ಟ ಮುಟ್ಟಿದೆ. ಇದ್ಕೆ ಕೂದಲಿಲ್ಲೆ. ಯಾರಿಗೆ? ಈ ಗೂಡೆಗೆ. ಅದ್ಕೆ ಕೇಳ್ತ್. ಅದ ಅಕ್ಕಾ, 'ನನ್ನ ಅವ್ವ ಯಾಗೋಲು ಒರ್ಲ್‌ಲಿ ಇಸಿದ್ ಪೊರ್ಲು ಮಿಜಿದು. ಹಾಂಗೆ ಆಗಿ ಉದ್ದ ಬಂದದ್'ಂತ' ಹೇಳ್ತ್. ಇಂವ ಮಿಜಿತ್ ಮುಂದೆ ಮಿಜ್ಜ್‌ದ ತೋರ್ಸಿತ್. ಇಂವ ತೋರ್ಸಿ ತೋರ್ಸಿ ತಲೆಗೆ ಒಳ್ಳೊ ಮಿಜ್ಜದತ್. ಸತ್ತೇ ಹೋತಲ್ಲೆ.

ಇಂವ ಏನ್ ಮಾಡ್ತ್ ಅದರ ಸೀರೆ ಚಿನ್ನ ಪೂರ ಇಂವ ಹಾಕನ್ತ್. ಹೆಣ್ಣ್ ಡ್ರೆಸ್ ಆತ್. ಅದರ ಗೈಪುಮಾಡಿ ಇಸಿತ್. ಅದ್ ಬಾಕನ ಗೈಪಾತ್ ಮಗಾ? ಹ್ಲಾಂ ಗೈಪಾತವ್ವ. ಇದ್ ಬಾತ್ ಇಕ್ಕಿಕನ್ತ್ ತೀನ್ತ್. ಅಷ್ಟೊತ್ತಾಕನ ಅಲ್ಲಿಗೆ ಒಂದು ಕಕ್ಕೆ ಬಾತ್. ಆ ಕಕ್ಕೆ ಬಂದ್ ಹಣ್ಣಿನ ಮರಲಿ ಕುದ್ದ್ ಏನ್ ಮಾಡ್ತ್, 'ಕಾ... ಕಾ... ತನ್ನ ಮಗಳ ತಾನೇ ತಿನ್ತಾಳೆಂತ'. ಸಿ ಕೆಟ್ಟ ಕಕ್ಕೆಂತ ಒಂದು ತುಂಡು ತೆಗ್ದ್ ಇಟ್ಟತ್. ಅದರ ದೂರ ಇಸಿದ್ ವಾಪಾಸ್ ಬಾತ್. ಕಕ್ಕೆ 'ತನ್ನ ಮಗಳ ತಾನೇ ತಿನ್ತಾಳೆಂತ ಹೇಳ್ತ್'. ಅದ್ಕೆ ಮತ್ತೊಂದು ತುಂಡು ಹೆರ್‍ಕಿಸಿತ್. ಇಂವ ಅಟ್ಟಂದ ಹೇತತ್. ಸೇ ತುಪ್ಪದ ಮಡ್ಕೆ ಎಲ್ಲಾ ಹೋತ್'ಂತ ಹೇಳ್ತ್ ಅಟ್ಟಕೆ ಹತ್ತಿತ್. ರಕ್ಕಸಜ್ಜಿ ಅಟ್ಟಕೆ ಹತ್ತಿತ್. ಹತ್ತಿಕನ ರಕ್ಕಸಜ್ಜಿನ ತಲೆಗೆ ಕಡ್ಕಲ್ಲ್ ಹೊತ್ತ್ ಹಾಕಿತ್. ರಕ್ಕಸಜ್ಜಿ ಸತ್ತೊತ್. [ಕಥಾ ನಿರೂಪಕಿ:ದೇವಕಿ ಅಮ್ಚೂರು; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 24.ರಕ್ಷಸಿ ಅಜ್ಜಿ ಕತೆ ಪಠ್ಯ 3

**'ಅಪ್ಪದಿಟ್ಟ್ ಬಿತ್ತ್ ಹಾಕಿ ದೈ ಮಾಡ್ದು'**

ಒಂದು ಊರ್‍ಲಿ ಒಂದು ಅಜ್ಜಿ ಇತ್ತ್. ಆ ಅಜ್ಜಿಗೆ ಕೊಂಡಾಟದ ಒಂದು ಪಿಳ್ಳಿ ಇತ್ತ್. ಈ ಅಜ್ಜಿ ಒಂದು ದಿನ ಬೊಳ್ಪಿಗೆ ಕಾಫಿಗೆ ಅಪ್ಪದಿಟ್ಟ್ ಮಾಡ್ತ್. ಈ ಪಿಳ್ಳಿ ಅದರ ಸಮೊ ತಿಂತ್. ಅದರ್‍ಲಿ ಒಂದು ಅಪ್ಪದಿಟ್ಟ್ ಹಿಡ್ಕಂಡ್ ಹೋತ್. ದಾರ್‍ಲಿ ಹೋಕನ ಅವನಕ್ಕಲೆ ಒಂದು ಕತ್ತಿಟ್ಟು. ಆ ಕತ್ತಿಲಿ ನೆಲಲಿ ಒಂದು ಗುಂಡಿ ತೆಗ್ದ್ ಈ ಅಪ್ಪದಿಟ್ಟ್‌ನ ಅದಕ್ಕೆ ಹಾಕಿತ್. ಎಲ್ಲವೂ ಬಿತ್ತ್ ಹಾಕಿ ದೈಮಾಡ್ವೆ ಅಲ್ಲ. ಹಾಂಗೆ ಗುಂಡಿ ತೆಗ್ದ್ ಹಾಕಿತ್. 'ಇಂದಾ ನಾಳೆ ನಾ ಇಷ್ಟೊತ್ತಿಗೆ ಬನ್ನೆ. ಬಾಕೆ ಆಕನ ನೀ ಅಪ್ಪದಿಟ್ಟ್ ದೈ ಆಕ್ಕು. ದೈ ಆಗದಿದ್ದರೆ ನಿನ್ನ ಈ ಗಿಜಿಗಿಜಿ ಕತ್ತಿಲಿ ಗಿಜಿಕ್ಕ ಕಡ್ದನೆಂತ' ಹೇಳ್ತ್‌ಗಡ. ಇಂವ ಹಾಂಗೆ ಹೇಳ್ತ್. ಅಲ್ಲಿಂದ ಇಂವನ ಮನೆಗೆ ಹೋತ್. ಇಂವನ ಕೆಲಸಗಳ ಎಲ್ಲ ಮಾಡ್ತ್. ಮಾರನೆ ದಿನ ಅದೇ ಹೊತ್ತಿಗೆ ಇವಂಗೆ ಗೇನ ಆತ್. ಇಂವ ಸೀದ ಅಲ್ಲಿಗೆ ಬಾತ್. ಬಂದ್ ನೋಡ್ಕನ ಅಂವ ಹಾಕಿಸಿದ ಜಾಗೆಲಿ ದೈ ಆಗುಟ್ಟು. ಇಂವಂಗೆ ಬಾರೀ ಸಂತೋಷ ಆತ್.

ಎಲಾ ನಾ ಹೇಳ್ದಂಗೆ ಆದೆಲ್ಲಂತ ಹೇಳ್ತ್. 'ನೀ ನಾಳೆ ಬಾಕೆ ಆಕನ ದೈ ಮರ ಆಕ್ಕು. ಮರ ಆತ್ಲೆಂತ ಆದರೆ ಇಂದ ಇದೇ ನನ್ನ ಗಿಜಿಗಿಜಿ ಕತ್ತಿಲಿ ಗಿಜ್ಜಿಕ್ಕ ಕಡ್ಡನೆಂತ' ಹೇಳ್ತ್. ಹೇಳ್ತ್ ಇಂವ ಅಲ್ಲಿಂದ ಹೋತ್. ಅಲ್ಲಿಂದ ಹೋಗಿ ಮಾರನೆ ದಿನ ಆಕನ ವಾಪಾಸ್ ಮನೆಂದ ಬಾತ್. ಮನೆಗೆ ಬಂದ್ ನೋಡ್ರೆ ಅಂದ್ ಮರ ಆಗುಟು. ಇನ್ನ್ ಎಂತ ಕೇಳ್ದು. 'ನಾಳೆ ನಾ ಬನ್ನೆ ಬಾಕನ ಅಪ್ಪದಿಟ್ಟ್ ದಾರಾಳ ಆಕ್ಕು. ಅದ್ ಆತ್ಲೆ ನಿನ್ನ ಈ ಗಿಜಿಗಿಜಿ ಕತ್ತಿಲಿ ಗಿಜಿಕ್ಕ ಕಡ್ಡನೆಂತ' ಹೇಳ್ತ್. ಆತ್‌ಂತ ಹೇಳಿ ಅಲ್ಲಿಂದ ಹೋತ್. ಮಾರನೆ ದಿನ ಅದೇ ಹೊತ್ತಿಗೆ ಇಂವ ಅಲ್ಲಿಗೆ ಬರೊಕಾರೆ ಮರಲಿ ಅಪ್ಪದಿಟ್ಟ್ ಆಗುಟ್ಟ್. ಬಾರಿ ಸಂತೋಷ ಆತ್. ಇನ್ನು ಹೇಂಗೂ ನಾ ಇಷ್ಟೆಲ್ಲಾ ಹೇಳ್ದೆ ಅಲ್ಲ. ಇದರ ರುಚಿ ಹೇಂಗುಟ್ಟು ನೋಡೋಣಾಂತ? ಇಂವ ಮರಕ್ಕೆ ಹತ್ತಿತ್. ಮರಕ್ಕೆ ಹತ್ತಿ ಒಂದೊಂದು ಅಪ್ಪದಿಟ್ಟ್ ತಿಂಬಕೆ ಶುರುಮಾಡ್ತ್. ಬಾರೀ ರುಚಿ ಉಟ್ಟು.

ತಿಂದ್‌ಕೊಂಡು ಸ್ವಲ್ಪ ಹೊತ್ತ್ ಅದರ್ಲಿ ಕುದ್ದ್‌ಕಂಡಿರಿಕನ ಆ ದಾರಿಲಿ ಮರದ ಅಡಿಲಿ ಒಂದು ಅಜ್ಜಿ ಹೋದು ಕಂಡತ್ ಇವಂಗೆ. ಇಂವಗೆ ಬಾರಿ ಸಂತೋಷ ಆತ್. ಇವಂಗೆ ತಿಂದ್‌ದ್ ಹೊಟ್ಟೆ ತುಂಬಿತಲ್ಲೆ. ಇದೊಂದು ಅಜ್ಜಿ ಯಾರೋ ಹೋದೆ. ಅದೂ ತಿನಲಿಂತ ಒಂದು ಅಪ್ಪದ ಹಿಟ್ಟ್‌ನ ಹಾಕಿತ್. ಅದ್ ಅಜ್ಜಿ ಹೋದ ದಾರಿಗೆ ಬಿದ್ದ್ ಅಜ್ಜಿ ಹೀಂಗೆ ಮರದತ್ತ ನೋಡ್ತ್. ನೋಡಿಕೆ ಆಕನ ಮರಲಿ ಒಂದು ಮೊನ್ಸ ಕಂಡದೆ. ಸಣ್ಣ ಹೈದ. ಅದರಡಿಲಿ ಅಪ್ಪದಿಟ್ಟ್ ಕಂಡದೆ. ಇದೆಂತದ್ ಕತೆಂತ ಅಜ್ಜಿ 'ಓ ಪಿಳ್ಳಿ ಎಂತದ್ ಮರಲಿ ಒಳದ್‌ಂತ'. ಅದ್ ಅಪ್ಪದಿಟ್ಟ್. ನೋಡ ನಂಗೆ ಒಂದೆರಡ್ ಕೊಡುಂತ ಹೇಳ್ತ್. ನೀ ಏನಾರು ಮಾಡಿ ಅದರಂದ ಒಂದು ಸ್ವಲ್ಪ ಹಿಡ್ಕಂಡ್ ಕಾಗಡೆ ಇಳಿ. ನಂಗೆ ಇಲ್ಲಿ ಕೊಡ್. ಹಾಂಗೆ ನೀ ಬಿಸಾಡ್ರೆ ಅದ್ ಒಳ್ಳೊದಾದ್ಲೆಂತ' ಅಜ್ಜಿ ಹೇಳ್ತ್. ಅಲ್ಲಿಂದ ಇಂವ ಕೋಮಣಲಿ ಒಂದಿಷ್ಟ್ ಕಟ್ಟಿಕೊಂಡ್ ಬಾತ್. ಕಾಗಡೆ ಇಳ್ತ್. ಅಜ್ಜಿಗೆ ಕೊಟ್ಟತ್. ಅಜ್ಜಿಗೆ ಕೊಟ್ಟ್‌ದ್ ಇವು ಇಬ್ಬರ್ ತಿಂದ್‌ಕಂಡಿರಿಕನ ಅಜ್ಜಿಗೆ ಒಂದು ತರಾದ ಮನಸಾಗಿ ಇಂವನ ಹಿಡ್ಕನ್ತ್. ಹಿಡ್ದ್ ಇಂವನ ಒಂದು ಗೋಣಿಲಿ ತುಂಬಿಸಿತ್. ಆ ರಕ್ಕಸಿಅಜ್ಜಿ. ಬಾಯಿಕಟ್ಟಿ ಒಂದು ಹೊರಡಟ. ಸೀದಾ ಹೊತ್‌ಕಂಡು ಅಜ್ಜಿ ಹೋತ್.
ದಾರ್ಲಿ ಹೊಕೆ ಆಕನ ಅಜ್ಜಿಗೆ ಪಾಯಿಖಾನೆ ಮಾಡೊಕುಂತ ಆದೆ. ಹಾಂಗೆ ಅಜ್ಜಿ ಇಂವನ ಎಲ್ಲಿ ಇಸುದು? ಅಂತ ಒಂದು ಗುಡ್ಡೆಲಿ ಒಂದು ಅಡ್ಕಲಿ ತಕೊಂಡೋಗಿ ಇಸಿತ್. ಅಲ್ಲಿಂದ ಸೀದಾ ಇದ್ ನೀರ್ನ ಹುಡುಕಿಕೊಂಡ್ ಹೋತ್. ಇಲ್ಲಿ ಇಂವ ಬಾಯಿ ಕಟ್ಟಿದ ಗೋಣಿ ಅಲ್ಲ. ಇಂವ ಅತ್ತ ಇತ್ತ ಹೊನ್ಕಿತ್. ಈ ಹೊನ್ಕುಕ್‌ದರ ನೋಡಿ ಅಲ್ಲೇ ಸ್ವಲ್ಪ ದನ ಮೇಪುನ ಮಕ್ಕ ಇದ್ದೊ. ಅವು ಸೀದ ಓಡಿ ಬಂದೊ. ಗೋಣಿಕಟ್ಟ್ ಅಜ್ಜಿ ಇಸಿ ಹೋತಲ್ಲೆ. ಎಂತದ್‌ಂತ ನೋಡಮಂತ? ನೋಡ್ಕನ ಇದ್ ಮೆದ್ಕಿದೆ. ಮೆದ್ಕಿ ಆಕನ ಎಂತದ್ ಇದ್‌ಂತ? ಹೇಳ್ಕನ. 'ಓ ಅಣ್ಣಂದಿರೆ ಒಮ್ಮೆ ದಯ ಮಾಡಿ ನನ್ನ ಬಿಚ್ಚಿ. ಅಜ್ಜಿ ನನ್ನ ಕೊಲ್ಲಿಕೆ ತಕಂಡೋದೆಂತ' ಹೇಳ್ತ್. ಎಲ ಕತೆನೆ! ಇದ್ ಎಂತಕತೆ? ಅಂತ ನೋಡ್ಕನ ಅಜ್ಜಿ ದೂರಲಿ ಉಟ್ಟು. ಇವು ಎಲ್ಲವು ಸೇರಿ ಬಳ್ಳಿ ಬಿಚ್ಚಿದೊ.

ರೀ ಖುಷಿನ  ಹೈದ.  ಇಂವ ಎದ್ದ್ ಅಲ್ಲಿಂದ ಪದ್ರಾಡ್ ಹಾಕಿತ್.  ಪದ್ರಾಡ್ ಹಾಕಿ ಆಕನ ಈ ನ ಮೇಪುನವು ಎಲ್ಲ ಹೇಳ್ದೊ.  'ಹೀಂಗೆ ನೀ ಓಡ್ರೆ ಆಕಿಲ್ಲೆ.  ಅಜ್ಜಿ ಮತ್ತೆ ನಮ್ಮ ಹಿಡ್ಕೊಂಡು ೋದು.  ಅದ್ಕೆ ಒಂದು ಪ್ಲೇನು ಮಾಡೋಣ'.  ಎಂತದ್ ?  ಕಲ್ಲ್ ಮುಳ್ಳುನ ಎಲ್ಲ ತಂದ್ ದರೊಳಗೆ ತುಂಬಿಸಿ ಗಟ್ಟಿಕಟ್ಟಿದ್ ಇವು ಅಡಂಗಿದೊ.

ಒಂದು ಗಳಿಗ್ಗೆ ಆಕನ  ಅಜ್ಜಿ ಬಾತ್.  ಬಂದ್ ಇದರ ನೇಚಿ ಹೊತ್ತತ್.  ಹೊತ್ತಾಕನ ದ್ ಅಜ್ಜಿನ ತಲೆಗೆ ಕಂತಿತ್.  ಬೋಳಿ ಮಂಜ.  ನಂಗೆ ನೀ ಜಿಂಟಿಯನ.  'ನಿನ್ನ ಇಂದ್ ಗೈಪ್ ಾಡಿ ನನ್ನ ಮಗಳಿಗೆ ಪೂರ್ಲ್ ಇಕ್ಕಿನೆ.  ನಿನ್ನ ಸಂತಾನ ಇಲ್ಲಿಗೆ ಆತ್‌ಂತ' ಅಜ್ಜಿ ಹೊತ್ತ್‌ಕಂಡು ೋತ್.  ಹೊತ್ತ್‌ಕಂಡ್ ಹೋಗಿ ಸೀದ ಮನೆಗೆ ಹೋಗಿ ಹೇಳ್ತ್, 'ಏಯ್ ಇಂದ ತಂದೊಳೆ ಂದ್.  ಇದರ ಪೊರ್ಲು ಗೈಪು ಮಾಡಿ ಇಸ್ ಈಗ ಬನ್ನೆಂತ' ಹೋತ್.  ಅಜ್ಜಿ ಹೊರಗೆ ಹೋಗಿ ಂದು ಗಳಿಗೆ ಆಕನ ಈ ಮಗಳ್ ಇದರ ಬಿಚ್ಚಿ ನೋಡ್ರೆ ಇದರ್ಲಿ ಕಳ್ಳ್ ಮಳ್ಳ್ ಅಲ್ಲದೆ ಮೊನ್ಸ ಲ್ಲಿಟು.  'ಈ ಅಯ್ಯೆಗೆ ಏನ್ ತಲೆ ಸರಿಲ್ಲೆನ ?  ಯಾಗೋಲು ತಾತಿತ್ತ್.  ಇದ್ಕೆಂತದ್ ಸೊಯ ಇಲ್ಲೆನ ?' ಅಂತ ಹೇಳ್ತ್ ಕುದ್ದತ್.  ಕುದ್ದ್‌ದಾಕನ ಇದ್ ಬಾತ್.  'ಆತನೆ ಗೈಪುಂತ ಕೇಳ್ತ್'. ಎಂತ ಗೈಪು ನಿನ್ನ  ಸುಡುಗಾಡ್'.  'ಎಂತದ್ ನಿಂಗೆ ಸೊಯ ಉಟ್ಟುಂತ' ಬೊಯ್ಕಂಡ. ಂದ್ ನೋಡ್ಕನ ಗೋಣಿಲಿ ಕಲ್ಲ್ ಮುಳ್ಳ್ ಮಾತ್ರ.  'ಎಲಾ ಇವನ!  ಹೈದನ ತಂದೆ.  ಅಲ್ಲ ಲ್ಲಿ ಹೋತ್ ? ಅಂದರೆ ಹಂಗರೆ ನಾ ಎಡೆ ದಾರ್ಲಿ ಇಸಿದ್ ಪಾಯಿಕಾನೆಗೆಂತ ಹೋಗಿದ್ದೆ. ಆಗ ನೋ ಕಿತಾಪತಿ ಆಗುಟ್ಟುಂತ'.  'ಇದ್ ಆತ್ಲೆ?  ಇಂದ್‌ದ್ ಕಳ್ತಲ್ಲೆ.  ಇನ್ನ್ ಹೆಂಗಾರ್ ಮಾಡಿ ಆ ಹೈದನ ನಾಳೆ ನಾಳ್ದರ್‌ಲಿ ತಲಾಸ್ ಮಾಡೊಕುಂತ' ವಾಪಾಸ್ ಅಜ್ಜಿ ಹೊರ್ಟತ್.

ೀದಾ ಆ ದಾರ್ಲಿ ಬಾಕನ ಇಂವ ಅದೇ ಅಪ್ಪದಿಟ್ಟ್ ಮರಲಿ ಉಟ್ಟು.  ತಿನ್ತಾ ಉಟ್ಟು.  ಈ ಅಜ್ಜಿಗೆ ಇಂವನ ನೋಡ್ಕನನೇ ಬಾರೀ ಖುಷಿಯಾತ್. ಅಜ್ಜಿ ಮರ ನೋಡಿಕಂಡ್ ಅಲ್ಲೇ ನಿಂತತ್. ಇಂವ ಮೇಲೆಂದ ಹಿಟ್ಟ್ ಕೆಳಗೆ ಹಾಕಿತ್.  ಅಜ್ಜಿ ಹೇಳ್ತ್.  'ಓ ಮಗ ಇಂದ ನೀ ನಾಕ್ ಹಿಟ್ಟಾಕ್‌ಂತ'. ಇಂವ  ತೆಗ್ದ್ ಕಾಗಡೆ ಹಾಕಿತ್.  ಹಾಕಿಕನ 'ಇಂದಯ ಅದ್ ಕೆಸರಿಗೆ ಬೀತ್'.  'ಮತ್ತೆ ಅದ್ ೀರಿಗೆ ಬೀತ್'.  'ಛೆ! ಒಂದೂ ನಂಗೆ ಸರಿ ತಿಂಬಕೆ ಸಿಕ್ಕಿತ್ಲೆ ಅಲ್ಲೆ.  ನೀ ಹಾಂಗಾರೆ ಸ್ವಲ್ಪ ಹಿಡ್ಕಂಡು ಇಳಿ ಅಪ್ಪಯ.  ಬಾರೀ ರುಚಿ ಇರೊಕುಂತ' ಹೇಳ್ತ್ ಆತ್.  'ನೀ ಏನ್ ಮಾಡಿಕಿಲ್ಲೆ ಅಲ್ಲ'.  'ಛೆ! ನಾ ಅಂತ ಅಜ್ಜಿಯಲ್ಲ.  ನಿನ್ನಂತ ಪಿಳ್ಳೆಗ ನಂಗೆ ಸುಮಾರ್ ಒಳೊಂತ' ಹೇಳ್ತ್.  ಇಂವ ಹಿಡ್ಕೊಂಡು ಮರಂದ ಇಳ್ತ್.  ಇಳ್ದ್ ಕಾಗಡೆ ಬಂದ ಕೂಡ್ಲೆ ಅಜ್ಜಿ ಒಂದು ಹಾರಟ ಹಾರಿ ಹಿಡ್ಕಂತ್. ಹಿಡ್ಕಂಡದರ್ಲಿ ಉಟ್ಟಲ್ಲೆ ಇವಂಗೆ ಏನೂ ಮಾಡಿಕೆನೂ ಆತ್ಲೆ.  ಕಡೆಗೆ ಅಜ್ಜಿ ಬಾಯಿಕಟ್ಟಿ ಒಂದು ಹೊರಟ ಹೊರ್ಟತ್.   ಹೊತ್ತ್ ಸೀದಾ ಹೋತ್.  ಎಲ್ಲಿಯೂ ನಿತ್ತತ್ಲೆ ಸೀದಾ ಮನೆಗೆ ಹೋತ್.  'ಇಂದ ಇಂದ್ ಆ ಬೋಳಿ ಮಂಜನ ತಂದೊಳೆ.  ಇಂದ್ ಸಿಕ್ಕಿತ್ ಅಂವ.  ಇಂದ್

ಅಂವನ ಪೊರ್ಲು ಗೈಪು ಮಾಡ್‌ಂತ' ಹೇಳ್ತ್. ನಾ ಈಗ ಬನ್ನೆಂತ ಹೋತ್. ಅಜ್ಜಿ ಅಮಲ
ತಕೊನಿಕೆ ಹೋತ್.

ಈ ಹೊತ್ತಿಗೆ ಮಗಳ್ ಗೋಣಿನ ಬಾಯಿ ಬಿಚ್ಚಿತ್. ಬಿಚ್ಚಿ ಆಕನ ಇಂವ ಎದ್ದತ್
ಬಾರೀ ಶೋಕುನ ಹೈದ ಅಲ್ಲ. 'ನಿನ್ನ ಹಿಡ್ದ್ ಗೈಪು ಮಾಡೊಕಲ್ಲ. ಗೈಪು ಮಾಡ್ರೆ ಈಗ ಸೌದ
ಇಲ್ಲೆ ಅಲ್ಲಪ್ಪಾ. ಎಂತ ಮಾಡ್ದು ಕಿಚ್ಚಿ ಮಾಡಿಕೆಂತ' ಹೇಳ್ತ್. 'ಸೌದೆನ ಅಕ್ಕ ಸೌದೆ ನಾ ಒಡ್ಡು
ಕೊಟ್ನೆ. ಮಚ್ಚು ಕೊಡುಂತ' ಹೇಳ್ತ್. ನಿಂಗೆ ತೀರ್ದಯ? ಆತ್ ಅಂದರೆಂತ ಹೇಳ್ತ್. ಮಚ್ಚುನ
ಹುಡುಕಿ ತಂದ್‌ಕೊಟ್ಟತ್. ಇಂವ ಸೀದ ಹೊರಗೆ ಹೋತ್. ಹೋಗಿ ಮಚ್ಚು ತಾತ್. ಸೌದೆ
ಒಡ್ತ್. ಸೌದೆ ಒಡ್ದ ಕೂಡ್ಲೆ ಇದ್ ಬಾತ್. 'ಇಂದ ಸೌದೆ ಎಲ್ಲ ಒಡ್ಡಿಯಾಂತ ಕೇಳ್ತ್?' ಸೌದೆ
ಹೆರಿಕ್ಕೆಂತ ಇದ್ ಚೆಕ್ಕೆ ಹೆರಿಕ್ಕನ ನೇಚಿ ಒಂದು ಗಡಿ ಹಾಕಿತ್ ಇದ್ಕೆ. ಗೂಡೆ ಅಲ್ಲಿಗೇ ಮಚ್ಚು ತಾಂಗಿ
ಸತ್ತ್ ಹೋತ್.

ಅದರ ಎಲ್ಲ ಪೊರ್ಲು ತಜಪ್ಪಿ ಮಾಸದ ರೂಪಲಿ ಮಾಡಿ, ಅದರ ಹಲಗೆಲಿ ಹಾಕಿ, ದೊಡ್ಡಾ
ಪಾತ್ರಲಿ ಹಾಕಿ ಬೇಸಿತ್. ತುಂಡು ತುಂಡು ಮಾಡಿ ಬೇಸಿತ್. ಅದ್ಕೆ ಒಂದು ಸ್ವಲ್ಪ ಮಸಾಲೆ
ಗಿಸಾಲೆ ಹಾಕಿ ಅದರ ಕೊದ್ದಿಸಿ ಇಂವ ಕಾಗಡೆ ಇಸಿತ್. ಒಂದು ಕಡಿವ ಕಲ್ಲ್‌ನ ಗುಂಡು
ತಕೊಂಡು ಅಟ್ಟಕೆ ಹತ್ತಿ ಕುದ್ದತ್. ಅಜ್ಜಿ ಬಾತ್ ರಕ್ಕಸಿ. ಬಾಕನನೇ ಬಾರೀ ದರ್ಬಾರ್ಲಿ ಬಾತ್.
'ಆತಯ ಗೈಪು. ಆತಯಂತ ಹೇಳ್‌ಡ್ರೆ ಯಾರೊಳ ಇಲ್ಲಿ ಮಾತಾಡಿಕೆ. ಯಾರೂ ಇಲ್ಲೆ? ಅಜ್ಜಿ
ಅತ್ತ ಇತ್ತ ನೋಡ್ತ್ ಬಾತ್. ಕುದ್ದತ್. ಕುದ್ದತ್ ತಿಂಬಕೆ ಇಕ್ಕಿ ಕೊನಿಕೆ ಶುರು ಮಾಡ್ತ್. ಇದ್
ಇಕ್ಯಂಡ್ ಕೈ ಹಾಕಿಕೆ ಆಕನ ಮನೆ ಹಕ್ಕಲೆ ಒಂದು ಕಕ್ಕೆ ಬಾತ್. ಕಕ್ಕೆ ಬಂದ್ ಕುದ್ದುಕಂಡ್ 'ತನ್ನ
ಮಗಳ ತಾನು ತಿನ್ತಿಯ ಕಾ.. ಕಾ.. ಕಾ.. ತನ್ನ ಮಗಳ ತಾನು ತಿನ್ತಿಯ ಕಾ.. ಕಾ.. ಕಾ ತನ್ನ ಮಗಳ
ತಾನೆ ತಿನ್ತಿಯ ಕಾ.. ಕಾ.. ಕಾಂತ' ಮೂರು ಸರ್ತಿ ಹೇಳ್ತ್. 'ಎಲಾ ಈ ಕಕ್ಕೆಗೇನ್ ಸೊಯ
ಇಲ್ಲೆಯ. ಮಗಳ ತಿಂಬೊದು ಗಡ. ಸತ್ತದ್. ಇದರ ಸಾವುಂತ ಹೇಳಿ ಅದರ ಬೆರ್ಸಿತ್. ಅದ್
ಹಾರಿ ಹೋತ್.

ಇದ್ ಪೊರ್ಲು ಇದರ ತೀನ್ತ್. ತಿಂದ್ ಆಗಿ ಆಕನ ಇದ್ಕೆ ಸಮಾ ಹೊಟ್ಟೆ ತುಂಬಿಕಂಡ್ ಬಾಕನ
ಇಂವ ಅಟ್ಟಂದ ಪರಪರ ಶಬ್ದ ಮಾಡಿ ಈ ಅಜ್ಜಿ ಕುದ್ದಲ್ಲಿಗೆ ಆ ಕಲ್ಲ್‌ನ ನೇಚಿ ಅಜ್ಜಿನ ತಲೆಗೆ
ಹಾಕಿತ್. ಅಜ್ಜಿ ಅಲ್ಲೆ ಬಜಕ್ಕಂತ ಸತ್ತೋತ್. [ಕಥಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ;
ಸಮಯ:ಹಗಲು; ವರ್ಷ–1991]

## 25.ಮಾಂತ್ರವಾದಿ ಅಜ್ಜನ ಕತೆ

ಒಂದು ಅರ್ಸು ಒಂದು ಅಜ್ಜಿ. ಆ ಅರ್ಸು ಅಜ್ಜಿಗೆ ಒಂದೂ ಮಕ್ಕ ಇಲ್ಲೆ. ಒಂದು ದಿನ ಹಳ್ಳಕೆ
ಮೀಯಾಕೆ ಹೋತ್. ಅಲ್ಲಿ ಒಂದು ಏಸ್‌ಂಡ್ ಕಾಂಬಕೆ ಸಿಕ್ಕಿತ್. ಆ ಏಸ್‌ಂಡ್‌ನ ನೋಡ್ಕನ ಅದರ್ಲಿ

ಂಬ ಮರಿಗ ಇದ್ದೊ. ಆ ಮರಿಗಳ ಇಂವಗೆ ಬೇಜಾರ ಆತ್ ನೋಡಿ. ಈ ಏಸ್‌ಂಡ್‌ಗೆ ಆದರೂ ಾವಿರದೊಂದು ಮರಿ ಉಟ್ಟು. ನಾವ್ಗೆ ಒಂದುನೂ ಮರಿ ಇಲ್ಲಂತ ಹೇಳ್ತ್. ವಾಪಸ್ ಮರಂದ ುರಕ್ಕೆ ಕುರೆಗ ಹಾರುವೆ. 'ಆ ಕುರೆಗಳಿಗಾರ್ ಮರಿ ಉಟ್ಟು ನಂಗೆ ಒಂದೂ ಮಕ್ಕ ಇಲ್ಲೆಂತ' ಹೇಳಿ ಇದ್ ಮೆಲ್ಲ ಹೋತ್ ಮನೆಗೆ. ಮನೆಗೆ ಹೋಗಿ ಬೇಜಾರ್‌ಲ್ಲಿ ಕುದ್ದತ್. ಧರ್ಮದ ಬಾಗಿಲ್ ಹಾಕಿ ರ್ಮದ ಬಾಗಿಲ್ ತೆಗ್ಸಿ ಕುದ್ದತ್.

ಕುದ್ದ್ ಆಕನ ಒಬ್ಬ ಬೇಡಂವ ಬಾತ್. ಬೇಡಂವ ಬಂದ್ ಮನೆಯವು ಯಾರೂ ಇಲ್ಲೆ? ಅಷ್ಟೊತ್ತಿಗೆ ಒಳೊ ನಾವು. 'ಧರ್ಮದ ಬಾಗಿಲ್ ತೆಗ್ಗಿಸಿದೆ. ಕರ್ಮದ ಬಾಗಿಲ್ ಹಾಕಿದ್‌ಂತ' ಅದ್ ಕೇಳ್ತ್. ಅಷ್ಟೊತ್ತಿಗೆ ಅದ್ ಧರ್ಮ ಎಂತದ್? ಕರ್ಮ ಎಂತದ್? 'ನಾವ್ಗೆ ಒಂದ್ ಮಕ್ಕ ಇಲ್ಲೆ. ನಾವ್ಗೆ ಧರ್ಮ ಇಲ್ಲೆ ಕರ್ಮ ಇಲ್ಲಂತ' ಹೇಳ್ತ್. ಅಷ್ಟೊತ್ತಿಗೆ ಅಂವ ಹೇಳ್ತ್, 'ಅದಕ್ಕೇನ್ ೀವು ಬೇಜಾರ ಮಾಡ್ಯರಿ? ನೀವ್ಗೆ ಮಕ್ಕ-ಮರಿ ಎಲ್ಲ ನಾ ಮಾಡಿಕೊಟ್ಟನೆ. ಮೂರು ಮುದ್ದೆ ಅನ್ನ ತನ್ನಿಂತ' ಹೇಳ್ತ್. ಮೂರು ಮುದ್ದೆ ಗಂಜಿ ಬೇಡಂವನ ಕೈಲಿ ತಂದ್ ಕೊಟ್ಟತ್. ಅಷ್ಟೊತ್ತಿಗೆ ಅಂವ 'ಮೂರು ಮುದ್ದೆನ ನೀವು ಊಟ ಮಾಡೋಕು. ನಾ ಮೂರು ವರ್ಷ ಕಳ್ದಾಕನ ಬನ್ನೆ. ಆಗ ಮೂರು ಮಕ್ಕ ಆದವೆ. ಮೂರು ಮಕ್ಕಳ್‌ಲಿ ಸುರೂಗೆ ಹುಟ್ಟಿದ ಕೂಸ್‌ನ ನಂಗೆ ಕೊಡೊಕುಂತ' ಹೇಳ್ತ್. ಅಕ್ಕ್‌ಂತ ಒಪ್ಪಿಕೊಂಡೊ ಅವು. ಒಪ್ಪಿಕಂಡ್ ಅಂವ ಹೋತ್.

ಹೋಗಿ ಮೂರು ವರ್ಷ ಕಳ್ದಾಕನ ಮೂರು ಮಕ್ಕ ಆದವೆ. ಮೂರೂ ಗಂಡೆ. ಮೂರು ಮಕ್ಕ ಆಗಿ ಆಕನ ಮೂರು ವರ್ಷಕಳ್ದ್ ಬಾತ್ ವಾಪಾಸ್. ಬಾಕನ 'ಅಜ್ಜಪ್ಪ ಬಂದೊ, ಅಜ್ಜಪ್ಪ ಬಂದೊಂತ' ಹೇಳ್ದೊ. ಅಜ್ಜಪ್ಪ ಬಂದೊಂತ ಹೇಳಿದ್ 'ಇನ್ನ್ ನಂಗೆ ಮುಂದೆ ಹುಟ್ಟಿದರ ಕೊಡಿನಿಂತ ಹೇಳ್ತ್'. ಇವು ಏನ್ ಮಾಡ್ದೊ ಮುಂದೆ ಹುಟ್ಟಿದರ ಕೊಡಿಕೆ ಮನಸ್ಸಿಲ್ಲೆ. ಅಕೇರಿಗೆ ಹುಟ್ಟಿದವನ ಕೊಟ್ಟೊ. ಕೊಟ್ಟ್ ಅಜ್ಜ ಹೋತ್. ಹೋಗಿ ಹೋಗಿ ದೊಡ್ಡ ಒಂದು ಕಾಡಿಗೆ ಹೋಗಿ ಎತ್ತಿದೊ. ಆಗ ಕೂಸು ಹೇಳ್ದೆ, 'ಅಜ್ಜಪ್ಪಜ್ಜಪ್ಪಾ ಒಳ್ಳೊ ದಾರಿಬುಟ್ಟು ನನ್ನ ಕಾಡ್ ದಾರಿಲಿ ಏಕೆ ಕರ್ಕೊಂಡು ಹೋದಜ್ಜಪ್ಪಂತ?' ಕೇಳ್ದೆ. 'ಸೆಕ್ಕ್ ಸೂಳೆಮಂಜ ನೀ ನಂಗೆ ಆಕಿಲ್ಲೆಂತ' ಹೇಳ್ದೆ. ವಾಪಾಸ್ ಕರ್ಕೊಂಡು ಅಮ್ಮನ ಹಕ್ಕಲೆ ಬಂದದೆ.

ತಂದ್‌ದ್ ಹೇಳ್ದೇ, 'ಈ ಕೂಸು ನಂಗೆ ಆಕಿಲ್ಲೆ. ನಂಗೆ ಇನ್ನೊಬ್ಬನ ಕೊಡೀಂತ'. ಅಂದರೂ ಸುರೂಗೆ ಹುಟ್ಟಿದವನ ಕೊಡಿಕೆ ಮನಸ್ಸ್ ಬಾದ್ಲೆ. ವಾಪಾಸ್ ನೆಡುವನ ಹುಟ್ಟಿದ ಕೂಸ್‌ನ ಕೊಟ್ಟವೆ. ತಕೊಂಡ್ ಹೋದೆ. ಹೋಗಿ ಹೋಗಿ ದೊಡ್ಡಾ ಒಂದು ಕಾಡಿಗೆ ಹೋಕನ ಅಜ್ಜಪ್ಪಜ್ಜಪ್ಪಾ ಒಳ್ಳೊ ದಾರಿ ಬುಟ್ಟು ಕಾಡ್‌ದಾರಿಲಿ ಹೋದರಾ ನೀವು? ಅಷ್ಟೊತ್ತಿಗೆ ಅಜ್ಜ ಹೇಳ್ದೆ 'ಸೆಕ್ಕ್ ನಾಯಿ ನೀ ನಂಗೆ ಆಕಿಲ್ಲೆಂತ?' ಹೇಳ್ದೆ. ಹಂಗೆ ಹೇಳಿ ಅಜ್ಜ ವಾಪಾಸ್ ತಂದದೆ. ತಂದ್ ಈ ಮಂಜ ಆಕಿಲ್ಲೆ ಇನ್ನೊಂದರ ಕೊಡಿ ನಂಗೆಂತ ಹೇಳ್ದೆ.

ಸುರೂಗೆ ಹುಟ್ಟಿದಕ್ಕೆ ಅಯ್ಯೆಗೆ ಕೊಡಿಕೆ ಮನಸ್ಸಿಲ್ಲೆ. ಅಂತೂ 'ಹೋಗ್

ಅಜ್ಜಪ್ಪನೊಟ್ಟಿಗೆಂತ' ಹೇಳಿ ಕಳ್ಸಿತ್. ಕಳ್ಸಿ ಆಕನ ಅಂವನ ಕರ್‍ಕೊಂಡ್ ಹೋತ್. ಅಜ್ಜ ಹೋಗಿ ಹೋಗಿ ದೊಡ್ಡಾ ಒಂದ್ ಕಾಡ್‌ಗೆ ಎತ್ತಿಕೆ ಆಕನ ಹೈದ ಹೇಳ್ದಿ 'ಒಳ್ಳೊದಾರ್‍ಲಿ ಅಲ್ಲ ಅಜ್ಜಪ್ಪ ನಾವು ಹೋದು'? 'ಹೌದು ಮಂಜ ಒಳ್ಳೊ ದಾರ್‍ಲಿ ನಾವು ಹೋದುಂತ' ಹೇಳ್ದಿ. ಕರ್‍ಕೊಂಡು ಹೋದೆ. ಅಜ್ಜಂಗೆ ದೊಡ್ಡೊ ಒಂದ್ ಮನೆ ಉಟ್ಟು. ಮನೆಗೆ ಕರ್‍ಕೊಂಡ್ ಹೋದೆ. ಅಜ್ಜ ಹೂಗೆ ಎಲ್ಲ ಹೋದೆ. ಹೂಗೆ ಹೋಕನ ಹೈದನೊಟ್ಟಿಗೆ ಹೇಳಿ ಹೋದೆ. 'ಎಲ್ಲಾ ಕೋಣೆಗಳ ಗುಡ್ಸ್. ಈ ಒಂದ್ ಕೋಣೆನ ನೀ ಗುಡ್ಸ್ ಬೇಡ ? ನಾ ಪೂಜೆಗೆ ಹೂವೆಲ್ಲ ತನ್ನೆಂತ ಅಜ್ಜ ಹೂಗೆ ಹೋತ್. ಎಲ್ಲಾ ಕೋಣೆಗಳ ಗುಡ್ಸಿತ್. ಸೆಗಣಿ ಎಲ್ಲ ಹಾಕಿ ಇಸಿತ್. ಇಸಿ ಆಕನ ಈ ಅಜ್ಜ ಒಂದು ಕೋಣೆನ ಬಾಗಿಲ್ ತೆಗಿದು ಬೇಡಂತ ಹೇಳಿಟ್ಟು. ಏಕೆ ತೆಗಿದು ಬೇಡಂತ ಹೇಳ್ತ್. ಆ ಕೋಣೆನ ಮೆಲ್ಲ ಬಾಗಿಲ್ ತೆಗ್ತ್. ಬಾಗಿಲ್ ತೆಗ್ದಾಕನ ಒಂದ್ ಕೆದ್ಕೆ ಇತ್ತ್. ಕೆದ್ಕೆಗೆ ಮೆಲ್ಲ ಕೈ ಹಾಕಿತ್. ಕೈ ಹಾಕಿಕನ ಚಿನ್ನನೇ ಇದ್ದದ್. ಈ ಚಿನ್ನ ಎಲ್ಲ ಕೈಲಿ ಹಿಡ್ಕನ್ತ್. ಅಷ್ಟೊತ್ತಿಗೆ ಆಚೆ ಹೋತ್. ಒಂದು ಕೋಣೆ ಬಾಗಿಲ್ ತೆಗ್ತ್. ಆಚೆ ತೆಗ್ದ್ ಆಕನ ತುಂಬ ತಲೆಗ ಕಡ್ದ್ ತೂಗಿ ಹಾಕ್ಯೊಳೊ. ಆ ತಲೆಗೆ ಎಲ್ಲ ಹೇಳ್ದೊ 'ಅಣ್ಣಾ ನೀ ಏಕೆ ಬಂದೊ? ನಮ್ಮ ಎಲ್ಲ ತಂದ್ ಹೀಂಗೆ ಕಡ್ದ್ ತೂಗ್ಯೊಲದ್ ಅಜ್ಜ. ನೀ ಏಕೆ ಬಂದೆ ಇಲ್ಲಿಗೆ ? ನೀ ಆ ಚಿನ್ನ ಮುಟ್ಟಿದ ಕೈಗೆ (ಎಲ್ಲಾ) ಬಟ್ಟೆ ಸುತ್ತಿಕೊ. ಅಜ್ಜ ಬಂದ್ ಪೂಜೆ ಎಲ್ಲ ಆಕನ ಅಡ್ಡ ಬೀಳ್ಂತ ಹೇಳ್ದು. ಆಗ ಅಡ್ಡಬಿದ್ದ್ ನೀವು ತೋರ್‍ಸಿ ಅಜ್ಜಪಂತ. ನಂಗೆ ಅಡ್ಡ ಬೀಳಕೆ ಗೊತ್ತಿಲ್ಲೆಂತ? ಹೇಳೋಕು. ಹೇಳಿ ಒಂದು ದೊಡ್ಡ ಬಾಲ್ಕತ್ತಿ ಅಜ್ಜನ ಹಕ್ಕಳೆ ಇದ್ದದೆ. ಆ ಬಾಲ್ಕತ್ತಿನ ತೆಗ್ದ್ ಅಜ್ಜನ ಗಂಟ್ಲಿಗೆ ಕಡಿಯೊಕುಂತ' ಹೇಳ್ದಿ ತಲೆಗ. ಹಾಂಗೆ ಇಂವ ಹೇಳ್ದರೆಲ್ಲ ಕೇಳಿಕನ್ತ್. ಈ ತಲೆಗ ಎಲ್ಲ ಒಂದು ಸೆರೆ ಕೊಟ್ಟವೆ ಅವಂಗೆ. 'ಅಜ್ಜನ ತಲೆ ಕಡ್ದ್ ಹಾಕಿಕನ ಓಡೊಕುಂತ' ಹೇಳಿ.

ಈ ಅಜ್ಜ ಹೂವೆಲ್ಲ ತಕೊಂಡ್ ಬಾತ್. ಹೂವೆಲ್ಲ ತಂದ್‌ದ್ 'ಪೂಜೆಗೆ ಎಲ್ಲ ಆತ ಮಂಜಂತ?' ಹೇಳ್ತ್. ಆತಜ್ಜಪ್ಪ. ಪೂಜೆಲ್ಲ ಆಕ್ಕೊಂಡ್ ಇರ್‍ಕನ ಅಜ್ಜ ಒಂದು ಬಾಲ್ಕತ್ತಿ ಬುಡ್ಸಿತ್. 'ಏಕಜಪ್ಪ ಬಾಲ್ಕತ್ತಿ ಬುಡ್ಸುದಂತ?' ಕೇಳ್ತ್. 'ಬಾಲ್ಕತ್ತಿ ಬುಡ್ಸುದು ಅದು ಬೇಕ್ ಮಂಜಂತ್' ಹೇಳ್ತ್. ಪೂಜೆಗೆ ಅಜ್ಜ ಎಲ್ಲ ಕುದ್ದತ್. ಕುದ್ದ್ ಕೈಗೆ ಎಂತ ಆದ್ದಂತ ಕೇಳ್ತ್. ಅಷ್ಟೊತ್ತಿಗೆ 'ಅದ ಕೈಗೆ ಕತ್ತಿ ತಾಗಿದ್ ಅಜ್ಜಾಪ್ಪಾಂತ' ಹೇಳ್ತ್. ಆತ್ಂತ ಹೇಳ್ತ್ ಅಜ್ಜ. ಪೂಜೆ ಕಳ್ತ್ ಮಂಜ. ಅಡ್ಡಬೀಳಂತ ಹೇಳ್ತ್. ಅಡ್ಡ ಬೀಳ್ಂತ ಹೇಳ್ಕನ, 'ನಂಗೆ ನೀವು ಅಡ್ಡ ಬಿದ್ದ್ ತೋರ್‍ಸಿ ಅಜ್ಜಪ್ಪ. ಅಡ್ಡ ಬೀಳಿಕೆ ಗೊತ್ಲೆಂತ' ಹೇಳ್ತ್. ಅಷ್ಟೊತ್ತಿಗೆ ಅಜ್ಜ ಅಡ್ಡಬೀತ್. ಅಜ್ಜ ಅಡ್ಡ ಬೀಳ್ಕನ ಆ ಬಾಲ್ಕತ್ತಿ ತೆಗ್ದ್ ಹೈದ ಅಜ್ಜನ ತಲೆಗೆ ಕಡ್ತ್. ಕಡ್ದಾಕನ 'ದೊಡ್ಡೊ ಒಂದು ಗುಡ್ಡೆ ಆಗಿ ಬೀಳ್ಂತ' ಹೈದ ಹೇಳ್ತ್. ಒಡ್ಕನ ದೊಡ್ಡೊ ಗುಡ್ಡೆ ಆತ್. ಅಜ್ಜ ಒಟ್ಟಿಗೆ ಓಡ್ತ್. ಗುಡ್ಡೆನ ಕಡ್ದ್‌ದ್ ಎಳ್ದ್ ಎಲ್ಲ ಆಕನ ಹೈದ ಸುಮಾರ್ ದೂರ ಎತ್ತಿತ್. ಹೈದನ ಒಟ್ಟೊಟ್ಟಿಗೆ ಅಜ್ಜನೂ ಎತ್ತಿತ್. ಅಲ್ಲಿ ಹೇಳ್ತ್, 'ದೊಡ್ಡೊ ಒಂದು ಸಂದ್ರ ಆಗಿ ಬೀಳ್ಂತ'. ಸಂದ್ರ ಆಗಿ ಬೀತ್. ಸಂದ್ರ ಆಗಿ ಬೀಳ್ಕನ ಅಜ್ಜಂಗೆ ಆಶ್ಚರ್ಯ

ತ್ಲೆ. ಅಲ್ಲಿಂದ ಅಜ್ಜ ಶಾಪ ಇಸಿತ್, 'ಹಾಳಾಗಿ ಹೋಗುಂತ' ಹೇಳಿ ಬಾತ್.

ಅಜ್ಜ ಬಂದಾಕನ ಹೈದ ಹಿಂಗೆ ಕಾಡ್ಲಿ ಹೋತ್. ಹೋಕನ ಸಿಕ್ಕಿದ ಕುರೆ ಎಲ್ಲ ಕೊಡ್ಕೊನ್ತ್. ಅದರ ಚೋಲಿನ ಎಲ್ಲ ಹಾಕನ್ತ್. ಹೋತ್ ಹೋತ್ ಹೋತ್. ಒಂದು ಊರಿಗೆ ಹೋತ್. ಹೋಕನ ಅಲ್ಲಿ ದೊಡ್ಡ ಮನೆ ಎಲ್ಲ ಕಾಂಬಕೆ ಸಿಕ್ಕಿತ್. ಅಲ್ಲಿ ಹೋಗಿ ಆಕನ ತುಂಬ ಹುಡೆಗ ಎಲ್ಲ ಒಳೊ. ಹೋಗಿದ್ ಆಕನ ಅಲ್ಲಿ ಕೇಳ್ತ್ 'ಅಕ್ಕಕ್ಕ ನಂಗೆ ಮೀಯಕ್ಕೆ ನೀರ್ ಕೊಡುವರಿಯಾಂತ'? ನಿಂಗೆ ನೀರ್ ಕೊಡಿಕಿಲ್ಲೆ. ನಿಂಗೆ ಕೊಡುವ ನೀರಿಲ್ಲೆ. ನೀ ಹುಳ್ವೆಲ. ನಿಂಗೆ ನೀರ್ ಕೊಡಿಕಿಲ್ಲೆಂತ ಹೇಳ್ಳೊ. ಆಗ ಅಂವ ನೀವೆಲ್ಲ ಮೀದ್ ಆದ ಮೇಲೆ ನಂಗೆ ನೀರ್ ಕೊಡೀಂತ. ಅಂದರೆ ಆದು. ಅಂವ ಅಲ್ಲೇ ಕುದ್ದತ್. ಎಲ್ಲಾ ಮಿಂದೊ. ಆ ಮೇಲೆ ಇಂವ ಮೀಯಕ್ಕೆ ಹೋತ್. ಇಂವ ಮೀಯಕೆ ಹೋಗಿ ಅಲ್ಲಿ ಇವನ ಬಟ್ಟೆ ಕಟ್ಟಿದರ ಎಲ್ಲ ಬಿಚ್ಚಿತ್. ಬಿಚ್ಚಿ ನೋಡ್ಕನ ಇಂವನ ಮೈಲಿ ಒಳ್ಳೊ ಚಿನ್ನ ಹೊಳ್ದಂಗೆ ಹೊಳ್ದದೆ. ಅಷ್ಟೊತ್ತಿಗೆ ಒಂದು ಗೂಡೆ ಹೇಳ್ತ್. ಇಂವ ಎಲ್ಲಾ ಸೌದೆ ಹೊತ್ತಿಸಿತ್. ಮುಗ್ಸಿತ್ ಈ ಹುಳ್ವೆಲಾಂತ ಹೇಳ್ತ್. ಅಷ್ಟೊತ್ತಿಗೆ ಒಂದು ಗೂಡೆ ಅಡಂಗಿ ಕುದ್ದತ್. ಎಂತದ್ ನೋಡೊಕುಂತ ? ಹೋಕನ ಇಂವನ ಮೈಲಿ ಎಲ್ಲಾ ಚಿನ್ನ ಹೊಳೀದು. ಈ ಚೋಲಿನ ತೆಗ್ದ್ ಒಲೆಗೆ ಹಾಕಿತ್. 'ನೀಯೆ ಗಂಡ ಆಕ್ಕು ನಾನೇ ಹೆಣ್ಣಾಕ್ಕುಂತ' ಹಾಂಗೆ ಆಗಿದ್ ಇವಂಗೆ ಮೊದ್ವೆ ಮಾಡ್ಳೊ. ದೊಡ್ಡೊ ಚಪ್ಪರ ಎಲ್ಲ ಹಾಕಿ ಮೊದ್ವೆ ಮಾಡ್ಳೊ.

ಇವಂಗೆ ಮೊದ್ವೆಗೆ ತುಪ್ಪ ಆಕ್ಕಲ್ಲ. ತುಪ್ಪಕ್ಕೆಂತ ಹೋಕನ ಒಂದು ಕುದ್ಕ ದಾರ್ಲಿ ಕಾಂಬಕೆ ಸಿಕ್ಕಿತ್. ಅಣ್ಣಣ್ಣಾ ಎಲ್ಲಿಗೆ ಹೋದು? ನೀವುಂತ ಕೇಳ್ದೊ. ನಾವ್ಗೆ ತುಪ್ಪ ಆಕ್ಕು. ತುಪ್ಪ ಆಕ್ಕಾದರೆ ನಾ ಮಾಡಿ ಕೊಟ್ಟನೆ. ನೀವು ಅದಕ್ಕೇನು ಹೆದರಿಯರೀಂತ ಹೇಳ್ತ್ ಕುದ್ಕ. ನೀವು ಓ ಅಲ್ಲಿ ಕುದ್ದುಕೊಣಿ. ನಾ ಹೋಗಿ ತುಪ್ಪ ತನ್ನೆಂತ ಹೇಳ್ತ್. ತುಪ್ಪ ತನ್ನೆಂತ ಇದ್ ಹೋತ್. ಆಚೆ ಅದರ ಬೀಲನ ಎಲ್ಲ ಗುದ್ದಿತ್. ಹಿಂಡಿತ್ ತಾತ್. ತಂದ್‌ದ್ ಕೊಟ್ಟತ್. ಬಾಯಿಕಟ್ಟಿತ್. 'ನೀವು ಇದರ ಇಕ್ಕೆಕನ್ ಸಭೆಲಿ ಎಲ್ಲವರ ಕಣ್ಣಿಗೂ ಸೀರೆ ಕಟ್ಟೊಕು. ಕಟ್ಟಿದ್ ಈ ತುಪ್ಪನ ಇಕ್ಕೊಕುಂತ'. ಹಂಗೆ ಎಲ್ಲವರ ಕಣ್ಣಿಗೆ ಬಟ್ಟೆ ಕಟ್ಟಿ ತುಪ್ಪ ಇಕ್ಕಿದೊ. ಒಂದ್ ಸಣ್ಣ ಕೂಸಿನ ಕಣ್ಣಿಗೆ ಸೀರೆ ಕಟ್ಟಿತ್ಲೆ. ತುಪ್ಪ ಇಕ್ಕಿದೊ. ಅದ್ ಹೇಳ್ತ್ ಅಮ್ಮಮ್ಮಾ ಹುಳಹುಳ ಹುಳಂತ. ನೋಡ್ಳೊ. ನೋಡ್ಕನ ಅದರ್ಲಿ ತುಂಬ ಹುಳ. ಅದರ ನೋಡಿಕೆ ನೀವು ಹೋಕ್ಕು. [ಕಥಾ ನಿರೂಪಕಿ:ತಾರಾಮಣಿ ಪಡ್ಪು; ಸ್ಥಳ:ಮನೆ; ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]

## 26.ನಾಯಿ ಮನುಷ್ಯನ ಹೆತ್ತ ಕತೆ

### ರಾಣಿ ನಾಯಿ ಮರಿಗಳ ಇಸಿತ್

ಒಂದು ಊರ್ಲಿ ಒಬ್ಬ ರಾಜ ಇತ್ತ್. ಅವಂಗೆ ಮೊದ್ವೆ ಆಗಿ ಎಷ್ಟೊ ಸಮಯ ಆದರೂ ಮಕ್ಕ

ಆತ್ಲೆ. ಅಕೇರಿಗೆ ಹಿಂಗೇ ಇರಿಕೆ ಆಕನ ಒಬ್ಬ ಋಷಿ ಬಾತ್. ಋಷಿ ಬಂದಾಕನ ರಾಜನೊಟ್ಟಿಗೆ ಕೇಳ್ತ್. ಮಕ್ಕ ಇಲ್ಲೆ ಅಲ್ಲ. ಎಂತ ಮಾಡ್ದುಂತ. ಅಷ್ಟಾಕನ ಅಂವ ಏನ್ ಮಾಡ್ತ್? ಅಂವ ಒಂದು ಮಾವಿನ ಹಣ್ಣ್‌ನ ಮಂತ್ರಿಸಿ ಕೊಟ್ಟತ್. ಅಂವ ಹೇಳ್ತ್. ಮತ್ತೆ ಇದರ ತೊಪ್ಪೆನ ಬಿಸಾಡೊಕುಂತ. ಈ ರಾಜ ಏನ್ ಮಾಡ್ತ್ ಈ ಕೊರಂಟ್‌ನ ನಿನ್ನ ರಾಣಿಗಳಿಗೆ ಕೊಡೊಕು. ಈ ರಾಜ ಏನ್ ಮಾಡ್ತ್. ಈ ಕೊರಂಟ್‌ನ ಯಾರಾದರೂ ನುಂಗುದುಟ್ಟಂತ ಹೇಳ್ತ್. ಈ ಕೆತ್ತೆನ ಕೊಟ್ಟತ್. ಕೊರೆಂಟ್‌ನ ಬಿಸಾಡ್ತ್. ಅಷ್ಟಾಕನ ಅವರ ಮನೆಯ ನಾಯಿ ಬಾತ್. ನಾಯಿ ಬಂದ್ ಕೊರಂಟ್‌ನ ನುಂಗಿತ್. ಇವು ಇದರ ತೊಪ್ಪೆನ ತಿಂದೊ. ಅಕೇರಿಗೆ ಹೆಣ್ಣ್‌ಗ ಗರ್ಭಿಣಿಯಾದೊ. ಹೆಣ್ಣ್ ಗರ್ಭಿಣಿಯಾಗಿದ್ ಹೆತ್ತತ್. ಅದ್ ಎರಡ್ ನಾಯಿ ಮರಿಗಳ. ಈ ನಾಯಿ ಮಾರಿ ಹಾಕಿದ್ ಎರಡ್ ಹೆಣ್ಣ್ ಮಕ್ಕಳ. ಹಾಂಗೆ ಇಂವ ಏನ್ ಮಾಡ್ತ್ ನಾಯಿ ಮರಿಗಳ ದೂರಕೆ ತಕೊಂಡ್ಹೋಗಿ ಬುಟ್ಟತ್. ಈ ಮಕ್ಕಳ ಪೊರ್ಲು ಸಾಂಕಿ ಕೊಂಡಿತ್ತ್. ಸಾಂಕಿಕೊಂಡಿದ್ದ್ ಹೀಂಗೆ ಎಲ್ಲವೂ ಹೇಳಿಕೆ ಸುರು ಮಾಡ್ದೊ. 'ನೀವು ನಾಯಿ ಹೆತ್ತ ಮಕ್ಕ. ರಾಜನ ಮಕ್ಕ ನೀವಲ್ಲಂತ'. ಹೀಂಗೆ ಇರಿಕನ ನಾಯಿ ಯಾಗಾರ್ ಒಮ್ಮೆ ಬಂದ್‌ದ್ ಈ ಹೆಣ್ಣ್ ಮಕ್ಕಳ ನೋಡಿಕೊಂಡ್ ಹೋದು. ಹಾಂಗೇ ಸ್ವಲ್ಪ ದೊಡ್ಡವು ಆದೊ. ದೊಡ್ಡವು ಆಕನ ಇದ್ ಒಂದು ಸರ್ತಿ ನೋಡಿಕೆ ಬಾಕನ ಇವು ಏನ್ ಮಾಡ್ದೊ. ಒಳ್ಳೊ ಕೊದಿವ ನೀರ್‌ನ ತೆಗ್ದ್ ಅದರ ಮೇಲೆ ಚೊಂಪಿ ಹೋದೊ. ಅದ್ ಸತ್ತತ್. [ಕಥಾ ನಿರೂಪಕ:ಲೀಲಾವತಿ ಪಡ್ಪು; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 27.ಬೆಲ್ಲದ ಬೊಂಬೆ ಕೂಸಾದ ಕತೆ

ಒಂದು ಊರ್‍ಲಿ ಒಂದು ಅಜ್ಜ ಅಜ್ಜಿ ಇದ್ದೊ. ಆ ಅಜ್ಜ ಅಜ್ಜಿಗೆ ಮಕ್ಕ ಮರಿ ಯಾರೂ ಇಲ್ಲೆ. ಒಂದು ದಿನ ಈ ಅಜ್ಜ ಪೇಟೆಗೆ ಹೋದಂವ ಒಂದು ಸೇರ್ ಬೆಲ್ಲ ತಾತ್. ಅಜ್ಜಿಯೊಟ್ಟಿಗೆ ಹೇಳ್ತ್. 'ಇದರ ಒಂದು ಮಕ್ಕಳ ರೂಪಲಿ ಪಾಕ ಬರ್‍ಸಿ ಮಾಡೊಕುಂತ'. ಹಾಂಗೆ ಒಂದು ಕೋಣೆಲಿ ಇಸಿಕಂಡ್ ಇದರ ಪಾಕಲಿ ಒಂದು ಮೊನ್ಸ ರೂಪ ಮಾಡ್ತ್. ಸಣ್ಣ ಮಕ್ಕಳ ರೂಪಲಿ. ಮಾಡಿ ಅದ್ಕೆ ಕಣ್ಣಿಗೆ ಎರಡ್ ದೋಳ ಬಿತ್ತ್ ಇಸಿತ್. ದೋಳ ಬಿತ್ತ್ ಇಸಿ ಇದನ್ನೆಲ್ಲಾ ಮನಸ್ಸಿಗೆ ತೆಕಂಡತ್. ಹೆಂಗೂ ಜೀವ ಆತಲ್ಲೆಂತ ಅಜ್ಜಿಗೆ ಖುಷಿಯಾತ್. ಇನ್ನ್ ಆಚೆ ಕೋಣೆಗೆ ಹೋಗಿ ಬನ್ನೆಂತ ಹೋತ್. ಒಂದು ಕಿಡಿಕೆ ಉಟ್ಟು ಇದ್ ಕಿಡಿಕ್ಕೆಲಿ ಹುಕ್ಕ್ ಒಂದೇ ಓಟ.

ಹೋಕನ ಒಂದು ಜನ ಕಾಂಬಕೆ ಸಿಕ್ಕಿತ್. ಅಷ್ಟಾಕನ ಇದ್ ಎಂತಕೆ ಹೋದು? ಎಂತಕೆ ತಪ್ಪಿಸಿಕಂಡ್ ಬಂದ್ ನಿನ್ನನ್ ತಪ್ಪಿಸಿ ಓಡಲು ಬಾದ್ಲೆಂತ ಓಡಿಕಂಡ್ ಹೋತ್. ಹಾಂಗೆ ಹೋಕನ ಒಂದು ಹಂದಿ ಬಂದದೆ. ಹಂದಿ ಇಂವ ಬಾದರ ನೋಡಿ ಅಗಿಯಕೆ ಬಾತ್. ಅದಕ್ಕ್ ಹಾಂಗೆ ಹೇಳಿಕಂಡ ಇದ್ ಅದರನ್ನೂ ಬುಟ್ಟು ಓಡ್ತ್. ಹಂಗೆ ಓಡಿಕಂಡ್ ಒಂದರಿಂದ ಒಂದು

ಂದರಿಂದ ಒಂದು ಹೇಳಿಕಂಡೇ ಓಡ್ತು. ಹೇಳಿಕಂಡ್ ಹೇಳಿ ಲಾಸ್ಟಿಗೆ ಒಂದು ಮಡಿಕೆ ಒಳಗೆ ಪಕ್ಕತ್. ಮಡಿಕೆಯೊಳಗೆ ಹುಕ್ಕ್ ಅಲ್ಲಿಂದ ಹೊನ್ಕಿಕೊಂಡೇ ಹೋದ್ದ್ ಇದ್. ಹೋಗಿ ಂದೂರಿಗೆ ಎತ್ತಿದೆ ಇದ್. ಎತ್ತಿ ಆಕನ ಬಾಕಿದ್ದವುಕ್ಕೆಲ್ಲ ಊರಿನವುಕ್ಕೆಲ್ಲ ಗೊತ್ತಾತ್. ಇವುಕ್ಕೆ ಮಕ್ಕ ಇಲ್ಲದವುಕ್ಕೆ ಮಕ್ಕ ಎಲ್ಲಿಂದ? ಕೂಸು ಓಡ್ತ್. ಕೂಸು ಓಡ್ತ್‌ಂತ ಓಡುವೆ ಅಲ್ಲ ಇವು. ಇವು ಎಲ್ಲ ಎಲ್ಲಿಗೆ ಓಡ್ದು? ಒಬ್ಬಂದ ಒಬ್ಬ ಓಡಿಕೆ ಸುರು ಮಾಡ್ದೊ. ಇದ್ ಕಾಂಬೊದೆ ಇಲ್ಲೆ. ಹುಡುಕಿರೆ ಅಲ್ಲಿ ಇದ್ ಎದ್ದ್ ಎತ್ತುವಲ್ಲಿಗೆ ಎತ್ತಿಟ್ಟು. ಮತ್ತೆಂತ ಮಾಡ್ದು. ಮತ್ತೆ ಮಾಡಿಕೆ ಏನೂ ಕಾಂಬೊದುಲ್ಲೆ. ಹಾಂಗೆ ಊರವುಕ್ಕೆಲ್ಲ ಗೊತ್ತಾತ್ ಸಂಗತಿ. [ಕಥಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 28.ಗಂಡ್ ಕುಮಾರನ ಕತೆ

ಒಂದು ಊರ್ಲಿ ಒಂದು ದೊಡ್ಡ ಅರ್ಸು. ಆದರೆ ಬೇಕಾದ ಆಸ್ತಿ ಬದ್ಕ್ ಎಲ್ಲಾ ಉಟ್ಟು. ಅವಂಗೆ ಏಳು ಹೆಣ್ಣ್. ಏಳ್ ಹೆಣ್ಣ್ ಇದ್ದರೆ ಮಕ್ಕ ಒಂದಕ್ಕೂ ಇಲ್ಲೆ. ಹಿಂಗೇ ಇದ್ದ್ ಇದ್ದ್ ಒಂದು ದಿನ ಹಳ್ಳದ ಕರೆಗೆ ಮೊಕ ತೊಳೆಯಕೆಂತ ಹೋತ್. ಹೋಗಿ ಒಂದು ಕಲ್ಲ್ ಮೇಲ್ ಕುದ್ರಿಕೆ ಆಕನ ಈ ಎಸ್‌ಂಡ್ ಉಟ್ಟಲ್ಲ ಅದ್ ಬಾತ್. ಬಾಕನ ಈ ಅರ್ಸು ಅದರ ಹಿಡ್ದ್ ನೋಡ್ತ್. ನೋಡ್ರೆ ತುಂಬಾ ಮೊರಿ ತುಂಬಿಟು. ನೂರ ಒಂದು ಮೊರಿ ಉಟ್ಟು ಅದರ್ಲಿ. ಇವಂಗೆ ಬೇಜಾರಾತ್. ನಂಗೆ ಏಳ್ ಹೆಣ್ಮಕ್ಕ ಇದ್ದ್ ಒಂದೂ ಮಕ್ಕ ಇಲ್ಲೆ. ಇದ್ಕೆ ಒಂದಕ್ಕೆ ನೂರ ಒಂದು ಮೊರಿ ಉಟ್ಟಲ್ಲ. ಬೇಸರ್ಲೆ ಹೋಗಿ ಮಂಚದ ಮೇಲೆ ಕಂಕಾಣಿ ಮಲ್ಕ್ಯೊಸ್ತ್. ಆಗ ಒಂದನೇ ಹೆಣ್ಣ್ ಬಂದ್ ಕರ್ತ್. 'ಏದ್ರಿ ಊಟ ಮಾಡಿಂತ' ಮಾತಾಡ್ತ್. ಇದೇ ರೀತಿ ಆರ್ ಹೆಣ್ಮಕ್ಕಳೂ ಕರ್ದೊ. ಆಗ ಒಡ್ಕದ್ ಬಂದ್ ಕರ್ತ್. 'ನೀವು ಒಂದು ಆಸ್ತಿಕಂಡ್ರೆ ತೆಗಿನಿ. ಒಳ್ಳೊ ಕುದುರೆ ಕಂಡ್ರೆ ತೆಗಿನಿ. ಇನ್ನ್ ಹಿಡಿಯಕೆ ಚಂದ್ರಾಯುದ ಕಂಡ್ರೆ ತೆಗಿನಿಂತ" ಹೇಳ್ತ್. ಅಂತೂ ಎದ್ದತ್ಲೆ. ಒಡ್ಕಕೆ ಹೇಳ್ತ್. 'ಒಳ್ಳೊ ಹೆಣ್ಣ್ ಕಂಡರೆ ತನ್ನಿ'. ಇಷ್ಟ್ ಹೇಳ್ಕನ ಎದ್ದತ್. ಕೈ ಕಾಲ್ ಮೋರೆ ತೊಳ್ತ್. ಊಟ ಮಾಡ್ತ್. ಕುದುರೆಗೆ ಸಿಂಗಾರ ಮಾಡ್ತ್. ಕುದುರೆ ಮೇಲೆ ಹತ್ತಿ ಒಂದು ಊರಿಗೆ ಹಾರ್ಸಿತ್.

ಆ ಹೋಕೆ ಆಕನ ಏದ್‌ರಾಗೆ ಬಂದ ಒಂದು ಗೌಡ್ತಿ ಗೂಡೆ ಸಿಕ್ಕಿದೆ. ಅದರ ಅಲ್ಲಿ ನಿಲ್ಸಿ ಕೇಳ್ತ್. 'ಹೌದೆನೆ? ಹೌದೆನೆ ಗೌಡ್ತಿ? ನೀನ್ ಏನ್ ಕೊಟ್ಟಿಯ?' ಅಂತ. ಅದ್ ಉದ್ದ ನೋಡ್ತ್ ಅಡಿನೋಡ್ತ್. 'ನಾ ಏನ್ ಕೊಡ್ಲಿ. ಒಂದು ಗುಬ್ಬೆ ಸಗಣಿ ತಂದ್ ನಿಮ್ಮ ಅರಮನೆ ಸಾರ್ಸಿ ಉಳ್ದದರ ತಕೊಂಡೋಗಿ ಭೂಮಿಗೆ ಹಾಕ್ವೆ'. 'ಹೊಕ್ಕ್ ಮುದ್ಕಿಂತ' ಹೋತ್. ಮತ್ತೊಂದ್ ಕಡೆ ಹೋತ್. ಅಲ್ಲಿ ಹೋಕನ ಒಂದು ಗಾಣಿಗ್ತಿ ಗೂಡೆ ಬಂದದೆ. ಅಲ್ಲಿ ನಿಲ್ಸಿ ಕೇಳ್ತ್, 'ಏನು ಕೊಡುವ ಗೂಡೆ?' 'ನಾನೇನು ಕೊಡ್ಲಿ?' 'ಒಂದು ಚೂರು ಎಣ್ಣೆ ತಂದ್ ನಿಮ್ಮ ಅಬ್ಬೆಗಳಿಗೆ ಕೊಟ್ಟ್ ಉಳ್ದದರ ನಾ ತಕೊಂಡು ಹೋವೆ'. ಅದೂ ಆತ್ಲೆ. ಬುಟ್ಟತ್ ಅಲ್ಲಿಂದ ಮತ್ತೆ ಒಂದು ಕಡೆ

ಹೋತ್. ಅಲ್ಲಿ ಹೋಕನ ಬ್ರಾಂತಿ ಗೂಡೆ ಬಂದದೆ. ಅದರೊಟ್ಟಿಗೆ ಕೇಳ್ತ್. ಆಗ ಅದ್ ಮೇಲೆ ಆಕಾಶ ನೋಡ್ತ್ ಕೆಳಗೆ ಭೂಮಿ ನೋಡ್ತ್. 'ನಿಮ್ಮ ಬಲದ ತೊಡೆಲಿ ಮುದ್ದಾಡುವ ಗಂಡ್ ಕುಮಾರನ ಕೊಟ್ನೆಂತ'. ಇದರ ತೊಡೆ ಮೇಲೆ ಕುದ್ರಿಸಿಕನ್ತ್ ಬಾತ್. ಬಂದ್ ಮನೆಲಿ ಬುಟ್ಟತ್. ಸುಖ ಸಂತೋಷಲಿ ಇದ್ದೊ.

ಆರ್ ಮೂರ್ ತಿಂಗ ಆಕನ ಅದ್ ಬೊಸ್ರಿ ಆತ್. ಬೊಸ್ರಿ ಆಕನ ಏನಾತ್ ಈ ಅರ್ಸುಗೆ ದಂಡಿಗೆ ಹೋಕ್ಕೆ ಓಲೆ ಬಾತ್ತ್. ಆಗ ಇಂವ ಹೇಳ್ತ್ 'ನೋಡು ನಾ ದಂಡಿಗೆ ಹೊನೆ. ಆರ್ ತಿಂಗಳ ದಂಡ್ ಮೂರು ತಿಂಗ, ಮೂರು ತಿಂಗಲ ದಂಡ್ ಮೂರು ಗಳಿಗೆಲಿ ತೀರ್ಸಿ ಬಾವೆ ನಾ, ಸುಖಲಿ ಇರೋಕು'. ಆತ್ ಒಪ್ಪಿಕನ್ತ್. ಆಗ ಇಂವ ಹೋತ್. ಈ ಏಳ್ ಅಬ್ಬೆಗ ಒಳೊ ಅಲ್ಲ. ಇವರ ಜೊತೆಲೇ ಆಡಿಕೊಂಡಿತ್ತ್. ಅಕೆರಿಗೆ ಹತ್ತ್ ತಿಂಗ ತುಂಬಿತ್. ಹೆರಿಗೆಗೆ ದಿನ ಆತ್. ಹೊಟ್ಟೆ ಬೇನೆ ಆತ್. ಆಗ ಅಕ್ಕಂದರೊಟ್ಟಿಗೆ ಕೇಳ್ತ್. 'ಅಕ್ಕಂದರೆ ಈ ಊರ ಹೆರಿಗೆ ಹೆಂಗೆ?' 'ಕಣ್ಣ್‌ಗೆ ಬಟ್ಟೆ ಕಟ್ಟೋಕು. ಸೊಂಟಕೆ ಒರ್ಲು ಕಟ್ಟೊಕು. ಅಟ್ಟಕೆ ಏಣಿ ಮಾಡೊಕು ಉದ್ದಕೆ-ಅಡಿಗೆ ಹತ್ತೊಕು. ಹಾಂಗೆ ಇಳಿಯೊಕು'. ಹಾಂಗೆ ಮಾಡ್ತ್ ಇದ್. ಆಗ ಹೇಳ್ದ ಹಾಂಗೆ ಗಂಡು ಕುಮಾರನ ಪಡ್ತ್. ಇವು ಇದರ ಬಟ್ಟೆ ಬಿಚ್ಚಿಕೆ ಮುಂದೆ ಏನ್ ಮಾಡ್ದೊ. ಈ ಕೂಸುನ ತಕೊಂಡೋಗಿ ಗೊಬ್ಬರದ ಗುಡ್ಡೆಲಿ ಹುಗ್ದೊ. ಆ ರಕ್ತ ಇರುವ ಜಾಗೆಗೆ ಇಟ್ಟ್ ಕಲ್ಲ್‌ನಂತ ಒಂದು ಕಲ್ಲ್‌ನ ತೆಗ್ದ್ ಹಾಕಿದೊ. ಬಿಚ್ಚಿ ನೋಡ್ರೆ ಇದ್ಕೆಂತಾದ್ ? ಅಲ್ಲಿ ಕಲ್ಲ್ ಮಾತ್ರ ಕಂಡದೆ. ಬೇಸರ ಆತ್.

ಅಷ್ಟಾಕನ ಇವು ಅಬ್ಬೆಗ ಏನ್ ಮಾಡ್ದೊ? ಇವಂಗೆ ಅಲ್ಲಿಗೆ ಕಾಗದ ಬರ್ದೊ. 'ಮೆಚ್ಚು ಮೇಲಾಗಿ ತಂದ ದೊರೆ ಹೆಣ್ಣ್ ಇಟ್ಟಿಕಲ್ಲ್ ಹೆತ್ತುಟ್ಟು'ಂತ. ಅಷ್ಟಾಕನ ಅಂವ ಅಲ್ಲಿಂದ ಬಾತ್. 'ಅದರ ತಲೆ ಕೂದಲ್ ಬೊಲ್ಸಿ ಕುದುರೆ ಲದ್ದಿ ಎತ್ತಿಕೆ ಮಾಡಿಬುಡಿ'. ಆತ್, ಹಾಂಗೆ ಮಾಡ್ದೊ. ಆಗ ಅಲ್ಲಿ ಅವನ ಹಟ್ಟಿಲಿ ಒಂದು ಕಬಿಲೆ ಹಸ್. ಕರ್‌ಬುಡ್ದು. ಇದರ ಕರು ಬುಡುವ ಹೊತ್ತಿಗೆ ಇದು ಓಡಿ ಹೋಗಿ ನಿಲ್ಸುದೆಲ್ಲಿ ಈ ಕೂಸುನ ಹೂಳ್ದ ಜಾಗೆಲಿ. ಹಂಡೆ ಇಸಿ ಕರ್‌ಬುಡ್ದು. ಇದ್ ತುಂಬಿತುಂಬಿತ್'ಂತ ಹೇಳ್ಕನ ಮೆಟ್ಟಿ ಕಂಕನಿ ಹಾಕುದು. ಅದು ಈ ಕೂಸ್‌ನ ಹೊಟ್ಟೆಗೆ ಹೋದೆ. ಕೂಸು ದಿನಂದ ದಿನಕೆ ದಿನಂದ ದಿನಕೆ ಗೊಬ್ಬರದ ಗುಡ್ಡೆ ಅಡಿಂದ ಉಬ್ಬಿಕೊಂಡು ಬಾತ್. ಆಗ್ ಇವ್ಕೆ ಗೊತ್ತಾತ್. ಇನ್ನ್ ಏನ್ ಮಾಡ್ದು. ಇದರ ಕೊಲ್ಲೊಕಲ್ಲಂತ ಹೇಳ್ದೊ. ಅಷ್ಟಾಕನ ಇಷ್ಟ್ ಹೇಳಿದ್ ಈ ಅರ್ಸು ಬಂದ್ ಮನೆಗೆ ಎತ್ತಿಟು. ಇವು ಬಿದ್ದ್‌ಕಂಡು ಹೊಡ್ದಾಡಿಕೆ ಮುಟ್ಟಿದೊ. ಹೊಟ್ಟೆ ಬೇನೆ, ತಲೆಬೇನಂತ ಹೇಳಿ. ಇನ್ನ್ ಏನ್ ಇದ್ ಏನೋ ಉಪದ್ರ ದೋಷ ಆಗಿರೊಕುಂತ ಹೇಳಿ ಅಲ್ಲಿ ಒಂದು ಪಂಚಾಂಗ ನೋಡುವ ಕ್ರಮ ಉಟ್ಟಲ್ಲ ಅಲ್ಲಿಗೆ ಅರ್ಸು ಹೋತ್. ಅದಕ್ಕೆ ಮುಂದೆ ಇವು ಸೂಕ್ಷ್ಮ ಕೊಟ್ಟೊಳೊ. ಅವಂಗೆ ಪಂಚಾಂಗಕೆ ಬಂದ್ ಕೇಳ್ದ್ರೆ ಹೇಳೋಕು. 'ಹಟ್ಟಿಲಿ

ಇಂಡಿಗೆ ಮೇಲಾದ ಹಸುಟ್ಟು. ಅದರ ತಲೆ ಕಡ್ಡ್ ರಕ್ತ ಕೊಟ್ಟರೆ ಅದ್ ನಿಂತದೆಂತ' ಹೇಳಿ. ಹಾಂಗೆ

ಇಂವ ಅಲ್ಲಿಗೆ ಹೋತ್ ಹೋಗಿ ಪಂಚಾಂಗ ರಾಶಿಲಿ ಕೇಳ್ತ್. ಅಗ ಅಂವ ಹೇಳ್ತ್ 'ದೊಡ್ಡ ಉಪದ್ರ ಉಟ್ಟು. ಇದ್ ನಿಲ್ಲೊಕುಂತ ಆದ್ರೆ ನಿಮ್ಮ ಹಟ್ಟಿಲಿ ಇಂಡಿಗೆ ಮೇಲಾದ ಕಬಿಲೆ ಹಸುಟ್ಟು. ಅದರ ಕಡ್ಡ್ ಅದರ ರಕ್ತ ಕೊಟ್ಟರೆ ನಿಂತದೆಂತ'. ಆತ್. ನಾಳೆಗೆ ಅದರ ತಲೆ ಕಡ್ಡ್ ನಾ ಕೊಟ್ಟನೆಂತ ಹೇಳಿ ಬಾತ್. ಅಂದ್ ರಾತ್ರೆ ಏನಾತ್ ಈ ಹಸ್‌ಗೆ ಕನ್ಸ್ ಕಟ್ಟಿತ್. ನಿನ್ನ ತಲೆಕಡ್ಡವೆಂತ ಹೇಳಿ. ಹಾಂಗೆ ಈ ಕೂಸುನ ಏನು ಮಾಡ್ದು ಇನ್ನ್ಂತ ಹೇಳಿ ಏನೋ ಆಗಿದ್. ಇದ್ ತೆಕಂಡೋಗಿ ಅರ್ಸುನ ಮನೆ ಹಿಂದೆ ದೊಡ್ಡ ಬರೆ ಉಟ್ಟು ಅದರ್ಲಿ ಹೆಗ್ಗಣ ಉಟ್ಟಲ್ಲ. ಅದೊಂದೆ ವಾಸ ಆಕ್ಕೊಂಡು. ಅದರ ಕೈಲಿ ಕೊಟ್ಟದೆ. ಅದ್ ಈ ಕೂಸುನ ಬೆಳವಣಿಗೆಗೆ ಪಾರ ಆದೆ. ಮಾರನೆ ದಿನ ಈ ಹಸ್‌ನ ತಲೆಕಡ್ಡೊ. ಹಸ್ ಹೋತಲ್ಲೆ. ಇದ್ಕೆ ಸುಖವಾತ್. ಯಾರಿಗೆ ? ಅರ್ಸುನ ಹೆಣ್ಣ್‌ಗೆ. ಇದ್ ಹಿಂಗೇ ಇದ್ದ್ ಇದ್ದ್ ಈ ಹೆಗ್ಗಣಂಗೆ ಹಗ್‌ಲಿಡೀ ಮಾಲಿ ದೊಡ್ಡಿತ ಮಾಡ್ದೆ ಕೆಲಸ. ರಾತ್ರೆಗೆ ಅದ್ಕೆ ತಿಂಡಿ ತಂದ್‌ಕೊಡ್ದು. ಅಕೆರಿಗೆ ಕೈಗೆಜ್ಜೆ ಕಾಲ್ ಗೆಜ್ಜೆಂತ ಮಕ್ಕ ಹುಟ್ಟುವೊಂತ ಈ ಅರ್ಸ್ ತಂದಿಸಿ ಕೊಂಡದ್ದರೆಲ್ಲಾ ತಂದ್ ಸೊಂಟಕ್ಕೆ ಕಾಲಿಗೆ ಕಟ್ಟಿತ್. ಅಲ್ಲಿ ಕೆಲಸ ಮಾಡುವ ದಾಸಿ ನೋಡ್ಕನ ಇದ್ ಕೂಸು ಕೊಣ್ಕಂಡು ಬಾದು ಕೇಳ್ದೆ. ಮಾಳಿ ಒಳಗೆ ಇವು ಓಳ್ಪಿದೊ. ಓಳ್ಪಿ ಬಂದ್‌ದ್ ಇವರೊಟ್ಟಿಗೆ ಹೇಳ್ದೆ 'ಅಬ್ಬೆಗಳೆ ನೀವ್ಗೆ ಮೋಸಾತ್'. 'ಏನ್? ಕೂಸು ಹೆಗ್ಗಣನ ಮಾಳಿಲಿ ಉಟ್ಟು. ಅದು ಕುಣಿತಾ ಬಂದದೆ. ಗೆಜ್ಜೆ ಕೇಳ್ದೆ'. ಅಷ್ಟ್ ಹೇಳ್ಕನ ವಾಪಾಸ್ ಇದೇ ರೀತಿ ಮಾಡ್ದು. ಪಂಚಾಂಗದವನ ಹಕ್ಕಲೆ ಹೋದೊ ಹೋಗಿ ಅವನೊಟ್ಟಿಗೆ ಹೇಳ್ದೊ. ನಾವು ಹಿಂಗಿಂಗೆ ಹೊಡ್ದಾಡ್ವೆ. ಆಗ ಅವು ಪಂಚಾಂಗಕೆ ಬಾವೊ. ಆಗ ನಿಮ್ಮ ಬಡಗನ ಬಾಗಿಲ್‌ಲಿ ಒಂದ್ ಹೆಗ್ಗಣನ ಮಾಳಿ ಉಟ್ಟು. ಅದರ್ಲಿ ಹೆಗ್ಗಣ ಉಟ್ಟು. ಅದರ ಕೊಂದುಕೊಟ್ಟರೆ ನಿಂತದೆ. ಬಂದ್ ಎಳ್ಳಿಸಿ ಅದರ ಹಿಡ್ದು ಕೊಟ್ನೆಂತ ಹೇಳ್ತ್. ಇವು ಹೊಡ್ದಾಡಿಕೊಂಡು ಇದ್ದೊ. ಇದ್ದಾಕನ ಈ ಹೆಗ್ಗಣ ಅಂದ್ ಏನ್ ಮಾಡ್ತ್? ರಾತ್ರೆ ಈ ಕೂಸುನ ಅಲ್ಲಿಂದ ತಕನ್ತ್.

ಆಗ ಇವು ನೀರ್ ತಾವೊ ಕೆರೆದಂಡೆಲಿ ಬಾಳೆ ಮರ ಉಟ್ಟು. ಅದರ್ಲಿ ಹೆಜ್ಜೇನು ಉಟ್ಟು. ಅಲ್ಲಿ ತಕೊಂಡೋಗಿ ಕೊಟ್ಟತ್. ಆ ನೆಲಂಗ ತೊಟ್ಟಿಲ್ ಕಟ್ಟಿದಾಂಗೆ ಕಟ್ಟಿ ಕೂಸುನ ಅದರ್ಲಿ ಮಲಗಿಸಿಕಂಡ್ ಒಳೊ. ಈ ಹೆಗ್ಗಣನ ಇವು ಎಲ್ಲಿದ್ ಕೊಟ್ಟತ್. ಅರ್ಸು ಕೊಂದತ್. ಇವ್ಕೆ ಗುಣವಾತ್. ಇವು ಹಿಂಗೆ ಎರಡು ಮೂರು ದಿನ ಕಳಿಯಕ್ಕೆ ಆಕನ ಇವು ನೀರಿಗೆ ಹೋಗೊಳೊ. ಅಷ್ಟಾಕನ ಈ ಕೂಸಿನ ಬಾಯಿಗೆ ಅವು ಜೇನ್ ಹಿಂಡಿವೆ. ಹಿಂಡಿಕನ ಜೇನ್ ಕೆಳಗೆ ಬೀತ್. ಇವರ ಕೈ ರಟ್ಟೆಗೆ. ಮುಟ್ಟಿ ನೋಡ್ರೆ ಸಿಹಿಮುಟ್ಟಿದೆ. ಉದ್ದ ನೋಡ್ರೆ ಈ ತೊಟ್ಟಿಲ್ ಹೊರಗೆ ಕೂಸುನ ಕಾಲ್ ಕಂಡದೆ. ಸೀದಾ ಬಂದೊ ಬಂದ್ ಹೇಳ್ದೊ. 'ಇನ್ನ್ ಯಾವ ರೀತಿಲೂ ಆದ್ಲೆ

ನಿಮ್ಮಂದ. ಕೆರೆದಂಡೆ ಮೇಲೆ ಹಾಲೆಮರ ಉಟ್ಟು. ಅದರ್ಲಿ ಹೆಜ್ಜೆನು ಉಟ್ಟು. ಹೆಜ್ಜೇನ್‌ನ ಕೈಲಿ ಕೂಸು ಉಟ್ಟು. ಕೂಸು ಕಾಲ್ ಹೊರಗೆ ಕಂಡದೆಂತ' ಹಿಂದಕೆ ಓಡ್ದೊ. ಪಂಚಾಂಗದವನ ಹಕ್ಕಳೆ ಹೋಗಿ ಅಲ್ಲಿ ಹೇಳ್ದೊ. 'ನಾವು ತಲೆ ಬೇನೆ ಉರುಜ್ವರಲಿ ಹೋಡ್ದಾದ್ವೆ. ಪಂಚಾಂಗಕೆ ಬಂದರೆ ಹೇಳೊಕು. ಕೆರೆದಂಡೆಲಿ ಹಾಳೆಮರ ಉಟ್ಟು. ಹಾಳೆ ಮರಲಿ ಹೆಜ್ಜೇನು ಉಟ್ಟು. ಅದರ ಕೊಯ್ದ್ ಕೊಟ್ಟರೆ ನಿಂತದೆಂತ' ಆತ್. ಒಪ್ಪಿಕನ್ತ್. ಬಂದೊ. ಇಸುದೆಲ್ಲಾ ಮಾರನೆ ದಿನ ವಾಯಿದೆ. ಬಂದೊ. ಬಂದಾಕನ ಈ ನೆಲಂಗ ಏನ್ ಮಾಡ್ದೊ? ಆ ಕೂಸುನ ಇವು ರೆಂಕೆ ರೆಂಕೆ ಕೂಡ್ಸಿ ತಕೊಂಡೋಗಿದ್ ನೆರೆಕರೆಲಿ ಒಂದು ಪಾಪದ ಅಜ್ಜಿ ಉಟ್ಟು. ಅದರ ಕೈಲಿ ಕೊಟ್ಟೊ. ಅಜ್ಜಿ ಸಾಂಕಿಕೊಂಡಿತ್ತ್.

ಇಂವ ಮಾರನೆದಿನ ಜೇನ್ ಕೊಯಿಸಿತ್. ಕೊಟ್ಟತ್. ಇವರ ಕಾಯಿಲೆ ಗುಣಾತ್. ಕೆಲವು ಸಮಯ ಆಕನ ಕೂಸು ಹಂಞ ಬಲ ಆತ್. ಬಲ ಆಕನ ಏನ್ ಮಾಡ್ತ್? ಕುದ್ಕೊಂಡ್ ಕುಂಬ್ ಮರನ ಒಂದು ಕುದುರೆನ ಆಕಾರ ಮಾಡ್ತ್. ಎರಡ್ ಕೊಡ್ಪನಕ್ಕೆ ಒಗ್ಗಿ ಹಾಕಿತ್. ಇದರ ಹೆಗಲ್ ಮೇಲೆ ಹಾಕನ್ತ್. ನೋಡಿ ಕೊಂಡ್ ಇವು ನೀರಿಗೆ ಬಾವ ಟೈಮಿಗೆ ಅತ್ತಂದ ಅಂವನೂ ಬಾತ್. ಆಗ ಇವು ಏನ್ ಹೇಳ್ದೊ? 'ಥೂ ರಂಡೆ ಮಗನೆ ಕುಂಬುಕುದುರೆ ನೀರಿ ಹೆರ್ದ ಕಾಲ ಉಂಟಾಂತ? ಕೇಳ್ದೊ. ಆಗ ಅಂವ ಏನ್ ಹೇಳ್ತ್ ಅಲ್ಲಿಂದ. ತೂತ್ ಕೆಟ್ಟ ರಂಡೆಗಳೆ ಮೆಟ್ಟಿ ಮೇಲಾಡಿದ ದೊರೆ ಹೆಣ್ಣು ಇಟ್ಟ್‌ಕಲ್ಲ್ ಹೆತ್ತ ಕೆಟ್ಟ ಕಾಲ ಉಂಟಾಂತ? ದೂಡಿ ಹಾಕಿತ್ ಅತ್ತ. ಇಂವ ಹೋತ್. ಇದರಲ್ಲಿ ಪುರುಸೋತಿಲ್ಲೆ ಅವ್ಕೆ. ನಿಫಂಟ್ ಬಂದ್ ಹೇಳ್ದೊ. ಇನ್ನ್ ನಿಮ್ಮಂದ ಆದ್ಲೆ. ನಿಮ್ಮ ತಲೆ ಕಡಿಸ್ವೆ. ಹೇಂಗೆ? ನಾವು ಹೇಳಿಕೆ ಆಕನ ಅಂವ ಹಿಂಗೆಂಗೆ ಹೇಳಿಟು. ಕುದುರೆನ ದೂಡಿ ಹಾಕಿತ್. ಅದರಿಂದಾಗಿ ಏನ್ ಬೇಕಾರು ಮಾಡಿ? ಇಲ್ಲಿ ಸುರುವಾತ್ ಇದ್ಕೆ ಹೊಟ್ಟೆ ಬೇನೆ, ತಲೆಬೇನೆ. ಹೋದೊ. ಹೋಗಿ ಹೇಳ್ದೊ. ದೊರೆ ಬಂದರೆ ಹೇಳೊಕು ಪಾಪದ 'ಅಜ್ಜಿ ಮನೆಲಿ ಒಂದು ಹೈದ ಉಟ್ಟು'. ಅಂವನ ಏನ್ ಮಾಡಕ್‌ಂತ ಹೇಳ್ರೆ 'ಏಳ್ ಸಮುದ್ರದ ಆಚೆಗೆ ಕಳ್ಸೊಕುಂತ. ತೀರ್ಥ ತಾಕ್ಕೆ? ತಂದು ಕೊಟ್ಟರೆ ನಿಲ್ಲುದುಂತ'. ಬಂದೊ. ಮಾರ್ನೆದಿನ ಕೇಳ್ತ್. ಕೇಳ್ರೆ ಹೀಂಗೀಂಗೆ ಉಟ್ಟು. ತಂದ್‌ಕೊಡಕ್ ನಿಂತದೆಂತ' ಆತ್. ಜನ ಯಾರ್? ಅದಕೆ ಜನ ಪಾಪದ ಅಜ್ಜಿ ಮನೆಲಿ ಒಬ್ಬ ಹೈದ ಉಟ್ಟು. 'ಆತ್‌ಂತ' ಹೇಳ್ತ್. 'ನಾಳೆ ಕಳ್ಸಿನೆ'. ಬಾತ್ ನಿತ್ಯ ವಾಯಿದೆ ಹೇಳ್ತ್. ಅಜ್ಜಿಗೆ ಜನ ಬುಟ್ಟತ್. ಅಜ್ಜಿ ಬಾತ್.

ಅಜ್ಜಿನೊಟ್ಟಿಗೆ ಹೇಳ್ತ್, 'ನಿನ್ನಲಿ ಒಂದು ಹೈದ ಉಟ್ಟು. ಅಂವ ಏಳ್ ಸಮುದ್ರದ ಆಚೆಗೆ ಹೋಗಿದ್ದ್ ತೀರ್ಥ ತಕಂಡು ಬರೊಕು. ಕೇಳಿಕನ್ತ್ ಅಜ್ಜಿ. ಬೇಜಾರಾತ್. ಇದ್ ಎಲ್ಲಿಂದಾದರೂ ಬೇಡಿಕಂಡ್ ಸಾಂಕಿದ ಹೈದ ಅಲ್ಲ! ಹೋಗಿ ಸುಮ್ಮಂಗೆ ಕುದ್ದತ್. ಕೇಳ್ತ್ ಹೈದ. ಅವ್ವಾ ಯಾಕೆನೀ ಬೇಸರ್ಲಿ ಕುದ್ದೊಳೊ? 'ನೋಡ್ ನಾ ಮನೆ ಮನೆ ಹೋಗಿ ನುಚ್ಚಿ, ಕಾಳ್ ಬೇಡಿ ತಕಂಡ್ ಬಂದ್ ನಿನ್ನ ಸಾಂಕಿದೆ. ಈಗ ಅರ್ಸುದು ಅಪ್ಪಣೆ ಆಗುಟ್ಟು. ನೀ ಏಳ್ ಸಮುದ್ರದ ಆಚೆ

ೋಗಿದ್ ತೀರ್ಥ ತಕಂಡ್ ಬರೊಕಡ. ನಾ ಏನು ಮಾಡ್ದು? ನೀ ಹೇಂಗೆ ಹೋವ? ಹೇಂಗೆ ಾವೊ? ಅದ್ಕೆ ಹೆದರ್ಬೇಡ. ವಾಪಾಸ್ ಹೋಗು ಅರ್ಸು ಕುದ್ರುವ ಕುದುರೆ, ಅರ್ಸು ಹಿಡಿವ ಂದ್ರಾಯುದ, ಮೂರು ದಿನದ ವಾಯಿದೆ ಕೇಳಿಕನಕ್. ಹೆದ್ರ್‌ಬೇಡಂತ' ಹೇಳ್ತ್. ಹೋತ್ ಂದಕೆ. ಏನ್ ಬಂದದ್ ಹೋದೆ ಗಡ ಅಂವ. ನೀವ್ ಕುದ್ರುವ ಕುದುರೆ, ನೀವು ಹಿಡಿವ ಂದ್ರಾಯುಧನೂ ಕೊಟ್ಟತ್. ಹಂಞ ಖರ್ಚಿಗೂ ಕೊಟ್ಟತ್. ಅಜ್ಜಿ ತಕಂಡ್‌ಬಾತ್. ಎರಡ್ ಿನ ಪೊರ್ಲು ಹೈದ ಅಜ್ಜಿನೊಟ್ಟಿಗೆ ಸಾಮನ್ ತರ್ಸಿತ್. ಕುದ್ಕೊಂಡು ತಿಂದೊ. ಅಜ್ಜಿ ಪಿಳ್ಳಿ. ನಾಳೆ ಂದೇ ಒಳದ್ ಬೆಳಗಾಕನ ಕುದುರೆ ಮೇಲೆ ಏರ್ತ್. ಚಂದ್ರಾಯುಧ ಹಿಡ್ಕನ್ತ್.

'ಸತ್ಯಲಿ ಹುಟ್ಟಿ ಸಾಪಲಿ ಬೆಳ್ದಂವ ಆದರೆ ಏಳ್ ಸಮುದ್ರಕ್ಕೆ ಹಾರಲಿ ಕುದುರೆಂತ' ಹೇಳ್ತ್. ಾರ್ಸಿತ್ ಅಲ್ಲಿಗೇ. ಆಗ ಸಮುದ್ರ ದಾಟೊಕಲ್ಲ ಆಚೆ ಕೆರೆಗೆ ಅಲ್ಲಿ ಹೋಗಿ ನಿಂತತ್. ಅಲ್ಲಿಂದ ೇಳ್ತ್ 'ಸತ್ಯಲಿ ಹುಟ್ಟಿ ಶಾಪಲಿ ಬೆಳ್ದಂವ ಆದರೆ ಕೆಳಗೆನ ನೀರ್ ಕೆಳಗೆ ಮೇಲಿನ ನೀರ್ ಮೇಲೆ ಕ್ಕುಂತ' ಹೇಳ್ತ್. ಆಗ ಭಗಲಾಗಿ ನಿಂತತ್. ನಡೂಲಿ ಹೆದ್ದಾರಿ ಆತ್. ಆಚೆಕೆರೆಗೆ ಹೋತ್. ಂದು ಚೆಂಬುಲಿ ತೀರ್ಥ ತುಂಬ್ಸಿಕನ್ತ್. ಹಿಂದಕೆ ಬಾತ್. ಕುದುರೆ ಮೇಲೆ ಕುದ್ದತ್. ಹಾರಲಿ ರ್ಸುನ ಅರಮನೆ ಬಾಗಿಲಿಗೆಂತ. ಕುದುರೆ ಅಲ್ಲಿಂದ ಹಾರ್ತ್. ಇಲ್ಲಿಗೆ ಬಾಕನ ಅಲ್ಲಿ ನಿಂತತ್. ಾಗ ಈ ತೀರ್ಥ ಚೊಂಬುಟ್ಟಲ್ಲ ತೆಕೊಂಡೋಗಿ ಮೇಜದ ಮೇಲೆ ಇಸಿತ್. ಇಸಿ ಅಲ್ಲಿಂದ ಕೇಳ್ತ್ ಹೈದ ಈಗ ನಾ ಅಂಜಿ ಬಿನ್ನಹ ಮಾಡೊಕಾ, ಅಂಜಂದೆ ಬಿನ್ನಹ ಮಾಡ್‌ಂತ. ಆಗ ಇಂವ ುರೂ ಎಲ್ಲಿಂದ ನಾ ತೆಗ್ದ್ ಹೇಳ್ದೆ ಅಲ್ಲಿಂದಲೇ ಹೈದ ಹೇಳಿಕಂಡ್ ಹೋತ್. ಹೇಳಿಕಂಡು ೋಗಿ ಈ ತೀರ್ಥ ತಂದ್‌ದ್ ಇಲ್ಲಿ ಇಸಿಕೆ ಆಕನ ಇವಂಗೆ ಬೆಚ್ಚ ಆತ್. ಇದ್ ಹಂಗಾರೆ ಅದೇ ೂಡೆನ ಮಂಜ ಆಗಿರೋಕು. ಅದರ ನೋಡೋಣ? ಕುದುರೆ ಲಡ್ಡಿಗೆ ಹೋದಲ್ಲಿಂದ ಕರ್ತ್. ುಧ್ಯೆಲಿ ಏಳ್ ಸೀರೆ ಹಿಡ್ತ್. ಹಿಂಗೆ ಅಡ್ಕಕೆ ಆಚೆಲಿ ಹೆಂಗಸ್, ಈಚೆಲಿ ಕೂಸ್. ಆದರ ಮೇಲೆ ಾಲ್ ಹಿರ್ತ್. ಕೂಸ್‌ನ ಬಾಯ ತುಂಬಾ ತುಂಬಿ ಅರ್ದ್ ಹೋತ್. ಆಗ ಇದರ ಇಂವ ೋಡಿಯಾಕನ ಇದೇ ನನ್ನ ಹೆಣ್ಣ್‌ಂತ ಆತ್. 'ಅವು ನನ್ನ ಕುಟ್ಟೆ ತೆಗಿಯಕ್ಕೆ ಮಾಡ್ದ ಕೆಲಸಂತ' ೇಳಿ ಅವರ ಎಲ್ಲವರ ಬಾಕೆ ಮಾಡಿ, ಅವರ ತಲೆ ಕಡ್ಸಿತ್. ಈ ಹೈದನೂ ಈ ಹೆಣ್ಣೊ ಆ ಅರ್ಸು ಾಮೇಲೆ ಸುಖಲಿ ಬಾಳ್ದೊ. [ಕಥಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 29.ಅರ್ಸುಗೆ ಮೂರ್ ಮೊದ್ವೆ ಕತೆ

ಒಂದಾನೊಂದು ಊರ್ಲಿ ಒಂದು ಅರ್ಸು. ಆ ಅರ್ಸುಗೆ ಫಸ್ಟಿಗೆ ಒಂದು ಮೊದ್ವೆ ಆತ್. ಅದ್ ೊಸ್ರಿ ಆತ್ಲೆ. ಇದ್ ಬೊಸ್ರಿ ಆತ್ಲೆಂತ ಎರಡ್ನೆ ಒಂದು ಮೊದ್ವೆ ಆತ್. ಅದೂ ಬೊಸ್ರಿಯಾತ್ಲೆ. ಮೂರ್ನೆದ್ ಮೊದ್ವೆಯಾತ್. ಮೊದ್ವೆ ಆಗಿದ್ ಮೂರು ಹೆಣ್ಣ್‌ಗಳು ಆದೊ. ಒಳ್ದೊದರಲ್ಲಿದ್ದೊ.

ಇದ್ದಾಕನ ಒಂದು ಒಳಗಡೆ ಇನ್ನೊಂದು ಹೊರಗಡೆ ಹಿಂಗೆಲ್ಲ ಕೆಲಸ ಮಾಡಿಕಂಡಿರ್ಕನ ಕಡೇ ಹೆಣ್ಣ್ ಅಂಗಲ ಗುಡ್ಸಿ ಕೊಂಡಿರ್ಕನ ಒಂದು ಮಾಯಿನಕಾಯಿ ಸಿಕ್ಕಿತ್‌ಗಡ. ಅದರ ಎರಡ್ ಸೈಡ್‌ನ ತೆಗ್ದ್ ಅಕ್ಕಂದಿರಿಗೆ ಕೊಟ್ಟ್, ಕೊರಂಟ್‌ನ ತೆಗ್ದ್ ಅದ್ ತೀನ್ತ್. ಅವು ಮೂರು ಜನ ಒಟ್ಟಿಗೆ ಬೊಸ್ರಾದೊ. ಮೂರು ಜನ ಒಟ್ಟೊಗೆ ಒಳ್ಳೊ ಪೊರ್ಲ್ಲೊನ ಗಂಡ್ ಮಕ್ಕಳ ಹೆರಿಗೆ ಆದೊ. ಹೆರಿಗೆ ಆಕನ ಏನ್ ಮಾಡ್ಡೊ ಈ ಸಣ್ಣ ಹೆಣ್ಣ್‌ನ ಗಂಡುಕೂಸು ತೆಗ್ದ್ ಗೊಬ್ಬರ ಗುಡ್ಡೆಲಿ ಹಾಕಿದೊ. ಅರ್ರು ಬಾಕನ ಹೇಳ್ದೊ, 'ಇಂದ ನಿನ್ನ ಸಣ್ಣ ಹೆಣ್ಣ್ ಹೆತ್ತದ್ ಓಂತಿ ಆರನೆ. ಇವು ಎಲ್ಲ ಎರಡ್ ಒಳ್ಳೊ ಪೊರ್ಲ್ಲನ ಮಕ್ಕಳ ಹೆತ್ತೊಳೋಂತ'. ಇಂವ ಸಿಟ್ಟ್‌ಲಿ ಸಣ್ಣ ಹೆಣ್ಣ್‌ನ ಕುದುರೆ ಲಾಯಲಿ ಹಾಕಿತ್. ಇವು ಎರಡ್ ಹೆಣ್ಣ್‌ಗ ಮಿಂದ್ ಒಳ್ದ ನೀರ್‌ನ ಮೀದ್ ಬಾದು. ಅವು ಕುಡ್ದ್ ಒಳ್ದ ಮದ್ದ್‌ನ ಕುಡ್ಕೊಂಬೊದು. ಹಿಂಗೇ ಸಣ್ಣ ಹೆಣ್ಣ್‌ನ ತಲೆ ಎಲ್ಲ ಬೋಳ್ಸಿದ. ಅದರ ಅತ್ತ ಕುದುರೆ ಚಾಕರಿ ಮಾಡಿಕೆ ಹಾಕಿದೊ.

ಸುಮಾರ್ ದಿನ ಕಳ್ದಾಕನ ಮಕ್ಕ ದಿನಂದ ದಿನ, ದಿನಂದ ದಿನ ದೊಡ್ಡದಾದೊ. ದೊಡ್ಡದಾಕನ ಅಪ್ಪನೊಟ್ಟಿಗೆ ಹೇಳ್ದೊ, 'ಅಪ್ಪಾ ನಾವ್ಗೆ ಇನ್ನ್ ವಿದ್ಯೆ ಬುದ್ದಿ ಕಲಿಯೊಕು ಶಾಲೆಗೆ ಹೋಕುಂತ'. ಇವಂಗೆ ಏನ್ ಮಾಡ್ಡೊ? ಯಾಗೊಳು ಹೆಣ್ಮಕ್ಕ ಕರುಬುಡಿಕೆ ಹೋಕನ, ಕಬಿಲೆ ದನದ ಗೊಬ್ಬರ್ಲಿ ಕುದ್ದ್ ಕರ್‌ಬುಡ್‌ಕನ, ಹಾಲ್ ತುಂಬಿಕನ ಚೊಂಬಿಗೆ ಮೆಟ್ಟುದು. ಅದ್ ಈ ಕೂಸುನ ಬಾಯಿಗೆ ಬಿದ್ದದೆ. ಅದ್ ಆರೋಗ್ಯಲಿ ಇತ್ತ್. ಸಣ್ಣ ಹೆಣ್ಣ್‌ನ ಕೂಸು. ಇವಂಗೆ ದನ ಮೇಪು ಕೊಟ್ಟೊ. ಇವು ಶಾಲೆಗೆ ಹೋದೊ. ಇಂವ ಏನು ಮಾಡ್ದು? ಒಂದಿಷ್ಟು ಕಾರೆಮುಳ್ಳು, ಒಂದಿಷ್ಟು ಗೊಬ್ಬರ ಸೊಪ್ಪು ಎಲ್ಲ ಹಿಡ್ಕೊಂಬೊದು ಶಾಲೆ ಹಿಂದೆ ಕುದ್ಕೊಂಬೊದು. ಅಲ್ಲಿ ಮಾಸ್ಟ್ರ ಪಾಠ ಮಾಡ್ದಾಂಗೆ ಅದರೆಲ್ಲ ಬರ್ಕೊನ್ದು. ಹಿಂಬೊಂತ್ತಿಗೆ ದನನ ಹೊಡ್ಕಂಡು ಬಾದು. ಮನೆಗೆ ಬಂದ್ ಕುದುರೆ ಪಾರದಲ್ಲಿಗೆ ಹೋದು. ಹೀಂಗೆ ಇದ್ದೊ. ಇಂವ ದಿನಂದ ದಿನ ಇದರ್ಲಿ ಎಲ್ಲ ತುಂಬಿಸಿಕಂಡದೆ. ಮುಳ್ಳುನ ಸೊಪ್ಪುನ ಪೂರಾ ಸುಮಾರ್ ಸಮಯ ಕಳ್ದ್ ಆಳುಗ ಆದೊ. ಆಳುಗ ಆಕನ ಏನು ಹೇಳ್ದೊ ಗಡ? ಲೈಕ್‌ನ ಮಕ್ಕ. ಅಪ್ಪ ನಾವ್ಗೆ ಇಂದ್ ವಿದ್ಯೆ ಕಲ್ತಾತ್. ಇನ್ನ್ ನಾವ್ಗೆ ಬೇಟೆ ಎಲ್ಲ ಕಲಿಯೊಕು. ಹಾಂಗೆ ಕೋವಿ ಎಲ್ಲ ಬೇಕ್. ಅದ್ ತೆಗ್ದ್ ಕೊಟ್ಟತ್ ಅರ್ರು. ಬೇಟೆಗೆಲ್ಲ ಹೋದೊ. ಇಂವ ಒಂದು ಬೆದರ್ ಕಡ್ತ್. ಬಿಲ್ಲ್ ಮಾಡಿಕೊನ್ತ್. ಇಂವನು ಹಿಂದೆಂದಾ ಹೋತ್. ಹೋಗಿ ಆಕನ ಇವು ಅಲ್ಲಿ ಇಲ್ಲಿ ಬೊಬ್ಬೆಹೊಡಿದು. ಹೊಡ್ದ್ ಹಾಕಿ ಬುಟ್ಟ್‌ಕಂಡ್ ಹೋದು. ಇಂವಹೋತ್. ಒಂದು ಹರ್ಕಲ್ ಚೀಲ ಹಿಡ್ಕನ್ತ್. ಅದರ ಕೆಬಿ, ತಲೆ, ಕೈಕಲ್ ಕೊಯ್ದ್ ಹಾಕನ್ತ್. ಹೌದೊ ಮಕ್ಕಳೆ ಬೇಟೆ ಎಲ್ಲ ಕಲ್ತರಿಯ. ಎಲ್ಲ ಕಲ್ತೊ ಅಪ್ಪ.

'ಇನ್ನ್ ನಾವ್ಗೆ ದೇಶ ತಿರ್ಗೊಕು. ನಾವ್ಗೆ ವಿದ್ಯೆ ಇಷ್ಟೆ ಅಲ್ಲಂತ' ಹೇಳ್ದೊ. ಅವು ಹಣ ಬುತ್ತಿ ಎಲ್ಲ ಕಟ್ಟಿಕಂಡ್ ಹೋದೊ. ಒಂದಾನೊಂದು ಊರಿಗೆ ಹೋದೊ. ಈ ಮಕ್ಕಳಿಗೆ ಒಳ್ಳೊ ಎರಡ್ ಕುದುರೆಗಳ ಕೊಟ್ಟೊ. ಇಂವಗೆ ಒಂದು ಚೊಟ್ಟು ಕುದುರೆ. ಇಂವ ಹಿಂದೆಂದ ಕದ್ದ್

ದ್ದ್ ಹೋಕನ್ದೆ. ಹೋಗಿ ಒಂದಾನೊಂದು ಊರಿಗೆ ಎತ್ತಿಕನ ಅಲ್ಲೊಂದು ಅರ್ಸುನ ಮಗ. ಇವರ ಕುದುರೆ ಎಲ್ಲ ಗೇಟ್ ಹುಗ್ಗಿಕನನೇ ಬೀಳ್ದು. ಇಂವನ ಕುದುರೆ ತೆಗ್ದ್ ಹಾರ್ತ್. ಅಲ್ಲಿ ಒಂದು ಮೂಲೆಲಿ ಕುದ್ದತ್. ಇದ್ ಬಾತ್ ಆನೆ. ಹೂವಿನ ಮಾಲೆ ತಕೊಂಡು. ಸಾಧಾರಣ ಎಲ್ಲ ನಿಂತ್ ನೋಡ್ದೊ. ಈ ಮೂಲೆಲಿ ಕುದ್ದವಂಗೆ ಹಾಕಿತ್ ಮಾಲೆ. ನಾವು ಇಷ್ಟ್ ಪೊರ್ಲುಲಿ ಬಂದ್‌ದ್ ಅಂವ ನಮ್ಮೊಟ್ಟಿಗೆ ಬಾದುಬೇಡಂತ ಹೇಳ್ದೊ.

ಅಲ್ಲಿಂದ ಬುಟ್ಟು ಹೋದೊ. ಹೋದೊ ಮತ್ತೊಂದು ಊರಿಗೆ. ಹೋಗಿನೂ ಅಲ್ಲಿಗೆ ಎತ್ತಿಕನ ಇವನ ಚೊಟ್ಟು ಕುದುರೆ ಅತ್ತ. ಅಲ್ಲಿ ಒಂದು ಸಭೆಲಿ ಕುದ್ದೊ. ಇಂವ ಹೋಗಿ ಮೂಲೆಲಿ ಕುದ್ದತ್. ಅಲ್ಲಿನೂ ಹಾಂಗೆ ಮೇಲುಪ್ಪರಿಗೆಂದಾ ಆನೆನ ಕಳ್ಸಿತ್. ನೀವು ಹೋಗಿ ನೋಡಿ ಮಾಲೆಹಾಕಿ ಬರೊಕುಂತ. ಬಾತ್ ಆನೆ ಎಲ್ಲ ಸಭೆ ಹುಕ್ಕ್ ನೋಡ್ತ್. ನೋಡ್ತ್ ಮೂಲೆಲಿ ಕುದ್ದವನ ಕುತ್ತಿಗೆಗೆ ಹಾಕಿತ್. ಬಾತ್ ಅರ್ಸುನ ಮಗ ಬಂದ್ ಮಾಲೆ ಹಾಕಿತ್. ಅವು ಅತ್ತ ಹೋದೊ. ಅಲ್ಲಿನೂ ಸಿಟ್ಟ್ ಬಾತ್ ಇವ್ಕೆ. ನಾವು ಇಷ್ಟೆಲ್ಲ ಗಡ್ದ್ ಮಾಡಿ ದೇಶಾಂತರ ಹೋಕುಂತ ಬಂದ್‌ದ್. ಹಾಕಿದ್ ಅವಂಗೆ. ಅವನ ಮಡ್ಗದೆ ಬೊತ್ತ್‌ಂತ ಹೇಳಿಕಂಡು ಹೋದೊ. ಅದ್ ಪಸ್ಟ್‌ದ್ ಜೀವಕಲೆ ಅರ್ಸುನ ಮಗ. ಎರಡ್ನೆದ ಕುಂಚಿಕಲೆ ಅರ್ಸುನ ಮಗ. ಎರಡ್ ಗೂಡೆಗ ಆದವೆ. ಮತ್ತೊಂದು ದಿಕ್ಕಿಗೆ ಹೋದೊ. ಅಲ್ಲಿಗೆ ಹೋಕನ ಸಂದ್‌ಕಲೆ ಅರ್ಸುನ ಮಗ ಅಲ್ಲಿ ಉಟ್ಟು. ಉಪ್ಪರಿಗೆಲಿ ಯಾರ್‍ಯಾರು ಬಂದರೂ ಅದ್ಕೆ ಗಂಡ ಆದ್ಲೆ. ಸಭೆ ಸೇರ್ಸಿದೊ. ಇವರ ಎರಡ್ ಕುದುರೆನ ಹಾರ್ಸಿಕೊಂಡು ಅತ್ತಲೆ ಹಾರ್ದೊ. ಗುಂಡಿಗೆ ಇಂವ ಹೋಗಿ ಹಾರ್ಸಿಟ್ಟು. ಮುಂದೆ ಹೋತ್. ಗೇಟ್ ದಾಟಿ ಹೋಗಿ ಸಭೆಲಿ ಕುದ್ದೊ . ಇಂವ ಮರೆಲಿ ನಿಂತತ್. ಇದ್ ಮೇಲುಪ್ಪರಿಗೆಂದ ಕಳ್ಸಿತ್. ಅರ್ಸುನ ಮಗ ಆನೆನ. ನೋಡಿ ಮಾಲೆ ಹಾಕಿ ಬಾಂತ. ಆನೆ ಬಂದ್ ಸಭೆ ನೋಡಿ ಇವಂಗೆ ಮಾಲೆಹಾಕಿತ್. ದೂರಲಿ ಕುದ್ದವಂಗೆ. ಮೂರು ಹೆಣ್ಣ್‌ಗ ಆದೊ. ಇನ್ನ್ ಬೇಡ್ವೇ ಬೇಡ. ನಾವು ತಿರ್ಗಿ ನಮ್ಮ ಊರಿಗೇ ಪೋಯಿಂತ ಸಿಟ್ಟ್ ಬಾತ್. ಇಂವನ ದಾರಿಲಿ ಬಂದರೆ ಇಸಿಕಿಲ್ಲೆ. ಇಂವನೊಟ್ಟಿಗೆ ಹೋದರೆ ಆಕ್ಕಿಲ್ಲೆಂತ ತಿರ್ಗಿ ಬಂದೊ. ಬಂದ್ ಸಾಧಾರಣ ಸುಮಾರ್ ದೂರ ಎತ್ತಿಕೆ ಆಕನ ಈ ಮೂರು ಹೆಣ್ಣ್‌ಗಳ ಇಂವ ಮೂರು ಮನೆಗೆ ಬಂದ್ ಕರ್ಕನ್ತ್. ಈ ಕರೆಂದ ಇವು ಏನ್ ಮಾಡ್ದೊ. ನಮ್ಮೊಟ್ಟಿಗೆ ಬಂದ್ಯಾಂತ ಹೇಳಿ ಅಲ್ಲಲ್ಲಿ ಕಲ್ಲ್ ಹೊಡೀದು. ಒಂದು ಕಲ್ಲ್ ತಾಂಗಿತ್. ಅವಂಗೆ ಕಲ್ಲ್ ತಾಂಗಿ ಆಕನ ಇಂವ ಅಲ್ಲಿ ಬಿದ್ದೇ ಹೋತ್. ಈ ಮೂರು ಹೆಣ್ಮಕ್ಕಳೂ ತಲೆ ಕೆಳಗೆ ಕಾಲ್ ಕೆಳಗೆ ಕುದ್ಕೊಂಡು ಮರ್‍ಬವೆ. ಇದ್ ಆತಲ್ಲಾಂತ ಏನ್ ಮಾಡ್ದೊ. ಈ ಕುಂಟಿಕಾಲ್ ಅರ್ಸುನ ಮಗ ಎಲ್ಲ ಹೆರ್ಕಿ ಗುಡ್ಡೆ ಹಾಕಿತ್. ಸಂದ್ ಕಾಲ್ ಅರ್ಸುನ ಮಗ ಎಲ್ಲ ತಂದ್ ಕೂಡ್ಸಿತ್. ಮತ್ತೆ ಜೀವಕಲೆ ಅರಸುನ ಮಗ ಒಂದು ಗರುಡನ ಕೋಲ್‌ಲಿ ನೀರ್ ಹಾಕಿ ಜೀವ ಮಾಡ್ತ್. ಅಯ್ಯೋಪ್ಪಂತ ಹೇಳಿ ಎದ್ದ್ ಕುದ್ದತ್.

ಅಲ್ಲಿಂದ ಬಂದೊ. ಪೊರ್ಲ್ಲಿ ಮೂರು ಹೆಣ್ಣ್‌ಗಳ ಕರ್ಕೊಂಡ್ ಬಾತ್. ಬಂದ್‌ದ್ ಬಂದ್‌ದ್ ಅವು ರೂಮಿಗೆತ್ತಿದೊ. ಇವು ಅರ್ಮನೆಗೆ ಹೋದೊ. ಇಂವ ಹೋಗಿದ್ ಅವನ ಕುದುರೆ ಶಾಲೆಗೆ ಹೋತ್. ಅಯ್ಯೆನ ಹಕ್ಕಲೆ ಅಲ್ಲಿ ಹೋಗಿ ಇತ್ತ್. ಮಕ್ಕಳ ಎಲ್ಲ ಕರ್ದ್ ನೀವು ಹೆಂಗೆ ಎಲ್ಲ ಉಸಾರ್ ಆದರಿಯ? ಓ ನಾವು ದೊಡ್ಡ ದೊಡ್ಡ ಅರ್ಸು ಮನೆಗೆ ಹೋದೊ ಅಪ್ಪ. ನೀವು ತಂದ ಗುರ್ತ ಎಲ್ಲಿಟು. ಇಂವ ಪಸ್ಸಿಗೇ ಹೋತ್. ಇನ್ಸ್ ನೀವು ಬೇಟೆ ಆಡ್ದ್ ಎಂತ ಉಟ್ಟು. ಬೇಟೆ ಆಡ್ದರ ಒಂದು ಚೀಲಲಿ ತಂದ್ ಸೊರ್ಗಿತ್. ಅಷ್ಟ ಹೊತ್ತಿಗೆ ಬಂದವೆ ಮೂರು ಸುಂದರಿ ಹೆಣ್ಮಕ್ಕ. ಅಲ್ಲಿ ಅವು ಒಳೊ. ಅದರೊಳಗೆ ಇನ್ಸ್ ನೀವು ದೇಶ ತಿರ್ಗಿದ್ ಎಂತದ್. ಮೂರು ಹೆಣ್ಣ್‌ಗಳ ಕರ್ಕೊಂಡು ಬಂದೊ. ಅವು ಬಾಕನನೇ ಅತ್ತಂದ ಬೆಳಕ್ ಕಣ್ಣಿಗೆ ಹೊಡ್ದದೆ. ಅಲ್ಲಿಂದ ಅಪ್ಪ ಈ ಎರಡ್ ಮಕ್ಕಳ, ಮಕ್ಕಳ ಅಯ್ಯೆನ ದೂರ ಮಾಡ್ತೆ. ದೂರ ಮಾಡಿದ್ ಇವರ ಕರ್ದ್‌ದ್ ಇವಂಗೆ ಪಟ್ಟಕಟ್ಟಿದೊ. ಈ ಮೂರು ಹೆಣ್ಣ್‌ಗಳ್ನೊ ಈ ಎರಡ್ ಮಂಜಂದಿರ ಮದುವೆ ಮಾಡಿ ಇವು ಅಲ್ಲಿ ಸುಖ ಸಂತೋಷಲಿ ಒಳೊ. [ಕಥಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 30.ಬಾಳೆ ಮೀನು ಮುಗುಡು ಮೀನು ಕತೆ – ಪಠ್ಯ 1

ಒಂದ್ ಅರ್ಸು ಇತ್ತ್. ಅರ್ಸುಗೆ ಒಂದು ಹೆಣ್ಣ್ ಮೊದ್ವೆ ಆತ್. ಮೊದ್ವೆ ಆಗಿದ್ ಅಂವ ಹೇಳಿಕಂಡುಟು. 'ಈ ಊರು ಆಳುವಂತ ಅರ್ಸು ಆಕು ನನ್ನ ಮಂಜ. ಬೆಳ್ಳಿ ಜುಟ್ಟು ಚಿನ್ನದ ಹೊಕ್ಲು ಮಂಜನ ಪಡಿಯೋಕಾತ್'. 'ಈ ಊರು ಆಳ್ವಂತ ಅರ್ಸು ಆಕುಂತ ಹೇಳಿ ಹೆಣ್ಣ್ ಹೇಳಿಕನ್ತ್'. ಹಂಗೆ ಬೆಳ್ಳಿ ಜುಟ್ಟು ಮಗ ಹುಟ್ಟಿತ್. ಚಿನ್ನದ ಹೊಕ್ಲು ಮಂಜ ಹುಟ್ಟಿತ್. ಹಂಗೆ ಅವು ಒಂದು ದಿನ ಹಳ್ಳಕೆ ಮೀಯಕೆ ಹೋದೊ. ಮೀಯಕೆ ಹೋದೊ. ಮಿಯಕೆ ಹೋಗಿದ್ ಮೇಲೆ ತಂಗೆ ಮೀತ್ ಕೆಳಗೆ ಅಣ್ಣ ಮೀತ್. ಅಣ್ಣನ್ ತಂಗೆನ ಇಬ್ಬೊರು ಮೀಯಕೆ ಹೋಗಿ ತಂಗೆನ ಕೂದಲ್ ಬಂದ್‌ದ್ ಅಣ್ಣನ ಹೊಕ್ಲ್‌ಗೆ ಸುತ್ತಿತ್. ಸುತ್ತಿ ಆಕನ ಯಾರದಾ ಹೆಣ್ಣ್‌ಗಳ್ದ್ ತಲೆಗೂದಲ್ ನನ್ನ ಹೊಕ್ಲ್‌ಗೆ ಸುತ್ತಿತೋ? ಇದ್ ತಂಗೆದ್ದೇ ಸುತ್ತಿದ್. ಸುತ್ತಿ ಆಕನ ಹೇಳ್ತ್. 'ನಿನ್ನ ನಾ ಮೊದ್ವೆ ಆನೆಂತ'. ಹಂಗೆ ತಂಗೆ 'ನನ್ನ ಮೊದ್ವೆ ಆಕೆ ಬೊತ್ತ್. ನನ್ನ ಅಣ್ಣ ನೀ. ನೀ ನನ್ನ ಮೊದ್ವೆ ಆದುಂತ ಹೇಳ್ತಿ ಹೇಂಗೆ ? ಅಂತ' ಬಹಳ ಬೇಜಾರಾಲಿತ್ತ್.

ಬೇಜಾರಲಿದ್ದ್‌ದ್ 'ನಾ ಸತ್ಯಲಿ ಹುಟ್ಟಿದ್ ಶಾಪಲಿ ಬೆಳ್ದ ಮಗ ಆದರೆ ಏನಾರ್ ನಂಗೆ ಒಂದು ಹೊರಗೆ ಹೋಕೆ ದಾರಿ ಮಾಡೊಕು'ಂತ ಹೇಳ್ತ್. ಹಂಗೆ ಒಂದು ಹೆಗ್ಗಣ ಬಂದ್‌ದ್ ದೊಡ್ಡೊ ಒಂದು ಮಾಲಿ ತೋಡಿಕಂಡ್ ಹೋತ್. ತೋಡಿಕಂಡ್ ಆ ಮಾಲಿಲೇ ಹೋತ್ ಇದ್.

ಹೋಗಿ ಹೋಗಿ ಒಂದು ಜಮನೇರೊಳು ಮರಕ್ಕೆ ಹತ್ತಿತ್. ಇಂವನ್ ಅದರ್ಲೆ ಹೋತ್. ಅದರ್ಲೆ ಹೋಗಿ ಜಮನೇರಳೆ ಮರಕ್ಕೆ ಹತ್ತಿತ್. ಆಕನ (ಅದರ ಹೆಸರ್ ಚಂದ್ರಮು) "ಒಮ್ಮೆ ಇಳಿ ಒಮ್ಮೆ ಇಳಿ ಚಂದ್ರಮು, ಬಂದನೆಂಟ್ರ ಬರ್‍ಲಿವೆ, ತಂದ ಕೊಡಿದ ಎಲೆ ಬಾಡಿದೆ. ಒಮ್ಮೆ ಇಳಿಂತ" ಹೇಳಿ. 'ನಾ ಇಳಿಯಕ್ಕಿಲ್ಲೆಂತ' ಹೇಳ್ತ್. ಇಂವ ಮರಕ್ಕೆ ಹತ್ತಿತ್. ಮರಕ್ಕೆ ಹತ್ತಿಕನ ಅದ್ ಗೆಲ್ಲ್ ಗೆಲ್ಲ್‌ಗೆ ಹೋತ್. ಇವನೂ ಗೆಲ್ಲ್ ಗೆಲ್ಲ್‌ಗೆ ಹೋತ್. ಇಂವ ಗೆಲ್ಲ್ ಗೆಲ್ಲ್‌ಗೆ ಹೋಕನ ಅದ್ ಸೊಪ್ಪು ಸೊಪ್ಪುಗೆ ಹೋತ್. ಸೊಪ್ಪು ಸೊಪ್ಪುಗೆ ಹೋಕನ ಮತ್ತೆ ಅದಕ್ಕೆ ಎಲ್ಲಿ ಹೋಕೆನುದಾರಿ ಇಲ್ಲೆ. ಮತ್ತೆ ಹಳ್ಳಕೆ ಬೀತ್. ಹಳ್ಳಕೆ ಬಿದ್ದಾಕನ ಅದ್ ಬಾಳೆ ಮೀನಾಗಿ ಓಡ್ತ್. ಇಂವ ಮುಗುಡಾಗಿ ಓಡ್ತ್. [ಕಥಾ ನಿರೂಪಕಿ:ಪೂವಮ್ಮ ಆಲಂಕಳ್ಯ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 31. ಬಾಳೆ ಮೀನು ಮುಗುಡು ಮೀನು ಕತೆ –ಪಠ್ಯ 2

ಒಂದು ಊರ್‍ಲಿ ಒಂದು ಅಯ್ಯೊ ಅಪ್ಪಂಗೆ ಏಳು ಗಂಡುನು ಒಂದು ಹೆಣ್ಣುನು. ಹಾಂಗೆ ಎಂಟ್ ಮಕ್ಕ. ಆ ಹೆಣ್ಣ್ ಗೂಡೆನ ಒಂದೇ ತಂಗೆಂತ ಹೇಳಿಕಂಡ್ ಬಾರೀ ಪೊರ್ಲುಲಿ ಸಾಂಕುವೆ. ಹಾಂಗೆ ಸಾಂಕಿ ಸಾಂಕಿ ಗಂಡ್ ಮಕ್ಕಳಿಗೆ ಮೊದ್ವೆ ಆತ್. ಆರ್ ಜನ ಸೊಸೆಗ ಎಲ್ಲ ಬಂದೊ. ಒಂದು ದಿನ ಇಂವ ಏನ್ ಮಾಡ್ತ್ ಎಲ್ಲಿಗೋ ಹೋದಂವ ಒಳ್ಳೊ ಹೂವುನ ದೈ ಕಂಡತ್. ಅದರ ತಂದ್ ನೆಟ್ಟತ್. ನೆಟ್ಟ್ ಅದರ್‍ಲಿ ಹೂವು ಎಲ್ಲ ಆತ್. ಹೂವು ಆಗಿ ಹೂವುನ ಕೊಯಿದ್ದ್‌ದ್ ದಾರಂದಲಿ ತಂದ್ ಇಸಿತ್. 'ಈ ಹೂವುನ ಯಾರ್ ಮುಡ್ದೊ? ನಂಗೆ ಅವ್ವೇ ಮೊದ್ವೆಗೆ ಆಕ್ಕು. ನಾ ಅವರ್ನೇ ಮೊದ್ವೆ ಆದುಂತ' ಹೇಳ್ತ್. ಇದ್ ಈ ತಂಗೆಗೆ ಗೊತ್ತಿಲ್ಲೆ. ಹಾಂಗೆಲ್ಲ ಅಲ್ಲಿ ಹೇಳ್ತ್. ಇದ್ ಎಲ್ಲಿಯೋ ಹೋಗಿತ್ತ್. ಬಾತ್ ತಲೆ ಬಾಚಿತ್. ದಾರಂದಲಿ ಹೂವು ಕಂಡ್ ಕೇಳ್ತ್ ಬಾತ್. ಅದರ ತೆಗ್ದ್ ತಲೆಗೆ ಮುಡ್ದ್ ಕೊಂಡತ್.

ಅಷ್ಟೊತ್ತಾಕನ ಇಂವ ಎಲ್ಲಿಯೋ ಹೋದಂವ ಬಾತ್. ಹಿಂಬೊತ್ತಿಗೆ ಬಂದಾಕನ ಹೇಳ್ತ್. 'ನನ್ನ ಹೂವುನ ಯಾರ್ ತೆಗ್ದದ್'ಂತ?' ಆಗ ಅತ್ತಿಗಕ್ಕ ಎಲ್ಲ ಹೇಳ್ದೊ 'ಅದ್ ನಿಮ್ಮ ತಂಗೆ ತೆಗ್ದದ್'ಂತ'. ಆಗ ಅತ್ತಿಗೆಕ್ಕ, ಅಯ್ಯೆಪ್ಪ ಅಣ್ಣಂದಿರ್ ಯಾರ್‍ಯಾರ್ ಹೇಳ್ದ್ರೊ ಅದ್ ಆಕಿಲ್ಲೆ, ತಂಗೆನ ಮೊದ್ವೆ ಸರಿಯಲ್ಲಂತ ಹೇಳ್ದ್ರೂ ಅಂವಂಗೆ ಸರಿಯಾತ್ಲ್. ಅಂವ ಹೇಳ್ದು ಒಂದೇ ಜಾತಿ 'ನಾ ಅದರ್ನೇ ಮೊದ್ವೆ ಆದುಂತ'. ಮತ್ತೆಂತ ಮಾಡ್ದು ಉಪಾಯ ಇಲ್ಲದೆ ಮೊದುವೆ ಮಾಡಿಕೆಂತ ಹೊರ್‍ಟವೆ. ಅಷ್ಟಾಕನ ಈ ತಂಗೆಗೆ ಗೊತ್ತಾತ್. ಇನ್ನ್ ನನ್ನನೇ ಅವಂಗೆ ಕೊಡ್ದುಂತ. ಅದ್ ಮರ್‍ಟ್ ಮರ್‍ಟ್ ಬೇಡ್ವೇ ಬೇಡಾಂತ ಹೇಳ್ತ್. ಹೇಳ್ದ್ರೆ ಇಂವ ಕೇಳೊಕಲ್ಲೆ.

ಇದ್ ಸೀದ ಒಂದು ಕಾಡಿಗೆ ಹೋತ್. ಹೋಗಿದ್ ಒಂದು ಮರಲಿ ಹತ್ತಿಕುದ್ದದ್ ಮರ್‍ಟತ್. ಮರ್‍ಟ್ ಮರ್‍ಟ್ ಮರ್‍ಟ್ ಮರ್‍ಟ್ ದೊಡ್ಡಾ ಹೊಂಡಲಿ ನೀರಾತ್. ಅಷ್ಟಾಕನ ಒಂದು ರಕ್ಕಸ ಅಜ್ಜಿ ಬೇಡ್ತಾ ಅಲ್ಲಿ ಬಾತ್. ಊರು ತಿರ್‍ಗಿಂಡು ಹೋವವ್. ಇದ್ ಊರ್ ತಿರ್‍ಗಿಕಂಡ್ ಹೋಕನ. ಇದ್ಕೆ

ಬಿಸಿಲಿಗೆ ತಣ್ಣಂಗೆ ಆಗಲಿಂತ ಆ ಕೆರೆನ ನೀರ್ ಕಂಡತ್. ಅಲ್ಲಿ ಕೈ ಮೋರೆ ತೊಳಿಯಕ್ಕೆ ಇಳ್ತ್. ಇಳಿಯಕೆ ಆಕನ ಇದ್ ಮೇಲೆಂದ ಹನಿ ಬಿದ್ದದೆ. ಇದೆಂತದಪ್ಪ ಹಕ್ಕಿ ಮನಿ? ಎಂತಾರ್ ಕುದ್ದುಕಂಡುಟ್ಟಾಂತ ಮೇಲೆ ನೋಡ್ತ್. ನೋಡ್ಕನ ಒಂದು ಸುಂದರಿ ಹೆಣ್ಣ್ ಕುದ್ದುಕಂಡುಟು. ಅದ್ ಏನ್ ಹೇಳ್ತ್? ಅಜ್ಜಿ 'ಇಂದ ನಾ ನಿಂಗೆ ಮುದ್ರೆನ ಉಂಗುರ ಕೊಟ್ನೆ. ನೀ ಮತ್ತೆ ಹೇಳಿ ಬುಡ್ಬೇಡ. ಇಂತಾ ಮನೆಗೆ ಹೋದೊಂತ ಹೇಳಿ ಬುಡ್ಬೇಡಾಂತ' ಹೇಳ್ತ್.

ಇದ್ ಮೊದ್ವೆ ಮನೆಗೆ ಹೋತ್. ಎಲ್ಲವೂ ಬೇಜಾರ್ಲಿ ಒಳೊ. ನೀವ್ಗೆ ಏನಾತ್? ಎಂತದ್? ನಾವ್ಗೆ ಹಿಂಗಿಂಗೆ ಮೊದ್ವೆಗೆ ನಿಘಂಟ್ ಮಾಡಿ ಗೂಡೆ ಇಲ್ಲೆ. ಆಗ ಇದ್ ಕೈಂದ ಬಿಚ್ಚಿ ಮುದ್ರೆನ ಉಂಗುರನ ಕೊಟ್ಟತ್. ಅದರ ನೋಡ್ಕನ ಮಗಳ್ದ್. ಎಲ್ಲಿಟು? ಇಂತಲ್ಲಿಟು. ಅಲ್ಲಿಗೆ ಎಲ್ಲವು ಹೋದೊ. ಅತ್ತ್ ಮರ್ಟತ್. ಇದು ಇಳೀದ್ಲೆ. ಅಯ್ಯೆ ಅಪ್ಪ ಬಂದೊ. ಮಗಳೆಂತ ಹೇಳ್ತ್ರೆ ಅದ್ ಕೇಳ್ದುಲೆ. ಅಣ್ಣಂದರು ಬಂದವೆ. ಇಳಿ ತಂಗೆಂತ ಹೇಳ್ತ್ರೆ ಕೇಳ್ದುಲೆ. ಅತ್ತಿಗೆಕ ಬಂದವೆ. ಇಳಿ ನಾದಿನಿಂತ ಹೇಳ್ತ್ರೊ ಅದೂ ಕೇಳ್ದುಲೆ. ಇದ್ ಒಂದೇ ಜಾತಿ ಮರ್ದುದು. ದೊಡ್ಡಣ್ಣ ಬಾತ್ – "ಹಾಕಿದ ಚಪ್ಪರ ಮಾಳ್ದೆ, ಬಂದ ನೆಂಟ್ರ್ ಬಳಳ್ವೆ, ಮಾಳ್ ರೆಂಜಳ ಮರ ಮಾಳ್, ಹಂಡೆಲಿ ಕಾಯಿ ಹಾಲ್ ತಂದೊಳೆ, ಕುಕ್ಕಲಿ ಅವುಲಕ್ಕಿ ತಂದೊಳೆ, ಮಾಳ್ ಮಾಳ್ಂತ" ಹೇಳ್ದೆ. ಅಂದರೂ ಅದು ಮಾಳ್ದುಲೆ. ಅತ್ತ್ ಅತ್ತ್ ಅತ್ತ್ ದೊಡ್ಡಾಕೆರೆ ಆಗುಟು. ಎರಡ್ನೆ ಅಣ್ಣ ಬಾತ್ ಅವನೂ ಹಂಗೇ ಹೇಳ್ತ್ – "ಹಾಕಿದ ಚಪ್ಪರ ಮಾಳ್ದೆ, ಕೊಯಿದ ಬಾಳೆಲೆ ಬಾಡ್ದೆ, ಬಂದ ನೆಂಟ್ರ್ ಬಳಳ್ವೆ, ಎರಡ್ನೆ ಅತ್ತಿಗೆಕ್ಕ ಬಂದೊ. ಎಲ್ಲವೂ ಬಂದ್‌ಕಂಡು ಹಿಂಗೇ ಹೇಳ್ದು. ಅವರಿಂದಲೀ ಏನೂ ಆತ್ಲೆ? ಅಕೇರಿಗೆ ಬಾತ್ ಸಣ್ಣ ಅಣ್ಣ. ಸಣ್ಣ ಅಣ್ಣ ಬಂದ್ ಹೇಳ್ತ್ – "ಹಾಕಿದ ಚಪ್ಪರ ಮಾಳ್ದೆ, ಕೊಯಿದ ಬಾಳೆಲೆ ಬಾಡ್ದೆ, ಬಂದ ನೆಂಟ್ರ್ ಬಳಳ್ವೆ, ಮಾಳ್ ರೆಂಜಾಳ ಮರಾಂತ" ಮಾಳ್ದುಲೆ.

ಅಂವ ಮರಕ್ಕೆ ಹತ್ತಿತ್. ಮರಕ್ಕೆ ಹತ್ತಿಕನ ಅದ್ ಗೆಲ್ಲ್‌ಗೆ ಹೋತ್. ಗೆಲ್ಲಿಗೆ ಹತ್ತಿತ್. ಗೆಲ್ಲಿಗೆ ಹತ್ತಿಕನ ಅದ್ ಸಣ್ಣ ಸಣ್ಣ ಗೆಲ್ಲಿಗೆ ಹೋತ್. ಅಲ್ಲಿಂದ ಸೊಪ್ಪು ಸೊಪ್ಪಿಗೆ ಹೋತ್. ಇಂವನೂ ಸೊಪ್ಪು ಸೊಪ್ಪಿಗೆ ಹೋತ್. ಹೋಗಿದ್ ಏನಾತ್. ಕೆರೆಗೆ ಬೀತ್. ಎಲ್ಲಿಗೆ? ಕಣ್ಣನೀರ್ ಕೆರೆಗೆ. ಅಲ್ಲಿಂದ ದೇವ್ರು ಅವಕ್ಕೆ ವರಕೊಟ್ಟೊಗಡ. ಈ ಅಣ್ಣಂಗೆ 'ನೀ ಮುಗುಡು ಮೀನಾಗಿ ಹೋಗುಂತ'. ಈ ತಂಗೆಗೆ 'ನೀ ಬಾಲೆ ಮೀನಾಗಿ ಹೋಗುಂತ'. ದೇವ್ರು ವರಕೊಟ್ಟೊ. ಹಾಂಗಾಗಿ ಅಂದ್‌ಂದ ಇಂದ್‌ಗೂ ಬಾಲೆ ಮೀನ್ ಮತ್ತ್ ಮುಗುಡು ಮೀನ್‌ಗಳ ಒಟ್ಟಿಗೆ ಗೈಪು ಮಾಡ್ದುಳೆ. ಅದ್ ಅಣ್ಣ ತಂಗೆಂತ ಹೇಳ್ವೆ [ಕಥಾ ನಿರೂಪಕಿ:ಲಕ್ಷ್ಮಿ ಕುರುಂಜಿ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 32.ಬಾಳೆ ಮೀನು ಮುಗುಡು ಮೀನು ಕತೆ –ಪಠ್ಯ 3

ಒಂದ್ ಅರ್ಸು ಇತ್ತ್. ಅರ್ಸುಗೆ ಒಂದು ಹೆಣ್ಣ್ ಮೊದ್ವೆ ಆತ್. ಮೊದ್ವೆ ಆಗಿದ್ ಅಂವ

ಳಿಂಡುಟು, 'ಈ ಊರು ಆಳುವಂತ ಅರ್ಸು ಆಕು ನನ್ನ ಮಂಜ. ಬೆಳ್ಳಿ ಜುಟ್ಟು ಮಗ, ಚಿನ್ನದ ೊಕ್ಲು ಮಂಜನ ಪಡಿಯೋಕಾತ್'. 'ಈ ಊರು ಆಳ್ವಂತ ಅರ್ಸು ಆಕುಂತ' ಹೇಳಿ ಹೆಣ್ಣ್ ೀಳಿಕನ್ತ್.

ಹಂಗೆ ಬೆಳ್ಳಿ ಜುಟ್ಟು ಮಗ ಹುಟ್ಟಿತ್. ಚಿನ್ನದ ಹೊಕ್ಲು ಮಂಜ ಹುಟ್ಟಿತ್. ಹಂಗೆ ಅವು ದಿನ ಳ್ಳಕೆ ಮೀಯಕೆ ಹೋದೊ. ಮೀಯಕೆ ಹೋದೊ. ಮಿಯಕೆ ಹೋಗಿದ್ ಮೇಲೆ ತಂಗೆ ಮೀತ್ ಳಗೆ ಅಣ್ಣ ಮೀತ್. ಅಣ್ಣನ್ ತಂಗೆನ ಇಬ್ಬೊರು ಮೀಯಕೆ ಹೋಗಿ ತಂಗೆನ ಬೆಳ್ಳಿ ಕೂದಲ್ ಂದ್‌ದ್ ಅಣ್ಣನ ಚಿನ್ನದ ಹೊಕ್ಲ್‌ಗೆ ಸುತ್ತಿತ್. ಸುತ್ತಿ ಆಕನ ಯಾರದಾ ಹೆಣ್ಣ್‌ಗಳ್ದ್ ತಲೆಗೂದಲ್ ನ್ನ ಹೊಕ್ಲ್‌ಗೆ ಸುತ್ತಿತೋ? ಇದ್ ಇದರ್ದೆ ಸುತ್ತಿದ್! ಸುತ್ತಿ ಆಕನ ಹೇಳ್ತ್. 'ನಿನ್ನ ನಾ ಮೊದ್ವೆ ಆನೇಂತ' ಹೇಳ್ತ್. ಹಂಗೆ ಅದ್ 'ನನ್ನ ಮೊದ್ವೆ ಆಕೆ ಬೊತ್ತ್. ನನ್ನ ಅಣ್ಣ ನೀ. ನೀ ನನ್ನ ಮೊದ್ವೆ ಆದುಂತ ಹೇಳ್ತ್ರಿ ಹೆಂಗೆಂತ' ಬೇಜಾರಾಲಿತ್ತ್.

ಬೇಜಾರಲಿದ್ದ್‌ದ್ 'ನಾ ಸತ್ಯಲಿ ಹುಟ್ಟಿದ್ ಶಾಪಲಿ ಬೆಳ್ದೆ ಮಗ ಆದರೆ ಏನಾರ್ ನಂಗೆ ಒಂದು ಹೊರಗೆ ಹೋಕೆ ದಾರಿ ಮಾಡೊಕು'ಂತ ಹೇಳ್ತ್. ಹಂಗೆ ಒಂದು ಹೆಗ್ಗಣ ಸಹಾಯಕೆ ಬಾತ್. ಬಂದ್‌ದ್ ದೊಡ್ಡೊ ಒಂದು ಮಾಲಿ ತೋಡಿಕಂಡ್ ಹೋತ್. ತೋಡಿಕಂಡ್ ಆ ಮಾಲಿಲೇ ಹೋತ್ ಇದ್. ಹೋಗಿ ಹೋಗಿ ಒಂದು ಜಮನೇರೊಳು ಮರಕ್ಕೆ ಹತ್ತಿತ್. ಇವನ್ ಅದರ್ಲೆ ಹೋತ್. ಅದರ್ಲೆ ಹೋಗಿ ಜಮನೇರಳೆ ಮರಕ್ಕೆ ಹತ್ತಿತ್. ಮೊದ್ವೆ ಆಂವ ಅಣ್ಣ ಬಾತ್. 'ಒಮ್ಮೆ ಇಳಿ ಜಮನೇರೊಳು, ಒಮ್ಮೆ ಇಳಿ ಜನನೇರೊಳೊ, ಬಂದನೆಂಟ್ರ ಬರ್‌ಲಿವೆ, ತಂದ ಕೊಡಿ ಎಲೆ ಬಾಡಿದೆ. ಒಮ್ಮೆ ಇಳಿಂತ" ಮೂರು ಮೂರು ಸರ್ತಿ ಹೇಳ್ತ್. 'ನಾ ಇಳಿಯಕ್ಕಿಲ್ಲೆಂತ' ಹೇಳ್ತ್. ಇಂವ ಮರಕ್ಕೆ ಹತ್ತಿತ್. ಮರಕ್ಕೆ ಹತ್ತಿಕನ ಅದ್ ಕೊಂಬೆ ಹೋತ್. ಇಂವನೂ ಕೊಂಬೆಗೆ ಹೋತ್. ಅದ್ ಗೆಲ್ಲ್ ಗೆಲ್ಲ್‌ಗೆ ಹೋತ್. ಇಂವನೂ ಗೆಲ್ಲ್ ಗೆಲ್ಲ್‌ಗೆ ಹೋತ್. ಅದ್ ಗೆಲ್ಲ್‌ನ ಕೊಡಿಗೆ ಹೋತ್. ಇಂವನೂ ಕೊಡಿಗೆ ಹೋತ್. ಅದ್ ಸೊಪ್ಪು ಸೊಪ್ಪುಗೆ ಹೋತ್. ಸೊಪ್ಪುಗೆ ಹೋಕನ ಮತ್ತೆ ಅದಕ್ಕೆ ಎಲ್ಲಿ ಹೋಕೆನು ದಾರಿ ಇಲ್ಲೆ ಅಲ್ಲ. ಅಕೇರಿಗೆ ಕೆಳಗೆ ಹಳ್ಳಕೆ ಬೀತ್. ಹಳ್ಳಕೆ ಬಿದ್ದಾಕನ ಅದ್ ಬಾಳೆ ಮೀನಾತ್. ಇಂವ ಮುಗುಡ್ತ್.

ಅವು ಹಾಂಗೇ ಬಾರೀ ಒಳ್ಳೊದರ್ಲಿ ಬೆಳಿತಾ ಇದ್ದೊ. ಅದರ ನೋಡಿ ಯಾರೋ ಮೀನ್ ಹಿಡಿವವು ಹಿಡ್ದೊ. ಹಿಡ್ದ್ ಒಟ್ಟೊಗೆ ಗೈಪು ಮಾಡ್ದೊ. ಅದ್ ಬೇಯಕೆ ಆಕನ ರಕ್ತನ ರೂಪ ಆತ್ ಗಡ. 'ಅಣ್ಣನೂ ಅಕ್ಕನೂ ಕುಚುಕುಚುಂತ' ನೆಸಳೆಂದ ಗೈಪು ಕುದಿಯಕನ ಕೇಳ್ದು ಗಡ. ಆ ಮನೆಯವು ಇದೇನಪ್ಪಂತ ಹೆದ್ರಿ ಅದರ ಮಜಲ್ ಗದ್ದೆಗೆ ಚೋಂಪಿದೊ. ಅಲ್ಲಿ ಬಾಳೆಮೀನ್ ಬಸಳೆ ಸೊಪ್ಪಾಗಿನೂ ಮುಗುಡುಮೀನ್ ಹರಿವೆ ಸೊಪ್ಪಾಗಿನೂ ಆಕ್ಕೊಂಡೊ ಗಡ. ಇವು ಬಾರೀ ಲಾಯ್ಕಲಿ ಬೆಳ್ದೊ. ಅದರ ಕಡ್ದ್ ಗೈಪು ಮಾಡ್ದೊ ಗಡ. ಅವುಕ್ಕೆ ಮರ್ತೋಗುಟು. ಅವು ಯಾರ್'ಂತ ಗೊತ್ತಾತ್ಲೆ? ಬೇಯ್ಸಿಕನ ಮತ್ತೆ ಅದೇ ಕೇಳ್ದೆ 'ಅಣ್ಣನೂ ಅಕ್ಕನೂ ಕುಚುಕುಚುಂತ'.

ಅಂದ್‌ಂದ ಮೇಲೆ ಬಾಳೆ ಮೀನ್ ಮುಗುಡುಮೀನ್ ಒಟ್ಟೊಗೆ ಗೈಪು ಮಾಡ್ಡುಲೆ. ಹಾಂಗೆ ಬಸಳೆ ಸೊಪ್ಪುನೂ ಹರಿವೆ ಸೊಪ್ಪುನೂ ಗೈಪು ಮಾಡ್ಡುಲೆ. [ಕಥಾ ನಿರೂಪಕಿ:ತಾರಾಮಣಿ ಪಡ್ಡುಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 33.ಬಾಳೆ ಮೀನು ಮುಗುಡು ಮೀನು ಕತೆ – ಪಠ್ಯ 4

ಒಂದಾನೊಂದು ಊರ್ಲಿ ಒಂದು ಅಜ್ಜಿ. ಒಂದು ಅಜ್ಜ. ಒಂದು ಮಂಜ. ಒಂದು ಮಗ. ಅವು ಹಂಗೇ ಇದ್ದೊ. ಒಂದು ದಿನ ಗೊಬ್ಬರ ಹೊರೊಕುಂತ ಆತ್ ಗಡ. ಹಾಂಗೆ ಈ ಮಂಜನೂ ಮಗಳೂ ಗೊಬ್ಬರ ಹೊತ್ತೊ. ಗೊಬ್ಬರ ಹೊತ್ತಾಗಿ ಮೈ ತುಂಬ ಚೋಳಾತ್. ಮೀಯೊಕು ಇನ್ನ್ ಹಾಂಗೆ ಮಂಜನೂ ಮಗಳೂ ಮೀಯಕೆ ಹೋದೊಗಡ. ಮಗ ಮೇಲೆ ಹೋಗಿ ಮೀತ್‌ಗಡ. ಮಂಜ ಮೇಲೆ ಹೋಗಿ ಮೀತ್‌ಗಡ. ಈ ಮಗಳ ಕೂದಲ್ ಹವಳದ ಕೂದಲ್‌ಗಡ. ಅದು ಮೇಲೆ ಹೋಗಿ ತಲೆ ಮೈ ಎಲ್ಲ ಮಿಂದಾಕನ ಏನೋ ಒಂದು ಕೂದಲ್ ಹಳ್ಳಲಿ ಹರ್‍ಕೊಂಡ್ ಬಾತ್. ಈ ಮಂಜ ಕೆಳಗೆ ಮಿಂದದೆ. ಅವಂಗೆ ಇದ್ ಸಿಕ್ಕಿತ್. ಅದರ ಹಿಡ್ಕನ್ತ್. ಇಂವ ಮಿಂದದ್ ಬಾತ್.

ಮಿಂದ್ ಬಂದ್‌ದ್ ಕಂಪರ ಮಲ್ಗಿತ್‌ಗಡ. ಮಲ್ಗಿಯಾಕನ ಅಯ್ಯೆ ಅಪ್ಪ ಬಂದ್‌ದ್ 'ಊಟ ಮಾಡ್ ಎದ್ರ್‌ಂತ' ಹೇಳ್ದ್ರೆ ಇಂವ ಎದ್ದತ್ಲೆ. ಏನೇನು ಹೇಳ್ತ್ರ ಇಂವ ಎದ್ದತ್ಲೆ. ಕಡೆಗೆ 'ನಿಂಗೆ ಏನಾಕು, ನೀ ಎಂತದ್ ನೋಡ್ಯಳ, ನೀ ನೋಡ್ದ್‌ರ ಕೇಳ್, ನಾವು ನಿಂಗೆ ಕೊಟ್ಟವೆಂತ' ಆತ್. ಆಗ ಇಂವ ಎದ್ ಕುದ್ದ್ ಕೂದಲ್‌ನ ತೋರ್‍ಸಿತ್ ಗಡ. 'ನಂಗೆ ಇದೇ ಕೂದಲ್‌ನ ಗೂಡೆನ ಮದುವೆ ಮಾಡೊಕುಂತ'. ಆತ್ ಮೊದುವೆ ಮಾಡೊಂಬಂತ ಹೇಳಿ ಗೂಡೆ ಹುಡ್ಕಿರೆ ಎಲ್ಲಿ ಹುಡ್ಕಿರೂ ಅದೇ ಕೂದಲ್‌ನ ಗೂಡೆ ಇಲ್ಲೆ. ಅದೇ ಕುದಲ್‌ನ ಗೂಡೆ ಇವನ ತಂಗೆನೆ ಅಲ! ಅವು ಬಂದ್ ಹೇಳ್ದೊಗಡ. 'ಇದೇ ನಮೂನೆನ ಕೂದಲ್‌ನ ಗೂಡೆ ಬೇರೆ ಎಲ್ಲೂ ಇಲ್ಲೆ. ಇದ್ ನಿನ್ನ ತಂಗೆನ ಕೂದಲ್. ನಿನ್ನ ತಂಗೆನ ಮೊದ್ವೆ ಮಾಡ್ದ ನಿಂಗೆ ? ನಿಂಗೆ ಬೇರೆ ಒಳ್ಳೆ ಗೂಡೆನ ನಾವು ನೋಡಿ ಮೊದುವೆ ಮಾಡೊಮ. ಇದ್ ಬೇಡಂತ'. 'ಅದ್ ಆಕ್ಕೆ ಇಲ್ಲೆಂತ' ಇಂವನ ಒಂದೇ ಹಟ ಗಡ. 'ಅದರ್ನೇ ನಂಗೆ ಮೊದ್ವೆ ಮಾಡೊಕು. ಅಲ್ಲದಿದ್ದರೆ ನನ್ನ ಪ್ರಾಣನ ನಾ ತಕೊಣೆಂತ'. ಕಡೆಗೆ ಇವ್ಕೆ ಉಪಾಯ ಉಟ್ಟ? ಇಲ್ಲೆ ಅಲ್ಲ.

ಎಲ್ಲಾ ಕಾಗ್ದ ಎಲ್ಲ ಪ್ರೆಂಟ್ ಮಾಡ್ದೊ. ಎಲ್ಲವ್ಕೂ ಹೇಳ್ಸಿದೊ. ಜನ ಎಲ್ಲ ಕೂಡ್ದೊ. ಮೊದ್ವೆ ಕೂಡಿಯಾಕನ ಈ ತಂಗೆ ಮೊದ್ವೆ ಬೇಡಾಂತ ಒಂದು ದೊಡ್ಡಾ ಕಾಡಿಗೆ ಹೋತ್ತ್‌ಗಡ. ಕಾಡಿಗೆ ಹೋಗಿದ್ ಒಂದ್ ಮರದ ಬುಡಲಿ ಕುದ್ದತ್ ಗಡ. ಇವು ಮನೆಲಿ ಎಲ್ಲವೂ ಹುಡ್ಕಿದೊ ಗಡ. ಅವ್ವ ಅಪ್ಪ ಬಂದ ನೆಂಟ್ರ್ ಎಲ್ಲ ಒಟ್ಟುಗೆ ಹುಡ್ಕಿದೊ. ಯಾರ್ ಹುಡ್ಕಿರೂ ಗೂಡೆ ಇಲ್ಲೆ. ಮತ್ತೆ ಗುಡ್ಡೆಲಿ ಎಲ್ಲ ಹುಡ್ಕಿ ಆಕನ ಗೂಡೆ ಕಾಂಬಕೆ ಸಿಕ್ಕಿತ್. ಸಿಕ್ಕಿದ್ ಯಾರ್ ಏನ್ ಹೇಳ್ತ್ರ ಅದು ಬಾದ್ಲೆ

ಗಡ. 'ನನ್ನ ಅಣ್ಣಂಗೆ ಮೊದುವೆ ಮಾಡಿ ಕೊಡ್ದು ಬೇಡಂತ?' ಅದರ್ದ್ ಒಂದೆ ಹಟ ಗಡ. ಕಡೆಗೆ ಅಣ್ಣನೇ ಹೋತ್‌ಗಡ. ಅಣ್ಣ ಹೋಗಿ ಏನೇನು ಹೇಳ್ರೂ ಅದು ಬೇಡಾಂತ ಹೇಳ್ದು. ಬಾಕಿಲ್ಲೆ ಗಡ. ಹಾಂಗೆ ಅದರ ಇನ್ನ್ ಎಳ್ದ್ ತಕಂಡೋದುಂತ ಅಣ್ಣ ಎಳಿಯಕ್ಕೆ ಹೋಕನ ಅದ್ ಮರ ಹತ್ತಿತ್‌ಗಡ. ಮರ ಹತ್ತಿಕನ ಇವನೂ ಹತ್ತಿತ್. ಒಟ್ಟಿಗೆ ಇಂವ ಹತ್ತಿಕನ ಅದ್ ಗೆಲ್ಲಿಗೆ ಹೋತ್. ಗೆಲ್ಲಿಗೆ ಹೋಕನ ಅದ್ ಸೊಪ್ಪು ಸೊಪ್ಪಿಗೆ ಹೋತ್. ಅದ್ ಸೊಪ್ಪು ಸೊಪ್ಪು ಹೋಕನ ಇಂವನೂ ಹೋತ್. ಅದ್ ದೊಡ್ಡಾ ಹಳ್ಳಕೆ ತೆಗ್ದ್ ಹಾರ್ತ್ ಗಡ. ಇಂವನೂ ಹಾರ್ತ್. ಅದ್ ಬಾಲೆ ಮೀನ್ ಆತ್‌ಗಡ. ಇಂವ ಮುಗುಡು ಮೀನಾತ್. ಹಾಂಗೆ ಇಂದ್‌ಗೂ ಬಾಲೆ ಮೀನ್, ಮುಗುಡು ಮೀನ್‌ನ ಒಟ್ಟಿಗೆ ಗೈಪು ಮಾಡಿಕೆ ಆಗದ್ ಅಣ್ಣನೂ ತಂಗೆನೂಂತ ಹೇಳ್ವೆ. [ಕಥಾ ನಿರೂಪಕಿ:ಕಾವೇರಮ್ಮ ಕೆದಿಲ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 34. ಮೀನ್ ಕುಮಾರನ ಕತೆ – ಪಠ್ಯ 1

ಒಂದ್ ಊರ್ಲಿ ಒಂದ್ ಅರ್ಸು. ಆ ಅರ್ಸುಗೆ ಒಂದ್ ಹೆಣ್ಣ್. ಅರ್ಸುನು ಹೆಣ್ಣ್‌ನು ಇಬ್ಬರ್ ಮನೆಲಿದ್ದೊ. ಕೆಲವ್ ಸಮಯ ಕಳ್ತ್ ಅರ್ಸಂಗೆ ಮಕ್ಕ ಇಲ್ಲೆ. ಒಂದೇ ಒಂದ್ ಮಕ್ಕಂತ ಮನೆಲಿ ಇಲ್ಲೆ. ಅವ್ ಇಬ್ಬರ್ ಇರ್ಕನ ಒಂದ್ ದಿನ ಬೇಡವ್ ಬಂದೊ. ಬಂದ್ ಅರ್ಸುನೊಟ್ಟಿಗೆ ಕೇಳ್ದೊ. 'ಇಷ್ಟ್ ದೊಡ್ಡ ಅರ್ಸರ್ ನೀವ್, ಅರಮನೆ ಎಲ್ಲ ಕಂಡದೆ. ಮಕ್ಕ ಯಾರ್ ಕಾಂಬೊದ್ಲೆಂತ'. 'ನಾವ್‌ಗೆ ಮಕ್ಕ ಇಲ್ಲೆ. ನಾವೇ ಇಬ್ಬರ್ ಒಳದ್'. 'ಹಾಂಗಾರೆ ನಾ ಒಂದ್ ಹಣ್ಣ್ ಕೊಟ್ಟನೆ. ಈ ಹಣ್ಣ್‌ನ ತಲೆಮೈ ಎಲ್ಲ ಮೀದ್ ಅದರ ಕತ್ತಲೆಗೆ ತಿನ್ನೊಕ್. ತಿಂದ್ ಮಲಗೊಕ್‌ಂತ' ಹೇಳಿ ಒಂದ್ ಬಾಳೆಹಣ್ಣ್ ಕೊಟ್ಟ್ ಬೇಡಂವ ಹೋತ್. ಅದೇ ದಿನ ಕತ್ತಲೆಗೆ ಹೆಣ್ಣ್ ತಲೆ ಮೈ ಎಲ್ಲ ಮಿಂದ್ ಊಟಕ್ಕೆ ಮುಂದೆ ಈ ಹಣ್ಣ್‌ನ ತಿಂದ್ ಊಟ ಮಾಡಿ ಮಲಗಿದೊ. ಕೆಲವ್ ಸಮಯ ಕಳ್ದ್ ಹೆಣ್ಣ್ ಬೊಸ್ರಿ ಆಗಿದ್ ಏಳ್ ತಿಂಗಳಿಗೆ ಆಕನ ಬಯಕೆ ಮೊದ್‌ವೆಗೆ ಕಳ್ಸಿದೊ. ತಿಂಗ ಎಂಟಾತ್, ಒಂಬತ್ ಹತ್ತನೇ ತಿಂಗಳ್‌ಲಿ ಹೆಣ್ಣ್‌ಗೆ ಹೆರಿಗೆ ಆತ್.

ಹೆರಿಗೆ ಆದರೆ ಕೂಸ್ ಒಂದ್ ಮೀನ್. ಆ ಮೀನ್‌ನ ಅರ್ಸು ತಕಂಡೋಗಿ ತೋಟಲಿ ಒಂದ್ ಕೆರೆಲಿ ಬುಟ್ಟತ್. ಕೆರೆಲಿ ಮೀನ್ ಆಡಿಕಂಡ್ ಆಡಿಕಂಡ್ ಇತ್ತ್. ಯಾಗೋಳ್ ಅರ್ಸು ತೋಟ ತಿರ್ಗಿ ತಿರ್ಗಿ ಈ ಕೆರೆ ಹಕ್ಕಲೆ ಹೋದ್. ಒಂದ್ ದಿನ ಕೆರೆ ಹಕ್ಕಲೆ ಹೋತ್. ಕೆರೆ ಹಕ್ಕಲೆ ಹೋಕನ 'ಹೆಣ್ಣ್ ಕೊಟ್ಟಿಯ ನಿನ್ನ ತಿನೊಕಂತ?' ಕೇಳ್ತ್. ಇದೇನ್ ಶಬ್ದ ಕೇಳ್ದೆ. ಹಂಗೆ ಅರ್ಸು ಸುಮ್ಮನೆ ನಿಂತತ್. ಮತ್ತೆ ಕೇಳ್ತ್. 'ನಂಗೆ ಹೆಣ್ಣ್ ತಂದ್ ಕೊಟ್ಟಿಯ ನಿನ್ನ ತಿನ್ನೊಕಂತ?' ಮತ್ತೂ ಅರ್ಸು ನಿಂತತ್. ಎಂತ ಇದ್ ಕೇಳ್ದುಂತ. ಪುನಾಃ ಮೂರನೆ ಮಾತ್ ಹಾಂಗೇ ಬಾತ್. 'ನಂಗೆ ಹೆಣ್ಣ್ ತಂದ್ ಕೊಟ್ಟಿಯಾ ಇಲ್ಲ ನಿನ್ನ ತಿನ್ನೊಕಾಂತ?' ಅರ್ಸು ಬಂದ್ ಮನೆಲಿ ಹೆಣ್ಣ್‌ನೊಟ್ಟಿಗೆ ಹೇಳ್ತ್.

ಕೆರೆಲಿದ್ದ ಮೀನ್ ಈಗ 'ನಂಗೆ ಹೆಣ್ಣ್ ತಂದ್ ಕೊಟ್ಟಿಯಾ ಇಲ್ಲ ನಿನ್ನ ತಿನ್ನೊಕಂತ' ಕೇಳ್ದೆ. ಏನ್ ಮಾಡ್ದು ಹಾಗೆಂತ? ಆಗ ಹೆಣ್ಣ್ ಹೇಳ್ತ್ 'ಈ ಮೀನ್‌ಗೆ ಯಾರ್ ಹೆಣ್ಣ್ ಕೊಡ್‌ವೊ. ನಾವ್ ಹೇಂಗೆ ಹೋಗಿ ಇನ್ನೊಂದ್ ಮನೆಲಿ ಹೆಣ್ಣು ಕೇಳ್ದುಂತ' ಆಲೋಚನೆ ಮಾಡ್ತಾ ಇತ್ತ್. ದಿನಂಪ್ರತಿ ಅರ್ಸು ಕೆರೆಯ ಹಕ್ಕಲೆ ಹೋಕನ ಮಾತ್ ಇದೂವೆ. ಹೆಣ್ಣ್ ಕೆರೆಯ ಹಕ್ಕಲೆ ಹೋಕನ ಮಾತ್ ಇದೂವೆ. 'ಹೆಣ್ಣ್ ತಂದ್ ಕೊಟ್ಟಿಯ ನಿನ್ನ ನಾ ತಿನೊಕಾಂತ?' ಆಕಿಲ್ಲೆ ಇನ್ನ್ ಏನ್ ಮಾಡ್ದ್? ಅರ್ಸು ಬಾತ್ ಹೆಣ್ಣ್‌ನೊಟ್ಟಿಗೆ ಹೇಳ್ತ್ 'ಅಲ್ಲಿ ಹೋಕಕ್ಕೆ ಬುಡ್ದ್ಲ್ಲೆ, ಬಂದ್ ಕೇಳ್ದೆ 'ಹೆಣ್ಣ್ ಕೊಟ್ಟಿಯಾ ಇಲ್ಲ ನಿನ್ನ ತಿನ್ನೊಕಾಂತ'. 'ನೀವ್ ಒಂದ್ ಸೇರ್ ಹಣ ತಕಂಡ್ ಎಲ್ಲಾರ್ ಹೋಗಿ. ಈ ಒಂದ್ ಸೇರ್ ಹಣನ ಕೊಟ್ಟುದ್ ಒಂದ್ ಗೂಡೆನ ಕರ್ಕೊಂಡ್ ಬೊನ್ನಿಂತ' ಹೆಣ್ಣ್ ಹೇಳ್ತ್. ಒಂದ್ ದಿನ ಒಂದ್ ಸೇರ್ ಹಣ ತಕಂಡ್ ಅರ್ಸು ಹೋತ್.

ಒಂದಾನೊಂದ್ ಮನೆಗೆ ಎತ್ತಿಕನ ಒಂದ್ ಮನೆ ಸಿಕ್ಕಿತ್. ಆ ಮನೆಲಿ ಏಳ್ ತಬ್ರಿ ಮಕ್ಕ ಒಳದ್. ಒಂದ್ ಅಯ್ಯೆ ಮಗ ಇಷ್ಟ್ ಜನವೊಳೊ. ಈ ಏಳ್ ತಬ್ರಿ ಮಕ್ಕಳ ಅಯ್ಯೆ ಇಲ್ಲೆ. ಅಪ್ಪ ಎರಡ್ನೆ ಮೊದ್ವೆ ಆದೆ. ಆ ಅಯ್ಯೆಗೆ ಒಂದ್ ಮಗ ಉಟ್ಟ್. ಈ ಹೆಂಗ್‌ಸ್‌ನೊಟ್ಟಿಗೆ ಅರ್ಸು ಹೋಗಿ ಹೇಳ್ತ್ 'ನಂಗೆ ಹೆಣ್ಣ್ ಕೊಡೊಕ್ ನಮ್ಮ ಮಂಜಂಗೆ ಹೆಣ್ಣಾಕ್ಕ್. ಹಂಗೆ ನಾ ಹಣ ತಕೊಂಡ್ ಬಂದದ್ ಹಾಂಗೆಂತ'. ಆದು ಹಾಂಗೆಂತ ಹೇಳ್ದೊ. ಒಂದ್ ಗೂಡೆನ ಕಳ್ಸಿದೊ. 'ನೀ ಅವರೊಟ್ಟಿಗೆ ಹೋಗ್‌ಂತ' ಎರಡ್ನೆ ಅಯ್ಯೆ ಹೇಳ್ದೆ. ಒಂದ್ ಸೇರ್ ಹಣನ ತಕಂಡ್ ಕಳ್ಸಿತ್. ಪೊರ್ಲ್ ತಲೆ ಎಲ್ಲ ಮೀದ್ ಡ್ರೆಸ್ ಮಾಡ್ಸಿ ಕಲ್ಸಿತ್. ತಬ್ರಿ ಅಲ್ಲ. ಅದರ ಕರ್ಕೊಂಡ್ ಬಾಕನ ಹೆಣ್ಣ್‌ನೊಟ್ಟಿಗೆ ಹೇಳ್ತ್, 'ಇಂದ ನಾ ಒಂದ್ ಗೂಡೆನ ಕರೊಂಡ್ ಬಂದೊಳೆಂತ'. ಆ ಗೂಡೆನ ನೋಡಿ ಆಕನ ಹೆಣ್ಣ್‌ಗೆ ತುಂಬ ಬೇಜಾರ ಆತ್. 'ನಾವ್ಗೆ ಒಂದ್ ಸಂಸಾರಂತ ಹೇಳಿ ಇಲ್ಲೆ. ಹುಟ್ಟಿದ ಒಂದ್ ಸಂಸಾರ ಮೀನಾತ್. ಅದರ ತಕಂಡೋಗಿ ಕೆರೆಲಿ ಬುಟ್ಟೊ. ಅದ್ಕೆ ಒಂದ್ ಗೂಡೆ ಆಕ್ಕಂತ' ಹೇಳಿ ಬೇಜಾರಲಿ ಈ ಹೆಣ್ಣ್‌ನ ಆ ಕೆರೆ ದಂಡೆಲಿ ನಿಲ್ಸಿ ಬಂದೊ. ಹತ್ತ್ ಹಜ್ಜೆ ಕಳಿಯೊಕ್ಕಾದರೆ ಅದ್ ಬಂದ್ ಅದರನ್ನ್ ತೀನ್ತ್.

ಮಾರನೆ ದಿನ ಅರ್ಸು ತೋಟಕ್ಕೆ ಹೋಕನ ಮಾತ್ ಇದೇ ಕೇಳ್ದೆ. 'ಹೆಣ್ಣ್ ಕೊಟ್ಟಿಯ ನಿನ್ನ ತಿನೊಕಾಂತ'. ಪುನಾಃ ಅರ್ಸು ಮನೆಗೆ ಬಾತ್. ಬಂದ್ ಹೆಣ್ಣ್‌ನೊಟ್ಟಿಗೆ ಹೇಳ್ತ್, 'ಇಂದ್ ಸಾ ಅದೇ ಮಾತ್ ಕೇಳ್ದೆ. ಹೆಣ್ಣ್ ಕೊಟ್ಟಿಯ ನಿನ್ನ ತಿನೊಕಾಂತ'. ಏನ್ ಮಾಡ್ದು ? 'ಹಂಗಾರೆ ಆ ಮನೆಲಿ ಹೆಣ್ಣ್ ಮಕ್ಕ ಒಳೊನ?' 'ಇನ್ನ್ ಐದಾರ್ ಹೆಣ್ಣ್ ಮಕ್ಕ ಒಳೊ'. ಹಂಗಾರೆ ನೀವ್ ಒಂದ್ ಸೇರ್ ಹಣ ತಕಂಡ್ ಇಂದ್ ಕೂಡ ಹೋಗಿ ಹಾಂಗೆಂತ' ಹೆಣ್ಣ್ ಕಳ್ಸಿತ್. ಒಂದ್ ಸೇರ್ ಹಣ ತಕನ್ತ್ ಅಲ್ಲಿಗೆ ಅದೇ ಮನೆಗೆ ಹೋತ್. ಹೋಗಿದ್ ಅದೇ ಮಾತ್ ಹೇಳ್ತ್. 'ನಂಗೆ ಇಂದ್ ಒಂದ್ ಗೂಡೆನ ಕಳ್ಸೊಕ್‌ಂತ ನಾ ಬಂದದ್'. ಆ ಹೆಂಗಸ್ ಈ ಒಂದ್ ಸೇರ್ ಹಣನ ತಕನ್ತ್. ಒಂದ್ ಗೂಡೆನ ಕಳ್ಸಿತ್ 'ಅವರೊಟ್ಟಿಗೆ ಅವರ ಮನೆಗೆ ಹೋಗ್‌ಂತ'. ಅರ್ಸು ಗೂಡೆನ ಕರ್ಕನ್ತ್

ಮನೆಗೆ ಬಾತ್. ಮನೆಗೆ ಬಂದ್ ಹೆಣ್ಣ್‌ನೊಟ್ಟಿಗೆ ಹೇಳ್ತ್, 'ನಾ ಒಂದ್ ಗೂಡೆನ ಇಂದ್‌ಸಾ ಕರ್‍ಕೊಂಡ್ ಬಂದೊಲೆಂತ'. ಗೂಡೆಗೆ ಬೇಕಾದ ಊಟ ಉಪಚಾರ ಎಲ್ಲ ಕೊಟ್ಟೊ. ಒಳ್ಳೆ ಡ್ರೆಸ್ಸೆಲ್ಲ ಮಾಡ್ದೊ. ಕರ್‍ಕಂಡೋಗಿ ಕೆರೆ ದಂಡೆಲಿ ನಿಲ್ಸಿ ಇವ್ ಬಂದೊ. ಬಂದ್ ಹತ್ತ್ ಹೆಜ್ಜೆ ದಾಟಕಾದರೆ ಅದ್ ಬಂದ್ ತಿಂದ್ ಹೋತ್.

ಹಿಂಗೆ ಆಗಿ ಆಗಿ ಹೆಣ್ಣ್ ಮಕ್ಕಳೂ ಮುಗ್ದೊ. ಮತ್ತೆ ಒಂದ್ ಗೂಡೆ ಉಟ್ಟ್ ಆ ಮನೆಲಿ. ಆರ್ ಹೆಣ್ಣ್ ಮಕ್ಕ ಮುಗ್ದರೂ ಮೀನ್ ಹೇಳ್ದು ಇದೇ ಮಾತ್. 'ಹೆಣ್ಣ್ ಕೊಟ್ಟಿಯಾ ನಿನ್ನ ತಿನೊಕಾಂತ'. ಅಕೇರಿನ ಒಂದ್ ಗೂಡೆನ 'ಇಂದ ನೀ ಅವರೊಟ್ಟಿಗೆ ಹೋಗ್‌ಂತ' ಕಳ್ಸಿತ್. ಮೀಯಕೆ ಕಳ್ಸಿತ್. 'ಮೀದ್ ಬಂದ್ ಅವರೊಟ್ಟಿಗೆ ಹೋಗಾಂತ' ಹೇಳ್ತ್. ಆ ಗೂಡೆ ಮಿಯಕೆ ಹೋಕನ ಒಂದ್ ಒಟ್ಟೆ ಕೊಡಪಾನ ಕೊಟ್ಟ್ ಕಳ್ಸಿತ್ ಈ ಎರಡ್ನೆ ಅಯ್ಯೆ. ಈ ಒಟ್ಟೆ ಕೊಡಪಾನಲಿ ನೀರ್ ತಕ್‌ಂಡ್ ಅದ್ ಬಾರಿ ಬೇಜಾರಲಿ ಬಂದದೆ. 'ನನ್ನ ಆರ್ ಜನ ಅಕ್ಕಂದರ ಸಹ ಮೀನ್‌ಗೆ ತಕೊಂಡೋಗಿ ಕೊಟ್ಟೊ. ಅಂವ ತೀನ್ತ್. ಇನ್ನ್ ನಾಳೆ ನನ್ನ ಹೆಸರ್ ಸಾ ಇಲ್ಲೆ. ನನ್ನ ಸಹ ಇಂದ್ ಕಳ್ಸುವೆ ಹಾಂಗೆಂತ' ಹೇಳಿ ಮರ್‍ಟ್‌ಕಂಡ್ ಬಂದದೆ.

ಬಾಕೆ ಆಕನ ಏಳ್ ಜಡೆ ಸರ್ಪ ಒಂದ್ ಕರೆಲಿ ಮಲಕ್ಕಂಡುಟು. ನೀ ಯಾಕೆ ಮರ್‍ಟ್‌ಕೊಂಡ್ ಹೋದು? ಹಾಗೆಂತ ಸರ್ಪ ಕೇಳ್ತ್. ಕೇಳ್ಕನ ಇದ್ ಹೇಳ್ತ್ 'ನನ್ನ ಆರ್ ಜನ ಅಕ್ಕಂದರ ಮೀನ್‌ಗೆ ತಕಂಡೋಗಿ ಕೊಟ್ಟೊಳೊ. ಅದ್ ತಿಂದುಟು. ಇಂದ್ ಈಗ ನನ್ನನ್ ಸಹ ಕಳ್ಸುವೆ. ನಾಳೆ ನನ್ನ ಹೆಸರ್ ಸಹ ಇಲ್ಲೆ. ಹಂಗೆ ನಾ ಮರ್‍ಟ್‌ಕಂಡ್ ಹೋದುಂತ'. 'ನೀ ಮರ್‍ಡ್‌ಬೇಡ. ನೀ ಮರ್‍ಟ್‌ಕಂಡ್ ಹೋಕ್‌ಂತ ಏನೂ ಇಲ್ಲೆ. ನಾ ಹಿಂಗೆ ಮೂರ್ ಕಲ್ಲ್ ಕೊಟ್ಟನೆ'. ಹಾಂಗೆ ಮೂರ್ ಕಲ್ಲ್ ಮಂತ್ರಿಸಿ ಈ ಏಳ್ ಜಡೆ ಸರ್ಪಕೊಟ್ಟತ್. ಒಂದ್ ಕೋಲ್ ಕೊಟ್ಟತ್. 'ನೀ ಹೋಗಿ ಕೆರೆದಂಡೆ ಮೇಲೆ ನಿಲ್ಲ್. ನಿತ್ತಾಕನ ಅದ್ ನಿನ್ನ ತಿಂದನೆ ತಿಂದನೆ ತಿಂದನೆಂತ ಹೇಳಿ ಬಾದ್. ಆಗ ಒಂದ್ ಕಲ್ಲ್ ಹಾಕಿ ಮೂರ್ ಪೆಟ್ಟ್ ಈ ಕೋಲ್‌ಲಿ ಹೊಡಿ'. 'ಎರಡ್ನೆ ಸರ್ತಿ ಹಾಂಗೆ ಬಾದ್. ಮತ್ತೊಂದ್ ಕಲ್ಲ್ ಹಾಕಿ ಮೂರ್ ಪೆಟ್ಟ್ ಈ ಕೋಲ್‌ಲಿ ಹೊಡಿ'. 'ಮೂರ್‍ನೆ ಸರ್ತಿ ಬಾದ್ ನಿನ್ನ ತಿಂದನೆ ತಿಂದನೆಂತ. ಬಾಕನ ಈ ಒಂದ್ ಕಲ್ಲ್ ಹಾಕಿದ್. ಒಂದ್ ಪೆಟ್ಟ್ ಹೊಡೀಂತ' ಮೂರ್ ಕಲ್ಲ್ ಒಂದ್ ಕೋಲ್ ಕೊಟ್ಟ್ ಕಳ್ಸಿತ್. ಆ ಕಲ್ಲ್‌ನ ಈ ಸೆರಂಗ್‌ನ ಕೊಡಿಲಿ ಕಟ್ಟಿಕನ್ತ್. ಈ ಕೋಲ್‌ನ ಹಿಡ್ಕನ್ತ್ ಈ ಗೂಡೆ ಬಾತ್. ಬಾತ್ ಮನೆಂದ ಹೊರಟತ್. ಅರ್‍ಸುನೊಟ್ಟಿಗೆ ಹೋತ್.

ಅರ್‍ಸು ಮನೆಗೆ ಕರ್‍ಕೊಂಡೋಗಿ ಹೆಣ್ಣ್‌ನೊಟ್ಟಿಗೆ ಹೇಳ್ತ್. 'ಇನ್ನ್ ಅಲ್ಲಿ ಹೆಣ್ಣ್ ಮಕ್ಕ ಇಲ್ಲೆ. ಏಳ್ ಜನ ಇಂದಿಗೆ ಮುಗ್ದೊ' ಹಾಂಗೆತ ಹೇಳ್ತ್. ಅಂದ್ ಆ ಮನೆಲಿ ಆ ಗೂಡೆನ ಅವ್ ಹಾಕ್ಕೊಂಡೊ. ಮಾರನೆ ದಿನ ಬೊಳ್ಪಿಗೆ ಕರ್‍ಕಂಡೋಗಿ ಕೆರೆ ದಂಡೆ ಮೇಲೆ ನಿಲ್ಸಿದೊ. ನಿಲ್ಸಿ ಒಂದ್ ಹತ್ತ್ ಹೆಜ್ಜೆ ಇತ್ತ ಬರೋಕಾದರೆ 'ತಿಂದನೆ ತಿಂದನೆ ತಿಂದನೆಂತ' ಬಾತ್. ಬಾಕನ ಒಂದ್ ಕಲ್ಲ್ ಹಾಕಿ ಮೂರ್ ಪೆಟ್ಟ್ ಹೊಡ್ತ್. ಅತ್ತಲೆ ಹೋತ್. ಪುನಾ ಒಂದ್ ಗಳಿಗ್ಗೆ ಕಳ್ದ್ ಅದೇ

ಕ್ರಮಲಿ ಬಾತ್. ಒಂದ್ ಕಲ್ಲ್‌ಹಾಕಿ ಮೂರ್ ಪೆಟ್ಟ್ ಹೊಡ್ತ್. ಮತ್ತೊಂದ್ ಗಳಿಗ್ಗೆ ತಡ್ದ್ ಹಾಂಗೇ ಬಾತ್. ಬಾಕನ ಒಂದ್ ಕಲ್ಲ್‌ಹಾಕಿ ಮೂರ್‌ಪೆಟ್ಟ್ ಹೊಡ್ತ್. ಮೂರೆ ಸರ್ತಿಗೆ ಹೊಡ್ದ್ ಆಕನ ಅಮ್ಮಪ್ಪಾಂತ ಹೇಳಿ ಎದ್ದ್ ನಿಂತತ್. ಸರಿಯಾದ ಒಂದ್ ಹೈದ. ಒಟ್ಟಿಗೆ ಸರಿಯಾದ ಅರಮನೆನೂ ಎದ್ದದೆ ಅಲ್ಲಿ. ಈ ಗೂಡೆನ್ ಅಂವನ್ ಆ ಮನೆಲಿ ಒಳೊ.

ಮಾರನೆದಿನ ಬೊಳ್ಪಿಗೆ ಅರ್ಸು ತೋಟಕ್ಕೆ ಹೋತ್. ತೋಟಕ್ಕೆ ಹೋಕನ ಕೆರೆ ಇಲ್ಲೆ. ಅರಮನೆ ಕಂಡದೆ. ಈ ಕೆರೆಲಿ ಅರಮನೆ ಉಟ್ಟ್‌ಲ್ಲಾಂತ ಅರಮನೆಗೆ ಹೋದೆ. ಹೋಗಿ ನೋಡ್ರೆ ಮಂಜ ಉಟ್ಟು. ಗೂಡೆ ಉಟ್ಟು. ಅವರ ಇಬ್ಬರ ಮನೆಗೆ ಕರ್ಕಂಡ್ ಬಂದ್ ಮನೆಲೇ ಇದ್ದೊ. ಇದ್ದ್ ಕೆಲವ್ ಸಮಯ ಆಕನ ಆ ಮನೆಗೆ ಗೊತ್ತಾತ್. ಅದರ ಕಳ್ಸಿದ ಮನೆಗೆ. ಅವ್ ಹೀಂಗಿಂಗೆ ಬಾರಿ ಲಾಯಿಕಲಿ ಒಳಗಡಾಂತ. ಇದ್ ಬೊಸ್ರಿ ಆತ್ ಗೂಡೆ. ಬೊಸ್ರಿ ಆಕನ ಇದರ ಕರ್ಕೊಂಡ್ ಹೋಕೆ ಎರಡನೆ ಅಯ್ಯೆ ಬಾತ್. ನಾ ಮಗಳ ಮನೆಗೆ ಹೆರಿಗೆಗೆಂತ ಕರ್ಕೊನೊಕೊ? ಅಲ್ಲಿ ಅದರ ಮಗಳ ಕೊಟ್ಟ್‌ದ್ ಅದರ್ನೂ ಆ ದಿನ ಕರ್ಕಂಡ್ ಬಂದುಟ್. ಈ ಮಗಳೂ ಆ ಮಗಳೂ ಒಂದ್ ಮನೆಲಿ ಇದ್ದೊ. ಕೆಲವ್ ದಿನ್ ಕಳ್ದ್ ಈ ಮಗಳ ಹೆರಿಗೆ ಆತ್. ಗಂಡ್ ಕೂಸ್. ಕೆಲವ್ ದಿನ ಕಳ್ದ್ ಇದ್ ಮೀಯಕೆ ಹೋತ್. ಹೋಕನ ಎರಡ್ನೆ ಮಗಳ ತುಂಬ ಬಿಸಿನೀರ್ ಹೊಯ್ದ್ ಬೇಯಿಸಿತ್. ಬೇಯಿಸಿ ಚಗ್ಟೆ ಬಲ್ಲೆಗೆ ಅತ್ತ ನೂಕಿ ಹಾಕಿತ್ ಬಾತ್. ಈ ಕೂಸ್‌ನ ತೆಗ್ದ್ ಅದರ ಮಗಳ ಒಟ್ಟಿಗೆ ಸಾಂಕಿಕೆ ಕೊಟ್ಟತ್. ಅದ್ ಸಾಂಕಿ ಕೊಂಡ್ ಇತ್ತ್. ಈ ಚೆಗ್ಟೆ ಬಲ್ಲೆಗೆ ಬಿದ್ದ ಗೊಡೆ ಹೊರಳಾಡಿಕಂಡ್ ಹೊರಳಾಡಿಕಂಡ್ ಹೋಗಿ ಬೀತ್. ಒಂದ್ ಬಾಪ್ ಎದ್ದ್ ಏಳ್ ಜೆಡೆ ಸರ್ಪ ಹನ್ನೆರಡ್ ಹನ್ನೆರಡ್ ಇಪ್ಪತ್ನಾಲ್ಕ್ ವರ್ಷ ಆಗುಟ್. ಅದರ ಮೇಲೆ ಬೀತ್. ಅದರ ಮೇಲೆ ಬಿದ್ದಾಕನ ಅದರ ಬಾಪ್ ಒಡ್ದ್ ಹೋತ್. ಅಮ್ಮಪ್ಪ ಇಂದ್ ನನ್ನ ಬೇನೆ ಒಡ್ದ್ ಹೋತಾ ಹಾಂಗೆಂತ ಹೇಳ್ತ್. ಈ ಗೂಡೆನ ಬೆನ್ನ್ ಮೇಲೆ ಹಾಕಿ ಕರ್ಕೊಂಡೇ ಹೋತ್. ಅದ್ ತಕೊಂಡ್ ಹೋಗಿ ಅದರ ಬಾಂಜಾರ್ಲಿ ಸಾಂಕಿಕೊಂಡ್ ಇತ್ತ್. ಇದರ ಬೇನೆಗೆ ಎಲ್ಲ ಮದ್ದ್ ಮಾಡಿದ್ ಗುಣ ಮಾಡ್ತ್. ಕಡೆಗೆ ಕೇಳ್ತ್. ಕೇಳ್ಕನ ಇದ್ ಹೇಳ್ತ್. 'ನನ್ನ ಕೂಸುಟ್ಟು. ಗಂಡ್ ಕೂಸ್ ಮನೆಲಿ ಹಾಗೆಂತ'.

ಒಂದ್ ದಿನ ಏಳ್ ಜೆಡೆ ಸರ್ಪ ಆ ಮನೆಗೆ ಬಾತ್. ಬಂದ್‌ದ್ ಈ ಕೂಸಿಗೆ ಚಿನ್ನದ ಬಳೆ ಹಾಕಿತ್. ಆ ಕೂಸಿಗೆ ಬೆಳ್ಳಿ ಬಳೆ ಹಾಕಿ ಹೋತ್. ಆ ದಿನ ಇದ್ ಅವ್ವನೊಟ್ಟಿಗೆ ಹೇಳ್ತ್. 'ಆ ಕೂಸಿಗೆ ಚಿನ್ನದ ಬಳೆ ಹಾಕುಟ್. ನನ್ನ ಕೂಸಿಗೆ ಬೆಳ್ಳಿನ ಬಳೆ ಹಾಕುಟ್' ಎಂತದಂತ. 'ಅದ್ ದೇವ್ರ್ ಆಗಿರ್ದು. ಅದರ ನೀ ಹೇಳ್ಬೇಡ' ಹಾಂಗೆಂತ ಅವ್ವ ಹೇಳ್ತ್. ಎರಡ್ ಮೂರ್ ಸರ್ತಿ ಹಿಂಗೇ ನೋಡ್ತಾ ಇತ್ತ್. ನಾಲ್ಕನೆ ಸರ್ತಿ ಬಾತ್. ಈ ಗಂಡ್‌ಕೂಸ್‌ನ ತಕಂಡ್‌ಹೋತ್. ತಕಂಡೋಗಿದ್ ಅ ಬಾಂಜಾರ್ಲಿದ್ದ ಗೂಡೆಗೆ ಕೊಟ್ಟತ್. 'ಇಂದ ನಿನ್ನ ಕೂಸ್ ಇದುವೆನಾ? ನೀ ಸಾಂಕಿಕಾಂತ ಹೇಳಿ ಅದರ ಕೈಲಿ ಕೊಟ್ಟತ್'. ಇದ್ ಆ ಕೂಸ್‌ನ ಸಾಂಕಿಕಂಡ್ ಈ

ಸರ್ಪನೊಟ್ಟಿಗೇ ಇತ್ತ್. ಕೆಲವ್ ದಿನ ಕಳ್ದಾಕನ ಆ ಬಾಂಜಾರ್ ಹೋಗಿ ಅಲ್ಲಿ ದೊಡ್ಡೊ ಅರಮನೆ ಆತ್. ಆ ಅರಮನೆಲಿ ಇದ್ ಕೂಸ್‌ನ ಆಡ್ಸಿಕೊಂಡ್ ಪೊರ್ಲ್ ಊಟ, ಉಪಚಾರ ಮಾಡಿಕಂಡ್ ಇತ್ತ್. ಉಪ್ಪರಿಗೆಲಿ ಈ ಏಳ್ ಜೆಡೆ ಸರ್ಪ ಮಲ್ಕೊಂಡ್ ಉಟ್ಟು. ಈ ಕೂಸುನು ಈ ಸರ್ಪನೊಟ್ಟಿಗೆ ಆಟ ಆಡಿಕೊಂಡ್ ಇದ್ದದೆ. ಯಾಗಾರ್ ಒಂದ್ ದಿನ ಒಬ್ಬ ಬಳೆಗಾರ ಅಲ್ಲಿಗೆ ಹೋದೆ. ಹೋಕನ ಈ ಗೂಡೆ ಏನ್ ಹೇಳ್ದೆ ಗೊತ್ತ್ತಟ, "ಬಾಳೆ ಹಿತ್ಲ್ ಬಲಕಾಕ್, ಬದನೆ ಹಿತ್ಲ್ ಎಡಕೆ ಹಾಕ್' ಬಾರಪ್ಪ ಬಳೆಗಾರ ಬಳೆತೊಡಕೆಂತ" ಕರ್ತ್. ಹಾಂಗೆ ಕರ್ದಾಕನ ಬಳೆಗಾರ ಸೀದಹೋತ್. ಹೋಗಿ ಕುದ್ದತ್. ಕುದ್ದಾಕನ ಕೂಸ್ ಮೇಲೆಂದ ಇಳ್ಕಂಡ್ ಬಾತ್. ಅಷ್ಟಾಕನ ಕೂಸ್‌ನ ನೋಡಿ ಬಾರೀ ಖುಷಿಯಾತ್ ಬಳೆಗಾರಂಗೆ. "ಮೀನ್‌ಕುಮಾರ ಮಗನೆ, ರಾಮಗಿಣಿ ಸರ್ಪನ ಪಿಳ್ಳೆ, ಬಾರಪ್ಪ ಮಗನೆ ಬಳೆತೊಡಿಕೆಂತ" ಹೇಳಿ ಕರ್ತ್. ಅಷ್ಟಾಕನ ಕೂಸ್ ಸೀದ ಬಂದ್ ಅಂವನ ತೊಡೆಮೇಲೆ ಕುದ್ದತ್. ಕುದ್ದಾಕನ ಆ ಕೂಸಿಗೆ ಬಳೆಗಾರ ಬೇಕಾದ ಬಳೆ ಹಾಕಿತ್ ಹೋತ್.

ಈ ಬಳೆಗಾರ ಸೀದ ಇಂವನ ಮನೆಗೆ ಹೋಗುಟು. ಮೀನುಕುಮಾರನ ಮನೆಗೆ. ಅಲ್ಲಿ ಹೋಗಿ ಹೇಳ್ತ್. 'ನಾ ಒಂದ್ ಕಡೆ ಹೋಗಿದ್ದೆ. ದೊಡ್ಡಾ ಅರಮನೆ. ಅಲ್ಲಿ ಮಾತ್ರ ಏಳ್ ಜೆಡೆ ಸರ್ಪ ಇತ್ತ್. ಆ ಸರ್ಪನಲ್ಲಿ ಒಂದ್ ಗೂಡೆನ್ ಒಂದ್ ಕೂಸ್‌ನು ಒಳದ್. ನಂಗೆ ಆ ಕೂಸ್‌ನ ನೊಡ್ಕನ ನಿಮ್ಮನೇ ಗ್ಯಾನ ಆದೆ' ನಾ ಹಾಂಗೆ. "ಮೀನ್ ಕುಮಾರನ ಮಗನೆ, ರಾಮಗಿಣಿ ಸರ್ಪನ ಪಿಳ್ಳೆ, ಬಾರಪ್ಪ ಮಗನೆ ಬಳೆತೊಡಕೆಂತ ಕರ್ದೆ."'ಹಾಂಗೆ ಕರಿಯಕನ ನನ್ನ ಹಕ್ಕಲೆ ಆ ಕೂಸ್ ಬಾತ್' ಹಾಂಗೆಂತ ಆ ಮನೆಲಿ ಇಂವ ಹೇಳ್ತ್. ಹಾಂಗೆ ಆದರೆ ಇನ್ನೊಮ್ಮೆ ನೀವ್ ಹೋಕೆ ಆಕನ ನಿಮ್ಮೊಟ್ಟಿಗೆ ನಾ ಬನ್ನೆಂತ ಈ ಮೀನ್‌ಕುಮಾರ ಹೇಳ್ತ್.

ಆತ್ ನಾಳೆ ನಾವ್ ಪೋಯಿಂತ ಮಾರನೆ ದಿನ ಮೀನ್‌ಕುಮಾರನ ಬಳೆಗಾರ ಕರ್ಕೊಂಡ್ ಹೋತ್. ಹೋಗಿ ದೂರಲಿ ನಿಂತ್ ಮನೆಯವರ ಕರ್ತ್. ಕರಿಯಕನ ಈ ಗೂಡೆ, "ಬಾಳೆ ಹಿತ್ಲ್ ಬಲಕಾಕ್, ಬದನೆ ಹಿತ್ಲ್ ಎಡಕಾಕ್, ಬಾರಪ್ಪ ಬಳೆಗಾರ ಬಳೆತೊಡಿಕೆಂತ" ಹೇಳ್ತ್. ಅಷ್ಟ್ ಹೇಳ್ದ ಮೇಲೆ ಈ ಬಳೆಗಾರ ಹೋತ್ ಒಳಗೆ. ಹೋಗಿದಾಕನ ಈ ಕೂಸ್ ಉಪ್ಪರಿಗೆಂದ ಇಳ್ಕೊಂಡ್ ಬಾತ್. ಬಂದ್ ಹಕ್ಕಳೆ ನಿಲ್ಲಿಕನ ಹೇಳ್ತ್, "ಮೀನ್‌ಕುಮಾರನ ಮಗನೆ, ರಾಮಗಿಣಿ ಸರ್ಪನ ಪಿಳ್ಳೆ, ಬಾರಪ್ಪ ಮಗನೆ ಬಳೆ ತೊಡಕೆಂತ" ಹಂಗೆ ಹೇಳ್ಕನ ಕೂಸ್ ಬಂದ್ ಈ ಬಳೆಗಾರನ ತೊಡೆಮೇಲೆ ಕುದ್ದತ್. ಪುನ ಅಂದ್ ಕೂಸ್‌ಗೆ ಅಯ್ಯೆಗೆ ಬೇಕಾದ ಬಳೆಕೊಟ್ಟ್‌ದ್ ಬಳೆಗಾರ ಹೋತ್.

ಹೋಗಿದ್ ಎರಡ್ ಮೂರ್ ದಿನ ಕಳ್ದ್ ಮೀನ್‌ಕುಮಾರ ಅಲ್ಲಿಗೆ ಬಾತ್. ಬಂದ್ ಈ ಏಳ್ ಜೆಡೆ ಸರ್ಪನೊಟ್ಟಿಗೆ ಕೇಳ್ತ್. 'ಮೊನ್ನೆ ನಾ ಬಳೆಗಾರನ ಜೊತೆ ಬಂದಿದ್ದೆ. ಮತ್ತೆ ಇಲ್ಲಿ ಒಂದ್ ಕೂಸ್ ಗೂಡೆ ಒಳೊ. ನಂಗೆ ನೋಡಿಕೆ ಆಕನ ನನ್ನ ಕೂಸ್‌ಂತೇ ಆದೆ. ಹಾಂಗೆ ನಾ

ಬಂದದ್‌ಂತ' ಹೇಳ್ತ್. 'ಹೆಸರ್ ಹೇಳಿ ಮೀನ್‌ಕುಮಾರನ ಮಗನೆಂತ ಕರಿಯುಕಾಕನ ಅಂವ ಇಳ್ದ್ ಬಾತ್. ಹಾಂಗೆ ಬಂದದ್‌ಂತ'. ಹಾಂಗಾರೆ ನಿನ್ನ ಕೂಸ್ ಹೌದ? ಹೌದ್. ಮೂರ್ ಮೂರ್ ಮಾತಿಗಾದರೂ ಹೌದ? ಹೌದ್. ಹಾಂಗೆ ಆದರೆ ನೀ ಈಗ ಕರ್‍ಕಂಡ್ ಹೋಕೆ ಬಂದದಾ? ಕರ್‍ಕಂಡೋಕೆ ಬಂದದ್. ಹೋದಿಯಾ? ಅವರೊಟ್ಟಿಗೆ ನೀ ನಮ್ಮ ಮನೆಗೆ ಬಂದಿಯಾ? ಅಂತ ಕೇಳ್‌ಂತ ಹೇಳ್ತ್. ಇಂವ ಮತ್ತೆ "ಮೀನ್‌ಕುಮಾರನ ಮಗನೆ ...." ಹಾಂಗೆಂತ ಇಂವ ಕರ್‍ತ್. ಅಷ್ಟಾಕನ ಆ ಕೂಸು ಇವನ ಹಕ್ಕಲೆ ಬಾತ್. ಬಂದಾಕನ ಏಳು ಜೆಡೆ ಸರ್ಪ ಹೇಳ್ತ್. 'ನಿನ್ನ ಕೂಸ್ ಹೌದ್. ನಿನ್ನ ಹೆಣ್ಣೂ ಹೌದ್. ಆದರೆ ಮೂಲಂದಲೇ ಅದ್ ಏನೆಲ್ಲ ಕಷ್ಟಕ್ಕೆ ಒಳಗಾಗುಟ್‌ಂತ ಹೇಳಿ ನಂಗೇ ಗೊತ್ತ್. ಅದರ ಜೀವ ಉಳ್ಸಿದವ ನಾ. ಆದರೆ ಇಂದಿಗೆ ನನ್ನ ಹಕ್ಕಲೆ ನಾ ಪೊರ್ಲ್‌ಲಿ ಸಾಂಕ್‌ತ್ತ ಒಳೆ. ನೀ ಕರ್‍ಕೊಂಡೋಗಿ ಪೊರ್ಲ್‌ಲಿ ಸಾಂಕಿಯ? ಹಾಂಗೆಂತ' ಏಳ್ ಜೆಡೆ ಸರ್ಪ ಹೇಳ್ತ್. ಹೇಳಿದ್ 'ಇನ್ನ್ ನಾಲ್ಕ್ ದಿನ ಕಳ್ದ್ ಕರ್‍ಕಂಡೋಗ್. ಇಂದ್ ಮಾತ್ರ ಕಳ್ಸುದಿಲ್ಲೆಂತ' ಏಳ್ ಜೆಡೆ ಸರ್ಪ ಹೇಳ್ತ್.

ಅಂವ ಮನೆಗೆ ಬಾತ್. ಎರಡ್ನೆ ಹೆಣ್ಣ್‌ನ ಮಗಳ ಕಳ್ಸಿತ್. ಗೂಡೆಗೆ ಕಣ್ಣ್‌ಬೇನೆ. ಅದ್ ಕುರುಡಿ. ಅದಕ್ಕೆ ಕಣ್ಣ್ ಕಾಂಬೊದ್ಲೆ. ಅದ್ ಬಂದ್ ಮನೆಲಿ ಯಾವ ವಸ್ತು ತಕೊಂತ ಹೇಳ್ದ್ರೂ ಅದಕ್ಕೆ ಗೊತ್ತಾದ್ಲೆ. ಅದ್ ಮೂಲೆ ಮೂಲೆಗೆ ಹೋದೆ. ಅದ್ ಮನೆಲೇ ಉಟ್ಟು. ಬಂದ್ ನಾ ಇಂದ್ ಕರ್‍ಕೊಂಡ್ ಹೊನೆಂತ ಹೇಳಿ ನಿಂಗೆ ಬೇಕಾದ ಆಭರಣ ಹಣ ತಕ. ನೀ ಇಂದ್ ಹೊರಟ್ ನಿನ್ನ ಮನೆಗೆ ಹೋಗ್ ಹಾಂಗೆಂತ ಏಳ್ ಜೆಡೆ ಸರ್ಪ ಹೇಳ್ತ್. ಹೊರಟ್ ನಿಂತ್‌ದ್ ಹೇಳೊಕ್ "ಎಲ್ಲಾ ನಿಂಗೆ ನನ್ನ ಅಪ್ಪಚ್ಚ ಕೊಟ್ಟತ್. ಒಂದ್ ಬೆಳ್ಳಿ ಶಾಸ್ತ್ರ ಕೋಳಿ ಕೊಡಿಕೆ ಮಾತ್ರ ನನ್ನ ಅಪ್ಪಚ್ಚಂಗೆ ಸಾಧ್ಯ ಆತ್ಲೆ. ನನ್ನ ಅಪ್ಪಚ್ಚನ ಅರಮನೆ ಬಸ್ಮಾಗಿ ಹೋಕ್‌ಂತ ಹೇಳಿದ್ ನೀ ಹೇಳೊಕ್‌ಂತ ಗೂಡೆನೊಟ್ಟಿಗೆ ಹೇಳಿಕೊಟ್ಟತ್" ಈ ಅಪ್ಪಚ್ಚ. ಇದ್ ಬೇಕಾದ ಸೊಸ್ತ್ ತಕನ್ತ್ ಅಂಗಳಕ್ಕಿಳ್ತ್ ಹೇಳ್ತ್, "ಎಲ್ಲಾ ನನ್ನ ಅಪ್ಪಚ್ಚ ಕೊಟ್ಟತ್. ಒಂದ್ ಬೆಳ್ಳಿ ಶಾಸ್ತ್ರ ಕೋಳಿ ಮಾತ್ರ ಅಪ್ಪಚ್ಚ ಕೊಟ್ಟತ್ಲೆ. ನನ್ನ ಅಪ್ಪಚ್ಚನ ಅರಮನೆ ಹೊತ್ತಿ ಬಸ್ಮ ಆಗಿ ಹೋಗಲಿ" ಹಾಗೆಂತ ಹೇಳಿದ್ ಅವು ತಿ[illegible] ಹೋದೊ. ಅವು ಹೋಗಿದ್ ಈ ಅರಮನೆಗೆ ಎತ್ತಿಕೆ ಮುಂದೆ ಈ ಅಪ್ಪಚ್ಚನ ಅರಮನೆ ಬ[illegible] ಆತ್. ಅದ್ ಹೋಗಿ ಬಾಂಜರಕ್ಕೆ ಸೇರ್‍ತ್ ಏಳ್ ಜೆಡೆ ಸರ್ಪ.

ಇಂವ ಇದರ ಕರ್‍ಕಂಡ್ ಬಾತ್. ಮನೆಲಿ ಸಮ್ರಾಜನ ಮಾಡ್ತ್. ಸಮ್ರಾಜನೆ ಮಾಡಿ ಊಟ ಉಪಚಾರ ಮಾಡ್ತ್. ಎತ್ತರ ಪಾಲ ಹಾಕಿತ್. ಬಂದ ಜನ ಎಲ್ಲ ಹೋಗಿ ಕೈಕಾಲ್ ತೊಳಿಯಕ ಈ ಕಣ್ಣ್ ಕಾಣದ ಕುರ್‍ಡಿ ಉಟ್ಟಲ್ಲ ಅದರ ದೂರ ಹಾಕಿಟು. ಅಲ್ಲಿಗೆ ಎಲ್ಲವ್ ಹೋಕಂಡ್ ಅ[illegible] ಮೆಟ್ಟುದ್, ಕೈ ಕಾಲು ಮೋರೆ ತೊಳಿದು ಎಲ್ಲ ಮಾಡ್ತಾ ಒಳೊ. ಇದರ ಅಯ್ಯೆನೂ ಬಂದುಟು ಅಕೇರಿಗೆ ಇದ್‌ನೂ ಹೋತ್. ಇದ್ ಹೋಕನನೂ ಕುರ್‍ಡಿಕುಂಬಾರ್‍ತಿ ಅಲ್ಲೆ ಉಟ್ಟು. ಇದ[illegible] ಯಾರೊ ಏನೊಂತ ಹೇಳಿದ್ ಹೋಗಿ ಮೆಟ್ಟುದು. ಮುಖ ತೊಳೆಯೊದು ಇನ್ನ್ ಹೇಸಿ[illegible]

ಏನೆಲ್ಲಾ ಅಲ್ಲಿ ಮಾಡ್ದೊ. 'ಅವ್ವ ಎಲ್ಲವೂ ಹಿಂಗೆ ಮಾಡ್ವೆಂತ ಹೇಳಿ ನೀನೂ ಹಿಂಗೆ ಮಾಡಿಯ ಅವ್ವ' ಹಾಂಗೆಂತ ಹೇಳ್ತ್. 'ಓ ಇದ್ ನನ್ನ ಮಗ ಅಲ್ಲನ' ಅಂತ ಹೇಳಿ ಮಗಳ ಎತ್ತಿ ಪೊರ್ಲ್ ಮೀಸಿಕೆ ತಯಾರ್ ಮಾಡ್ತ್. ಅಷ್ಟಾಕನ ಅಲ್ಲಿಗೆ ಒಂದ್ ಮಡಿವಾಳ ಬಾತ್. ಮಡಿವಾಳ ಬಂದ್ ಹೇಳ್ತ್, 'ಹಾಂಗೆಲ್ಲ ಅವ್ವ ಒರ್ಸುದ್, ಮೀಸುದ್? ಪಾರೆಗೆ ನೀವ್ ಹೊಡಿಣಿ. ಕಾಲ್ ಕಾಲ್ ಹಿಡ್ದ್ ಹೊಡಿಣೀಂತ'. ಇದ್ ಅದೇ ಸರೀಂತ ಹೇಳಿ ಕಾಲ್ ಮೇಲೆ ಕಾಲ್ ಹಿಡ್ದ್ ಪಾರೆಗೆ ಹೊಡ್ತ್. ಪಾರೆಗೆ ಹೊಡ್ದಾಕನ ಅದರ ಹೆಸ್ರ್ ಹೋತಲ್ಲಿಗೆ. ಈ ಮೀನ್ ಕುಮಾರನೂ ಅವನ ಹೆಣ್ಣ್, ಕೂಸ್, ಅಯ್ಯೆ, ಅಪ್ಪ ಎಲ್ಲ ಪೊರ್ಲ್ಲಿ ಆರಾಮಲಿ ಒಳಗಡ. ನಾ ಹೋಗಿ ಬಂದೆ ಇನ್ನ್ ನೀವ್ ಹೋಗಿ. [ಕಥಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]

## 35.ಮೀನ್ ಕುಮಾರನ ಕತೆ – ಪಠ್ಯ 2

ಒಂದ್ ಊರ್ಲಿ ಒಂದ್ ಅರ್ಸು ಇತ್ತ್. ಅರ್ಸಂಗೆ ಒಂದ್ ಹೆಣ್ಣ್ ಇತ್ತ್. ಹೆಣ್ಣ್‌ಗೆ ಮಕ್ಕ ಇಲ್ಲೆ. ಮಕ್ಕ ಇಲ್ಲದೆ ಆಕನ ಬೇಜಾರಲಿ ಇದ್ದೊ. ಹಂಗೆ ಒಂದ್ ದಿನ ಅರ್ಸು ಗದ್ದೆಗೆ ತಿರ್ಗಿಕಂಡ್ ಹೋಕನ ಒಂದ್ ಎಸ್‌ಂಡ್ ಇತ್ತ್. ಕಲ್ಲ್ ಮಗ್ಚಿಕನ ಎಸ್‌ಂಡ್ ಸಿಕ್ಕಿತ್. ನೋಡ್ರೆ ಅದ್ಕೆ ಮರಿಗ ತುಂಬ ಕಂಡೋ. ಆಗ ಅಂವ ಬಂದ್ ಮನೆಲಿ ಹೆಣ್ಣ್‌ನೊಟ್ಟಿಗೆ ಹೇಳ್ತ್, 'ಹೀಂಗಿಂಗೆ ಸಂಗತಿ. ನಿನ್ನ ಹೊಟ್ಟೆಲಿ ಒಂದ್ ಹುಳ್ ಸಹ ಇಲ್ಲೆ ಅಲ್ಲ'. ಹಂಗೆ ಇಂವ ಬೇಜಾರಲಿ ಮಲಗಿತ್. ಕಂಕನಿ ಮಲಗಿತ್. ಹಂಗೆ ಬೊಳ್ಪಿಗೆ ಒಬ್ಬ ಬೇಡಂವ ಬಾತ್. ಬೇಡಂವ ಬಂದ್ ದಕ್ಷಿಣೆ ಕೊಡೊಕುಂತ ಕೇಳ್ತ್. ಆದರೂ ಅವ್ ಬೇಜಾರಲಿ ಮಲಗ್ಯೊಳ. ಹಂಗೆ ಇಂವನ ಹೆಣ್ಣ್ ಹೋಗಿ ಕರ್ತ್. ಕರಿಯಕೆ ಆಕನ ಅಂವ ಎದ್ದತ್ಲೆ. 'ಏನ್ ಕಾರಣಾ ಹಾಂಗೆ ಹೀಂಗೆಂತ' ಅಂವ ವಿಚಾರಿಸಿತ್. ವಿಚಾರಿಸಿಕನ 'ಹೀಂಗೆ ಹೀಂಗೆ ಸಂಗತೀಂತ ಹೇಳ್ತ್'. 'ಅದಕ್ಕೆ ನೀವ್ ಯಾಕೆ ಹೆದರ್ದು? ಅದಕ್ಕೆಲ್ಲ ನಾ ವಿಷಯ ಹೇಳಿಕೊಡಕ್ಕ್‌ಂತ' ಹೇಳ್ತ್. ಹಂಗೆ ಅಲ್ಲಿ ವಿಷಯ ಹೇಳ್ತ್. ಹೇಳಿ ಒಂದ್ ವರ್ಷಲಿ ಹೆಣ್ಣ್ ಬೊಸ್ರಾತ್. ಬೊಸ್ರಾಗಿ ಹೆತ್ತತ್. ಹೆತ್ತದ್ ಕೂಸ್ ಮೀನ್. ಒಂದ್ ಮಡಿಕೆಲಿ ಹಾಕಿ ಇಸಿತ್. ಕೊಲ್ಲುದು ಬೇಡಾಂತ. ಹಾಂಗೆ ದಿನಂದ ದಿನಕೆ ಅದ್ ದೊಡ್ಡದಾಗ್ತಾ ಬಾತ್. ಅಕೇರಿಗೆ ಅಂವ ಒಂದ್ ಕೆರೆ ತೋರಿಸಿತ್. ಕೆರೆಲಿ ತೆಕಂಡೋಗಿ ಬುಟ್ಟತ್.

ಬುಟ್ಟ್ ಸಾಧಾರಣ ಪ್ರಾಯ ಬರುವ ಸಮಯಾಕನ 'ಮೊದ್ವೆ ಆಕ್ಕುಂತ ಕೇಳ್ತ್'. ಇಂವ ಕೆರೆಗೆ ಯಾಗೊಳ್ ಹೇಂಗುಟುಂತ ಹೇಳಿ ನೋಡಿಕೆ ಹೋದಲ್ಲ. ಇಂವಂಗೆ ಮೊದ್ವೆ ಆಕುಂತ ಆತ್. ಮೀನಿಗೆ ಯಾರ್ ಹೆಣ್ಣ್‌ಕೊಟ್ಟವೆ? ಹಾಂಗೆ ಊರೂರ್ ತಿರ್ಗಿಕೊಂಡ್ ಇಂವ ಹೋತ್. ಅಕೇರಿಗೆ ಒಂದ್ ಜನನೂ ಕಲ್ಸಿತ್. ಅಕೇರಿಗೆ ಒಂದ್ ಕಡೆ ಕೊಟ್ಟವೆಂತ ಆತ್. ಹಂಗೆ ಒಂದ್

ಗೂಡೆನ ಮೊದ್ವೆ ಮಾಡಿಕಂಡೊ. ಮೊದ್ವೆ ಮಾಡಿಕಂಡ್ ಒಂದ್ ಮೂರ್‌ದಿನ ಮನೆಲಿ ಹಾಕಿಕಂಡೊ. ಮನೆಲಿ ಹಾಕಿ ನಾಕನೆ ದಿನ ಮಂದ್ರಿ ಒಳ್ಳಿ ಕೊಟ್ಟ್ ಕೆರೆದಂಡೆಗೆ ಕಳ್ಸಿದೊ. 'ನೀ ಹೋಗಿ ಅಲ್ಲಿ ಮಲ್ಗ್. ನಿನ್ನ ಗಂಡ ಅಲ್ಲಿ ಉಟ್ಟು' ಹಂಗೆಂತ ಹೇಳಿ. ಮಧ್ಯ ರಾತ್ರಿಗೆ ಬಡಬಡಾಂತ ಎದ್ದತ್ ಕೆರೆಂದ. ಎದ್ದ್ ಬಂದ್ ಇದರ ಹೊಡ್ದ್ ಕೊಲ್ಲುದು. ಒಂದು ಹೆಣ್ಣ್ ಹಾಂಗೆ ಹೋತ್. ಇಂವ ಬೊಳ್ಳಿಗೆ ಹೋಕನ ಹೆಣ್ಣ್ ಸತ್ತೊಗುಟ್ಟ್. ಇದ್ ಬಾತ್ತೆ ಅಲ್ಲ. ಅದ್ಕೆ ಇಂವ ನೋಡಿಕೆ ಹೋದ್. ಹಾಂಗೆ ಮಾರನೆ ವರ್ಷ ವಾಪಾಸ್ ಒಂದ್ ಮೊದ್ವೆ ಮಾಡೊಕುಂತ ಆತ್. ವಾಪಾಸ್ ಒಂದ್ ಹೆಣ್ಣ್‌ನ ಹುಡುಕಿಕಂಡ್ ಹೋತ್.

ಹುಡುಕಿಕಂಡ್ ಹೋಗಿ ಹೋಗಿ ಒಂದ್ ಹೆಂಗ್ಸ್‌ಗೆ ಎರಡ್ ಹೆಣ್ಣ್ ಮಕ್ಕೊ ಇದ್ದೊ. ಕೊಟ್ನೆಂತ ಹೇಳ್ದೊ. ಹಾಂಗೆ ಮೊದ್ವೆ ಎಲ್ಲ ಮಾಡ್ಸಿದೊ. ಅದರಂತೆ ಒಂದ್ ಮೂರ್ ದಿನ ಮನೆಲಿ ಹಾಕನ್ತ್. ನಾಕನೇ ದಿನ ಹಿಂಗೆ ಕಟ್ಟಿಸಿ ಕಲ್ಸಿದೊ. ಹಾಂಗೆ ಈ ಮೊದ್ವೆ ನಿಶ್ಚಯ ಎಲ್ಲ ಆತಲ್ಲ. ಹಾಂಗೆ ಈ ಗೂಡೆಗೆ ಬೇಜಾರ್ ಆತ್. 'ಮೊದಲ ಹೆಣ್ಣ್‌ನ ಅಂವ ಹಾಂಗೆ ಕೊಂದತ್ ಗಡ. ಈಗನ ಹೆಣ್ಣ್‌ನ ಹೀಂಗೆ ಕೊಂದದೆ ಅಲ್ಲಂತ' ಹೇಳಿ ಬೇಜಾರ್‌ಲಿ ಇತ್ತ್. ಅಷ್ಟಾಕನ ಪಾರ್ವತಮ್ಮ ಈಶ್ವರ ದೇವರ್ ತಿರ್ಗಿಕಂಡ್ ಹೋಕನ ಈ ಗೂಡೆ ಹೀಂಗೆ ಕುದ್ದ್ ಬೇಜಾರ ಮಾಡ್ದು ಕಂಡತ್. ಹೆಂಗ್ಸ್ ಪಾರ್ವತಮ್ಮಂಗೆ ಕಂಡತ್. ಇದ್ ಹೆಣ್ಣ್ ಮಕ್ಕಳ ಬುದ್ಧಿ ಉಟ್ಟಲ್ಲ ಕಂಡ ಕಂಡವರೊಟ್ಟಿಗೆ ಮಾತಾಡೊಕ್ ಹೇಳೊಕ್ ಕೇಳೊಕ್ ಹಾಂಗೆ. ಈಶ್ವರ ದೇವರೊಟ್ಟಿಗೆ ಕೇಳ್ತ್ 'ಹೀಂಗಿಂಗೆ ಬೇಜಾರಲಿ ಕುದ್ದುಟು ಎಂತದ್‌ಂತ ಕೇಳಿ ಬುಡೊಮಾಂತ'. ಈ ಹೆಣ್ಣ್ ಮಕ್ಕ ಒಟ್ಟಿಗೆ ಬಂದರೆ ಇದೇ ರಗಳೆ ಹಾಂಗೆ ಹೀಂಗೆಂತ ಈಶ್ವರ ದೇವ್ರ್ ಹೇಳ್ತ್. ಹಾಂಗೆ ಹೆಣ್ಣ್‌ನ ಹಕ್ಕಳೆ ಇಂವ ಹೋತ್. ಆಗ ಅಂವ ಮೂರ್ ಕಲ್ಲ್ ಮಂತ್ರಿಸಿ ಕೊಟ್ಟತ್. 'ಬಡ ಬಡ ಶಬ್ದ ಕೇಳಿಕೆ ಆಕನ ಒಂದ್ ಕಲ್ಲ್ ತೆಗ್ದಾಕ್. ಎರಡನೇ ಶಬ್ದ ಕೇಳಿಕೆ ಆಕನ ಇನ್ನೊಂದ್ ಕಲ್ಲ್ ತೆಗ್ದಾಕ್. ಮೂರನೇ ಶಬ್ದ ಕೇಳ್ಕನ ಮತ್ತೊಂದ್ ಕಲ್ಲ್ ತೆಗ್ದಾಕ್' ಹೀಂಗೆ ಹೇಳಿ ಕೊಟ್ಟತ್. ಹಾಂಗೇ ಈ ಹೆಂಗಸ್ ಮಾಡ್ತ್. ಹಾಂಗೆ ಬೊಳ್ಪ್‌ಗೆ ಅರ್ರು ನೋಡ್ಕನ ಇವ್ ಗಂಡ್ ಹೆಣ್ಣಾಗಿ ಮೊನ್ಸನ ರೂಪಲಿ ಒಳೊ. ಹಂಗೆ ಇಬ್ಬರ ಕೈಕೈ ಹಿಡ್ದ್ ಮನೆ ಹತ್ತಿಸಿತ್. ಹಂಗೆ ಈ ಗೂಡೆ ಬೊಸ್ರಾತ್. ತವರ್ ಮನೆಗೆ ಕಳ್ಸುವ ಒಂದ್ ಪದ್ಧತಿ ಉಟ್ಟಲ್ಲ. ಕರ್ಕೊಂಬೊದು.

ಹಾಂಗೆ ಅದರ ತಂಗೆನ ಬೇರೆ ಕಡೆಗೆ ಕೊಟ್ಟೊಳೊ. ಅದೂ ಬೊಸ್ರ ಹೆಂಗ್ಸ್. ಅದರ್ನೂ ಕರ್ಕೊಂಡ್ ಮನೆಗೆ ಬಂದೊಳೊ. ಹಾಂಗೆ ಅಕ್ಕನ ಚಿನ್ನಾಭರಣ ಹಾಕೋಣಾಂತ ಹೇಳಿ ಅದರ ಚಿನ್ನಾಭರಣ ಇದ್ ಹಾಕಣ್ತ್. ಹಾಂಗೆ ಹಳ್ಳಕೆ ಬಟ್ಟೆ ಒಗಿಯಕೆ ಎಲ್ಲ ಹೋದೊ. ಬಟ್ಟೆ ಒಗಿಯಕನ ತಂಗೆ ಏನ್ ಮಾಡ್ತ್ ? ಅಕ್ಕನ ನೂಕಿ ಹಳ್ಳಕೆ ಹಾಕಿತ್. ಇದ್ ತುಂಬ್ ಬೊಸ್ರ ಹೆಂಗ್ಸ್ ಅಲ್ಲ. ಹಳ್ಳಲಿ ಹೋತ್. ಹೋಗಿ ಸುಮಾರ್ ದೂರ ಹೋಕನ ಒಂದ್ ಏಳ್ ಜೆಡೆ ಸರ್ಪಕ್ಕೆ ಕಿವಿಲಿ ಬಾಪು ಎದ್ದ್ ಸುಮಾರ್ ವರ್ಷ ಕಳ್ದುಟು. ಇದರ ಕಿಣ್ಕ್ ಬೆರ್ಲ್ ಅದರ ಬಾಪುಗೆ

ಮುಟ್ಟಿಹೋತ್. ಪಟ್ಟನೆ ಅದರ ಬಾಪು ಒಡ್ತ್. ಸರ್ಪ ಅದರ ಕರ್ಕಂಡ್ ಹೋತ್. ಹೋಗಿ ಒಂದ್ ದೊಡ್ಡೊ ಅಡ್ಕಲಿ ಶಾಪ ಹಾಕಿಸಿತ್. 'ದೊಡ್ಡ ಒಂದ್ ಅರಮನೆ ಆಗಲೀಂತ'. ಅರಮನೆ ಆತ್. ಹಾಂಗೆ ಅರಮನೆಲಿ ತಕಂಡೋಗಿ ಬುಟ್ಟಿತ್. ಆಗ ಅದ್ ಹೇಳ್ತ್. 'ಒಂದ್ ಶಾಸ್ತ್ರ ಕೋಳಿ ಬೆಳ್ಳೆ ಹುಂಜ ಉಟ್ಟು. ನಿಂಗೆ ಬೇಡದ ಕಾಲಕ್ಕೆ 'ಎಲ್ಲಾ ನನ್ನ ಅಪ್ಪ ಕೊಟ್ಟೊಳೊ. ನಂಗೆ ಶಾಸ್ತ್ರ ಕೋಳಿ ಬೆಳ್ಳೆ ಹುಂಜ ಬೇಕ್‌ಂತ' ಶಾಪ ಇಸಿ ಹೋಕ್‌ಂತ. ಹಾಂಗೆ ಇದರ ಮಂಜಂಗೆ ವಿಷಯ ಎಲ್ಲ ಗೊತ್ತಾತ್. ಗೊತ್ತಾದರೆ ಏನ್ ಮಾಡ್ದು ಇದರ ಒಂದ್ ಕಣ್ಣ್ ಇಲ್ಲೆ. ತಂಗೆನ ಕಣ್ಣ್. ಹೆಣ್ಣ್ ಹೆತ್ತುಟು, ಕರ್ಕಂಡ್ ಬಾಕೆ ಎಲ್ಲ ಹೇಳ್ದೊ. ಬಂದ್ ಇದರ ಬಾಚಣೆ ಅದೆಲಿಟ್ಟು ಇದೆಲ್ಲಿಟ್ಟು ? ಅಂತ ಹುಡ್ಕುದುಟ್ಟಲ್ಲ. ಇದ್ಕೆ ಯಾವುದೂ ಸಿಕ್ಕುದ್ಲೆ. ಆಗಲೇ ಅಂದಾಜ್ ಮಾಡ್ತ್ ಇಂವ. ಸಮ್ಮನೆ ಆಕನ್ತ್. ಅಂದ್ ಒಬ್ಬ ಬಳೆಗಾರ್ ಬಾತ್ ಬಳೆ ಇಸಿಕೆ. ಮೊದಲ್ ಇವರ ಮನೆಗೆ ಹೋತ್. ಆಗ ಅದರ ಮಂಜನೊಟ್ಟಿಗೆ ಹೇಳ್ತ್. ಆಗ ಆ ಮಂಜ ಹೇಳ್ತ್ – 'ಬಾಳೆ ಹಿತ್ಲ್ ಬಲಗಡೆ ಹಾಕಿ, ಬದನೆ ಹಿತ್ಲ್ ಎಡಗಡೆ ಹಾಕಿ, ಮನೆಗೆ ಬಳೆ ಇಸಿಕೆ ಬಳೆಗಾರಂತ' ಇಂವ ಹೇಳ್ತ್ ಹಾಂಗೆ. ಇದ್ ಹೋತ್. ಬಳೆ ಎಲ್ಲ ಇಸಿತ್. ಹೆಂಗ್ಸ್‌ನ ಕೂಸ್ ಹಾಂಗೆ ಆಡಿಕೊಂಡ್ ಉಟ್ಟಲ್ಲ. 'ಕೂಸ್‌ನ ಹೆಸರೆಂಗೆ?' ಬಳೆಗಾರ ಕೇಳ್ತ್. 'ಮೀನ್‌ಕುಮಾರಂತ' ಹೇಳ್ತ್. ಹೆಸರ್ ಮೀನ್‌ಕುಮಾರಂತೇ ಹಾಕಿದ್. ಅಲ್ಲಿಂದ ಅಂವ ಬಳೆ ಇಸಿತ್ ಇಲ್ಲಿಗೆ ಬಾತ್. 'ಅರ್ಸ್ ಮನೆಗೆ ಬಾಕ್ಕೆ ಹಾದಿ ಎಲ್ಲಿ ಅಮ್ಮಾಂತ ?' ಕೇಳ್ತ್. 'ನಿನ್ನ ಕಣ್ಣ್ ಹೊಡ್ದೋಗುಟ್ಟ?' ಅಷ್ಟಾಕನ ಇಂವ ಹೇಳ್ತ್ 'ಮೊದಲೇ ನಿಮ್ಮ ಕಣ್ಣೊಂದ್ ಹೋಗುಟುಂತ' ಹೇಳಿ ಬಾತ್ ಅದರ ಮಾತ್ ಕೇಳಿಕಂಡ್. ಬಂದ್ ಬಳೆ ಎಲ್ಲ ಇಸಿತ್. ಅರ್ಸುನೊಟ್ಟಿಗೆ ಎಲ್ಲ ಹೇಳ್ತ್. 'ವಿಷಯ ಹೀಂಗಿಂಗೆ ನೋಡ್ದೆ. ಬಾರಿ ಸೋಕುನ ಕೂಸು'. ಅರ್ಸು ಸುಮ್ಮಂಗೆ ಹ್ಹೂಂತ ಕೆಬಿಲಿ ಕೇಳ್ತ್. ಸುಮ್ಮನೆ ಮನಸ್‌ಲಿ ಆಕನ್ತ್.

ಒಂದ್ ದೊಡ್ಡೊ ಬಾಮಿ ತೆಗ್ತ್. ಬಾಮಿ ತೆಗ್ದ್ ಅದಕ್ಕೆ ಒಂದ್ ಪಾಲ ಹಾಕಿತ್. ಪಾಲ ಹಾಕಿ ದೊಡ್ಡ ಒಂದ್ ಸಮ್ರಾಜನೆ ಊಟ ಮಾಡ್ಸಿತ್. ಕೊಲ್ಲೊಕ್‌ಂತ ಹೇಳಿ ಅಂದ್ ಇವರ್ನೆಲ್ಲಾ ಕರ್ಸಿದೊ. ಕುರ್ಡಿನ ನೂಕಿ ಇದೇ ಬಾವಿಗೆ ಹಾಕಿದೊ. ಅಂದ್ ಇದೇ ಅಯ್ಯೆನ ಬಾಕೆ ಹೇಳ್ಯೊಳ. ಎಲ್ಲವು ಹೋಗಿ ಹೇಲೊಕ್. ಇದೇ ಹೊಂಡಕೆ ಹೇಲೊಕ್. ಹಾಂಗೆ ಕಡೆಗೆ ಇದ್ ಅಯ್ಯೆ ಹೋತ್. 'ಎಲ್ಲವೂ ತೂರಿದವ್ವ ನೀನೂ ತೂರಿಯಾಂತ' ಹೇಳ್ತ್. ಸರಿ ಇದ್ ಎಲ್ಲಿಂದಪ್ಪ ಈ ಮಾತ್ ಕೇಳ್ದು. ಹಾಂಗೆ ಅತ್ತಿತ್ತ ನೋಡ್ತ್. ನೋಡ್ರೆ ಇದ್ ಅಡಿ ಹೊಂಡಲಿ ಉಟ್ಟು. ಮೆಲ್ಲ ಎಲ್ಕೊಂಡು ಹೋತ್. ಎಲ್ಕೊಂಡು ಹೋಗಿ ಬಟ್ಟೆ ಒಗಿವ ಪಾರೆ ಕಲ್ಲ್‌ಲಿ ತೊಳ್ತ್. ತೊಳ್ದರೆ ಇದ್ ಹೋದೆನಾ. ಹೇಲ್ ಹೋದ್ಲೆ. ಅಷ್ಟಾಕನ ಒಬ್ಬ ಮಡಿವಾಳ ಹೇಳ್ತ್. 'ಹಾಂಗೆಲ್ಲ ಮಾಡ್ಬಾರ್ದಮ್ಮ ಹಿಂಗೆ ಮಾಡ್ಬೇಕ್‌ಂತ' ಕಾರಣ ಹೇಳ್ತ್. ಪಾರೆಗೆ ಬೊಡಿಯೋಕುಂತ. ಬೊಡಿಯಕನ ಇದ್ ಸತ್ತೊತಲ್ಲೆ. ಹಾಂಗೆ ಅದ್ ಸತ್ತೊತ್. ಹಾಂಗೆ ಇವ್ ಬಂದ್ ಹೇಳ್ದೊ.

ವಿಷಯ ಹಿಂಗಿಂಗೆಂತ ಹೇಳಿ ಆಕನ ಮತ್ತೆ ಇವರ ಎಲ್ಲ ಕರ್ಕಂಡ್ ಬಂದ್ ಎಲ್ಲ ಒಳ್ಳೊದರಲ್ಲಿ ಇದ್ದೊ. ಇದ್ದ್ ಅಕೇರಿಗೆ ಎಲ್ಲ ಊರಿಗೆ ಸಮಚಾರ ಗೊತ್ತಾತ್. ಗೊತ್ತಾದ ಕೂಡ್ಲೆ ಇಂತ್‌ದ್ ಊರ್ಲಿ ನಡ್ದೋತಲ್ಲ ಏನ್ ಮಾಡ್ದುಂತ ಹೇಳಿ ಅಲ್ಲಿ ಸುಮ್ಮನೆ ಆಕಂಡೊ. ಹಾಂಗೆ ಅರ್ರುಸಕುಮಾರನೂ ಮೀನ್ ಕುಮಾರನೂ ಹೆಣ್ಣ್ ಎಲ್ಲವೂ ಸುಖ ಸಂತೋಷಲಿ ಒಳಗಡ. ನೀವ್ ನೋಡಿಕಂಡ್ ಬರಕಡ. [ಕಥಾ ನಿರೂಪಕ:ರಾಮಯ್ಯಗೌಡ; ಸ್ಥಳ:ಮನೆ; ಸಮಯ:ಸಾಯಂಕಾಲ 6ಗಂಟೆ; ವರ್ಷ–1991]

## 36. ಮೀನ್ ಕುಮಾರನ ಕತೆ – ಪಠ್ಯ 3

ಒಂದ್ ಅರ್ರು. ಆ ಅರ್ರುಗೆ ಮುಂದೆ ಮೊದ್ವೆ ಆಗಿತ್ತ್ ಗಡ. ಮೊದ್ವೆ ಆಗಿ ಅವಂಗೆ ಒಬ್ಬ ಮಗ ಹುಟ್ಟಿತ್ ಗಡ. ಮಗ ಹುಟ್ಟಿ ಆರೇಳ್ ವರ್ಷ ಆಕನ ಅರ್ರುನ ಹೆಣ್ಣ್ ತೀರಿ ಹೋತ್‌ಗಡ. ತೀರಿ ಹೋದ ಮೇಲೆ ಅವಂಗೆ ಗೆತಿ ಇಲ್ಲೆ ಅಲ್ಲ. ಹೆಣ್ಣ್ ಇಲ್ಲೆ ಅಲ್ಲ. ಈ ಅರ್ರು ಮನೆತನದವ್ಕೆ ಹೆಣ್ಣ್ ಇಲ್ಲೆಂತ ಆದರೆ ಬಾರಿ ಬೇಸರದ ಸಂಗತಿ ಅಲ್ಲ. ಈ ಅರ್ರು ಮನೆತನಕ್ಕೆ ಗೆತಿ ಇಲ್ಲೆಂತ ಹೇಳ್ತ್ ಪ್ರಜೆಗಳ ಎಲ್ಲ ಬಾಕ್ಕೆ ಹೇಳ್ತ್. ಮೊಂತ್ರಿನ ಬಾಕೆ ಹೇಳ್ತ್. ಮೊಂತ್ರಿನೊಟ್ಟಿಗೆ ಹೇಳ್ತ್‌ಗಡ, 'ನಂಗೆ ಒಂದ್ ಹೆಣ್ಣ್ ನಿಶ್ಚಯ ಮಾಡೊಕ್. ನೀ ಎಲ್ಲಿಯಾರ್ ಹೋಕ್‌ಂತ'. ಹಾಂಗೆ ಮೊಂತ್ರಿ ಊರ್ಲಿ ಹುಡುಕ್‌ತ್ತಾ ಹೋತ್. ಒಂದ್ ಊರ್‌ಂದ ಮತ್ತೊಂದ್ ಊರಿಗೆ ಅಂವನ ರಾಜ್ಯ ಬುಟ್ಟ್ ಮತ್ತೊಂದ್ ರಾಜ್ಯಕ್ಕೆ ಇಲ್ಲಿಂದ ಬುಟ್ಟ್ ಮಡಿಕೇರಿಗೆ ಹೋತ್‌ಂತ ಗ್ಯಾನ ಮಾಡಿಕನಿ. ಮಡಿಕೇರಿಗೆ ಹೋತ್. ವಾಪಾಸ್ ಬಾಗಮಂಡಲಕ್ಕೆ ಬಾತ್. ಬಾಗಮಂಡಲಂದ ಬಂದ್ ಅಲ್ಲಿಂದ ವಾಪಾಸ್ ತಿರ್ಗಿಕಂಡ್ ಬಾಕನ ಒಂದ್ ದಿಕ್ಕ್‌ಲಿ ಸುಮಾರ್ ಬಾಗಮಂಡಲಂದ ಕರಿಕೆ ರೋಡಿಗೆ ಆಕನ ಒಂದು ಹೆಣ್ಣ್ ಮಗಳೂ ಒಂದ್ ಒಂಟಿ ಹೆಂಗಸ್ ಬಾಳ ಸುಂದರಿ ಹೆಂಗಸ್ ಮಾತಾಡ್ದ ಹೋದವೆ ಗಡ. ನೀವೆಲ್ಲಿಗೆ ಹೋದು? 'ನನ್ನ ಗಂಡ ಮೊನ್ನೆ ಸುತ್ತೊಗುಟ್ ಹಾಂಗೆ ಈಗ ಯಾರ್ ಗೆತಿ ಇಲ್ಲೆ. ಹಂಗೆ ನಾ ಈ ಮಗಳ ಕರ್ಕೊಂಡ್ ಹೊರಟದ್‌ಂತ' ಹೇಳ್ತ್ ಗಡ. ಅಯ್ಯೋ ಅಯ್ಯೋ ನಮ್ಮ ರಾಜ್ಯಲಿ ಕೂಡ ಹಾಂಗೆ. ಒಂದ್ ಹೆಣ್ಣಾಕ್‌ಂತ ಹುಡುಕ್‌ಂತ ನನ್ನ ಕಳ್ಸಿದ್. ಅವ್ ಹಿಂದೆ ಮೊದ್ವೆ ಆದ್ದರಿಂದಾಗಿ ಸಣ್ಣ ಪಾಪದವು ಆದರೂ ಕೈದಾರೆ ಕೊಡಿಕಿಲ್ಲೆ. ಅದಕ್ಕೆ ನಿರ್ದಾರಂತ ನನ್ನೊಟ್ಟಿಗೆ ಹೇಳ್ಯೋಳ. ನಂಗೆ ಪತ್ರಕೂಡ ಕೊಟ್ಟೊಳೊ. ರೂಪ ಲಾವಣ್ಯನ ನೋಡಿ ಹೆಣ್ಣ್‌ನ ನೋಡೋಕ್‌ಂತ. ನಾ ಅವರ ಮೊಂತ್ರಿ. ಹಂಗೆ ನಾ ಬಂದದ್‌ಂತ ಹೇಳ್ತ್. 'ಅಂದರೆ ನಾ ಬನ್ನೆ ನನ್ನ ಮೊದ್ವೆ ಮಾಡ್ದುಂತ ಆದರೆ ಮಾಡಲಿ. ಮನೆ ಎಲ್ಲ ಶೃಂಗಾರ ಮಾಡಿ. ಅಲ್ಲಿಯೇ ಒಂದ್ ಅರ್ರು ಮನೆತನದ ರೂಮ್‌ಲಿ ನನ್ನ ಮಾಡಿ. ಅಲ್ಲಿಂದ ಮತ್ತೆ ಕಾರ್ಯಕ್ರಮಕ್ಕೆ ಆಕನ ಕರ್ಕೊಂಡ್ ಹೋದರೆ ಸಾಕ್‌ಂತ' ಹೇಳ್ತ್.

ಮಂತ್ರಿ ಅದರ ಕರ್ಕೊಂಡೋಗಿ ಎಲ್ಲ ಮೀಸಿ ತಕಂಡೋಗಿ ಮನೆಲಿ ಮಾಡಿಕನ್ತ್ ಗಡ.

ಮಾಡಿಕಂಡದ್ ಅರ್ರು ಮನೆತನಕ್ಕೆ ಕರ್ಕಂಡ್ ಹೋತ್. ಅರ್ರು ಮನೆತನಲಿ ಈಗನ ಬುಡ್‌ದಾರೆ ಕ್ರಮಲಿ ಬುಡ್‌ದಾರೆ ಆತ್. ಆಗಿ ಅವ್ ಹಾಂಗೆ ಸುಮಾರ್ ಸಮಯ ಸುಖಲಿ ಇದ್ದೊ ಗಡ. ಆಗ ಅರ್ರು ಮನೆಸ್ಥನಲಿ ಅದ್ ಪಟ್ಟದ ರಾಣಿ ಅಲ್ಲ. ಎರಡ್ನೆ ಹೆಣ್ಣ್. ಈ ಗೂಡೆ ಸ್ವಲ್ಪ ಬಲ ಆತ್. ದನ ಮೇಪ್‌ಗೆ ಈ ಗೂಡೆನ ಕಲ್ಸಿದೊ. ಅಡಿಗೆ ಎಲ್ಲ ಬುಟ್ಟತ್. ಇದ್ ಬಾರಿ ಕಷ್ಟ ಆತ್. ದನ ಮೇಪಿಗಾದರ್ ಹೇಳಿ ಹೋನೆ ಅವ್ವಂತ ಈ ಚಿಕ್ಕವ್ವನೊಟ್ಟಿಗೆ ಹೇಳಿ ಹೋತ್‌ಗಡ. ಹಂಗೆ ದನಮೇಪಿಗೆ ಹೋಗಿ ಹೋಗಿ ಹೋಗಿ ಇದ್ ಯಾಗೋಳು ಅದಕ್ಕೆ ಊಟ ಕೊಡಟ ಇಲ್ಲೆ. ಇದ್ ಬಾಳ ಸುಂದರಿ ಗೂಡೆ ಆತ್. ಇನ್ನ್ ನನ್ನ ಮಗಳ ಕುರುಡಿನ ಇವು ನೋಡಿಕಿಲ್ಲೆ. ಇವರ ಮಗಳ್ನೆ ಹೊಗಳ್ವಂತ ಹೇಳಿ ಪ್ರೀತಿಲಿ ಮುಂದೆನ ಹೆಣ್ಣ್‌ನ ಮಗಳ ಮೀಸುದ್. ತಲೆಗೆ ಎಣ್ಣೆ ಹಾಕುದ್ ತಲೆ ಬಾಚುದ್ ಹಿಂಗೆಲ್ಲ ಮಾಡಿಯಾಕನ ಇದ್ಕೆ ನಂಜಿಯಾತ್. ನನ್ನ ಕುರ್ಡಿ ಮಗಳ ನೋಡ್ದು ಇಲ್ಲೆ? ನನ್ನ ಮಗಳ ನೋಡೊಕ್‌ಂತ ಮಾಡಿತ್. ಇಂವ ಅರ್ರು ಮಂದಿರಕ್ಕೆ ಹೋಕೆ ಆಕನ ಇದರ ಮನೆಲಿ ಬೊಡ್ಡ್‌ದ್ ಬೇಕಾದಷ್ಟ್ ಬಂಗ ಬರ್‌ಸ್ದು. ಯಾರ್? ಎರಡ್ನೆ ಹೆಣ್ಣ್. ಹಂಗೆ 'ಇನ್ನ್ ದನ ಮೇಪಿಗೆ ನಾನೂ ಹೋನೆ ಅವ್ವಂತ' ಹೇಳ್ತ್‌ಗಡ. ಹಂಗೆ ದನ ಮೇಪಿಗೆ ಹೋಕೆ ಸುರ್ ಮಾಡ್ತ್‌ಗಡ. ಇದ್ ಉಪವಾಸ ಹೋದು. ಇದ್ಕೆ ತನ್ನನ ತೆಲಿ ಕೊಡ್ದು. ಇದರ ಕುಡ್ಕೊಂತ ಹೇಳಿ ಸೂಸ್‌ದು. ಅತ್ತ ಇತ್ತ ಕೈ ಹಾಕುದ್. ಹೋದು ಗಡ.

ಹೋಗಿ ಹೋಗಿ ಮಳೆಗಾಲ ಹಿಡ್ತ್. ಅದರ ಅಯ್ಯೆ ಸತ್ತ್ ಅದರ ದೊಡ್ಡಾ ಅಡ್ಕಲಿ ಸುಟ್ಟದ್ ಗಡ. ಅದರ ದೂಪೆ ಹಕ್ಕಲೆ ಗೋಂಟೆಕಾಯಿ (ಕಾಡ್ ತೊಂಡೆಕಾಯಿ) ಬೊಳ್ಳಿ ದೂಪೆಗೆ ಹಬ್ಬಿ ಕೊಂಡುಟ್ಟುಗಡ. ಅದರ್ಲಿ ತುಂಬ ಗೋಂಟೆ ಕಾಯಿ ಉಟ್ಟುಗಡ. ಕಾಡ್ ತೊಂಡೆಕಾಯಿಂತ ಹೇಳ್ವಲ್ಲ ಅದ್. ಅದ್ ಏನ್ ಮಾಡ್ತ್ ? ಗೋಂಟೆಕಾಯಿನ ಪೊರ್ಲು ಕೊಯ್ತ್. ಒಂದ್ ದಿನ ಹತ್ತ್ ಗೋಂಟೆಕಾಯಿ ತೀನ್ತ್. ತಿಂದ್ ಕಬುಲ್ಜಿ ಹಸ್‌ನ ಕರ್ ಬುಟ್ಟತ್ ಗಡ. ಕರ್‌ಬುಡ್ದು ಹಾಲ್ ಕುಡಿಯೊದ್. ಈ ಗೋಂಟೆ ಕಾಯಿನ ಪಿಂಚುದು. ಮನೆಂದ ಹಾಳೆ ಎಂತಾರು ತಕಂಡೋದು. ಪಿನ್ನ್ಜಿ ಇದರ್ಲಿ ಈ ಗೊಂಟೆಕಾಯಿನ ಪೊರ್ಲ್ ಚಿರ್‌ಂಬಿ ಗೋರಿ ಕುಡಿಯುದ್. ಕುಡ್ದ್ ಮನೆಗೆ ಬಾದು. ದನಂಗಳ ಎಲ್ಲ ಕಟ್ಟಿ ಹಾಕಿ ಕರ್‌ಬುಟ್ಟ್ ಹಾಲೆಲ್ಲ ಕಾಸುದು. ಹಾಲ್ ಕಾಸಿದ್ ಚಿಕ್ಕವ್ವನೊಟ್ಟಿಗೆ ಹೇಳ್ದು 'ಹಾಲ್ ಕಾಸಿ ಇಸಿಯೊಳೆಂತ' ಇದು ಹೋದು. ಅದರ ಮೇಲೆನ ಬಾವೆ ತೆಗೆಯೊದ್ ಇದರ ಮಗಳಿಗೆ ತಂದು ಕೊಡ್ದು. ಆ ಮೇಲೆ ಇದರೊಟ್ಟಿಗೆ ಹೇಳ್ದು. ನಿಂಗೆ ಅಲ್ಲಿ ಗಂಜಿ ಹಾಕಿ ಇಸಿಯೊಳೆ ಹಾಳೆ ಕಿಳ್ಳಿಲಿ. ಬೇಕಾದರೆ ತಿನ್ನ್‌ಂತ ಹೇಳ್ತ್. ಇದ್ ಗಂಜಿನ ಹೋಗಿ ಅತ್ತ ಇತ್ತ ನೋಡ್ದು. ಅದರ್ಲಿ ನೆಳನೊ ಕಾಡೋ ಎಂತಾರ್ ಬಿದ್ದ್ ಕೊಂಡಿದ್ದದೆ. ಇವ್ ಪೊರ್ಲ್ ಉಂಡ್ ಬುಟ್ಟ ಮಡೆ ಅನ್ನನ ಎಲ್ಲ ಅದ್ಕೆ ಬರ್‌ಂಬಿ ಹಾಕಿ ಇಸುದ್. ಅದರ ಅದ್ ದನಂಗಳಿಗೆ ಕೂಡ್ದ್. ಇದ್ ಹಾಂಗೆ ಉಪಾಸವೆ ಇತ್ತ್‌ಗಡ. ಇದಕ್ಕೆ

ಯಾಗೋಳ್ ಇದೇ ತೊಂಡೆಕಾಯಿನ ಪಿನ್ಚ್‌ದ್. ಕುಡೀದು. ದನಂಗಳ ಹೊಡ್ಕೊಂಡ್ ಹೋದು. ಹೋಗಿ ದನಂಗಳ ಮೀಸುದ್ ದನಂಗಳ ಚಾಕರಿ ಮಾಡ್ದು. ಇದ್ ಒಂದ್ ದಿನ ಅರ್ಸುನೊಟ್ಟಿಗೆ ಹೇಳ್ತ್‌ಗಡ. 'ನಿಮ್ಮ ಮಗ ಏನಿಯಾ ದಿನಂದ ದಿನಕ್ಕೆ ಮಡ್ಡಮ್ಮನ ಹಾಂಗೆ ಕಂಡದೆ? ವರ್ಣ ಬದಲಾಗುಟ್ಟ್ ಅದ್ಕೆ? ಬೇರೆಕಡೆ ನೆರೆಕರೆಲಿ ನಿಮ್ಮ ಕುಟುಂಬದವ್ ಊಟಮಿನಿ ಕೊಟ್ಟವೋ ಏನ್? ಆದ್ ಈ ತರ ಹೇಂಗೆ ಆತ್? ಇದ್ ನಾಳೆಗೆ ನಾವಿಗೆ ಕೆಟ್ಟ ಹೆಸರ್ ಏನಾರ್ ಬಾದೊ ಹೇಂಗೆ ಆ್ಣಂತ' ಹೇಳ್ತ್‌ಗಡ. ಅಯ್ಯೋಪ್ಪ ನಿನ್ನ ಕೆಟ್ಟ ಹೆಸರ್ ಎಂತದ್ ನನ್ನ ಮಗಳಿಗೆ ಎಂತ ಕಷ್ಟಂತ ನಂಗೆ ಎಲ್ಲ ಗೊತ್ತ್‌ಂತ ಹೇಳ್ತ್‌ಗಡ. ಹಾಂಗೆ ಇರಿಕಾಕನ ಈ ಕುರ್ದಿ ಮಗ ಕೇಳ್ತ್‌ಗಡ. 'ಅಕ್ಕ ಅಕ್ಕ ದನ ಮೇಪಿಕೆ ನಾನುನ್ ಬರೊಕಾಂತ'ಕೇಳ್ತ್‌ಗಡ. ನೀ ಬರ್ಬಡಪ್ಪ. 'ಮಳೆಗೆ ನನ್ಕಂಡ್ ಈ ಪಣೆ ಕೊಡೆ ಹಿಡ್ಕಂಡ್. ಈ ಚೆಂಡಿಲಿ ಈ ಪಣೆ ಒಲಿಲಿ ನಾವಿಬ್ಬರು ಹೇಂಗೆ ಹೋದು ? ನೀ ಬರ್ಬಡಂತ' ಹೇಳ್ತ್‌ಗಡ. ಅಂದ್ ಅದ್ ಹೊಡ್ಕ್ಯಂಡ್ ಹೋತ್‌ಗಡ. ಹೊಡ್ಕ್ಯಂಡ್ ಹೋಗಿ ಹಸ್ ಮೇದ್ ಆಕನ ಹಸ್‌ಗಳ ಎರಡರ ಕರ್ ಬುಟ್ಟತ್. ಇದ್ ಹಾಲ್ ತಾತ್ ಹಣ್ಣ್ ಕೊಯಿತ್. ಪಿನ್ಚಿತ್ ಕುಡ್ತ್. ಬಾತ್. ಬಂದ್‌ದ್ ಬಾಕನ ಹೇಳ್ತ್‌ಗಡ, 'ಅಕ್ಕ ನಾ ಇಂದ್ ಕಂಡಿತ ಬನ್ನೆಂತ'. ಕಂಡಿತ ಬನ್ನೆಂತ ಹೇಳ್ಕನ ಮಾರನೆ ದಿನ ಹಟಮಾಡಿ ಕರ್ಕೊಂಡ್ ಹೋತ್‌ಗಡ. ಕರ್ಕೊಂಡ್ ಹೋಗಿ ತೋರ್ಸಿತ್. ತೋರ್ಸಿದ್ ಬಂದ್ ಅಯ್ಯೆನೊಟ್ಟಿಗೆ ಹೇಳ್ತ್. ಅಂದ್ ಹಸ್‌ನ ಕರ್ ಬುಟ್ಟತ್ಲೆ ಗಡ. ಇದ್ಕೆ ಹಿಂಗೆ ಅಡ್ಕ ತೋರ್ಸಿತ್. ಇದ್ಕೆಲ್ಲ ಬೊಚ್ಚಿಸಿತ್ ಕರ್ಕಂಡ್‌ಬಾತ್. ಕರ್ಕೊಂಡ್ ಬಂದ್‌ದ್ ದನಗಳ ಎಲ್ಲ ಕೂಡ್ಸಿತ್. ಅವ್ವ ಅಕ್ಕನೊಟ್ಟಿಗೆ ಹೋದರೆ ಯಾರಾರ್ ಸಾಯುವೊ. ಅದೆಂತಾದ್ ಮಾರಾಯಿತಿ ಇದ್ದ ಕಾಡ್ ಗುಡ್ಡೆಲಿ ನೀರಿಲ್ಲೆ. ಅದ್ ಅಲ್ಲಿಂದ ಬಾದ್ ಇಲ್ಲಿ ದನಗಳಿಗೆ ಕೊಡುವ ಅರ್ಕಚಿನ ಕುಡಿಯುದ್. ನಂಗೆನ್ ಹನೀಸ್ ಕೊಟ್ಟತ್. ನಾನ್ ಹಂಞ ಕುದ್ದೊಳೆಂತ ಹೇಳ್ತ್. ಹಾಂಗೆ ಈ ಬಣ್ಣ ಬದಲಾದದ್ದರ ನೋಡಿದ್ ನೆರೆಕರೆಯ ಒಂದ್ ಹೆಂಗಸ್ ಬಾತ್ ಗಡ. 'ಓ ಅಕ್ಕ ನಾ ಇಷ್ಟ್ ದೊಡ್ಡ ಮನೆಸ್ಥನದಲ್ಲಿ ಇದ್ದ್ ನನ್ನ ಮಗಳಿಗೆ ಕಣ್ಣ್ ಇತ್ಲರೆನೂ ರೂಪಕ್ಕೆ ಏನ್ ತೊಂದರೆ ಇಲ್ಲೆ? ಯಾರ್ ತೆಕಂಡ ಹೋವ? ಅರ್ಸುನ ಮಗ. ಎರಡ್ನೆ ಹೆಣ್ಣ್‌ನ ಮಗಂತ ಹೇಳ್ಕನ ಯಾರೂ ತೆಕಂಡ್ ಹೋವೊ. ಇದ್ ಏನ್ ನನ್ನ ಮಗಳಿಗೆ ಯಾವ ತಿಂಡಿ ಕೊಟ್ಟರೆನೂ ಒಳ್ಳೊದೆ ಆದ್ಲೆಂತ' ಹೇಳ್ತ್‌ಗಡ. ಚಿಕ್ಕವ್ವ. 'ಅಯ್ಯೋ ಅಕ್ಕ ನೀವೊಂದ್ ಸಂಗತಿ ಮಾಡಿ. ಅಕ್ಕಿನ ತೊಳಿನಿ. ತೊಳ್ದದ್ ಹಾಲ್‌ಲಿ ಬೇಯಿಸಿನಿ. ಹಾಲ್‌ಲಿ ಬೇಯಿಸ್‌ದ್ ಅದರ ಗಂಜಿನ ನಿಮ್ಮ ಮಗಳಿಗೆ ಕೊಡಿ. ಆ ತೆಲಿನ ನಿಮ್ಮ ಅರ್ಸುನ ಮುಂದೆನ ಹೆಣ್ಣ್‌ನ ಮಗಳಿಗೆ ಕೊಡಿ. ನಿಮ್ಮ ದನ ಮೇಪ್‌ನ ಮಗಳಿಗೆ ಕೊಡಿಂತ' ಹೇಳ್ತ್‌ಗಡ. ನೆರೆಕರೆನ ಹೆಂಗಸ್.

ಇದ್ ಸುಮಾರ್ ಒಂದ್ ಆರ್ ತಿಂಗ ಹಿಂಗೇ ಮಾಡ್ತ್. ಹಿಂಗೆ ಮಾಡಿಕೆ ಆಕನ ಇದ್ ಮತ್ತೂ ಬಣ್ಣ ಬದಲಾತ್. ಹಾಲ್‌ನ ಅಂಶ ಎಲ್ಲಾ ಇದ್ಕೆ ಬಾತಲ್ಲೆ. ಒಳ್ಳೊ ರೂಪದ ಗೂಡೆ ಆತ್.

ಇದ್ ಅಲ್ಲಿಗೆ ಬೊಚ್ಚಿಕಂಡ್ ಬಾತ್. ಬರೇ ಉಗ್ಗೆ ತಿಂದ್ ಅಲ್ಲಿಂದ ಇದ್ ಬಣ್ಣ ಬದಲಾತ್‌ಂತ ರುತ್ತೊಂದ್ ದಿನ ಹಟಮಾಡಿ ಮಗಳ ಕಲ್ಸಿತ್ ಗಡ. ನೀ ಇಂದ್ ಅಕ್ಕ ನೊಟ್ಟಿಗೆ ಹೋಕ್‌ನೆ. ಅದ್ ಒಂದೇ ಹೋದ್ ಅಲ್ಲ. ಈಗ ಪ್ರಾಯಕ್ಕೆ ಬಂದ ಮಗ ಅಲ್ಲ. ಹತ್ತ್ ಹದ್ನಾರ್ ವರ್ಷದ ಗೂಡೆಗಳ ಕಾಡಿಗೆ ಕಳ್ಸದ್ ಒಳ್ಳೊದಲ್ಲ. ನೀ ಹೋಗ್‌ಂತ ಅದ್ ಹಾಂಗೆ ಹೋತ್‌ಗಡ. ಹೋಗಿ ಬಿಸಿಲು ಹೊತ್ತಿಗೆ ಗೋರಟೆ ಕಾಯಿನ ಕೊಯ್ದೊಗಡ. ಅಕ್ಕನ್ ತಂಗೆನ್ ಕರ್ ಬುಟ್ಟು ಕುರ್ದಿ ಮಗಳಿಗೆ ಹಂಞ ಕೊಟ್ಟತ್. ಇದ್ ಹಂಞ ಕುಡ್ದ್ ಬಂದೊ ಗಡ. ಬಂದ್ ಕುರ್ದಿ ಮಗ ಅಯ್ಯೊನೊಟ್ಟಿಗೆ ದೂರ್ ಹೇಳ್ತ್. ಅವ್ವವ್ವ ಅಕ್ಕನ ಸಂಗತಿ ಎಂತದ್ ಗೊತ್ತ್‌ಟ್ಟ್? 'ನಮ್ಮ ಎರಡ್ ಕಬಿಲೆ ಹಸ್‌ಗಳ ಕರ್ ಬುಡ್ದು. ಕರ್ ಬುಡ್ದ್ ಹಾಲ್ ಕುಡಿಯದು. ಅದ್ ಮತ್ತೆ ಬಣ್ಣ ಬದಲಾಗದೆ ಇರ್ದೊ. ನಾವೆಲ್ಲ ಹಾಸಿಗೆಲಿ ಮಲಗಿದ್ ಅದಕ್ಕೆ ಗೋಣಿ ಕೊಡ್ದು. ಅಂದರೂ ಅದ್ ಹೆಂಗುಟ್. ನೀ ಎಂತರ ಹೇಳಿಯವ್ವ. ಅದಕ್ಕೆ ಇನ್ನ್ ಅಂತ ತಿಂಡಿ ಇರ್ಕನ ನಿನ್ನ ಹುಗ್ಗೆ ಬೇಕೊ? ಹುಗ್ಗೆ ಏನೂ ಬೇಡ? ಅದ್ ಬಾಳ ಲೈಕ್ ಅದು. ಅದರ ಅವ್ವನ ಸತ್ತ ದೂಪೆಗಡ. ಅದಕ್ಕೆ ಒಗ್ಗು ಹಾಕೊಕ? ಒಂದೊಂದ್ ಗೋಂಟೆಕಾಯಿ ಬೊಳ್ಳಿಯವ್ವ. ಕೈಕೈ ಬೆರ್ಳಷ್ಟ್ ತೋರ ಉಟ್ಟು. ಆರ್ ಬೊಳ್ಳಿ ಹತ್ತಿಕಂಡಿತ್ತ್‌ಗಡ ಗೋಂಟೆಕಾಯಿದ್.

ಅಕ್ಕ ನಾಳೆ ನೀ ಬಾದ್ ಬೇಡಂತ ಹೇಳ್ತ್ರ ಹೋಕ್ಕ್. ಅದ್ ಗೋಂಟೆಕಾಯಿ ಕೊಯ್ದ್ ತಿರ್ಗಿಕನ ಅದರ ಬೊಳ್ಳಿನ ಬುಡಂದ ಕೊಯ್ದ್ ಬುಡೊಕ್. ಹೋಕನ ಕುಂಞ ಕತ್ತಿ ತಕೊಂಡೊಗ್. ಅಯ್ಯೆ ಕುಂಞ ಕತ್ತಿ ಕೊಟ್ಟತ್. ಹೊಟ್ಟೆನ ಸೆರೆಲಿ ಇಸಿಕಂಡ್ ಗೊತ್ತೇ ಇಲ್ಲದೆ ಹೋತ್. ಇದ್ ಗೋಂಟೆಕಾಯಿನ ಕೊಯ್ದ್‌ದ್ ಹಸ್‌ನ ಕರ್‌ಬುಡಿಕೆ ಹೋಕನ ಈ ಬೊಳ್ಳಿನ ಒಟ್ಟ್ ಕೊಯ್ದುಟು. ಕೊಯ್ದ್ ಇದ್ ಹೋತ್‌ಗಡ. ಹೋಗಿ ಪೊರ್ಲ್‌ಲಿ ಅಂದ್ ಇದ್ಕೆ ಬರಾಬರಿ ಕೊಟ್ಟತ್. ಅದುನ್ ಕುಡ್ತ್. ಕುಡ್ದ್ ದನಂಗಳ ಎಲ್ಲ ಹೊಡ್ಕೊಂಡ್ ಬಂದೊ. ಕಟ್ಟಿಹಾಕಿದೊ. ಮೀಸಿದೊ. ಅದ್ ಚಾಕರಿ ಎಲ್ಲ ಮಾಡ್ತ್. ಅಂದ್ ಇದ್ಕೆ ಒಳ್ಳೊ ಮೊಂದ್ರಿ ಕೊಟ್ಟೊ. ಇಂದನೆ ನಿಯಾಗೋಳ್ ಎಷ್ಟ್ ಇದರ್ಲಿ ಮಲ್ಗುದು. ಇಂದ ಈ ಒಳ್ಳಿ. ಈ ಹಾಸಿಗೆ. ಈ ಮೊಂದ್ರಿಂತ ಕೊಟ್ಟೊ. ಅದ್ ಯಾಕಪ್ಪ ನನ್ನ ಅವ್ವ ಸಾಯಕನ ನನ್ನ ಹಾಸಿಗೆ ಮೊಂದ್ರಿ ಎಲ್ಲ ಹೋಗುಟು. ನಂಗೆ ಇದ್ ಯಾಕೆಂತ ? ನಂಗೆ ಇರ್ಲಿಂತ ಹೇಳ್ತ್‌ಗಡ. ಮಲ್ಗಿದ್ ಮಾರನೆ ದಿನ ದನ ಹೊಡ್ಕೊಂಡ್ ಹೋಕನ ಬಾನೆ ಪೊಯಿಂತ ಹೇಳ್ತ್ರ ಕೂಡ ಬಾತ್ಲೆಗಡ. ಬಾ ಪೋಯಿಂತ ಸುಮಾರ್ ಎಡೆದಾರಿಗೆ ಮುಟ್ಟ ಕರ್ತ್‌ಗಡ. ಕರ್ದರುನೂ ನಾ ಬಾದ್ಲೆ. ನಾ ಬಾದ್ಲೆ. ನಂಗೆ ಮುಳ್ಳ್ ಚಟ್ಟಿದೆ ಬಾದ್ಲೆಂತ ಹೇಳ್ತ್‌ಗಡ. ಹಂಗೆ ಇದ್ ದನಂಗಳ ಹೊಡ್ಕೊಂಡ್ ಹೋತ್‌ಗಡ. ಹೋಗಿ ಸುಮಾರ್ ಹತ್ತ್ ಗಂಟೆ ಹೊತ್ತಿಗೆ ಅಲ್ಲಿಗೆ ಎತ್ತಿದ್ ನೋಡಿಕನ ಈ ಗೋರಟೆಕಾಯಿ ಬೊಳ್ಳಿ ಕುಂಡಾಗುಟು. ಅಲ್ಲಿಂದ ಹರಹರಾಂತ ಹೇಳಿ ಅಯ್ಯೆನ ದೂಪೆಗೆ ಅಡ್ಡ ಬೀತ್‌ಗಡ. ಅಡ್ಡ ಬಿದ್ದಾಕನ ಅಯ್ಯೋ ಇಂಥ ಕಷ್ಟ ನಂಗೆ ದೇವರ್ ಕೊಟ್ಟ್ ಬುಟ್ಟೊ ಅಲ್ಲಂತ ಹೇಳ್ತ್‌ಗಡ. ಆಮೇಲೆ

ಬೊಳ್ಳಿಲಿ ಇದ್ದ ಹಣ್ಣ್‌ನ ಎಲ್ಲ ಕೊಯ್ತ್. ಇದ್ ನಂಗೆ ಮಾಡ್ದ ಗೆತಿಂತ ಗೇಣಮಾಡಿಕನ್ತ್. ಇದೇ ಕುರ್ಡಿ ಮಗಳ್ ಮಾಡ್ದ್. ಮತ್ತೇನಲ್ಲಂತ ಪೊರ್ಲ್ ಕೊಯ್ತ್ ಕುಡ್ತ್ ಬಾತ್. ನನ್ನ ಭಾಗ್ಯವೇ ಹಾಳಾತ್‌ಂತ ಹೇಳ್ತ್ ಬಾತ್ ಗಡ.

ಬಂದದ್ ಮಾರನೆದಿನ ಆ ಹಾಳಾದ ಗೋಂಟೆಕಾಯಿನ ಕೊಯ್ತ್. ಕುಡ್ತ್ ಹಾಂಗೆ ಅದರಂದ ಮಾರ್ನೆದಿನ ಬಾತ್. ದನಗಳ ಚಾಕರಿ ಮಾಡ್ತ್. ಹಸ್‌ಗೆ ಹಾಲ್ ಕರಿಯಕ್ಕೆ ಪಾತ್ರೆ ತಕಂಡೊಗಿ ಮೊಡ್ಪಾಲೆ ಒಡ್ಡಿದ ಕೂಡ್ಲೆ ಹಸ್ ಕರ್‌ಬುಡಿಕೆ ಬುಟ್ಟತ್ ಗಡ. ಹಾಂಗೆ ಕರ್ ಬುಟ್ಟತ್. ವಾಪಾಸ್ ಮಾರನೆ ದಿನನ್ ಹೋತ್ ಅಂದ್‌ಗೆ ಗೋಂಟೆಕಾಯಿ ಮುಗ್ತ್. ಮನೆಗೆ ಬಾತ್ ಗಡ.

ಮನೆಗೆ ಬಾಕನ ಒಬ್ಬ ಒಂದ್ ಊರ್ನ ಅರ್ಸುಗೆ ಒಂದ್ ಮಂಜ ಹುಟ್ಟಿತ್ ಗಡ. ಅಂವ ದಿನಂದ ದಿನಕ್ಕೆ ವರ್ಣ(ಬಣ್ಣ) ಬದಲಾದು. ಅಂವನ ಹೆಣ್ಣ್ ಮೀನ್‌ಕುಮಾರನ ಹೆತ್ತತ್ ಗಡ. ಮೀನ್‌ನ ಆಕಾರ. ಮೀನ್‌ನ ಆಕಾರಲಿ ಹೆತ್ತದರ ಕೆರೆಗೆ ತಂದ್ ಹಾಕಿದೊ. ಹಾಕಿದ್ ಒಂದ್ ಆರ್ ತಿಂಗ ಆಕನ ಅದ್ ಬಲ ಆತ್. ಬಲ ಆಗಿದ್ ಅರ್ಸ ಕೈಕಾಲ್ ತೊಳಿಯಕೆ ಆಕನ ನಂಗೆ ಮೊದ್ವೆ ಮಾಡಿಯನ? ಇಲ್ಲ ನಿನ್ನ ಈಗ ತಿನೊಕ? ಅಂತ ಹೇಳ್ತ್‌ಗಡ. ಹಾಂಗೆ ಊರ್ಲಿದ್ದ ಗೂಡೆಗಳ ಎಲ್ಲ ಈ ಮೀನ್‌ಕುಮಾರಂಗೆ ತಂದ್ ಒಪ್ಪಿಸಿದೊ. ಇಂವನ ಒಂದ್ ಆಸ್ಥಾನ ಉಟ್ಟುಗಡ. ಶಿವ ಕಟ್ಟೆನಾಂಗೆ. ಆ ಕಟ್ಟೆ ಮೇಲೆ ಇವರ ಶೃಂಗಾರ ಮಾಡ್ದು. ಕರ್ಕಂಡೋಗಿ ಕುದ್ರ್‌ಸುದು ಗಡ. ದಾರೆಗೆ ಅಂವ ಬರೊಕಲ್ಲೆ. ಮೊನ್ಸನಾಂಗೆ ಕುದ್ರಿಸಿ ಆಕನ ಇಂವ ಅಡಿಮೇಲ್ ಮೊಕ್ಕೊಂಡ್ ಬಾದು. ಬುಳ್ಕಂತ ಇದರ ಹಾರಿ ನುಂಗುದು. ಹಾಂಗೆ ಮುಗ್ಸಿ ಮುಗ್ಸಿ ಆಕನ ಗೂಡೆಗೆ ಎಲ್ಲ ಮುಗ್ದೊ. ಇಂವ ಹುಡ್‌ಕ್‌ತ್ತಾ ಬಾತ್. ಈ ಅರ್ಸುನೊಟ್ಟಿಗೆ ಬಂದ್ ಕೇಳ್ತ್. ಅವನ ಊರ್ಲಿದ್ದ ಗೂಡೆಗ ಎಲ್ಲ ಮುಗ್ತ್. ಇಂವನ ಊರ್ಲಿಕೇಳ್ತ್. ನಂಗೆ ಹಿಂಗಿಂಗೆ ಒಂದ್ ಗೂಡೆ ಆಕಿತ್ತ್ ಏನ್ ಮಾಡ್ದುಂತ?

ನನ್ನಕ್ಕಲೆ ಒಂದ್ ತೊಬ್ರಿ ಮಗ ಉಟ್ಟು. ಅಯ್ಯೆ ಇಲ್ಲೆ. ನಾ ಅಪ್ಪ ಒಳೆ. ಹಂಗೆ ಮನೆಗೆಲ್ಲ ಬಾತ್. ಈ ಅರ್ಸುನ ಮನೆ ಎಲ್ಲ ನೋಡ್ತ್. ನೋಡಿ ಮುಂದೆನ ಹೆಣ್ಣ್‌ನ ಮಗಳ, ಚಿಕ್ಕಮ್ಮನ ಕುರ್ಡಿ ಮಗಳನೂ ನೋಡ್ತ್. ನೋಡಿ ಅವರೊಟ್ಟಿಗೆ ಊಟ ತಿಂಡಿ ಎಲ್ಲ ಆತ್. ಅಂದ್ ಈ ಗೂಡೆನ ಕರ್ಕಂಡೋಕೆ ಎಲ್ಲ ನಿಘಂಟ್ ಮಾಡಿ ಅಪ್ಪ ಒಪ್ಪಿತ್ (ಮುಂದೆನವು ಅಪ್ಪ ಒಪ್ಪಿದ ಮೇಲೆ ಮತ್ತೆ ಮಕ್ಕ ತಪ್ಪಟ ಇಲ್ಲೆಗಡ) ಹಿಂಗೆ ಇದ್ ಒಂದ್ ಐದ್ ಗಂಟೆಗೆ ಗುಡ್ಡೆಗೆ ದನನ ಹೊಡ್ಕಂಡೋದ ಗೂಡೆ ಬಾತ್. ಬಂದ್‌ದ್ ಬಾಕನ ಕುರ್ಡಿ ಮಗ ಓಡಿ ಬಾತ್‌ಗಡ. ಅಕ್ಕಕ್ಕ ನಿನ್ನ ಇಂದ್ ಹೆಣ್ಣ್ ಮಾತಾಡಿಕೆ ಬಂದೊಳೊ. ನಿನ್ನ ಕೊಡ್ದ್ ಮೀನ್‌ಕುಮಾರಂಗೆ ಗಡ. ಅಂವ ಊರ್ಲಿದ್ದ ಗೂಡೆಗಳ ಎಲ್ಲ ತಿಂದುಟು ಗಡ. ಎಲ್ಲ ತಿಂಬೊದ್ ಗಡ. ಕಟ್ಟೆ ಶೃಂಗಾರ ಮಾಡಿ ಕುದ್ರಿಸಿ ಬೇಕಾದ ತಿಂಡಿ ಎಲ್ಲ ಕೊಡ್ದುಗಡ. ಇದ್ ಬೆಳ್ದ್ ಸೀರೆ ಉಡ್ಸುದು ಗಡ. ಹೂವ್ ಮುಡ್ಸುದ್ ಗಡ. ಹೆಂಗಾರ ಇಸುದು ಗಡ. ಗೂಡೆಗೆ ಮಂಗಳಾರತಿ ಎಲ್ಲ ಮಾಡಿ ಅಲ್ಲಿ

ಕರ್ಕೊಂಡೋಗಿ ಕುದ್ರುಸುದ್ ಗಡ. ಕುದ್ರಿಸಿ ಹರಿವಾಣ ಹಿಡ್ಕಂಡ್ ಕುದ್ರುದುಗಡ. ಮದುವಳಿಗ ಆಣಂತ ಹೇಳ್ತ್. ಹಂಗೆ ಹೇಳಿಕೆ ಆಕನ ಇದ್ ಲಾಯಿಕಾತಳ್ಳೆ. ಇದ್ ಬಜ ಇಲ್ಲೆ ಅಲ್ಲ ಮತ್ತೆ ಇನ್ನೆನು ಮಾಡ್ದು. ಇದ್ ಹಾಂಗೆ ಹೇಳಿದ್ ವಾಪಾಸ್ ಬಾತ್‌ಗಡ. ಬಂದ್‌ದ್ ಈ ಕಬುಳ್ಳಿ ದನಗಳ ಎಲ್ಲ ಮೈ ಮುಟ್ಟಿ ಪೂಜಿದ್ ನಾಳೆಂದ ಮೇಲೆ ನೀವ್ಗೆ ಚಾಕರಿಗೆ ಜನ ಇಲ್ಲೆ ಬಳಂತ ಹೇಳಿ ಎಲ್ಲ ಕೈ ಮುಟ್ಟಿ ಕೂಗ್ತ್‌ಗಡ. ಆಗ ದನಂಗ ಎಲ್ಲ ಎದ್ದ್ ಬೆರೆಬೆರೆಂತ ಹೇಳ್ದೊಗಡ. ಬೆರೆಬೆರೆಂತ ಹೇಳ್ಕನ ಆಕಾಶವಾಣಿ ಹೇಳ್ತ್‌ಗಡ. ನಿನ್ನ ಅಯ್ಯೆನ ದೂಪೆಂದ ಎಡ ಪಾರ್ಶ್ವಲಿ ಈಶಾನ್ಯ ಭಾಗಲಿ ಒಂದ್ ನಾಗರ ಹುತ್ತ ಉಟ್ಟು. ಆ ಹುತ್ತಲಿ ಸರ್ಪ ಉಟ್ಟು. ಆ ಸರ್ಪಕ್ಕೆ ಪ್ರಾಣ ಸಂಕಟ. ನೀ ಹೋಗಿ ಆ ಹುತ್ತನ ಮುರಿಯೊಕ್. ನೀ ಮುಟ್ಟಿರೆ ಆ ಸರ್ಪನ ಬಾಪ್ ಒಡ್ಡದೆಂತ ಹೇಳ್ತ್‌ಗಡ. ಇದೊಂದ್ ಹೌದ್. ದೈವ ಕಾರ್ಯ ಹೌದು ದೇವ್ರೆ ನಂಗೆ ಹೇಳ್ದ್‌ಂತ ಸೀದಾ ಬಾತ್. ಬಂದ್‌ದ್ ಈ ಹುತ್ತನ ಮುರ್ತ್. ಇದ್ ಸಣ್ಣ ಮಕ್ಕ ಅಲ್ಲ. ಹೆದ್ರಿ ಯಾರ್ ಹುತ್ತನ ಹಕ್ಕಲೆ ಹೊದ್‌ಲೆ ಅಲ್ಲ. ಹಂಗೆ ಮೀನ್‌ಕುಮಾರಂದ ಸಾಯುದರಿಂದ ಇದಾದರೂ ಕಚ್ಚಿ ಕೊಲ್ಲುದಾದರ್ ಹಾಂಗೆ ಆದುಂತ ಸೀದಾಬಾತ್. ಬಂದಾಕನ ಇದ್ ಬುಸ್‌ಂತ ಎದ್ದತ್. ಎದ್ದಾಕನ ಹೋಗಿ ಕಚ್ಚಿದರೂ ಕಚ್ಚಲಿಂತ ಅದರಪೂಜಿತ್ ಹೇಳಿ. ಆದರ ಬೇನೆ ಟಪ್ಪ ಒಡ್ತ್‌ಗಡ. ಬೇನೆ ಒಡ್ಡಾಕನ ಅದ್ ಉಷಾರಾಗಿ 'ನೀ ಏನಾಗಿ ಬಂದೆ ಮಗಳೇಂತ' ಕೇಳ್ತ್ ಗಡ. 'ಅಯ್ಯೋ ನಾ ಬಂದ ಕಷ್ಟ ಇಂತದ್. ನನ್ನ ಅಪ್ಪ ಇಂದ್ ಮೀನ್‌ಕುಮಾರಂಗೆ ಕೊಡ್ದು ಗಡ. ಆ ರಾಜ್ಯನ ಊರ್ಲಿದ್ದ ಗೂಡೆಗೆಲ್ಲ ಮುಗ್ದೊಳೊ ಗಡ. ಇನ್ನ್ ನನ್ನ ಅಪ್ಪಂಗೆ ನಾ ತಬ್ರೀಂತ ಹೇಳಿ ನನ್ನ ಕೊಡಿಕೆ ಒಪ್ಪಂದ ಮಾಡ್ಯೊಳ ಗಡ. ಇಂದ್ ಆ ಅರ್ಸು ನನ್ನ ಕರ್ಕಂಡೋಗಿದ್ ಅವಂಗೆ ತಿನ್ಸಿಕನ ಮುಟ್ಟಿ ಇಂವ ಮಾವ. ನನ್ನ ಮಾವ ಬಂದುಟ್. ನಾ ಇನ್ನ್ ಹೋನೆ'. ಹಂಗೆ ನೀ ಆದರೂ ನನ್ನ ಕೊಲ್ಲುವಾಂತ ನಾ ಇಂದ್ ಬಂದದ್'. 'ಅಯ್ಯೋ ಮಗಳೆ ನಿನ್ನ ಕೊಲ್ಲಿಕಿಲ್ಲೆ ಬಳ. ನಿಂಗೆ ನಾ ಮೂರ್ ಕಲ್ಲ್‌ಕೊಟ್ಟನೆ. ಈ ಮೂರ್ ಕಲ್ಲ್‌ನ ನಾ ಮೊಂತ್ರಿಸಿ ಕೊಡ್ದು. ಇದರ ಮೊಟ್ಟೆಲಿ ಲಾಯಿಕ್ ಕಟ್ಟಿಕೊ. ಯಾರಿಗೂ ತೋರ್ಸ್‌ಬೇಡ. ನಿನ್ನ ಶೃಂಗಾರ ಮಾಡಿ ಕರ್ಕಂಡೋಕನ ಅದರ ಲಾಯಿಕ್ ಕಟ್ಟಿಕೊನೊಕ್. ಇಂದ ಕಟ್ಟಿಕೋಂತ ಹೇಳಿ ಅದ್ ಅದಕ್ಕೆ ಮಂತ್ರಾಕ್ಷ ಎಲ್ಲ ಹೇಳಿ' ಕೊಟ್ಟತ್‌ಗಡ.

ಇದ್ ಬಾತ್ ಊಟ ತಿಂಡಿ ಎಲ್ಲ ಆತ್. ಇವರ ದಿಬ್ಬಣಲಿ ಅಪ್ಪನ ಮಗಳ ಎಲ್ಲ ಕರ್ಕಂಡ್ ಹೋತ್ ಅರ್ಸು. ಅಂದ್ ಕತ್ತಲೆಗೆ ಸುಮಾರ್ ಒಂಬತ್ತುವರೆಗೆ ಅದರ ಕರ್ಕಂಡೋಗಿ ಕುದ್ರುಸುದು ಗಡ. ಈ ಬಾಮಿ ಕಟ್ಟೆಲಿ. ಅಲ್ಲಿ ಶೃಂಗಾರ ಆತ್. ಬಣ್ಣ ಬಂಗಾರ ಕೊಡುವ ಮೊದ್ವೆ ಕ್ರಮ ಎಲ್ಲ ಆತ್. ಆಗಿ ತಕಂಡೋಗಿ ಬಾಮಿಕರೆಲಿ ಕುದ್ರ್‌ಸಿದೊ ಗಡ. ಕುದ್ರ್‌ಸಿದ್ ಇವು ಬಂದೊ. ಇವು ದೀಪ ಹೊತ್ತಿಸಿ ಬಾದಲ್ಲ. ಇದ್ ಧೈರ ಮಾಡಿಕನ್ತ್. ಮೀನ್‌ಕುಮಾರ ಮೊಕ್ಕೊಂಡ್ ಬಾತ್. ಬಂದ್ ಮೇಲೆ ಬಾತ್ ಗಡ. ಬಿಚ್ಚಿದ್ ಕಲ್ಲ್ ರಡೀ ಮಾಡಿಕನ್ತ್. ಮೇಲೆ ಬಾಕನ ಒಂದ್ ಕಲ್ಲ್

ಹೊಡ್ತ್‌ಗಡ. ಬುಳ್ಕ ಅಡಿಗೆ ಕಂತಿತ್. ವಾಪಾಸ್ ಮೇಲೆ ಬಾತ್‌ಗಡ. ಒಂದ್ ಕಾಲ್‌ಗಂಟೆ ಕಳಿಯಕನ ಮೇಲೆ ಬಂದ್ ಕಂತಿತ್. ಬಾಕನ ಕೊಟ್ಟತ್. ಅದ್ ಮಂತ್ರ ಅಕ್ಷಯ ಮಾಡ್ದ ಕಲ್ಲಲ್ಲ? ಹೇಂಗೆ ಹೊಡ್ದರೂ ತಾಂಗಿದೆ. ವಾಪಾಸ್ ಕಂತಿತ್‌ಗಡ. ವಾಪಾಸ್ ಕಂತಿ ಮತ್ತೊಂದ್ ಸಲ ಬಾಕನ ಗುರಿ ಇಟ್ಟತ್. ಮೊನ್ಸನ ಆಕಾರಲ್ಲೇ ಬಾತ್‌ಗಡ. ಬುಳುಂಕಂತ ಕಂತಿತ್‌ಗಡ. ಕಂತಿದ್ ಅಲ್ಲಿಂದ ಮೀಂದ್‌ಕೊಂಡೇ ಬಾತ್. ಇವು ಮಾರನೆ ದಿನ ಬೊಳ್ಪಿಗೆ ನೋಡಿಕೆ ಹೋದೊ. ಈ ಮಂಜನ ಮೀನ್‌ಕುಮಾರನ ನೋಡಿಕೆ ಆಕನ ಇವು ಇಬ್ಬರ್ ಕುದ್ದುಕಂಡ್ ಒಳಗಡ. ಅಲ್ಲಿಂದ ಕರ್ಕಂಡ್ ಬಂದೊ. ಕರ್ಕೊಂಡ್ ಬಂದ್ ಅಂವಂಗೆ ಬೇಕಾದ ಧಾರೆಕಾರ್ಯಗಳ ಎಲ್ಲ ಮಾಡ್ದೊ. ಊರಿಗೆ ಎಲ್ಲ ಡಂಗುರ ಕೊಟ್ಟೊ. ಈ ಅರಸನ ಬಾಕೆ ಹೇಳ್ದೊ. ಹೆಣ್ಣ್ ಕೊಟ್ಟವನ. ಅವನ ಬಾರಿ ಶೃಂಗಾರ ಮಾಡಿ ಧಾರೆಕಾರ್ಯವೆಲ್ಲ ಮಾಡಿ ಅಲ್ಲಿಂದ ಧಾರೆ ಎಲ್ಲ ಕಳ್ದ್ ಅವರ ಶೇಷೋಪಚಾರ ಬೇರೆಲ್ಲ ಕಳ್ದ್ ಅರ್ಸಂಗೆ ಹೆಣ್ಣ್ ಕೊಟ್ಟವಂಗೆ ಉಡಿಗಿರೆ ಎಲ್ಲ ಕೊಟ್ಟ್ ಸಂತೋಷಲಿ ಅವ್ ಮೆರ್ಕೊಂಡು ಇದ್ದೊ ಗಡ. ಅಲ್ಲಿಗೆ ಕಥೆ ಮುಗ್ತ್. [ಕಥಾ ನಿರೂಪಕ:ಲಿಂಗಪ್ಪಗೌಡ ಉರುಂಡೆ; ಸ್ಥಳ:ಮನೆ; ಸಮಯ:ರಾತ್ರಿ 7ಗಂಟೆ; ವರ್ಷ–1991]

## 37.ಮಾಂತ್ರಿಕ ಮಾಯಿನ ಹಣ್ಣ್‌ನ ಕತೆ

ಒಂದ್ ಊರ್ಲಿ ಒಂದ್ ಅರ್ಸು. ಆ ಅರ್ಸಂಗೆ ಏಳ್ ಅಬ್ಬೆಗ. ಈ ಏಳ್ ಅಬ್ಬೆಗ ಇದ್ದರ್ ಕೂಡ ಅವ್‌ಕ್ಕೆ ಮಕ್ಕ ಇಲ್ಲೆ. ದಿನ ಅವರಲ್ಲಿಗೆ ಈ ಬೇಡವ್ ಕಾಡವ್‌ಂತ ಬರ್ತಾ ಇದ್ದವೆ. ಬೇಡವ್ ಬಂದರೆ ಭಕ್ತಿ ಇದ್ದದ್ ಕೊಡ್ತಿದ್ದೊ. ಒಂದ್ ದಿನ ಒಂದ್ ಅರ್ಸನ ಹೆಣ್ಣ್ ಹೇಳ್ತ್. ನಾವ್ ಇನ್ನ್ ಬೇಡವ್‌ಕ್ಕೆ ಧರ್ಮ ಕೊಡಟ ಇಲ್ಲೆ. ಧರ್ಮದ ಬಾಗಿಲ್ ಮುಚ್ಚಿಸಿ ಕರ್ಮದ ಬಾಗಿಲ್ ತೆಗ್ದಿಸೊಕ್. ನಾವಿನ್ನ್ ಕೊಡ್ದಿಲ್ಲೆ ಹಂಗೆಂತ ಒಂದ್ ಹೆಣ್ಣ್ ಹೇಳ್ತ್. ಕೆಲವ್ ದಿನಗಳೊಳಗೆ ಒಂದ್ ದಿನ ಒಬ್ಬ ಬೇಡಂವ ಬಾತ್. ಬಂದಾಕನ ಧರ್ಮ ಕೊಡಿಯವ್ವಾಂತ ಹೇಳ್ದೆ. ಧಮ್ಮ ನಾವ್ ಕೊಡಾಟ ಇಲ್ಲೆ. ನಾವ್ ಎಷ್ಟ್ ಧರ್ಮ ಕೊಟ್ಟರ್ ಏನ್. ಆದರೂ ನಾವ್ಗೆ ಸುಖ ಇಲ್ಲೆ. ನಾವ್ ಏಳ್ ಸಂಸಾರಾಂತ ಕಾಂಬಕ್ಕೆ ಇಲ್ಲೆ. ಹಂಗೆ ನಾವ್ ಧರ್ಮ ಕೊಡ್ದ್ ಬುಟ್ಟೊಳೊ. ನಾವ್ ಕರ್ಮದ ಬಾಗಿಲ್ ತೆಗ್ದಿಸಿಯೊಳ. ಧರ್ಮದ ಬಾಗಿಲ್ ಮುಚ್ಚಿಯೊಳ. ಅದ್ ಆಕ್ಕೇ ಇಲ್ಲೆ ನಂಗೆ ಬಂದಲ್ಲಿಗೆ ನೀವ್ ಧರ್ಮ ಕೊಡೊಕ್. ನಿಮ್ಮ ಮನೆಲಿ ಸಂಸಾರ ಆದು ಹಂಗೆಂತ ಹೇಳ್ತ್. ಹಾಂಗೆ ಅವ್ ಧರ್ಮ ಕೊಟ್ಟೊ. ಅಷ್ಟಾಕನ ಅವನ ಜೋಲಿಗೆ ಉಟ್ಟಲ್ಲೆ. ಬೇಡವರ ಜೋಲಿಗೆ ಅದರ್‌ಂದ ಒಂದ್ ಮಾಯಿನ ಹಣ್ಣ್ ತೆಗ್ದ್ ಕೊಟ್ಟತ್. ನೀವ್ ಏಳ್ ಜನ ಹೆಣ್ಣ್‌ಮಕ್ಕ ಈ ಮಾಯಿನ ಹಣ್ಣ್‌ನ ಪಾಲ್ ಮಾಡಿ ತಿನ್ನೊಕ್ ಹಂಗೆಂತ. ಹಂಗೆ ಈ ಮಾಯಿನ ಹಣ್ಣ್‌ನ ಅವ್ ಏಳ್ ಜನನೂ ಪಾಲ್ ಮಾಡಿ ತಿಂದೊ. ಆರ್ ಜನ ತಿಂದೊ. ಒಂದ್ ಲಾಸ್ಟ್ ಅಬ್ಬೆಗೆ ಅವ್ ಈ ಹಣ್ಣ್‌ನ ಕೊಟ್ಟತ್ಲೆ. ಆ ಮಾಯಿನ ಕೊರಂಟ್ ಬಿದ್ದ್ ಎಲ್ಲಿಯೋ ಅದಕ್ಕೆ ಸಿಕ್ಕಿತ್. ಸಿಕ್ಕಿದರ ಹೆರ್ಕಿ ಅದ್ ತೀನ್ತ್.

ಹಂಗೆ ಕೆಲವ್ ಸಮಯ ಕಳ್ದಾಕನ ಅಕೇರಿನ ಹೆಣ್ಣ್ ಬೊಸ್ರಿ ಆತ್. ಬೊಸ್ರಿ ಆಗಿದ್ ಏಳ್ ತಿಂಗಳ ಒಂದ್ ಕ್ರಮ ಉಟ್ಟಲ ಆ ಕ್ರಮಕೆ ಎಲ್ಲ ಕಳ್ಸಿದೊ. ಕಳ್ಸಿ ಎಂಟನೆ ತಿಂಗಳಿಗೆ ಆಕನ ಆ ಅರ್ಸ್‌ಂಗೆ ದಂಡಿಗೆ ಹೋಂವ ದಿನ ಬಾತ್. ದಂಡಿಗೆ ಹೋಂವ ದಿನ ಬಾತ್ ಅರ್ಸ ದಂಡಿಗೆ ಹೋತ್. ಮತ್ತೆ ಅಲ್ಲಿ ಮನೆಲಿ ಇರ್ದ್ ಹೆಂಗಸರೆ. ಅರ್ಸು ಹೋಕೆ ಆಕನ ಹೇಳಿ ಹೋಗುಟು. ನಾ ಚಿನ್ನದ ಹಗ್ಗ ಮತ್ತ್ ಬೆಳ್ಳಿ ಹಗ್ಗ ಎರಡ್ ಬುಟ್ಟ್ ಹೋನೆ. ಹೆಣ್ಣ್ ಕಷ್ಟ ಬಾಕೆ ಆಕನ ಒಂದ್ ತುಂಡ್ ನನ್ನ ಕೈಲಿ. ಒಂದ್ ತುಂಡ್ ನಿಮ್ಮ ಕೈಲಿ. ಹೆಣ್ಣ್ ಸುಖಲಿ ಇರಿಕಾಕನ ಬೆಳ್ಳಿ ಹಗ್ಗನ ಏಳ್ದರೆ ಸಾಕ್. ಹೆಣ್ಣ್ ಕಷ್ಟ ಬಂದಿರಿಕೆ ಆಕನ ಚಿನ್ನದ ಹಗ್ಗ ಎಳಿಯೊಕ್ ಹಾಂಗೆಂತ ಹೇಳಿ ಅರ್ಸು ದಂಡಿಗೆ ಹೋತ್.

ಕೆಲವ್ ದಿನ ಬಾತ್. ಬಂದ್ ಅಕೇರಿನ ಹೆಣ್ಣ್ ಈ ಅಕ್ಕಂದರೊಟ್ಟಿಗೆ ಕೇಳ್ತ್. 'ಅಕ್ಕ ಈ ಊರ್ನ ಹೆರಿಗೆ ಹೇಂಗೆ?' ಹಾಂಗೆಂತ. ಅಷ್ಟಾಕನ ಅವ್ ಹೇಳ್ದೊ. 'ಅರ್ಸರ್ ಇಲ್ಲೆ? ಚಿನ್ನದ ಹಗ್ಗನ ಎಳಿಯೊಕ್ ಅವ್ ಹೇಳಿ ಹೋಗೊಳೊ. ಒಂದ್ ಹೆಣ್ಣ್‌ನೊಟ್ಟಿಗೆ ಚಿನ್ನದ ಹಗ್ಗ ಎಳಿನಿಂತ ಹೇಳಿಕನ ಮತ್ತೊಂದ್ ಹೆಣ್ಣ್ ಹೋಗಿದ್ ಬೆಳ್ಳಿ ಹಗ್ಗ ಎಳ್ತ್. 'ಹಾಂಗೆ ಆದರೆ ನಾ ಮನೆ ಕಡೆ ಹೊದ್ಲೆ. ಅವು ಉಷಾರೊಳ' ಹಂಗೆಂತ ಬಾತ್ಲೆ. ಈ ಬೊಸ್ರಿ ಹೆಣ್ಣ್ ಹೆರ್ಗೆ ಆಕೆ ಆಕನ ಕೇಳ್ತ್. 'ಅರ್ಸು ಬಾತ್ಲೆಯಾ'ಂತ? 'ಬಾವೊ ಚಿನ್ನದ ಹಗ್ಗ ನಾವ್ ಎಳ್ದೊಳೊ. ಬಾರದಿರಿಕಿಲ್ಲೆಂತ' ಬೇರೆ ಹೆಣ್ಣ್‌ಗ ಹೇಳ್ದೊ. ಸ್ವಲ್ಪ ಹೊತ್ತ್‌ಲಿ ಅದ್ಕೆ ಹೆರ್ಗೆನ್ ಆತ್. ಎರಡ್ ಮಕ್ಕ. ಒಂದ್ ಗಂಡ್ ಒಂದ್ ಹೆಣ್ಣ್. ಈ ಮಕ್ಕ ಹುಟ್ಟ್‌ಕನ ಕೂಡ್ಲೆ ಈ ಆರ್ ಜನ ಹೆಣ್ಣ್‌ಗ ಹೆಣ್ಣ್‌ನ ಕಣ್ಣಿಗೆ ಬಟ್ಟೆ ಕಟ್ಟಿ ಆ ಎರಡ್ ಮಕ್ಕಳ ತೊಕೊಂಡ್ ಹೋಗಿದ್ ಗೊಬ್ಬರದ ಗುಡ್ಡೆಲಿ ಹುಗ್ದೊ. ಈ ಹೆರ್ಗೆ ಆದ ಹೆಣ್ಣ್‌ನ ಜಾಗೆಲಿ ಒಂತಿ, ಹಾವ್, ಪೊಲ್ಲಿ, ಕೊಂಬಚೋಳ್ ಎಲ್ಲ ತಂದ್ ಹಾಕಿದೊ. ಅದರ ಕಣ್ಣ್‌ಂದ ಬಟ್ಟೆ ಬಿಚ್ಚಿ ಬುಟ್ಟೊ. ನೋಡ್ ನಿನ್ನ ಮಕ್ಕ ಹಾಂಗೆಂತ. ಅಲ್ಲಿಂದ ಕೂಡ್ಲೆ ಚಿನ್ನದ ತಂತಿ ಎಳ್ದೊ. 'ನಿಮ್ಮ ಹೆಣ್ಣ್‌ಗೆ ಹೆರ್ಗೆ ಆಗುಟು ನೀವ್ ಬನ್ನಿಂತ'. ಅವ್ ಬಂದೊ. ಬಂದಾಕನ 'ನೋಡಿ ನೀವ್ ತಂದ ನಿಮ್ಮ ಕಡೇ ಹೆಣ್ಣ್‌ನ ಮಕ್ಕ' ಹಾಂಗೆಂತ ಆ ಅರ್ಸುನೊಟ್ಟಿಗೆ ಹೇಳ್ದೊ. ಅವುಕ್ಕೆ ನೋಡಿ ತುಂಬ ಬೇಸರ್ ಆತ್. 'ಬೇಡ ನಾಳೆ ದಿನಕ್ಕೆ ಒಂದ್ ಪಾವ್ ಅಕ್ಕಿ ಖರ್ಚಿಗೆ ಕೊಟ್ಟ್ ಅದರ ಕುದ್ರೆ ಲಡ್ಡಿ ಎತ್ತಿಕೆ ಬುಡೊಕ್. ನಮ್ಮ ಮನೆಲಿ ಅದಿನ್ನ್ ಬೇಡ್. ನೀವ್ ಆರೇ ಜನ ಸಾಕ್' ಹಾಗೆಂತ ಹೇಳಿ ಈ ಅರ್ಸು ಹೇಳಿ ಬುಟ್ಟತ್.

ಮಾರನೆ ದಿನಂದಲೇ ದಿನಕ್ಕೆ ಖರ್ಚಿಗೆ ಒಂದ್ ಪಾವ್ ಅಕ್ಕಿ ಕೊಟ್ಟ್‌ದ್ ಈ ಹೆಣ್ಣ್‌ನ ಕುದ್‌ರೆ ಲಡ್ಡಿ ಎತ್ತಿಕೆ ಬುಟ್ಟೊ. ತಲೆ ಕೂದಲೆಲ್ಲ ಮಂಡೆ ಮಾಡಿದ್ ಅದರ ಬುಟ್ಟೊ. ಅದ್ ದಿನಕ್ಕೆ ಒಂದ್ ಪಾವ್‌ನ ಅನ್ನ ಬೇಯಿಸಿ ಕಂಡ್ ಊಟ ಮಾಡಿಕಂಡ್ ಅಲ್ಲೇ ಇತ್ತ್. ಈ ಗೊಬ್ಬರದ ಗುಡ್ಡೆಲಿ ಹುಗ್ಗ್‌ದ್ ಎರಡ್ ಮಕ್ಕೊ ಒಳ ಅಲ್ಲ. ದಿನಾಲ್ ಈ ಬಾಕಿ ಆರ್ ಜನ ಅಬ್ಬೆಗ

ಹಟ್ಟಿಗೆ ಹೋದವೆ. ಕರ್ ಬುಡಿಕೆ ಹೋಗಿದ್ ಕರ್ ಬುಟ್ಟ್ ಚೊಂಬು ತುಂಬ್‌ಕನ ಆ ಹಸ್ ಚೊಂಬ್‌ನ ಮೆಚ್ಚಿ ಇಡ್ದು. ಚೊಂಬ್ ಮೆಟ್ಟಿದ್ ಆಕನ ಹಾಲ್ ಕಂಕನಿ ಆತಲ್ಲ ಅಲ್ಲಿ. ಆ ಹಾಲ್ ಈ ಗೊಬ್ಬರದ ಸೆರೆಗೆ ಹರ್ಕೊಂಡ್ ಹೋದೆ. ಅದ್ ಈ ಮಕ್ಕಳ ಬಾಯಿಗೆ ಹೋಗಿ ಮಕ್ಕಳ್ ದಿನಂದ ದಿನ ದಿನಂದ ದಿನ ದೊಡ್ಡಿತಾದೊ. ಅದ್ ಒಂದ್ ರಾಣಿಗೆ ಕಂಡತ್. ಗೊಬ್ಬರದ ಗುಡ್ಡೆಲಿ ಹುಗ್ದ ಮಕ್ಕ ಈಗ ಗೊಬ್ಬರದ ಗುಡ್ಡೆನ ಮಗ್ಗಿಕಂಡ್ ಬಂದವೆ. ಅವರ ಎಂತ ಮಾಡ್ದು ಹಂಗೆಂತ ಆತ್. ಅದ್ ಹೆಂಗೆ ಅಷ್ಟ್ ದೊಡ್ಡಿತ್ತಾದ್. ಅದ್ ದಿನಾ ನಮ್ಮ ಕಬಿಲೆ ಹಸ್‌ನ ಕರ್‌ನ ಬುಡ್‌ಕನ ಚೊಂಬ್‌ನ ಮೆಟ್ಟಿ ಇಸಿದೆ. ಆ ಚೊಂಬ್‌ನ ಮೆಟ್ಟಿ ಇಸಿಕನ ಹಾಲ್ ಮಕ್ಕಳ ಬಾಯಿಗೆ ಹೋಗಿದ್ ಆ ಮಕ್ಕ ದೊಡ್ಡಿತಾದೊ ಹಾಂಗೆಂತ ಅವ್ ಮಾತಾಡ್ದೊ. ಹಾಂಗೆ ಆದರೆ ಏನ್ ಮಾಡ್ದು. ಹೆಂಗೆ ಆ ಹಸ್‌ನ ಕೊಲ್ಲುದುಂತ ಹೇಳಿ ಈ ಆರ್ ಜನ ಹೆಣ್ಣ್‌ಗಳೂನು ಮಾತಾಡ್ವೆ ಇದರ್ಲಿ ಒಂದ್ ಹೆಣ್ಣ್ ಹೇಳ್ತ್. 'ನಾ ತಲೆಬೇನೆ ತಲೆಬೇನೇಂತ ಹೇಳಿ ಹೊನ್ಕ್‌ತಾ ಇದ್ದನೆ. ಮತ್ತೆ ನೀ ಒಂದ್ ಸೇರ್ ಹಣ ತಕೊಂಡೋಗಿ ವೈದ್ಯ ಗಾರಂಗೆ ಕೊಡೊಕ್. ನಮ್ಮ ಅರ್ಸರ್ ಬಾವೊ. ನಮ್ಮ ಹೆಣ್ಣ್‌ಗೆ ಒಂದಕ್ಕೆ ಸುಖ ಇಲ್ಲೆಂತ ಹೇಳಿದ್ ಇಲ್ಲಿಗೆ ಬಾವೊ. ಬಂದಾಕನ ನೀವ್ ಏನ್ ಹೇಳೊಕ್ ಗೊತ್ತುಟ್ಟ ನಿಮ್ಮ ಹಟ್ಟಿಲಿ ಒಂದ್ ಕಬಿಲೆ ಹಸ್ ಉಟ್ಟ್. ಆ ಹಸ್‌ನ ತಲೆ ಕಡ್ದ್‌ದ್ ರಕ್ತ ತಂದ್‌ದ್ ನಿಮ್ಮ ಹೆಣ್ಣ್‌ನ ಹಣೆಗೆ ಹಾಕಿರೆ ಮಾತ್ರ ಪ್ರಾಣ ಸಿಕ್ಕುದು. ಇಲ್ಲರೆ ಪ್ರಾಣ ಸಿಕ್ಕಿಕಿಲ್ಲೆಂತ? ನೀವ್ ಹೇಳೊಕುಂತ'.

ಹಂಗೆ ಮಾರನೆ ದಿನ ಅದೇ ಕೆಲ್ಸ ಮಾಡ್ದೊ. ಒಂದ್ ಹೆಣ್ಣ್‌ಗೆ ತಲೆಬೇನೆ. ಮತ್ತೊಂದ್ ಹೆಣ್ಣ್ ಅರ್ಸನ ವೈದ್ಯಗಾರನ ಹಕ್ಕಳೆ ಒಂದ್ ಸೇರ್ ಹಣ ಕೊಟ್ಟ್ ಕಳ್ಸಿತ್. ಹೋಗಿ ಹೇಳಿ ಬನ್ನಿಂತ. ಅಲ್ಲಿ ಹೋಗಿ 'ನಮ್ಮ ಹೆಣ್ಣ್‌ಗೆ ಸುಖ ಇಲ್ಲೆಂತ ಹೇಳಿಕೆ ಆಕನ ಆ ಜನ ಏನ್ ಹೇಳ್ತ್. ನಿಮ್ಮ ಹಟ್ಟಿಲಿ ಒಂದ್ ಕಬಿಲೆ ಹಸ್ ಉಟ್ಟು. ಅದರ ತಲೆ ಕಡ್ದ್ ರಕ್ತ ತಂದ್ ಬೊಟ್ಟ್ ಹಾಕಿರೆ ನಿಮ್ಮ ಹೆಣ್ಣ್‌ನ ಪ್ರಾಣ ಸಿಕ್ಕುದು. ಇಲ್ಲರೆ ಪ್ರಾಣ ಹೋದೂ'ಂತ. ಅರ್ಸ ಬಾತ್. ಒಂದ್ ಹೆಣ್ಣ್‌ನೊಟ್ಟಿಗೆ ಹೇಳ್ತ್. 'ನಾಳೆ ನಮ್ಮ ಒಂದ್ ಕಬಿಲೆ ಹಸ್‌ನ ತಲೆ ಕಡಿಯದಿದ್ದರೆ ಆಕಿಲ್ಲೆ ಗಡ. ಅದರ ರಕ್ತನ ತಂದ್ ಹಣೆಗೆ ಬೊಟ್ಟ್ ಹಾಕದಿದ್ದರೆ ನಮ್ಮ ಹೆಣ್ಣ್‌ನ ಪ್ರಾಣಸಿಕ್ಕಿಕಿಲ್ಲೆ'ಂತ. ಅಂದೇ ರಾತ್ರೆ ಆ ಹಸ್‌ಗೆ ಸ್ವಪ್ನ ಬಿದ್ದ್ ಹಸ್ ಹಟ್ಟಿಂದ ಹೊರಟ್ ಹೋತ್. ಹಸ್ ಹೊರಟ್ ಹೊಕನ ಈ ಎರಡ್ ಮಕ್ಕಳ ಕರ್ಕೊಂಡ್ ಆನೆನ ಕಾಲಡಿಲಿ ಬುಟ್ಟ್ 'ಇಷ್ಟರ ವರೆಗೆ ನಾ ಸಾಂಕನ ಮಾಡ್ದೆ. ಇನ್ನ್ ಮೇಲೆ ನೀ ಸಾಂಕನ ಮಾಡೊಕುಂತ' ಹೇಳ್ತ್. ಅದ್ ಗಟ್ಟದ ಕಡೆಗೆ ಹೋತ್ ಹಸ್.

ಕೆಲವ್ ದಿನ ಕಳ್ತ್. ಒಂದ್ ದಿನ ನೋಡಿಕೆ ಆಕನ ಆನೆನ ಕಾಲ ಅಡಿಲಿ ಈ ಮಕ್ಕ ಒಳೊ. ಮತ್ತೊಂದ್ ಹೆಣ್ಣ್ ಹೇಳ್ತ್. 'ಈಗ ಗೊಬ್ಬರ ಗುಡ್ಡೆಂದ ಆನೆನ ಕಾಲಡಿಗೆ ಆ ಮಕ್ಕ ಹೋಗೊಳ. ಮಕ್ಕ ಲಾಯ್ಕ್ ಒಳೊ. ಅವರ ಹೆಂಗೆ ಕೊಲ್ಲುದು. ಆ ಆನೆನ ಇವ್ ಹೇಂಗೊ

ಸಾಂಕಿವೆ. ಆ ಆನೆನ ಕೊಲ್ಲೊಕ್. ಹಾಂಗೆಂತಿದ್ದರೆ ವಾಪಾಸ್ ನಾವ್ ವೈದ್ಯಗಾರನಲ್ಲಿಗೆ ಪೋಯಿ'. ಅಲ್ಲಿಗೆ ಒಂದ್ ಸೇರ್ ಹಣನ ಮತ್ತೊಂದ್ ಹೆಣ್ಣ್ ತಕಂಡೋತ್. ತಕಂಡೋಗಿ 'ನಮ್ಮ ಅರ್ಸರ್ ಬಂದರೆ ನೀವ್ ಹೇಳೊಕ್ ನಿಮ್ಮ ಪಟ್ಟದ ಆನೆನ ತಲೆ ಕಡಿಯೊಕ್. ಅದರ ರಕ್ತನ ತಕಂಡೋಗಿ ನಿಮ್ಮ ಹೆಣ್ಣ್‌ನ ತಲೆಗೆ ಹಾಕಿರೆ ನಿಮ್ಮ ಹೆಣ್ಣ್‌ನ ಪ್ರಾಣ ನೀವ್‌ಗೆ ಸಿಕ್ಕುದು'. ಹಾಂಗೆಂತ ಹೇಳಿ ನೀವ್ ಹೇಳೊಕ್‌ಂತ. ಈ ಒಂದ್ ಸೇರ್ ಹಣನ ವೈದ್ಯಗಾರಂಗೆ ಕೊಟ್ಟ್ ಈ ಹೆಣ್ಣ್ ಬಾತ್. ಮಾರನೆ ದಿನ ಹೆಣ್ಣ್‌ಗೆ ಪುನಾಃ ತಲೆ ಬೇನೆ. ಹೆಣ್ಣ್ ಹೇಳ್ತ್ 'ವೈದ್ಯಗಾರರಲ್ಲಿಗೆ ಹೋಕಾಗಿತ್ತ್. ಏನಾರ್ ತರೋಕಾಗಿತ್ತ್. ನಂಗೆ ಸುಖ ಇಲ್ಲೆ. ತಲೆಬೇನೆಂತ' ಹೇಳ್ತ್. ಆ ಅರ್ಸು ಪುನಾಃ ಅದೇ ವೈದ್ಯಗಾರನ ಹಕ್ಕಲೆ ಹೋದೆ. ಹೋಗಿ ಕೇಳಿಕೆ ಆಕನ ಇದೇ ಮಾತ್‌ನ ಅವ್ ಹೇಳ್ದೊ. 'ನಿಮ್ಮ ಪಟ್ಟದ ಆನೆನ ತಲೆಕಡ್ದ್‌ದ್ ಅದರ ರಕ್ತನ ನಿಮ್ಮ ಹೆಣ್ಣ್‌ನ ಹಣೆಗೆ ಹಾಕದಿದ್ದರೆ ನೀವ್ಗೆ ಪ್ರಾಣ ಸಿಕ್ಕಿಕಿಲ್ಲೆ ಹಾಂಗೆಂತ' ಹೇಳಿ ವೈದ್ಯಗಾರ ಹೇಳ್ತ್. ಅರ್ಸು ಬಂದ್ ಹೇಳ್ತ್ 'ನಾಳೆ ನಮ್ಮ ಪಟ್ಟದ ಆನೆನ ತಲೆ ಕಡಿಯೊದ್. ತಲೆಕಡ್ದ್ ರಕ್ತ ತಂದ್ ಹೆಣ್ಣ್‌ನ ಹಣೆಗೆ ಬೊಟ್ಟ್ ಹಾಕಿರೆ ಮಾತ್ರ ನಮಣ್ಣೆ ಹೆಣ್ಣ್‌ನ ಪ್ರಾಣ ಸಿಕ್ಕುದು. ಅಲ್ಲದಿದ್ದರೆ ಸಿಕ್ಕಿಕಿಲ್ಲೆ'ಂತ. ಆ ದಿನ ಪಟ್ಟದ ಆನೆಗೆ ಸ್ವಪ್ನ ಬಿತ್ತ್. ನಾಳೆ ನನ್ನ ಕೊಂದವೆ. ಈ ಆನೆ ಎರಡ್ ಮಕ್ಕಳ ಕರ್‍ಕೊಂಡೋಗಿದ್ ಗದ್ದೆ ಪುಣಿಲಿ ಕಪ್ಪೆಗಳ ವಾಸಬುಟ್ಟತ್. 'ಇಷ್ಟರ ವರೆಗೆ ನಾ ಸಾಕಣೆ ಮಾಡಿಕಂಡೆ. ಇನ್ನ್ ಈ ಎರಡ್ ಮಕ್ಕಳ ನೀವ್ ಸಾಕಣಿ ಮಾಡೋಕ್‌ಂತ' ಹೇಳಿದ್ ಕಪ್ಪೆಗಳ ವಶ ಕೊಟ್ಟದ್ ಆನೆ ಗಟ್ಟ ಹತ್ತಿದ್ ಹೋತ್.

ಮಾರನೆ ದಿನ ತಲೆ ಕಡಿಯಕೆ ನೋಡಿಕನ ಆನೆ ಉಟ್ಟ. ಆನೆ ಇಲ್ಲೆ. ಹಿಂಗೇ ಮತ್ತೂ ಸಮಯ ಕಳ್ತ್. ಸಮಯ ಕಳ್ದ್ ನೋಡ್ರೆ ಮಕ್ಕ ಗದ್ದೆ ಪುಣಿಲಿ ಆಟ ಆಡ್ತಾ ಒಳೊ. ಪುನಃ ಒಂದ್ ಹೆಣ್ಣ್ ಬಂದ್ ಹೇಳ್ತ್. 'ಮಕ್ಕ ಗದ್ದೆಲಿ ಆಟ ಆಡ್ತಾ ಒಳೊ. ಮಕ್ಕಳಿಗೆ ಏನೂ ಆತ್ಲೆ. ಆನೆನೂ ಇಲ್ಲೆ. ನಮ್ಮ ಕಬಿಲೆ ಹಸುನೂ ಇಲ್ಲೆ. ಮಕ್ಕ ಹುಶಾರ್ ಒಳೊ. ಇನ್ನ್ ನಾಳೆ ನಾಳ್ದ್‌ಲಿ ಇಲ್ಲಿಗೆ ನಡ್ಕಂಡ್ ಬಾವೊ. ಹಾಂಗಾರೆ ಏನ್ ಮಾಡ್ದು? ಯಾರ್ ಸಾಕುದು? ಅಂದರೆ ಕಪ್ಪೆಗ ಈಗ ತಿಂಡಿ ಎಲ್ಲ ಕೊಟ್ಟವೆ. ಹಾಲ್ ಹಣ್ಣ್ ಎಲ್ಲ ಕೊಟ್ಟ್ ಮಕ್ಕಳ ಸಾಕಣೆ ಮಾಡ್ದು' ಹಾಂಗೆಂತ ಹೆಣ್ಣ್‌ಗ ಮಾತಾಡ್ದೊ. ಅದರ್ಲಿ ಮೂರ್ನೆ ಹೆಣ್ಣ್ ಹೇಳ್ತ್ 'ಇಂದ್ ನಾ ಒಂದ್ ಸೇರ್ ಹಣ ತಕಂಡ್ ವೈದ್ಯಗಾರನಲ್ಲಿಗೆ ಹೋಣೆ. ಹೋಗಿದ್ ಆ ವೈದ್ಯಗಾರನೊಟ್ಟಿಗೆ ಹೇಳಿ ಬನ್ನೆ. ನಾಳೆ ನಾ ತಲೆಬೇನೆ ತಲೆ ಬೇನೆಂತ ಮಲಗಿನೆ. ಮತ್ತೆ ನಮ್ಮ ಅರ್ಸರ ನಾವ್ ಕಳ್ಸಕ್ಕಂತ' ಮೂರ್ನೆ ಹೆಣ್ಣ್ ಹೇಳ್ತ್. ಮಾರ್ನೆ ದಿನ ಆ ಹೆಣ್ಣ್ ಒಂದ್ ಸೇರ್ ಹಣ ತಕ್ಕೊಂಡ್ ಅದೇ ವೈದ್ಯಗಾರನಲ್ಲಿಗೆ ಹೋತ್. ಹೋಗಿ 'ನಮ್ಮ ಅರ್ಸರ್ ಬಂದರೆ ನಿಮ್ಮ ಗದ್ದೆಲಿ ಒಂದ್ ಸಾವಿರ ಕಪ್ಪೆಗಳ ಒಳೊ. ಆ ಕಪ್ಪೆಗಳ ಎಲ್ಲ ಕೊಲ್ಲೊಕ್. ಕೊಲ್ಲದಿದ್ದರೆ ಆಕಿಲ್ಲೆ ಅವರ್ದ್ದೀಗ ಉಪದ್ರ ದೋಷ ಅದ್ ಹಾಗೆಂತ ಹೇಳಿ ಹೇಳೊಕ್' ಹಾಗೆಂತ ವೈದ್ಯಗಾರಂಗೆ ಹೇಳ್ತ್. ಮಾರ್ನೆ ದಿನ ಅರ್ಸ ಹೋಕೆ ಆಕನ ವೈದ್ಯಗಾರ

ಇದೇ ಮಾತ್ ಹೇಳ್ತ್. ಅರ್ಸ ಬಂದ್ ಹೇಳ್ತ್. ನಾಳೆ ನಮ್ಮ ಗದ್ದೆಲಿದ್ದ ಕಪ್ಪೆಗಳ ಎಲ್ಲ ಕೊಲ್ಲೊಕ್ ಕೊಲ್ಲದಿದ್ದರೆ ಆಕಿಲ್ಲೆ. ಅವರಿಂದ ಆಗಿ ನಮ್ಮ ಹೆಣ್ಣ್‌ಗ ಹುಷಾರಿಲ್ಲೆ. ಯಾಗೋಳ್ ಹುಷಾರಿಲ್ಲೆಂತ. ಹೆಂಗೆ ಕೊಲ್ಲುದ್? ವಿಷ ಏನಾರ್ ಬುಟ್ಟ್‌ದ್ ಕೊಲ್ಲ್‌ದೂಂತ' ಮಾತಾಡ್ದೊ. ಆ ದಿನ ಕಪ್ಪೆಗಳಿಗೆ ಸ್ವಪ್ನನೂ ಬೀತ್. 'ನಾಳೆ ನಮ್ಮ ಎಲ್ಲ ಕೊಂದವೆ ಇಸುದಿಲ್ಲೆ' ಹಾಗೆಂತ. ಹೇಳಿ ರಾತೂರಾತ್ರೆ ಆಚಾರಿನಲ್ಲಿಗೆ ಹೋಗಿದ್ ಒಂದ್ ಪೆಟ್ಟಿಗೆ ಮಾಡ್ಸಿ ತಕಂಡ್ ಬಂದ್ ಈ ಎರಡ್ ಮಕ್ಕಳ ಆ ಪೆಟ್ಟಿಗೆಲಿ ಮಲಗಿಸಿ ಹಳ್ಳಕ್ಕೆ ಹಾಕಿ ಬುಟ್ರೊ. ಹಳ್ಳಕ್ಕೆ ಹಾಕಿ ದೂಡಿ ಬುಟ್ರೊ. ಎಲ್ಲಿ ಬೇಕರೆ ಹೋಗಲಿ ಹೆಂಗೊ ಆಗಲಿ. 'ನಮ್ಮಂದ ಇನ್ನ್ ಸಾಧ್ಯ ಇಲ್ಲೆ. ನಮ್ಮ ಜೀವನೇ ಇನ್ನ್ ಒಳಿಯುದಿಲ್ಲೆಂತ' ದೂಡಿ ಬುಟ್ರೊ. ಹೀಂಗೆ ಆತ್.

ಈ ಪೆಟ್ಟಿಗೆ ಹೋಗಿ ಹೋಗಿ ಹೋಗಿ ಹಳ್ಳಲಿ ಹೋಗಿ ಒಂದ್ ಕರೇಲಿ ಅಂಡಿ ನಿಂತತ್. ಅಂಡಿ ನಿಂತ್‌ದ್ ಅಲ್ಲಿಗೆ ಯಾಗೋಳ್ ಒಂದ್ ಋಷಿ ಮೀಯಕ್ಕೆ ಬಂದದೆ. ಆ ಋಷಿ ಮೀದ್ ಬಂದ್‌ದಾಕನ ಒಂದ್ ಪೆಟ್ಟಿಗೆ ನಿಂತ್‌ಕಂಡುಟು. 'ಇಷ್ಟ್ ದಿನ ಇಲ್ಲದ ಈ ಪೆಟ್ಟಿಗೆ ನಾ ಯಾಗೋಳ್ ಇಲ್ಲಿ ಬಂದ್ ಮೀದ್ ಹೋತ್ತಿದೆ. ಇಲ್ಲಿ ಪೆಟ್ಟಿಗೆ ಇತ್ತೆ. ಇಂದ್ ಪೆಟ್ಟಿಗೆ ಉಟ್ಟಲ್ಲಂತ' ಹೇಳಿ ಈ ಋಷಿ ಅದರ ತಕನ್ತ್. ತಕಂಡ್ ಮನೆಗೆ ಹೋತ್. ಮನೆಲಿ ಒಡ್ದ್ ನೋಡ್ತ್. ಒಡ್ದ್ ನೋಡ್ರೆ ಒಂದ್ ಹೆಣ್ಣ್ ಒಂದ್ ಗಂಡ್ ಕೂಸ್‌ಗ ಒಳೊ. ಮಕ್ಕಳ ಪೊರ್ಲ್ ಋಷಿ ಸಾಂಕಿತ್. ಸಾಂಕಿ ಸಾಂಕಿ ಸಾಂಕಿ ಶಾಲೆಗೆ ಹೋವ ಪ್ರಾಯ ಬಾತ್. ಶಾಲೆಗೆ ಕಳ್ಸಿ ಬೇಕಾದ ವಿದ್ಯೆ ಬುದ್ಧಿ ಕಲಿಸಿ ಮಕ್ಕ ದೊಡ್ಡವ್ ಆದೊ. ದೊಡ್ಡವ್ ಆದ ಮೇಲೆ ಮಕ್ಕ ಹೇಳ್ವೆ 'ನಾವ್ ಜಾತ್ರೆಗೆ ಹೋದವೆ. ನಾವ್ ಮದ್ವೆಗೆ ಹೋದವೆ. ನಾವ್ ಊರ್ ತಿರ್‌ಗಿಕೆ ಹೋದವೆ' ಹಾಂಗೆಂತ ಎಲ್ಲ ಈ ಋಷಿನೊಟ್ಟಿಗೆ ಹೇಳ್ವೆ . 'ನೀವ್ ಎಲ್ಲಿಗೂ ಬೇಕಾರ್ ಹೋಗಿ ಮಕ್ಕಳೆ? ನಾ ಸಂಸಾರ ಸಾಗರ ಇಲ್ಲದಂವ. ಬೇಕಾದ ಹಣ ಉಟ್ಟು. ತಕಂಡ್ ನೀವ್ ಹೋಗಿ' ಹಾಂಗೆಂತ ಈ ಋಷಿ ಅವರ ಮೊದ್ವೆಗೆ ಜಾತ್ರೆಗೆ ಎಲ್ಲ ಕಳ್ಸಿ ವಾಪಾಸ್ ಮನೆಗೆ ಬಾತಿದ್ದೊ. ಒಂದ್ ದಿನ ಋಷಿನೊಟ್ಟಿಗೆ ಮಕ್ಕ ಕೇಳ್ವೆ 'ನಾವ್ ನಮ್ಮ ಮನೆಗೆ ಹೋದವೆ'ಂತ. 'ನೀವ್ಗೆ ಎಲ್ಲಿ ಮಕ್ಕಳೆ ಮನೆ'? 'ನೀವ್ ಯಾವ ಮನೆಗೆ ಹೋದು'? 'ನೀವ್ಗೆ ಮನೆ ಎಲ್ಲಿಂತ ಹೇಳಿ ಗೊತ್ತುಟ'? 'ನೀವ್ ಪೆಟ್ಟಿಗೆ ಒಳಗಿದ್ದ ಮಕ್ಕ. ನಿಮ್ಮ ತೊಟ್ಟಿಲ್‌ಲಿ ಹಾಕಿ ನಾ ಇಷ್ಟ್ ದೊಡ್ಡಿತ್ ಮಾಡಿದ್ ನೀವ್ಗೆ ಎಲ್ಲಿ ಮನೆ ಹೇಳಿ'? 'ಅಲ್ಲ ನಾವ್ ಎಲ್ಲೂ ಹೋದವೆ'. 'ಎಲ್ಲಾದರೂ ಹೋಗಿ ನೀವ್ ಬೊದ್ಕ್‌ವರಿಯಾ'? 'ನಿಮ್ಮ ಒಂದ್ ವರ ಸಿಕ್ಕಿರೆ ನಾವ್ ಬೊದ್ಕ್‌ವೊ. ನೀವ್ ಒಂದ್ ವರ ಕೊಡೊಕು'. ಆತ್ ನೀವ್ ಹೋಗಿಂತ ಹೇಳಿ ಮಾರನೆ ದಿನ ಒಂದ್ ಪೆಟ್ಟಿಗೆ ಹಣವ್, ಒಂದ್ ಕಂಬ್ಳಿ, ಒಂದ್ ಕೋಲ್ ಕೊಟ್ಟ್ ಅವರ ಕಳ್ಸಿದೊ. ಋಷಿ ಕಳ್ಸಿ ಹೊರ್ಟ್ ಹೋಕೆ ಆಕನ ಹೇಳೊಕ್ 'ನನ್ನ ಈ ಋಷಿನ ಮನೆ ಹೊತ್ತಿ ಬಸ್ಮ ಆಗಲಿಂತ ಹೇಳಿ ಹೊಕ್ಕ್ ಮಕ್ಕಳೆ. ನಂಗೆಬೇಡ ಹಂಗೆಂತ' ಹೇಳಿ ಈ ಋಷಿ ಮಕ್ಕಳೊಟ್ಟಿಗೆ ಹೇಳ್ತ್. ಈ ಮಕ್ಕಳ್ ಒಂದ್ ಪೆಟ್ಟಿಗೆ ಹಣವೂ ಒಂದ್ ಕಂಬ್ಳಿ, ಒಂದ್ ಕೋಲ್ ಈ

ಮೂರರ ತಕಂಡ್ ಅಂಗಳಕ್ಕಿಳ್ದ್ ಹೇಳ್ದೊ. 'ನಮ್ಮ ಋಷಿನ ಮನೆ ಹೊತ್ತಿ ಬಸ್ಮ ಆಕ್ಕು. ನಾವ್ ಹೋದವೆ' ಹಾಂಗೆಂತ ಹೇಳಿ ಮಕ್ಕ ಹೋದೊ.

ಹೋಗಿ ಹೋಗಿ ಹೋಗಿ ಹೋಗಿ ಒಂದಾನೊಂದ್ ಊರಿಗೆ ಎತ್ತಿಕನ ಕತ್ತಲೆ ಆತ್. ಒಂದ್ ಅಡ್ಕ. ಏನ್ ಮಾಡ್ದು ಇನ್ನ್? ಇಲ್ಲೆ ಮಲ್ಗೊಂಬಂತ ಹೇಳ್ದೊ. ಆ ಕಂಬ್ಳಿನ ಹಾಸಿದೊ ಮಲ್ಗಿದೊ. ಊಟ ಮಾಡಿಕೆ ಅವರ ಹಕ್ಕಲೆ ಏನೂ ಇಲ್ಲೆ. ಮಲ್ಗಿದ್ ರಾತ್ರಿ ಎಚ್ಚರಾಗಿ ನೋಡ್ರೆ ಕಂಬ್ಳಿ ಹಾಸಿದ ಮಕ್ಕ ಒಂದ್ ಒಳ್ಳೆ ಅರಮನೆಲಿ ಒಳೊ. ಎಲ್ಲಿ ಕಣ್ಣ್ ಬುಟ್ಟರ್ ಪೂರಾ ಫಳ ಫಳ ಚಿನ್ನವೇ. ಅಂತಾ ಅರಮನೆ ಆಗುಟು. ಬೊಳ್ಪಾತ್. ನೋಡ್ರೆ ದನಗ ಕರ್ದವೆ. ಮನೆ ಸುತ್ತ ಜನ ಬಂದವೆ. ನಾಯಿ ಒಂದ್ ಕಡೆ ಉಟ್ಟು. ಇದ್ ಏನ್ ಹಾಂಗೆಂತ ಇವ್ ಹೋಗಿ ಹೋಗಿ ಎತ್ತಿದ್ ಈ ಅರ್ಸನ ಮನೆ ಬಾಗಿಲ್‌ಗೆ ಎತ್ತಿದೊ. ಅರ್ಸ ಅಪ್ಪ ಅಲ್ಲ. ಮುಂದೆ ಅವನ ಮನೆ ಬಾಗಿಲಿಗೆ ಎತ್ತಿದ್ ಆ ಅರ್ಸು ಎದ್ದ್‌ದ್ ನೋಡಿಕನ ತುಂಬ ಪ್ರಕಾಶ ಹೊಡ್ದದೆ. ಬಿಸಿಲಿನಾಂಗೆ. ಇದೇನಪ್ಪ ಇಷ್ಟ್ ಪ್ರಕಾಶ ಇಂದ್ ಹಾಂಗೆಂತ ಹೇಳಿ ನೋಡ್ರೆ ದೊಡ್ಡ ಒಂದ್ ಅರಮನೆ ಆಗುಟು. ನಿನ್ನೆ ಕತ್ತಲೆಗೆ ಮುಟ್ಟ ಯಾವುದೊಂದ್ ಇತ್ಲೆ? ಇಂದ್ ಒಂದ್ ಅರಮನೆ ಆಗಿ ಎದ್ದುಟಲೆ ? ಇದ್ ಯಾರ್ದ್‌ಂತ ಅರ್ಸು ಸೀದಾ ನೋಡಿಕೆ ಬಾತ್. ನೋಡಿಕೆ ಬಂದರೂ ಅರ್ಸಂಗೆ ಮನೆ ಹತ್ತಿಕೆ ಧೈರ್ಯ ಬಾದ್ಲೆ. ಮಾತಾಡಿಕೆ ಮತ್ತೂ ಧೈರ ಬಾದ್ಲೆ. ನೋಡಿ ಸೀದ ಹೋತ್. ಹೋಗಿದ್ ಮನೆಲಿದ್ದ ಕೆಲ್ಸದವರ ಮಕ್ಕಳ ಕಲ್ಸಿತ್. 'ನೀವ್ ಹೋಗಿ ಮಕ್ಕಳೆ. ಅವರೊಟ್ಟಿಗೆ ಮಾತಾಡಿ. ಒಂದ್ ಗಂಡ್ ಒಂದ್ ಹೆಣ್ಣ್ ಎರಡ್ ಮಕ್ಕ ಅಲ್ಲಿ ಒಳೊ. ಅವರೊಟ್ಟಿಗೆ ನೀವ್ ಮಾತಾಡಿ. ನಿಮ್ಮ ಊರ್ ಯಾವ್‌ದ್? ನಿಮ್ಮ ಸಮಚಾರ ಏನ್? ಹಂಗೆಲ್ಲ ಮಾತಾಡಿಂತ'. ಅವ್ ಈ ಗೂಡೆನೊಟ್ಟಿಗೆಲ್ಲ ಮಾತಾಡ್ದೊ. 'ನೀವ್ ಯಾಕೆ ಬಂದದ್? ನೀವ್ ಎಲ್ಲಿನವು? ನಿಮ್ಮ ಸಮಚಾರ ಏನ್?' ಹಾಂಗೆಂತ ಎಲ್ಲ. ನಾವ್ ನಿನ್ನೆ ಬಂದದ್. ಆಗ ಮನೆ ಮಾಡ್ದ್. ಹಾಂಗೆಂತ ಆ ಗೂಡೆ ಹೇಳ್ತ್. ಅಲ್ಲಿಂದ ಅದ್ ಪುನಾ ಮನೆಗೆ ಹೋತ್. ಪುನ ಮನೆಗೆ ಹೋಗಿದ್ ಪುನ ಅಲ್ಲಿ ಅದೇ ಮಾತ್ ಹೇಳ್ತ್. ಮಾರನೆ ದಿನ ಮತ್ತೊಂದ್ ಹೆಂಗ್ಸ್‌ಬಾತ್. ಬಂದ್ ಕೇಳ್ತ್ ನಿಮ್ಮ ಸಮಚಾರ ಏನ್ ? ನೀವ್ ಯಾಗ ಬಂದದ್? ಎಲ್ಲಿ ನಿಮ್ಮ ಮನೆಂತ ಎಲ್ಲಾ ಕೇಳ್ದೆ. ಕೇಳಿದ್ ಆಕನ 'ನಾವ್ ಇಲ್ಲಿ ಒಂದ್ ಮನೆಮಾಡಿ ಕುದ್ದದ್'ಂತ. ಆಗ ಆ ಹುಡುಗ ಯಾರ್? ಅಂವ ನನ್ನ ಅಣ್ಣ. ಆಗ ನೀವ್ ಇಬ್ಬರೇ ಇದ್ದೊ? ನಾವ್ ಇಬ್ಬರೇ ಇದ್ದು. ಅಣ್ಣ ಎಲ್ಲಿಗೆ ಹೋಗೊಳೊ? ಅಣ್ಣ ಶಿಕಾರಿಗೆ ಹೋಗೊಳೊ. ನೀ ಅಣ್ಣನೊಟ್ಟಿಗೆ ಮದುವೆ ಆಕ್ಕೆ ಹೇಳೊಕ್. ಆಗ ನಿಂಗೆ ಅತ್ತಿಗೆಗೆ ಎಲ್ಲ ಒಟ್ಟಿಗೆ ಇರೊಕ್. ನಿನ್ನ ಒಬ್ಬೆನೇ ಬುಟ್ಟ್ ಹೋದಲ್ಲ ಅಣ್ಣ ಹಾಗೆಂತ' ಹೇಳಿ ಕೊಟ್ಟತ್. ಆತ್ ನಾ ಹೇಳ್ನೆಂತ ಹೇಳ್ತ್. ಅಣ್ಣ ಬಾಕನ ಇದ್ ಹೇಳ್ತ್. 'ಆಚೆ ಮನೆಂದ ಬಂದಿದ್ದೊ ಯಾರೊ. ಆ ಬಂದವರ್ ನನ್ನೊಟ್ಟಿಗೆ ಎಲ್ಲ ಹೇಳ್ದೊಂತ ಹೇಳಿಕಾಕನ ಅವ್ ಹಿಂಗೆ ಹೇಳ್ದೊ. ನೀ ಅಣ್ಣನೊಟ್ಟಿಗೆ ಒಬ್ಬನೇ ಇರ್ದು ಸರಿಯಲ್ಲ. ಮತ್ತೆ

ಅತ್ತಿಗೆಗೂ ನಿಂಗೂ ಇರಿಕೆ ಒಳ್ಳೊದ್‌ಂತ ಆಚೆ ಮನೆಯವು ಹೇಳ್ದೊಂತ'. ಆದುಂತ ಅಂವ ಒಪ್ಪಿಕನ್ತ್.
ಮಾರನೆ ದಿನ ಮತ್ತೊಂದ್ ಹೆಂಗ್‌ಸ್ ಬಾತ್. ಬಾಕೆ ಆಕನ ಈ ಹುಡುಗ ಇಲ್ಲೆ. ಇಂವ ಶಿಕಾರಿಗೆ ಹೋಗುಟು. ಬಂದ್ ಹೇಳ್ತ್ 'ಅಣ್ಣ ಎಲ್ಲಿಗೆ ಹೋಗುಟು'ಂತ. 'ಅಣ್ಣ ಶಿಕಾರಿಗೆ ಹೋಗುಟು'. 'ಮತ್ತೆ ಮರ್ದಾಳ ಗುಡ್ಡೆಗೆ ಹೋಗಿದ್. ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಹೇಳಿ ಕದ್ದರೆ ಅಲ್ಲಿ ಹೆಣ್ಣ್ ಬಂದದೆ. ಪೊರ್ಲೂನ ಸುಂದರಿ ಗೂಡೆ. ಅದರ ಕರಂಡ್ ಬರೊಕ್. ನೀವ್ ಹಿಂಗೆ ಇರ್ದು ಸರಿಯಲ್ಲಂತ' ಆ ಹೆಂಗ್ಸ್ ಹೇಳಿ ಹೋತ್. ಇದ್ ಕತ್ತಲೆ ಆಕನ ಅಣ್ಣ ಬಂದ ಕೂಡ್ಲೆ ಈ ಗೂಡೆ ಎಲ್ಲ ಹೇಳ್ತ್. 'ಮರ್ದಾಳ ಗುಡ್ಡೆಗೆ ಹೋಗಿ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಕರ್ದರೆ ಹೆಣ್ಣ್ ಬಂದದೆ ಗಡ. ಅದರ ಕರ್ಕಂಡ್ ಬರೊಕಡ. ಪೊರ್ಲ್ನ ಹೆಣ್ಣ್‌ಗಡ. ಅವ್ ಹೇಳ್ದೊ'. ಆತ್‌ಂತ ಮಾರನೆ ದಿನ ಅಣ್ಣ ಹೊರಟ್ ಹೋತ್. ಹೋಗಿ 'ಮರ್ದಾಳ ಗುಡ್ಡೆಲಿ ನಿಂತ್ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ' ಕರ್ದರೆ ಅಲ್ಲಿ ಇರ್ದ್ ಯಾರ್ ಸೂರ್ಯ ದೇವರ ಮಗ. ಅದ್ ಮೀಯಕೆ ಬಾದು. ಮೀಯಕೆ ಬಾಕೆ ಆಕನ ಅದಕ್ಕೆ ಪಾರಕ್ಕೆ ಒಂದ್ ಜನ ಇದ್ದದೆ. ಆ ಜನಕ್ಕೆ ಫಿರಂಗಿ ಹಾಕಿರೂ ಕೇಳದಂವ. ಈ ಜನ ಹೋಗಿ 'ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತೇಲಿ' ಕರ್ದದ್ ಅಂವಂಗೆ ಕೇಳ್ತ್. 'ಅಕ್ಕ ಯಾರೋ ನಿಮ್ಮ ಕರ್ದವೆಂತ' ಹೇಳ್ತ್. ಎಲ್ಲಿ? ಎಲ್ಲಿಯೋ ದೂರಂದ ಕರಿಯೊದ್ ಕೇಳ್ದೆ'. 'ಹಾಂಗೆ ಆದರೆ ನೀ ಈಗ ಹೊಂಕನೊಕ್ ಹೊಂಕನ್ ನೋಡ? ಹ್ನುಂತ ಹೊಂಕನತ್. ಬಾಂತ ಹೇಳ್ತ್. ನೀ ಬಾಂತ ಹೇಳ್ತ್. ಸೀದ ಇಂವ ಅಲ್ಲಿಗೆ ಹೋತ್.

ಅಲ್ಲಿಗೆ ಹೋಗಿ ನೋಡ್ರೆ ಸೂರ್ಯ ದೇವರ ಮಗ. ಮತ್ತೆ ಅದಕ್ಕೆ ಪಾರಕ್ಕೆ ಇದ್ದ ಜನ. ಇವು ಇಬ್ಬರೇ ಒಳದ್. ಅವ್ ಕೇಳ್ದೊ 'ನೀ ಯಾಕೆ ಬಂದದ್? ಎಲ್ಲಿಂದ ಹೊರ್ಟದ್?' ಅಲ್ಲ ನನ್ನೊಟ್ಟಿಗೆ ಹೇಳ್ದೊ 'ಮರ್ದಾಳ ಗುಡ್ಡೆಗೆ ಹೋಗಿ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಕರ್ದರೆ ಹೆಣ್ಣ್ ಬಂದದೆ. ಮತ್ತೆ ಪೊರ್ಲ್ನ ಗೂಡೆ. ಅದರ ನೀ ಮರಿಯದೆ ತರೊಕ್‌ಂತ'. 'ನನ್ನ ಇಲ್ಲಿಗೆ ಕಳಿಸಿದ್ ಹಾಂಗೆ ನಾ ಇಲ್ಲಿಗೆ ಬಂದದ್'ಂತ. 'ಹಾಂಗೆಂತಿದ್ದರೆ ನನ್ನೊಟ್ಟಿಗೆ ನಿಂಗೆ ಬಾಕೆ ಆದೊ?''ನಾ ಸೂರ್ಯ ದೇವರ ಮಗ. ನಾ ನೂಲ್ ಕೆಳಗೆ ಬುಟ್ಟ್‌ಕಂಡ್ ಮೇಲೆ ಹೋನೆ. ನನ್ನ ಒಟ್ಟಿಗೆ ನೀ ಹತ್ತಿಕಂಡ್ ಬರೊಕ್. ನೂಲ್ ಮೊಡ್ಚಿಕಂಡೇ ಬರೊಕ್. ನೂಲ್ ಬುಟ್ಟ್ ಕೊಂಡ್ ಬಾಕೆ ಬೊತ್ತ್. ನೀ ಮೊಡ್ಚಿಕಂಡ್ ನನ್ನೊಟ್ಟಿಗೆ ಬಾವೊನಂತ' ಕೇಳ್ತ್. 'ನಾ ಬಾವೆಂತ' ಹೇಳ್ತ್ ಹಾಂಗೆ ಅದ್ ನೂಲ್ ಬುಟ್ಟ್‌ಕಂಡ್ ಹತ್ತಿತ್. ಇಂವಂಗೆ ನೂಲ್ ಮೊಡ್ಸಿಕೆ ಆತ್ಲೆ. ಇಂವ ನೂಲ್ ಮೊಡ್ಸದೆ ಹತ್ತಿಕಂಡ್ ಹೋತ್. ಹೋಗಿ ಆಕನ ಪುನಃ ಕಳ್ಸಿತ್. ನೀ ನೂಲ್ ಮೊಡ್ಸಿಕೆ ಆತ್ಲೆ ಇಂವ ಕೆಳಗೆ ಅಡಿಂದ ಬಂದ್ ನೂಲ್ ಮೊಡ್ಚಿಕಂಡ್ ಹೋಕನ ಇಂವ ಅರ್ಧಂದ ಬಿದ್ದ್ ಪೊಡಿ ಪೊಡಿ ಮೊಡಿಯಾತ್. ಪುನಃ ಅದ್ ಬಾತ್. ಬಂದ್‌ದ್ ಆ ಮೊಡಿಯಾದರ ಪೂರ ಸೇರ್ಸಿದ್

ಅವಂಗೆ ಜೀವಕೂಡ್ಸಿ ಮುಂದೆನಂತೆ ಮಾಡ್ತ್. ಮುಂದೆನಂತೆ ಮಾಡಿದ್ ಪುನಃ 'ನಾ ನೂಲ್ ಬುಟ್ಟ್‌ಕಂಡ್ ಹೋನೆ ನೀ ಬಾಂತ' ಹೇಳಿ ಪುನಃ ಹೋತ್. ಇಂವ ಹಿಂದಕ್ಕೆ ಆ ನೂಲ್‌ಲೇ ಹೋತ್. ಹೋಗಿ ಹೋಗಿ ಸೂರ್ಯ ದೇವರ ಮನೆಗೆ ಎತ್ತಿತ್. ಅಲ್ಲಿಗೆ ಎತ್ತಿ ಆಕನ ಸೂರ್ಯದೇವರ್ ಕೇಳ್ದೊ. 'ಇದ್ ಯಾರ್? ನೀ ಯಾಕಾಗಿ ಬಂದಂವ ಇಲ್ಲಿಗೆ? ಇಷ್ಟರವರೆಗೆ ನರಮೊನ್ಸಂತೇಲಿ ನಮ್ಮಲ್ಲಿಗೆ ಬಂದವ್ ಇಲ್ಲೆ? ನಿನ್ಯಾಕೆ ಬಂದದ್‌ಂತ?' ಆಗ ಹೇಳ್ತ್ 'ನಂಗೆ ಮೊದ್ವೆ ಆಕ್ಕ್. ಹಂಗೆ ನಾ ಹೆಣ್ಣ್ ಹುಡ್ಕಿಕಂಡ್ ಬಂದದ್. ಬಂದ್ ಮರ್ದಾಳ ಗುಡ್ಡೆಲಿ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಕರಿಂತ ಹೆಂಗ್ಸ್ ನನ್ನ ಕಳ್ಸಿದ್‌ಂತ. ನಾ ಹಾಂಗೆ ಬಂದೆ. ಬಂದ್ ಆಕನ ಇವ್ ಅಲ್ಲಿದ್ದೊ. ಅವರೊಟ್ಟಿಗೆ ನಾ ಬಂದೆ. ಆತ್‌ಂತ ಹೇಳ್ದೊ'. ಅಂದೇ ಸೂರ್ಯದೇವರ್ ಇವರ ಧರ್ಮ ಧಾರೆ ಮಾಡಿದೆ. ಇವರ ನೂಲ್‌ಲಿ ಕೆಳಗೆ ಇಳ್‌ಸಿದ್ ಬುಟ್ಟೊ. ನೀವ್ ನಿಮ್ಮ ಮನೆಗೆ ಹೋಗಿಂತ.

ಅದೇ ದಿನ ಅವು ಬಂದ್ ಇವರ ಅರಮನೆಗೆ ಸೇರ್‍ದೊ. ಸೇರಿ ಅವು ಹಿಂಗೆ ಅವರ ಮನೆಲಿ ಪೊರ್ಲ್‌ಲಿ ಇದ್ದೊ. ಒಂದ್ ದಿನ ಈ ಹೆಣ್ಣ್‌ಗ ಬಂದ್ ಏನ್ ಹೇಳಿದೊ ಗೊತ್ತುಟ 'ನೀವು ಹಿಂಗೆಲ್ಲ ಇರ್‍ದು ಸರಿಯಲ್ಲ. ನೀವು ಎಲ್ಲವರ ಕರಿಸ್ಸಿ ಒಂದ್ ಸಮ್ರಾಜನ ಎಲ್ಲ ಮಾಡೊಕ್. ನೀವು ಹಿಂಗೆಲ್ಲ ಬಂದ್ ನಮ್ಮ ಮನೆ ಬಾಗಿಲ್‌ಲಿ ಬಂದ್ ಬಿದ್ದರೆ ಏನ್ ಸುಖ ? ನೀವು ಸಮ್ರಾಜನೆನ ಮಾಡೊಕ್'. ಹಾಂಗೆಂತ 'ಸಮ್ರಾಜನೆ ಮಾಡಿಕೆಲ್ಲ ನಾವ್ಗೆ ಗೊತ್ತುಟ ? ನಾವ್ ಸಮ್ರಾಜನೆಗೆ ನಿಮ್ಮ ಕರ್‍ಸಿಕನ ನೀವು ಬನ್ನಿ'. 'ನೀವು ನಾವ್ಗೆ ಏನೂ ಹೇಳೊಕ್‌ಂತ ಇಲ್ಲೆ' ಹಾಗೆಂತ ಹೇಳ್ದೊ. ಮತ್ತೆ ಕೆಲವ್ ದಿನ ಕಳ್ದ್ ಸಮ್ರಾಜನೆ ತಯಾರ್‍ಸಿದೊ. ಇಡೀ ಊರಿಗೆ ಓಲೆ ಕೊಡುವವ್ಕೆ ಓಲೆ, ಬಾಯಿ ಮಾತಿನವ್ಕೆ ಬಾಯಿ ಮಾತ್‌ಲಿ ಹೇಳಿ ಜನಗಳ ಎಲ್ಲ ಕರ್‍ಸಿ ಬೇಕಾದ ಅನ್ನ ಅಡಿಗೆ ಎಲ್ಲ ತಯಾರ್‍ಸಿ ಸಭೆ ಸೇರಿಕಂಡ್ ಇರ್‌ಕನ ಈ ಅರ್‍ಸರಿಗೆ ಗೊತ್ತುಟ. ಈ ಅರ್‍ಸರ ಕೆಲ್ಸದವ್ಕೆ ಗೊತ್ತುಟ. ನೀವು ಎಲ್ಲವು ಆ ಮನೆಂದ ಬರೊಕ್ ಯಾರೂ ಬಾಕಿ ಆಕ್ಕೆ ಬೊತ್ತ್‌ಂತ'. ಎಲ್ಲವರ ಮನೆಗೆ ರ್‍ದ್ದ್ ಏಳ್ ಸೀರೆನ ಹಿಂಗೆ ಅಡ್ಡ ತೆರೆಕಟ್ಟಿತ್. ತಂಗೆನೂ ಇಬ್ಬರೂ ನಿಂತೊ. ಏಳ್ ಸೀರೆನ ಆಚೆ ಪಕ್ಕ ಈ ಆರ್ ಜನ ಹೆಣ್ಮಕ್ಕಳ ನಿಲ್ಸಿತ್. ಆ ಅರ್‍ಸನ ಕಡೆ ಈ ಆರ್ ಜನ ಹೆಣ್ಣ್ ಮಕ್ಕ ಂತ್‌ದ್ 'ಇನ್ನೊಂದ್ ಹೆಣ್ಣ್ ಆಕಲ್ಲ? ನಿಮ್ಮಲ್ಲಿಂದಂತ ಹೈದ ಕೇಳ್ತ್. 'ಆ ಕುದ್ರೆ ಲಡ್ಡಿ ಎತ್ತುವ ಾಕಿ ಒಂದ್ ಉಟ್ಟಲ್ಲ'ಂತ. 'ಅದ್ ಬಾತೆ ? 'ಅದ್ ಏಕೆ ಬಾತ್ಲೆ'? 'ಅದ್ ಮನೆಲಿ ಉಟ್ಟು'. ಇಲ್ಲೆ. ಅದ್ ಕೂಡ ಬರೊಕ್' ಹಾಗೆಂತ ಅದರ ಕರ್‍ಸಿದೊ. 'ಈಗಲೇ ಅದ್ ಬರೊಕ್'ಂತ. ದ್ ಸಹ ಬಾತ್. ಅದ್ ಬಂದ್ ಈ ಏಳ್ ಸೀರೆಗಳ ಆಚೆ ಪಕ್ಕ ಈ ಆರ್ ಹೆಣ್ಣ್‌ಗಳೊಟ್ಟಗೆ ಸೇರ್‍ಸಿ ವರ ಸಾಲಿಗೆ ನಿಲ್ಸಿದೊ. ಆಗ ಅಲ್ಲಿ ಏಳ್ ಹೆಣ್ಣ್ ಮಕ್ಕ ಆದ ಅಲ್ಲ. ಈ ಎರಡ್ ಮಕ್ಕ ಈಚೆ. ಲ್ಲಿಂದ ಈ ಕುದುರೆ ಲಡ್ಡಿ ಎತ್ತುವ ಹಂಗ್ಸ್ ಉಟ್ಟಲ್ಲ ಅದರ ಮೇಲೆ ಹಾಲ್ ಹಿರ್‍ದ್ದ್ ಆ ಎರಡ್

ಮಕ್ಕಳ ಬಾಯಿಗೆ ಅದ್ ಹೋಗಿ ಸೇರ್ದ್. ಮೂರ್ ಮೂರ್ ಸರ್ತಿ ಮೊಲೆಹಾಲ್ ಹಿರ್‍ದ್ದ್ ಆ ಮಕ್ಕಳ ಬಾಯಿಗೆ ಹೋದೆ. ಹೋಗಿ ಆಕನ ಅಕೇರಿಗೆ ಕೇಳ್ತ್ ಇಂವ ಅರ್‍ಸನೊಟ್ಟಿಗೆ 'ಇದ್ ಏನ್ ಹಿಂಗೆ ಆದೆ ? ಈ ಏಳ್ ಸೀರೆ ದಾಟಿದ್ ಅದರ ಮೊಲೆಹಾಲ್ ಈ ಮಕ್ಕಳ ಬಾಯಿಗೆ ಸೇರೋಕಾದರೆ ಇದ್ ಏನ್ ಕಾರಣ? ನಿಂಗೆ ಗೊತ್ತ್‌ಟ್ಟ್‌ಂತ?''ನಂಗೆ ಗೊತ್ತ್‌ಲ್ಲೆ?' ಆರ್ ಹೆಣ್ಣ್ ಮಕ್ಕಳ ನೀರಿಲ್ಲದಲ್ಲಿ ತಲೆಕಡ್ಡವೆ. ಈ ಕುದ್‌ರೆ ಲಡ್ಡಿ ಎತ್ತಿಕೊಂಡಿದ್ದ ಹೆಣ್ಣ್‌ನು ಈ ಎರಡ್ ಮಕ್ಕೊ ಆ ಅರ್‍ಸು ಪೊರ್‍ಲ್ಲಿ ಒಳೊ. [ಕಥಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 38.ಅಕ್ಕಂದಿರು ಮೋಸ ಮಾಡ್ರು ಹಸ್ ಸಹಾಯ ಮಾಡ್ದ ಕತೆ

ಒಂದು ತಮ್ಮನೂ ಮೂರು ಜನ ಅಕ್ಕಂದರು. ಅಂವಂಗೆ ಪ್ರೀತಿಲಿ ಮೊದ್ವೆ ಆತ್. ಮೊದ್ವೆ ಆಗಿದ್ ಮನೆಗೆ ಎತ್ತಿಕನ ದಂಡೊಡ್ಡಿತ್. ದಂಡೊಡ್ಡಿಕನ ಅಪ್ಪನೂ ಇಲ್ಲೆ ಅಯ್ಯೆನೂ ಇಲ್ಲೆ. ಅಕ್ಕಂದರು ಮಾತ್ರ ಒಳದ್. ಹೆಣ್ಣ್‌ನೊಟ್ಟಿಗೆ ಹೇಳ್ತ್ 'ನಿಂಗೆ ಸೌಖ್ಯ ಇಲ್ಲದಾಕನ ನಾ ಒಂದು ನೂಲು ಬುಟ್ಟು ಹೊನೆ. ನೀ ಅದರ ಆಡ್ಸಿಬುಡು ನಾ ಬಾವೆಂತ' ಹೇಳ್ತ್. ಹೇಳಿ ಹೋಕನ ಅಕ್ಕಂದರ್ ಬೆಳವುಲಿ ನೂಲು ಆಡ್ಸಿದೊ. 'ಅಯ್ಯೋ ನನ್ನ ಹೆಣ್ಣಿಗೆ ಸೌಖ್ಯ ಇಲ್ಲೆಂತ' ಓಡಿಬಾತ್. ಓಡಿ ಬಂದಾಕನ ಇದ್ ಉಷಾರುಟ್ಟು. 'ಯಾಕೆ ಹಿಂಗೆ ಮಾಡ್ದ. ನಾ ಅಡ್ಸಿಲ್ಲೆ ಅತ್ತಿಗೆಕ್ಕ. ಅಯ್ಯೋ ಹಿಂಗೆ ಮಾಡ್ತಲ್ಲಂತ ಬಯ್ಕೊಂಡು ಹೋತ್. ನಾ ಹೇಂಗಾರು ಇನ್ನ್ ಬಾಕಿಲ್ಲೆಂತ' ಹೇಳ್ತ್. ಇಂವ ಹೋಕನ ಹೇಳಿ ಹೋಗುಟ್ಟು 'ಪೊರ್‍ಲ್ಲನ ಹೂವು ಮುಡ್ಸಿ ಬೊಸ್ರಿಗೆ ಮೊದ್ವೆ ಮಾಡೊಕು. ಸೀರೆ ತೆಗಿಯೊಕು. ಬೇಕಷ್ಟು ಗಮ್ಮಸ್ತು ಮಾಡಿ ನಂಗೆಲ್ಲ ಹೇಳೊಕುಂತ'. ಹಾಂಗೆ ಇವು ಏನ್ ಮಾಡ್ದೊ. ಅಡ್ಕಂದಿಷ್ಟು ಹೂವು ತಂದೊ. ದಿಕ್ಕಂಗಳ ಬಟ್ಟೆ ತಂದೊ. ಇಂತದೆಲ್ಲ ಮಾ[illegible] ಒಂದು ಹೂವು ಮುಡ್ಸದೊ ಮೊದ್ವೆನಂಗೆ ಮಾಡಿ ಇದ್ದೊ.

ಇದ್ದ್‌ದಾಕನ ಹಾಂಗೇ ಇತ್ತ್. ಒಂಬತ್ತ್ ತಿಂಗಳ್‌ಲಿ ಅದಕ್ಕೆ ಬೇನೆ ಬಾತ್. ಒಂಬತ್ ತಿಂಗ ಒಂಬತ್ತ್‌ದಿನ. ಅಷ್ಟೊತ್ತಿಗೆ ಇದ್ ಕೇಳ್ತ್. 'ಹೌದೊತ್ತಿಗೆ ನಿಮ್ಮ ಊರ್‍ಲಿ ಹೆರ್‍ದು ಹೇಂಗೆಂತ ಕೇಳ್ತ್. 'ಅಯ್ಯೊ ನಮ್ಮ ಊರ್‍ಲಿ ಹೆರ್‍ದೊ. ಸೊಂಟಕೆ ಒರ್‍ಲು ಕಟ್ಟೊಕು ಕಣ್ಣಿಗೆ ಮಸರಿ ಕಟ್ಟೊಕು ಮತ್ತೆ ಅಟ್ಟಕೊಮ್ಮೆ ಅಡಿಗೊಮ್ಮೆ ಹಾರೊಕೂಂತ' ಹೇಳ್ತ್. ಅಯ್ಯೋ ಇದ್ ಹಾಂಗೆ ಮಾಡ[illegible] ಮಾಡಿದಾಕನ ಇದ್ ಒಂದು ಅರ್‍ಸನಂತ ಮಂಜನ ಹೆತ್ತ್‌ತ್. ಒಳ್ಳೆ ಕೂಸುನ ಹೆತ್ತತ್. ಹೆತ್ತ್[illegible] ಈ ಕೂಸುನ ಏನ್ ಮಾಡ್ರೂ ಇವ್ಕೆ ಮೊನ್ಸ್ ಬಾತ್ಲೆ. ಅದರ ತಕೊಂಡೋಗಿದ್ ಒಂದು ಗೊಬ್ಬರ[illegible] ಗುಂಡಿಲಿ ಹಾಕಿದೊ ಹಟ್ಟಿಲಿ ಹುಗ್ದೊ.

ಆ ಹಟ್ಟಿಲಿ ಕರುಬುಡಿಕೆ ಒಂದು ಕಬುಲ್ತಿ ಹಸು. ಚೊಂಬುಲಿ ಹಾಲ್ ತುಂಬ ಆಕನ ಮೆಟ್ಟಿ ಕಂಕ

ಾಕುದು. ಮಟ್ಟಿ ಕಂಕನಿ ಹಾಕಿಕನ ಈ ಕೂಸುನ ಬಾಯಿಗೆ ಪೂರ ಹಾಲ್ ಬೀತ್. ಹಾಲ್ ಿದ್ದ್‌ದಾಕನ ಕೂಸು ಒಳ್ಳೊ ಉಷಾರಾತ್. ಕೂಸು ಉಷಾರಾಕನ ಇವ್ಕೆ ಗೊತ್ತಾತ್. 'ಏ ಕೂಸು ಉಷಾರಾಗುಟ್ಟುಂತ ಹೇಳಿ ಏನು ಮಾಡ್ದುಂತ' ಹೇಳ್ದೊ. ಎರಡ್ನೆ ರಸಬಾಳೆ ಗುಂಡಿಲಿ ಹುಗ್ದೊ. ಅದ್ ಒಂದು ದೊಡ್ಡ ಗೊನೆ ಆಗುಟ್ಟು. ಆ ಬಾಳೆ ದಿನಾಲು ಈ ಕೂಸಿಗೆ ಒಂದೊಂದು ಹಣ್ಣ್ ಂಬಕೆ ಕೊಡ್ದು. ಅದ್ ಅಲ್ಲೆ ಇದ್ದ್ ಇದ್ದ್ ಕೂಸು ಅತ್ತ ಇತ್ತ ಬಾತಿತ್ತ್. ಅಷ್ಟೊತ್ತಾಕನ ಏನ್ ಮಾಡ್ತ್ ಇನ್ನ್ ಇಲ್ಲಿ ಆದ್ಲೆಂತ ಒಂದು ದೊಡ್ಡ ಪೆಟ್ಟಿಗೆ ಕಟ್ಸಿದೊ. ಪೆಟ್ಟಿಗೆ ಕಟ್ಟಿ ಆ ಪೆಟ್ಟಿಗೆ ಳಗೆ ಹಾಕಿ ಏಳು ಸಂದ್ರಕೆ ತಕೊಂಡೋಗಿ ಬುಟ್ಟೊ. ಕೂಸುನ ಬುಟ್ಟ್‌ದ್ ತಮ್ಮಂಗೆ ನೂಲು ಆಡ್ಸಿದೊ. ನೂಲು ಆಡ್ಸಿಕನ ತಮ್ಮ ಬಾತ್. 'ಓ ನನ್ನ ಹೆಣ್ಣ್ ಹೆತ್ತತ್'. ಬಾಕನ ಏನ್ ಹೇಳ್ದೊ ಇಂದ ನಿನ್ನ ಹೆಣ್ಣ್ ಹೆತ್ತದ್ ನೋಡ್'. ಪಲ್ಲಿ ಪರಂಟು ಇಸಿಯೊಳ ಅದ್ಕೆ. ಅದರ ತೋರ್ಸಿದೊ. ಅಂವಂಗೆ ಸುಮ್ಮಂಗೆ ಆತ್. ಎಂತದ ಮಾಡ್ದು. ಅಂವ ತಂದ್ ಹಟ್ಟಿಲಿ ಬೈಪನೆಲಿ ಮಾಡ್ತ್ ಗಂಡ ಬಂದ್‌ದ್. ಅಲ್ಲೆ ಇತ್ತ್ ಅದ್. ಇದ್ದ್ ದನಗಳಿಗೆ ಹುಲ್ಲ್ ತಂದ್ ಹಿಡ್ಕಂಡ್ ಅಲ್ಲಿ ಕೊಟ್ಟದರ ಉಂಡುಕೊಂಡ್ ಅಲ್ಲೆ ಇತ್ತ್. ಗಂಡನು ಮಾತಾಡಿಕಿಲ್ಲೆ.

ಹಾಂಗೆ ಇದ್ದ್ ಇದ್ದ್‌ದಾಕನ ಈ ಕೂಸು ಸಂದ್ರಕೆ ಹಾಕಿದಲ್ಲ. ಒಂದು ಮುನಿ ಹನ್ನೆರಡ್ ಹನ್ನೆರಡ್ ಇಪ್ಪನಾಲ್ಕ್ ವರ್ಷ ಆಗುಟ್ಟು. ಅಂವ ಮುನಿತನಕ್ಕೆ ಕುದ್ದ್‌ದ್ ಸಂದ್ರಲಿ. ಅಂವಂಗೆ ಅಲ್ಲಿ ಹೋಗಿದ್ ಈ ಪೆಟಿಗೆ ಅಂವನ ತಲೆಂಗೆ ತಾಂಗಿತ್. ತಲೆಂಗೆ ತಾಂಗಿಕನ ಇಷ್ಟ್ ದಿನ ನಂಗೆ ಏನೂಂತ ಮುಟ್ಟದ್ ಇಂದೆಂತದಪ್ಪ ಅವಲಕ್ಷಣ ಆದ್ದಂತ ಎದ್ದ್ ನೋಡ್ಕನ ಪೆಟ್ಟಿಗೆ. ಅದರ ತೆಗ್ದ್ ಪೊಯ್ಯೆಗೆ ಹಾಕಿತ್. ಪೊಯ್ಯೆಗೆ ಹಾಕಿದ್ ಅಂವನ ಮನೆಗೆ ತಾತ್. ತಂದ್ ನೋಡ್ಕನ ಒಂದು ಕೂಸ್ ಉಟ್ಟು. ಇದ್ ಕೂಸು ಮರ್ಪದೆಲ್ಲಂತ ಹೇಳ್ತ್ ನೋಡ್ತ್. ನೋಡ್ಕನ ಕೂಸಲ್ಲ ಹಂಗೆ ಅವು ಅಜ್ಜನೂ ಪಿಳ್ಳಿನೂ ಹಾಂಗೇ ಇದ್ದೊ ಅವು. ಇದ್ದ್ ಇದ್ದ್ ಆಕನ ಇಂವಂಗೆ ಗರು ಗುರೆಲ್ಲ ಸುದ್ದಿ ಸಿಕ್ಕಿತ್. ಹೀಂಗಿಂಗೆ 'ನಿಂಗೆ ಒಂದು ಪೆಟ್ಟಿಗೆ ಸಿಕ್ಕಿಟು ಗಡ ನಿಂಗೆ. ಅದರ್ಲಿ ಒಂದು ಕೂಸಿತ್ತ್‌ಂತ'. ಆಗ ಇನ್ನ್ ಹಾಂಗೆಲ್ಲ ಇನ್ನ್ ಒಂದು ಸಮರ್ದನೆ ಮಾಡೊಕು ನಾವ್ಗೆಂತ ಹೇಳಿ. ಎಲ್ಲ ಊರವ್ಕೆ ಹೇಳೊಕುಂತ ಹೇಳಿ ಇಂವ ಒಂದು ಸಮರ್ದನೆ ಮಾಡ್ತ್. ಊರವ್ಕೆ ಎಲ್ಲ ಕಾಗದ ಕೊಟ್ಟತ್. ಬಾಯಲ್ಲಿ ಹೇಳ್ವವ್ಕೆ ಬಾಯ್ಲಿ ಹೇಳ್ತ್. ಹೇಳಿ ಅವ್ಕೆನೂ ಕಾಗದ ಕೊಟ್ಟೊ. ಈ ಮುನಿಗೆನೂ. ಮುನಿ ಏನ್ ಮಾಡಿಟು ? ಅಜ್ಜಿನು ಪಿಳ್ಳಿನೂ ಬಂದೊಳ. ಬಂದ್‌ದ್ ಅವು ಒಂದು ಕರೇಲಿ ಒಳೊ. ಇವು ಕರೇಲಿ ಇರಿಕನ ಜನ ಬಂದವೆಲ್ಲ ಊಟ ಅದ್ ಇದ್ ಎಲ್ಲ ಆದೆ. ಮುತ್ತೆ ಈ ಮೂರು ಅಕ್ಕಂದರನು ಇಂವನ ಹೆಣ್ಣುನೂ ಮೀಸಿದ್ ನಿಲ್ಸಿದೊ. ಸಾಲಿಗೆ ಈ ಕೂಸಿನ ತಕೊಂಡೋಗಿದ್ ಎದ್‌ರಿಗೆ ನಿಲ್ಲಿಸಿ ಅವರ ಮೊಲೆನ ಹಾಲ್ ಹಿಂಡಿದೊ. ಈ ಹಾಲ್ ಹೋಗಿದ್ ಈ ಕೂಸ್‌ನ ಬಾಯಿಗೆ ಬೀತ್. ಅಯ್ಯೆದ್ ಅಕ್ಕಂದರ್ದ್ ತಲೆ ಕಡ್ದದ್ ಸುಖಲಿ ಒಳೊ. [ಕಥಾ ನಿರೂಪಕಿ:ಕುಸುಮಾವತಿ ಮೂಲೆಮನೆ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 39.ಚೆದ್ರೆಂಗಿ ಹೆಣ್ಣ್ ಕತೆ ಪಠ್ಯ 1

ಒಂದ್ ಊರ್ಲಿ ಒಂದ್ ಅರ್ಸು. ಆ ಅರ್ಸಂಗೆ ನಾಲ್ಕ್ ಗಂಡ್ ಮಕ್ಕ. ಈ ನಾಲ್ಕ್ ಗಂಡ್ ಮಕ್ಕಳ ಶಾಲೆಗೆ ಕಳ್ಸಿತ್. ಶಾಲೆಗೆ ಕಳ್ಸಿ ಬೇಕಾದ ವಿದ್ಯೆ ಕಲಿಸಿ ನಾಲ್ಕ್ ಮಕ್ಕಳ್ ಮನೆಲೇ ಇದ್ದೊ. ಮನೆಲೇ ಇದ್ದ್, ಒಂದ್ ದಿನ ಅರ್ಸ ಕೇಳ್ತ್. 'ಈ ನಾಲ್ಕ್ ಮಕ್ಕಳಿಗೂ ಒಟ್ಟಿಗೆ ಮೊದ್ವೆ ಮಾಡೊಕ್ ಹಾಂಗೆಂತ' ಅರ್ಸ ಹೇಳ್ತ್. ಅಷ್ಟಾಕನ ಈ ಮೂರ್ ಜನ ಮಕ್ಕ ಒಪ್ಪಿದೊ. ಲಾಸ್ಟ್‌ನ ಮಂಜ ಒಪ್ಪಿತ್ಲೆ. 'ಅಣ್ಣಂದರೆಲ್ಲ ಮೊದ್ವೆ ಆಗಲಿ. ನಾ ಸಣ್ಣಂವ ನಾ ಲಾಸ್ಟ್‌ಗೆ ಮೊದ್ವೆ ಆಂವೆಂತ' ಹೇಳ್ತ್. ಈ ಮೂರ್ ಜನ ಅಣ್ಣಂದರಿಗೆ ಅರ್ಸ ಮೊದ್ವೆ ಮಾಡ್ತ್. ಮೊದ್ವೆ ಮಾಡಿ ಅವ್ ಮನೆಲೇ ಇದ್ದೊ.

ಈ ಅರ್ಸ ಬೇರೊಂದ್ ಊರಿಗೆ ರಾಜ್ಯ ಆಳಿಕೆ ಹೋತ್. ಮನೆಲಿ ನಾಲ್ಕ್ ಮಂಜಂದರೂ ಮೂರ್ ಸೊಸೆಯಂದಿರೂ ಹೆಣ್ಣುನೂ ಇದ್ದೊ. ಈ ಲಾಸ್ಟ್‌ನ ಮಂಜ ಯಾಗೋಳ್ ಹಳ್ಳಕ್ಕೆ ಹೋದು. ಹಳ್ಳಕ್ಕೆ ಬೆಳಿಗ್ಗೆ ಹೋದರೆ ಕತ್ತಲೆಗೆ ಬಾದು. ಇಂವ ಅಲ್ಲಿ ಬೆಳಗ್ಗೆಂದ ಕತ್ತಲೆವರೆಗೆ ಹಳ್ಳದ ಕರೆಲಿ ಯಾರೆಲ್ಲ ಹೋದವೆ, ಯಾರೆಲ್ಲ ಬಂದವೆ ಅವರೆಲ್ಲರ ಮೀಸುದ್. ಮೀಸಿದ್ ಬಟ್ಟೆ ಒಗಿವಂವರ ಬಟ್ಟೆ ಒಗಿದು. ಇನ್ನ್ ದಿಕ್ಕಂತ ಇಲ್ಲೆ? ಮಡಿವಾಳಂತ ಇಲ್ಲೆ? ಯಾರ್‌ಂತ ಇಲ್ಲೆ? ಎಲ್ಲಾ ಮೀಸಿದ್ ಒಂದ್ ದಿನ ಮಡಿವಾಳನ ಮೀಸಿತ್. ಮೀಸಿದಾಕನ ಮಡಿವಾಳಂಗೆ ನಾಚಿಕೆ ಆತ್. 'ಅರ್ಸರ ಮಂಜ. ನನ್ನ ಇಂದ್ ಮೀಸಿ ಬುಟ್ಟ್‌ದ್ ಹಾಂಗೆಂತ' ಹೇಳಿ ಆ ಮಡಿವಾಳ ಸೀದ ಬಂದ್ ಅಣ್ಣಂದರೊಟ್ಟಿಗೆ ಹೇಳ್ತ್. 'ಅರ್ಸರೆ ನಿಮ್ಮ ತಮ್ಮ ಇಂದ್ ನನ್ನ ಹಳ್ಳಲಿ ಮೀಸಿಯೊಳೊ. ಅದ್ ನೀವ್ಗೆ ಬಾರಿ ಅವಮಾನ ಆದೆ ನಂಗೆ ಬಾರಿ ಬೇಜಾರ ಆತ್. ನಾ ಹಂಗೆ ನಿಮ್ಮೊಟ್ಟಿಗೆ ಬಂದ್ ಹೇಳ್ದ್'. 'ಹೌದೊ ಹಾಂಗಾದರೆ ಇಂವನ ಮಾತ್ ಸುಳ್ಳೊ ಸತ್ಯವೊ ನೋಡೊಕ್' ಹಾಂಗೆಂತ ಹೇಳಿದ್ ಈ ಮಡಿವಾಳನ ಕೋಣೆಗೆ ಹಾಕಿ ಬುಟ್ಟ್‌ದ್ ಅವ್ ಈ ಮೂರ್ ಜನ ಅಣ್ಣಂದರ್ ಹಳ್ಳಕ್ಕೆ ಹೋದೊ.

ಹಳ್ಳಕೆ ಹೋಕೆ ಆಕನ ತಮ್ಮ ಒಂದ್ ದಿಕ್ಕನ ಮೀಸಿದೆ. 'ಮಡಿವಾಳಂದ್ ಸರಿಯಾದ ಮಾತ್ ಹೌದ್' ಹಾಂಗೆಂತ ಹೇಳಿ ಮನೆಗೆ ಬಂದೊ. ಈ ಮಡಿವಾಳನ ಕೋಣೆಂದ ಬುಟ್ಟ್ ಅಂವಂಗೆ ಊಟ ಎಲ್ಲ ಕೊಟ್ಟ್ ಅಂವನ ಕಳ್ಸಿದೊ. 'ನೀ ಹೋಗಪ್ಪ ನಿನ್ನ ಮನೆಗೆ' ಹಾಂಗೆಂತ. ಈ ತಮ್ಮ ಕತ್ತಲೆಗೆ ಮನೆಗೆ ಬಾತ್. ಮಾರನೆ ದಿನ ಬೆಳಿಗ್ಗೆ ಈ ಅಣ್ಣಂದ್‌ರ್ ಕಾಡಿಗೆ ಕರ್‍ಕೊಂಡ್ ಹೋದೊ. 'ನಾವ್ ತಮ್ಮನ ಕಾಡಿಗೆ ಕರ್‍ಕೊಂಡ್ ಹೋಕನ ಅಂವಂಗೆ ಈ ಕೆಲ್ಸ ಮರ್‍ತೋದೆ. ಹಳ್ಳಲಿ ಹೋಗಿ ನಿಲ್ಲುದು, ಬಂದವರ ಮೀಸುದು ಎಲ್ಲ ಮರ್‍ತ್ ಹೋದೆ'. ಇಂದೊಂದ್ ಕೆಲ್ಸಂತ ಕರ್‍ಕೊಂಡ್ ಹೋದೊ. ಕಾಡಿಗೆ ಕರ್‍ಕೊಂಡ್ ಹೋಗಿ ಎಲ್ಲೆಲ್ಲಿ ತಿರ್ಗಿರೂ ಅಂವ ಹೊತ್ತ್ ನೋಡ್ತಾ ಇರ್‍ದು. 'ನನ್ನ ಹೊತ್ತ್ ಆಕನ ನಾ ಹೋಗಿ ಬುಟ್ಟನೆ'ಂತ. ಇಂವ ಹೊತ್ತ್ ನೋಡಿ ನೋಡಿದ್ ಅಂವನ ಹೊತ್ತಾಕನ ಇವರ ಬುಟ್ಟ್ ಬಾತ್. ಗುಡ್ಡೆಂದ ಬಂದ್ ಇಂವ ಹಳ್ಳಕೆ ಹೋತ್ ಮೀಸಿಕೆ. ಇವ

ಇಂವ ಹೋತಲ್ಲ ಇನ್ನ್ ಕಾಡ್ ಏಕೆ ತಿರ್ಗುದು'ಂತ ಹೇಳಿದ್ ಬಂದೊ.

ಬಾಕನ ಒಂದ್ ಕುಂಬ್ ಮರದ ಅಡಿಲಿ ಒಂದ್ ಕಂದಡಿ ಹಾವ್ ಮಲ್ಕೊಂಡ್‌ಟ್ಟು. ಅದರ ಹೊಡ್ದು ಮಾಸ ಮಾಡಿ ತೆಕಂಡ್ ಬಂದೊ. ತೆಕಂಡ್ ಬಂದ್ ಅವ್ವನ ಕೈಲಿ ಕೊಟ್ಟೊ. ಅವ್ವ ಇದರ ಬೇಗ ಗೈಪು ಮಾಡೊಕ್. ಮಧ್ಯಾಹ್ನ ತಮ್ಮ ಊಟಕ್ಕೆ ಬಾದು. ಈ ಅವ್ವ ಅದಕ್ಕೆ ಬೇಕಾದ ಸಾಂಬ್ರಾಣೆ ಎಲ್ಲ ಕಡ್ಡ್ ಬೇಗ ಬೇಗ ಗೈಪ್ ಮಾಡ್ದೊ. ಗೈಪ್ ಎಲ್ಲ ಮಾಡಿ ಆಕನ ತಮ್ಮನೂ ಬಾತ್. ಹಳ್ಳಕೆ ಹೋದಂವ. 'ಅವ್ವ ಊಟಕ್ಕೆ ಆತ'. 'ಊಟಕ್ಕೆ ಆತ್'. 'ಎಂತ ಗೈಪ್ ಅವ್ವ'. ಗೈಪ್ ಅಣ್ಣಂದಿರೇನೊ ಒಂದ್ ಪುಂಡಿ ಮಾಂಸ ತಂದ್ ಕೊಟ್ಟೊಳೊ. ಅದೇ ಗೈಪ್' ಹಾಗೆಂತ ಹೇಳ್ದೊ. ಇಕ್ಕಿ ಕೊಟ್ಟೊ. ಈ ಊಟಕ್ಕೆ ಕುದ್ದ್ ಆಕನ ಒಂದ್ ಕೊತ್ತಿ ಬಾತ್. ನಮ್ಮ ಕೊತ್ತಿ ಬಾತ್‌ಂತ ಹೇಳಿ ಒಂದ್ ಪುಂಡಿ ಅನ್ನ ಕೊಟ್ಟತ್. ಕೊತ್ತಿ ತಿಂದ್ ಅಲ್ಲೆ ಬೀತ್. 'ಈ ಕೊತ್ತಿ ಯಾಕೆ ಬಿದ್ದ್ ಹೋತ್' ಹಾಂಗೆಂತ ಹೇಳ್ತ್. ನಾಯಿನ ಕರ್ದ್ ನಾಯಿಗೆ ಒಂದ್ ಪುಂಡಿ ಅನ್ನ ಕೊಟ್ಟತ್. ನಾಯಿನೂ ತೀನ್ತ್. ಒಂದ್ ಹನೀಸ್ ದೂರ ಹೋಗಿ ಅದೂನ್ ಬಿದ್ದ್ ಹೋತ್. ಕೊತ್ತಿನೂ ಬೀತ್ ನಾಯಿನೂ ಬೀತ್. 'ಇನ್ನ್ ನಾ ತಿಂದರೆ ಒಳಿಯಕ್ಕೆ ಉಟ್ಟ? ನಂಗೆ ಬೇಡ ಈ ಅನ್ನ' ಹಾಂಗೆಂತ ಹೇಳ್ತ್ ಅದರ ಬುಟ್ಟ್ ಹೊರಗೆ ಬಾತ್.

ಹೊರಗೆ ಬಾಕನ ಈ ರಾಜ್ಯ ಆಳಿಕೆ ಹೋದ ಅಪ್ಪ ಬಂದ್ ಮನೆ ಹತ್ತಿದೆ. 'ಮಂಜ ನೀ ಎಂತ ಊಟ ಮಾಡ್ದನಾ?' ಹಾಂಗೆಂತ ಹೇಳಿ ಮಂಜನ ಕರ್ದ್ ಕೇಳ್ತ್. 'ಏನ್ ಸಮಚಾರ? ಅಣ್ಣ-ಅತ್ತಿಗೆ ಎಲ್ಲ ನಿನ್ನ ಹೇಂಗೆ ನೋಡ್ವೆ? ಪೊರ್ಲ್ ಸಾಂಕ್ವೆನ? ನಿನ್ನ ಮಾತೆಲ್ಲ ಕೇಳ್ವೆನೊಂತ?' ಕೇಳ್ತ್. ಯಾವುದಕ್ಕೂ ಮಾತಿಲ್ಲೆ ಸುಮ್ಮನೇ ಕುದ್ದತ್ ಈ ಮಂಜ. ಲಾಸ್ಟ್‌ಗೆ ಅಪ್ಪ ಕೇಳ್ತ್ 'ನಿಂಗೆ ಮೊದ್ವೆ ಆಕ್ಕಂತ'. 'ಅಂದ್ ಅಣ್ಣಂದರೊಟ್ಟಿಗೆ ಮೊದ್ವೆ ಮಾಡೊಕಾಂತ ಹೇಳ್ಕನ ನೀ ಬೇಡಂತ ಹೇಳ್ದ. ಇಂದ್ ನಿಂಗೆ ಮೊದ್ವೆ ಆಕ್ಕಂತ' ಕೇಳ್ತ್. 'ಮೊದ್ವೆ ಆಕ್ಕ್. ನಾ ಮೊದ್ವೆ ಆಕ್ಕ್‌ಂತ ಇದ್ದರೆ ಒಂದ್ ದೇವಲೋಕದ ದೇವತೆ ಆಕ್ಕ್. ಮತ್ತೊಂದ್ ಬೆದ್‌ರೊಳಗಿದ್ದ ಚದ್‌ರಂಗಿ ಹೆಣ್ಣಾಕ್. ಹಣವನ್ನೇ ಬಳ್ಸೊಕ್ ಹಣವನ್ನೇ ಊಟ ಮಾಡೊಕ್' ಹಾಂಗೆಂತ ಹೇಳ್ತ್. "ನಿಂಗೆ ಬೆದ್‌ರೊಳಗಿದ್ದ ಚೆದ್‌ರಂಗಿ ಹೆಣ್ಣ್‌ನ ತಾಕೆ ನನ್ನಂದ ಸಾಧ್ಯ ಇಲ್ಲೆ. ದೇವಲೋಕದ ದೇವತೆನ ತಾಕ್ಕೂ ಸಾಧ್ಯ ಇಲ್ಲೆ. ಹಣವನ್ನೇ ಬಡಿಸಿ, ಹಣವನ್ನೇ ಊಟ ಮಾಡ್ಸಿಕೆ ನನ್ನಂದ ಸಾಧ್ಯವೇ ಇಲ್ಲೆ. ನೀ ಹೋಗ್ ನನ್ನ ಮನೆಂದ" ಹಾಂಗೆಂತ ಹೇಳಿ ಅರ್ಸ ಮಂಜನ ನೂಕಿ ಹೊರಗೆ ಹಾಕಿತ್.

ಅಲ್ಲಿಂದಲೇ ದೂರ ಕಾಡ್‌ಲೇ ಹೋತ್. ಒಂದ್ ಚೆಂಡೆ ಬಲ್ಲೆ ಒಳಗೆ ಒಂದ್ ಋಷಿ ಇದ್ದುಟು. ಹನ್ನೆರಡ್ ಹನ್ನೆರಡ್ ಇಪ್ಪತ್ತನಾಲ್ಕ್ ವರ್ಷ ಆಗುಟು. ಅಂವ ಅಲ್ಲಿ ಕುದ್ದ್ ಮೂಕ್‌ಗೆ ಹುತ್ತ ಕುತ್ತ ಬೆಳ್ದುಟು. ಇಂವ ಹೋಗಿ ಆಕನ ಆ ಹುತ್ತ ಜರ್ದ್ ಬೀತ್. ಬಿದ್ದ್ ಕಣ್ಣ್ ಬುಟ್ಟ್ ನೋಡಿ 'ನೀ ಯಾರಪ್ಪ? ಎಲ್ಲಿಂದ ಏನಾಗಿ ಬಂದದ್?' ಹಾಂಗೆಂತ ಅವನೊಟ್ಟಿಗೆ ಕೇಳ್ತ್. ಕೇಳ್ಕನ ಅವನೊಟ್ಟಿಗೆ ಎಲ್ಲ ಹೇಳ್ತ್. 'ಬಾ ನನ್ನ ಮನೆಗೆ ಪೋಯಿ. ನಾ ಇಷ್ಟ್ ವರ್ಷ ಕುದ್ದರೂ

ನನ್ನ ಹಕ್ಕಳೆ ಬಂದಂವ ಇಲ್ಲೆ. ನನ್ನ ತಲೆಂದ ಮೇಲೆ ಚೆಂಡ ಬಲ್ಲೆಯೂ ಮುಚ್ಚಿಟು. ನನ್ನ ಮೂಕ್ಂದ ಮೇಲೆ ಹುತ್ತವೂ ಬೆಳ್ದುಟು. ಇಲ್ಲಿಗೆ ಒಂದ್ ನರ ಮೊನ್ಸಂತ ಹೇಳಿ ಬಂದಂವ ಇಲ್ಲೆ. ಇಲ್ಲಿಗೆ ಬಂದಂವ ನೀನೆ. ಬಾ ಪೋಯಿ'ಂತ ಅಂವನ ಕರ್ರ್ಕೊಂಡ್ ಹೋತ್. ಅಂವನ ಅರಮನೆಗೆ ಹೋಗಿದ್ 'ನಾ ಒಬ್ಬನೇ ಇರ್ದು. ನನ್ನ ಜೊತೆ ನೀ ಇರೊಕ್' ಹಾಂಗೆಂತ ಹೇಳಿ ಅಂವನ ಅಲ್ಲೆ ಹಾಕನ್ತ್. ಈ ಋಷಿಗೆ ಬೆಳಿಗ್ಗೆ ಯಾಗೋಳು ಹಾಲ್ ಹಣ್ಣ್ ತಾಕೆ ಇಂವ ಜನ ಈ ಹುಡುಗ. ಯಾಗೋಳ್ ಹಾಲ್ ಹಣ್ಣ್‌ಗೆ ಹೋಕನ ಒಂದ್ ದಿನ ಋಷಿ ಹೇಳ್ತ್ 'ನೀ ಎಲ್ಲಿಗೂ ಹೋಗ್. ನಮ್ಮ ಬಡಗನ ತೋಟಕ್ಕೆ ನೀ ಒಬ್ಬ ಆಗಿ ಹೋಕೆ ಸಾಧ್ಯ ಇಲ್ಲೆ' ಹಾಂಗೆಂತ. ಆತ್‌ಂತ ಹೇಳಿ ಕೆಲವ್ ದಿನ ಕಳ್ದ್ ಒಂದ್ ದಿನ ಬಡಗನ ತೋಟಕ್ಕೆ ಹೋತ್. ಹೋಕನ ದೇವಲೋಕದ ದೇವತೆಗ ಅಲ್ಲಿ ಮೀತಾ ಒಲೊ. ಅವರ ಕುದ್ದ್‌ಕೊಂಡ್ ನೋಡ್ತ್. ನೋಡಿ ನೋಡಿ ಒಂದ್ ದೇವತೆನ ಸೀರೆ ತೆಕೊಂಡ್ ಓಡಿ ಬಾತ್. ಓಡಿ ಬಾಕನ ಈ ಏಳ್ ಜನ ದೇವತೆಗಳೂ ಇವನೊಟ್ಟಿಗೆ ಓಡಿ ಬಂದೊ. 'ನೀವ್ ನಿಲ್ಲಿ ನಿಲ್ಲಿ. ನಮ್ಮ ಸೀರೆ ಕೊಡಿ. ಒಡ್ಡೇಡಿ ಅಣ್ಣ'ಂತ ಓಡಿ ಬಂದೊ. ಓಡಿ ಬಾಕನ ಇಂವ ತಿರ್ಗಿ ನಿತ್ತ್ ನೋಡ್ತ್. ನೋಡ್ಕನ ಇಂವ ಅಲ್ಲೆ ಕಲ್ಲ್. ಸೀರೆನ ಏಳ್ಕಂಡ್ ಅವು ಹೋದೊ.

ಈ ಋಷಿ ಹಾಲ್ ಹಣ್ಣ್‌ಗೆ ಹೋದ ಹೈದ ಏಕೆ ಬಾತ್ಲೆಂತ ಆಲೋಚನೆ ಮಾಡ್ತಾ ಇತ್ತ್. 'ಇಲ್ಲೆ ಇಂವಂಗೆ ಏನೋ ತಾಪತ್ರೆ ಬಂದುಟು' ಹಾಂಗೆಂತ ಋಷಿ ಹೊರ್ಟ್ ಹೋತ್. ಹೋಕನ ದಾರಿಲಿ ಒಂದ್ ಕಲ್ಲ್ ಉಟ್ಟು. ಆ ಕಲ್ಲಿಗೆ ಎರಡ್ ಪೆಟ್ಟ್ ಹೊಡ್ತ್. ಸೀದ ಬಾತ್ ಬಂದ್ ಋಷಿ ಅರಮನೆಲಿ ಕುದ್ರುವಲ್ಲೇ ಕುದ್ದ್‌ಕೊನ್ತ್. ಹಂಞ ಹೊತ್ತ್ ಆಕನ ಇಂವ ಹಾಲ್ ತೆಕೊಂಡ್ ಬಂದದೆ. 'ಏನ್ ಮಾರಾಯ ಇಂದ್ ನಿಂಗೆ ಇಷ್ಟ್ ಹೊತ್ತ್ ಆತ್?''ಯಾಗೋಳ್ ಒಂದೇ ಸಮ ಆದೆನ ಹಂಞ ಹೊತ್ತಾತ್' ಹಿಂಗೇ ಯಾಗೋಳು ಹಾಲ್ ತೆಕೊಂಡ್ ಬರ್ತಾ ಇತ್ತ್. ಕೆಲವ್ ದಿನ ಅಕನ ಇಂವ ದಿನಂದ ದಿನ ಲಾಚಾರ್ ಆಗ್ತಾ ಬಾತ್. 'ನಿಂಗೆ ಏನಾತ್? ನೀ ಯಾಕೆ ಹೀಂಗೆ ಆದ?''ಏನಿಲ್ಲ ?''ನೀ ಬಡಗನ ತೋಟಕ್ಕೆ ಹೋಗಿದ್ದ'. 'ಹೋಗಿದ್ದೆ'. 'ಅಲ್ಲಿ ಯಾರೊಳೊ?''ಅಲ್ಲಿ ದೇವಲೋಕದ ದೇವತೆಗೆ ಮೀತಾ ಇದ್ದೊ'. 'ಅವರ ನೀ ನೋಡ್ಯೋಳನ?''ನಾ ನೋಡ್ಯೋಳೆ'. 'ಎಷ್ಟ್ ಜನ ಒಳೊ?''ಏಳ್ ಜನ ಒಳೊ'. 'ಆ ಪೈಕಿಂದ ನಿಂಗ ಮೊದ್ವೆ ಆಕ್ಕೊ?''ಆಕ್ಕ್'. 'ಹೆಂಗೆ ಅವರ ಪೈಕಿಂದ ಹೆಣ್ಣ್ ತಾದು? ಈ ದೇವತೆನ ತರೊಂವ ಯಾರ್? ಹೆಂಗೆ ತಾದು?' ಋಷಿ ಕೇಳ್ತ್. 'ಅದ್ ಗೊತ್ತಿಲ್ಲೆ? ಅಷ್ಟೆ ಪಾರ ಯಾರೆಲ್ಲ ಒಳೊ ? ಒಂದ್ ಕರೆಲಿ ಒಂದ್ ನಾಯಿ ಕುದ್ದುಟು. ಒಂದ್ ಕರೆಲಿ ಒಂದ್ ನವಿಲ್ ಕುದ್ದುಟು. ಮತ್ತೊಂದ್ ಕರೆಲಿ ಒಂದ್ ಕುರೆ ಕುದ್ದುಟು' ಹಾಂಗೆಂತ. "ಇದ್ದರೆ ನೀ ಒಂದ್ ಬಾಳೆ ಹಣ್ಣ್‌ನ ಗೊನೆ, ಒಂದ್ ಕೇಜಿ ಮಾಸ, ಒಂದ್ ಕೇಜಿ ಹೊದ್ರಿ ಇಷ್ಟ್ ತಯಾರ್ರೊಕ್ ಕುರೆನ ದಾರಿಗೆ ಬಾಳೆ ಹಣ್ಣ್ ಹಾಕೊಕ್. ನವಿಲ್ ಬಾವ ದಾರಿಗೆ ಹೊದ್ರಿಕೆ ಹಾಕೊಕ್. ಅಷ್ಟೇ

ಹಾಕಿ ಆಕನ ಅವೆಲ್ಲ ಅದರ ತಿಂದ್‌ಕಂಡ್ ಹೋದವೆ. ಆಗ ನೀ ಅಲ್ಲಿಂದ ಬಂದ್ ಸೀರೆ ತಕೊಂಡ್ ಓಡಿ ಬರೊಕ್. ಓಡಿ ಬಾಕನ ನಿನ್ನ ಒಟ್ಟಿಗೇ ಓಡಿ ಬಾವೊ. ಅಣ್ಣ ನಿಲ್ಲಿಯಣ್ಣ ನಿಲ್ಲಿಯಣ್ಣಂತ ಹೇಳಿ ಓಡಿ ಬಾವೊ. ನೀ ನಿಲ್ಲಿಕೆ ಬೊತ್ತ್ ತಿರ್‌ಗಿ ನೋಡಿಕೂ ಬೊತ್ತ್. ನೀ ಸಿದಾ ನನ್ನ ಮನೆ ಒಳಗೆ ಬರೊಕ್. ಒಳಗೆ ಬಂದ್ ಆ ತಂದ ಸೀರೆನ ನೀ ಪೆಟ್ಟಿಗೆ ಒಳಗೆ ಹಾಕೊಕ್. ಆಗ ನಾ ಇಲ್ಲಿ ತೊಟ್ಲ್ ತೂಗಿ ಇಸಿನೆ. ಆ ತೊಟ್ಲ್‌ಲಿ ನೀ ಹೂ ಗೂಸಾಗಿ ಮಲಗೊಕ್" ಹಾಂಗೆಂತ ಹೇಳಿಕೊಟ್ಟತ್ ಋಷಿ. ಆದುಂತ ಹೇಳ್ತ್ ಅಂದ್‌ಂದಲೇ ತಯಾರ್ಸಿತ್.

ಒಂದ್ ಬಾಳೆಗೊನೆ ಕಡ್ಡ್ ಹಾಕಿ ಅದರ ಹಣ್ಣ್ ಮಾಡ್ಸಿ ಅದ್ ಹಣಾಂವ ಸಮಯಕೆ ಒಂದ್ ಕೇಜಿ ಮಾಸ, ಒಂದ್ ಕೇಜಿ ಹೊದ್ರಿ ಎಲ್ಲ ತಯಾರ್ಸಿ ಮಾರನೆ ದಿನ ಅವ್ ಮೀಯಕೆ ಬಾವ ಹೊತ್ತಿಗೆ ತೆಕಂಡ್ ಹೋತ್. ಹೋಗಿ ಕುರೆ ಬಾವ ದಾರಿಗೆ ಬಾಳೆ ಹಣ್ಣ್ ಹಾಕಿತ್. ನವಿಲ್ ಬಾವ ದಾರಿಗೆ ಹೊದ್ರಿ ಹಾಕಿತ್. ನಾಯಿ ಬಾವ ದಾರಿಗೆ ಮಾಸ ಹಾಕಿತ್. ಹಾಕಿ ಬಂದ್ ಒಂದ್ ಕರೆಲಿ ಕುದ್ದ್‌ಕನ್ತ್. ಅಷ್ಟಾಕನ ಈ ದೇವತೆಗಳ್ ಬಂದ್ ಮೀಯಕೆ ಇಳ್ದೊ. ಇವು ಮೂರ್ ಈ ದಾರಿಲಿ ಇದೆಲ್ಲ ಉಟ್ಟಲ ಎಲ್ಲ ತಿಂದ್‌ಕಂಡ್ ಹೋದೊ. ಇಂವ ಆ ಪೈಕಿಂದ ಒಂದ್ ಸೀರೆ ತಕಂಡ್ ಓಡಿಕಂಡ್ ಬಾತ್. ಓಡಿ ಬಾಕನ 'ಅಕ್ಕ ನಿನ್ನ ಸೀರೆ ತಕಂಡ್ ಹೋತ್'ಂತ. 'ಯಾರ್ ತಕೊಂಡ್ ಹೋದ್?''ಯಾರ್ ಗೊತ್ತಿಲ್ಲೆ'ಂತ ಹೇಳ್ತ್'. ಈ ಏಳ್ ಜನ ಗೂಡೆಗಳೂ ಓಡಿ ಬಂದೊ. ಓಡಿ ಬಂದೊ. ಓಡಿ ಬಂದ್ 'ನಿಲ್ಲಿ ಅಣ್ಣ ನಿಲ್ಲಿ. ಅಣ್ಣ ನಿಲ್ಲಿ'ಂತ ಹೇಳ್ರೊ ನಿಂತತೇ ಇಲ್ಲೆ ಅಂವ. ಅಂವ ಸೀದ ಓಡಿ ಬಾತ್. ಮನೆಯ ಒಳಗೇ ಹುಕ್ಕತ್. ಹುಕ್ಕ್‌ದ್ ಪೆಟ್ಟಿಗೆಲಿ ಸೀರೆ ಹಾಕಿ ತೊಟ್ಟಿಲ್‌ಲಿ ಕೂಸಾಗಿ ಮಲಗಿತ್. ಅಷ್ಟಾಕನ ಈ ಏಳ್ ಹೆಣ್ಣ್ ಮಕ್ಕಳೂ ಮನೆಗೆ ಬಂದೊ. ಬಂದ್ 'ನಿಮ್ಮ ಜನವೇ ಆಗಿರೊಕ್, ನಮ್ಮ ಸೀರೆನ ಒಂದರ ತಂದುಟು. ನಾವ್ ಮೀದ್‌ಕಂಡ್ ಇದ್ದೊ ಕೆರೆಲಿ'. 'ನನ್ನ ಮನೆಲಿ ಯಾರ್ ಜನ ಒಳೊ. ನಾ ಒಬ್ಬನೆ ಋಷಿ. ನಂಗೆ ಸಂಸಾರ ಸಾಗರ ಉಟ್ಟ. ನನ್ನ ಮನೆಲಿ ಯಾರ್ ಜನವೊಳೊ'ಂತ ಒಳಗೆ ಹೋಗಿ ನೋಡಿಂತ ಹೇಳ್ತ್ ಋಷಿ. ಇವ್ ಒಳಗೆ ಹೋಗಿ ನೋಡ್ದೊ. ಇವ್ ಒಳಗೆ ಹೋಕನ ಆ ಕೂಸೂ ತೊಟ್ಟಿಲ್ ಯಾವುದೂ ಇಲ್ಲೆ. ಎಲ್ಲ ನೋಡ್ದೊ. ಈ ಸೀರೆ ತಂದ ಗೂಡೆ ತಂಗೆ. ಬಾಕಿ ಆರ್ ಗೂಡೆಗ ಅಕ್ಕಂದರ್. ಈ ಆರ್ ಗೂಡೆಗ ಏನ್ ಹೇಳ್ದೊ. 'ತಂಗೆ ನಿನ್ನ ಸೀರೆ ನಿಂಗೆ ಯಾಗ ಸಿಕ್ಕಿತ್ ಅಂದ್‌ನ ವರೆಗೆ ನೀ ಈ ಮನೆಲೇ ಇರ್' ಹಾಂಗೆಂತ ಆ ಗೂಡೆನ ಅಲ್ಲಿ ಬುಟ್ಟೊ ಸೀದಾ ಹೋದೊ. ಅವ್ ಹೋಗಿದ್ ಎತ್ತುವಲ್ಲಿಗೆ ಎತ್ತುವ ಅಂದಾಜಿಗೆ ಈ ಹುಡುಗ ಬಾತ್.

ಮನೆಗೆ ಬಂದಾಕನ ಈ ಋಷಿ ಹೇಳ್ತ್. 'ಪೆಟ್ಟಿಗೆಂದ ಬೇರೊಂದ್ ಸೀರೆ ತೆಗ್ದ್ ಕೊಡೂಂತ'. ಪೆಟ್ಟಿಗೆಂದ ಆ ಸೀರೆ ಬುಟ್ಟ್ ಬೇರೊಂದ್ ಸೀರೆ ತೆಗ್ದ್ ಗೂಡೆಗೆ ಉಡಿಕೆ ಕೊಟ್ಟತ್. ಅದ್ ಆ ಸೀರೆನ ಉಟ್ಟ್‌ದ್ ಅವು ಅಣ್ಣ ತಂಗೆನ ಹಾಂಗೇ ಆ ಮನೆಲಿ ಇದ್ದೊ. ಇದ್ದ್ ಇದ್ದ್

ಇದ್ದ್ ಕೆಲವು ವರ್ಷ ಕಳ್ದ್ ಇಂವ ಕೇಳ್ತ್. 'ನಾವ್ ಹೋದವೆ ನಮ್ಮ ಮನೆಗೆ'ಂತ. 'ನಿಮ್ಮ ಮನೆ ಎಲ್ಲಿ?''ನಮ್ಮ ಮನೆ ಅಂದರೆ ಅವ್ವ ಅಪ್ಪ ಇದ್ದದ್ ನಮ್ಮ ಮನೆ. ನಾ ಅಲ್ಲಿಗೆ ಹೋನೆ'ಂತ. 'ಹೋದಿಯ ಹೋದಿದ್ದರೆ ನನ್ನಿಂದ ಏನೂ ತೊಂದರೆ ಇಲ್ಲೆ' ಹೋಗ್ ಹಾಂಗೆಂತ ಹೇಳ್ತ್ ಋಷಿ. ಇವು ಒಂದ್ ದಿನ ಹೊರ್ಟ್ಬೊ ಹೋದ್ಬೊ. ಹೋಗಿದ್ ಹೋಗಿದ್ ಒಂದ್ ಅರ್ಸನ ಮನೆಲಿ ತಿರ್ಗಾಡಿದೊ. ಬಂದೊ. ಪುನಃ ಬಂದ್‌ದ್ ಮಾರನೆ ದಿನ ಹೇಳ್ದೊ. 'ನಾವ್ ಇಂದ್ ಹೋದವೆ'ಂತ. 'ಆತ್ ಹೋಗಿ ನೀವ್ಗೆ ಎಂತ ಬೇಕ್?''ನಾವ್ಗೆ ಏನೂ ಬೇಡ'. 'ಏನಾರ್ ಬೇಕಾರೆ ನೀವ್ಗೆ ಬೇಕಾದರ ಎಲ್ಲ ತೆಕನೊಕ್'. 'ನಾವ್ಗೆ ಯಾವುದ್ ಬೇಡ? ನಿಮ್ಮ ಮನ ತೃಪ್ತಿಲಿ ನೀವ್ ಎಂತಾರ್ ಕೊಟ್ಟರೆ ತೆಕಂಡೊದು'. 'ನಾ ಏನೂ ಕೊಡಿಕಿಲ್ಲೆ ನೀವೇ ತಕಂಡ್ ಹೋಕ್'ಂತ. 'ಹಂಗಾದರೆ ನಂಗೆ ಇದೊಂದ್ ಕೋಲ್, ಒಂದ್ ಬೆತ್ತ ಬೇಕ್'. 'ಆತ್ ಆ ಬೆತ್ತದ ಕೋಲ್ ತೆಕಂಡೊಗ್' ಹಾಂಗೆಂತ ಋಷಿ ಹೇಳ್ತ್. ಇಂವ ಬೆತ್ತದ ಕೋಲ್‌ನ ತಕನ್ತ್, ಗೂಡೆನ ಕರ್ಕನ್ತ್ ಅಲ್ಲಿಂದ ಹೊರಟ್ ಹೋತ್.

ಹೋಗಿ ಹೋಗಿ ಹೋಗಿ ಒಂದ್ ದೊಡ್ಡ ಅರ್ಸನ ಅರಮನೆಗೆ ಸೇರಿಕನ್ತ್. ಅಲ್ಲಿ 'ಯಾವುದೋ ಅರ್ಸರ ಮಕ್ಕಳೊ ಬಂದೊ. ಮತ್ತೆ ಹಿಂಗೆ ಇದ್ದವ್ ಏನೂ ಅಲ್ಲ' ಹಾಂಗೆಂತ ಅ ಅರ್ಸರ್ ಇವರ ಬಾರಿ ಪ್ರೀತಿಸಿದೊ. ಕತ್ತಲೆಗೆ ಮೀಯಕೆ ನೀರ್, ಊಟ, ಮಲಗಿಕ್ಕೆ ರೂಮ್ ಕೊಟ್ಟೊ. ಮಾರನೆ ದಿನ ಬೆಳಿಗ್ಗೆ ಎದ್ದ್ ಅರ್ಸ ಕೇಳ್ತ್ 'ನೀವ್ ಯಾವ ಅರ್ಸರ ಮಕ್ಕ? ನಿಮ್ಮ ಊರ್ ಯಾವುದು?' ಹಾಂಗೆಂತ. 'ನಾವ್ ಅರ್ಸರ ಮಕ್ಕ ಏನೂ ಅಲ್ಲ. ನಾವ್ ಹಿಂಗೆ ಕೆಲಸ ಮಾಡಿ ದನ ಮೇಯಿಸಿ ಎಲ್ಲ ತಿಂಬೊವ್. ನಾವ್ ಹಿಂಗೆ ತಿರ್ಗಾಡಿಕಂಡ್ ಬಂದದ್. ಎಲ್ಲಾರ್ ದನ ಮೇಯಿಸಿಕೆ ಸಿಕ್ಕಿರೆ ದನ ಮೇಯಿಸಿ ಕಾಲ ಕಳಿಯೊಕ್ಕಂತ ಬಂದದ್'. 'ಹಾಂಗೆ ಆದರೆ ಇಲ್ಲಿ ದನಗ ಒಳೊ. ನೀವ್ ಮೇಯಿಸಿಕಂಡ್ ಇದ್ದರಿಯ?''ಆತ್ ನಾವ್ ಇದ್ದವೆ'. 'ಹಾಂಗೆ ಆದರೆ ನಿನ್ನ ತಂಗೆ ನಮ್ಮ ಮನೆಲಿ ಇರಲಿ. ನೀ ನಮ್ಮ ದನ ಮೇಯಿಸಿಕಂಡ್ ಇರೊಕ್' ಹಾಂಗೆಂತ ಅವನೊಟ್ಟಿಗೆ ಹೇಳಿಕೊಟ್ಟೊ. 'ಆತ್ ನನ್ನ ತಂಗೆ ಮನೆಲಿ ಇರಿಕಿಲ್ಲೆ. ನಾ ಹಟ್ಟಿನ ಬಾಗಿಲ್‌ಲಿ ಸೊಪ್ಪುನಗೂಡ್ ಮಾಡಿದ್ ನನ್ನ ತಂಗೆನ ಅಲ್ಲಿ ಬುಟ್ಟ್ ನಾ ದನ ಮೇಸ್‌ತಾ ಇದ್ದನೆ' ಹಾಗೆಂತ ಹೇಳ್ತ್ ಒಂದ್ ಸೊಪ್ಪ್‌ನ ಗೂಡ್ ಕಟ್ಟಿತ್. ತಂಗೆನ ಅಲ್ಲಿ ಬುಟ್ಟತ್. ಇಂವ ದಿನ ದನ ಹೊಡ್ಕಂಡ್ ಹೋತ್. ಇಂವ ದನ ಹೊಡ್ಕಂಡ್ ಹೋಕನ ಆ ಬೆತ್ತದ ಕೋಲ್ ಉಟ್ಟಲ್ಲ. ಕೋಲ್ ಊರಿ ಇಸಿತ್. ಅಲ್ಲಿ ದನಗಳಿಗೆ ಬೇಕಾದ ಹುಲ್ಲಾತ್. ಅಲ್ಲೆ ತಿಂಬಕೆ. ಅಲ್ಲೆ ತಿಂದ್‌ದ್ ಕತ್ತಲೆ ಮಾಡಿದ್ ಇಂವ ಹಿಂದೆಂದ ಬಾತ್. ದನಗ ಮುಂದೆ ಹಟ್ಟಿಗೆ ಬಂದ್ ಹುಕ್ಕಿದ್ ಹಿಂಗೆ ಬರ ಇದ್ದೊ.

ಒಂದ್ ದಿನ ಇಂವ ಹಿಂಗೆ ಹೋಕನ ಒಂದ್ ಬೆದ್‌ರ್ ಕೊಡಿ ಇಂವನ ತಲೆ ಹೊಡ್ದ್‌ದ್ ಮೇಲೆ ಹೋದೆ. ಇಂವ ಬಂದ್ ತಂಗೆನೊಟ್ಟಿಗೆ ಹೇಳ್ತ್, 'ತಂಗೆ ನಾ ಹೋಕ

ಯಾಗೋಳ್ ಒಂದ್ ಬೆದ್‌ರ್ ಬಂದ್ ನನ್ನ ತಲೆಗೆ ಹೊಡ್ದ್ ಮೇಲೆ ಹೋದೆ' ಹಾಂಗೆಂತ. ಆಗ ತಂಗೆ ಹೇಳಿಕೊಟ್ಟತ್, 'ಅದ್ ಬಂದ್ ತಲೆಗೆ ಹೊಡ್ದ ಕೂಡಲೆ ಅದರ ನೀವು ಕೊಡಿನ ಬುಡನ ಕಡ್ದ್ ಇಟ್ಟ್‌ನಡೂ ತುಂಡ್‌ನ ತಕಂಡ್ ಬರೊಕ್'. ಆತ್‌ಂತ ಹೇಳ್ತ್. ಮಾರನೆ ದಿನ ಇಂವ ಕತ್ತಿ ತಕಂಡ್ ಹೋತ್. ಆ ಬೆದ್‌ರ್ ಕೊಡಿ ಬಂದ್ ತಲೆಗೆ ಹೊಡಿಯಕನ ಇಂವ ಬುಡಂದ ಕಡ್ತ್. ಕೊಡಿನ ಬುಡನ ಕಡ್ದ್ ಇಟ್ಟ್ ನಡೂ ತುಂಡನ ಹಿಡ್ಕಂಡ್ ಮನೆಗೆ ಬಾತ್ ಸೊಪ್ಪಿನ ಗೂಡಿಗೆ. ಬಂದ್ ಆ ಬೆದ್ರ್‌ನ ಒಡ್ತ್. ಒಡ್ದಾಕನ ಅದರೊಳಗೆ ಒಂದ್ ಪೊರ್ಲ್‌ನ ಗೂಡೆ ಉಟ್ಟು. 'ಇದ್ ಒಂದು ಗೂಡೆ. ಇದ್ ನಂಗೆ ತಂಗೆ'ಂತ ಹೇಳ್ತ್ ಪೊರ್ಲ್ ಸಾಂಕಿತ್.

ಈ ಎರಡ್ ಗೂಡೆಗಳೂ ಈ ಸೊಪ್ಪುನ ಗೂಡ್‌ಲಿ ಒಳೊ. ಈ ಅರ್ಸನ ಹೆಣ್ಣ್ ಹೇಳ್ತ್, 'ಎಷ್ಟ್ ಪೊರ್ಲ್ ಒಳೊ. ಸೂರ್ಯ ದೇವ್ರಿಗಾದರ್ ಕೊರತೆ ಉಟ್ಟು. ಆ ಎರಡ್ ಮಕ್ಕಳಿಗೆ ಕೊರ್ತೆ ಇಲ್ಲೆ. ಅಂವನ ತಂಗೆಕ ಗಡ. ಮೊನ್ನೆ ಬಾಕೆ ಆಕನ ಒಂದೆ ಇದ್ದದ್. ಇಂದ್ ಎರಡ್ ಒಳೊಗಡ. ಎಷ್ಟ್ ಪೊರ್ಲ್ ಉಟ್ಟು. ನೋಡಿ ನಿಮ್ಮಂದ ಆದೊ. ಇಂತ ಹೆಣ್ಮಕ್ಕಳ ತಾಕೆ'ಂತ ಹೇಳಿ ಅರ್ಸನೊಟ್ಟಿಗೆ ಹೆಣ್ಣ್ ಜಗಳ ಮಾಡ್ತ್. 'ಛೀ! ಅಂತ ಕೇಡ್ ಮಾತ್ ಮಾತಾಡ್ಬೇಡ. ನೀ ಸಹ ಹೆಣ್ಣ್ ಸಂಸಾರ ಅಲ್ಲ. ನೀ ಹಂಗೆ ಮಾತಾಡಿಕೆ ಸಾದ್ಯ ಇಲ್ಲೆ'. ಬೈದರ್ ಸುಮ್ಮನೇ ಹಿಂಗೆ ಇತ್ತ್. ಒಂದ್ ದಿನ ಹೆಣ್ಣ್ ತುಂಬ ಹಠ ಹಿಡ್ತ್. 'ಛೆ! ಅದ್ ಆಕ್ಕೇ ಇಲ್ಲೆ? ಅಂವನ ಕೊಂದೇ ಕೊಲ್ಲೊಕ್. ಅಂವನ ಕೊಂದದ್ ಆ ಎರಡ್ ಗೂಡೆಗಳ ನಮ್ಮ ಮನೆಗೆ ತರೊಕ್' ಹಾಂಗೆಂತ. ಹೇಂಗೆ ಕೊಲ್ಲುದು? ಆಲೋಚನೆ ಮಾಡ್ದೊ. ಮನೆ ಬಾಗಿಲ್‌ಲಿ ಒಂದ್ ಬಾಮಿ ತೆಗ್ಸಿದೊ. ಬಾಮಿ ತೆಗ್ಸಿದ್ ಆ ಬಾಮಿಗೆ ಅಂವನ ಕಳ್ಸುದು. 'ಅಲ್ಲಿ ನಮ್ಮ ಬೇಕಾದ ಎಲ್ಲಾ ಸಂಸಾರ ಒಳೊ. ಅಲ್ಲಿಗೆ ನೀ ಹೋಗಿ ಬರೊಕ್. ನೀ ಅಪ್ರೂಪದ ಮೊನ್ಸ ಬಂದದ್. ನೀ ಅಲ್ಲಿಗೆ ಹೋಗಿ ಬರೊಕು'ಂತ ಎಲ್ಲ ಸೇರಿ ಮಾತುಕತೆ ನಡ್ಸಿದೊ. ಅಷ್ಟರ್ಲಿ ಈ ಸೊಪ್ಪುನ ಗೂಡ್‌ಲಿ ಇದ್ದ ಗೂಡೆ 'ನೀವ್ ಅರ್ಸರ ಮನೆ ಹಿಂದೆ ಹೋಗಿದ್ ರಾತ್ರೆ ಒಂದ್ ಹೆಗ್ಗಣದ ಮೊರಿ ತಂದ್ ಕೊಡೊಕಂತ ಹೇಳ್ತ್'. 'ಆತ್ ತಂದ್‌ಕೊಟ್ಟನೆ'ಂತ ಹೇಳಿ ಇಂವ ಅರ್ಸನ ಮನೆ ಹಿಂದೆ ಬಂದ್ ಒಂದ್ ಹೆಗ್ಗಣದ ಮೊರಿನ ತಂದ್‌ಕೊಟ್ಟತ್. ಈ ಗೂಡೆ ಅದ್ಕೆ ಬೇಕಾದ ಬುದ್ದಿ ಬಾಕಿದ್ದದ್ದೆಲ್ಲಾ ಕಲ್ಸಿತ್. ಇತ್ತ್.

ಕಲ್ಸಿ ಒಂದ್ ದಿನ ಏನ್ ಹೇಳ್ತ್? 'ನೀ ಅರ್ಸರ ಮನೆಗೆ ಹೋಗಿ ಒಂದ್ ಬ್ಯಾಗ್ ಬೂಡ್ಸ್, ಶರ್ಟ್ ಎಲ್ಲ ತಕಂಡ್ ಬರೊಕ್'ಂತ ಈ ಗೂಡೆ ಹೇಳಿ ಕಳ್ಸಿತ್. ಈ ಹೆಗ್ಗಣ ಮೊರಿ ದಿನಕ್ಕೆ ಒಂದೊಂದೇ ತೆಕಂಡ್ ಬಂದ್ ಅಲ್ಲಿ ಕೊಟ್ಟತ್. ಸೊಪ್ಪುನ ಗೂಡ್‌ಂದ ಬಾಮಿ ವರೆಗೆ ಮಾಳಿ ತೆಗ್ಸಿತ್. ಈ ಗೂಡೆ ದಾರಿ ಮಾಡ್ಸಿತ್ ಈ ಹೆಗ್ಗಣನ ಮರಿನ ಕೈಲೇ. ಒಂದ್ ದಿನ ಅರ್ಸ ಇಂವನ ಮನೆಗೆ ಕರ್ಸಿದೊ, 'ನೀ ಬರೊಕ್. ನೀ ಇಂದೇ ಅಲ್ಲಿಗೆ ಹೊಕ್ಕು. ಇದರ ಒಳಗೆ ಹೋದರೆ ನಮ್ಮ ಸಂಸಾರದವು ಒಳಗೆ ಒಳೊ. ಅವರೊಟ್ಟಿಗೆ ನೀ ಮಾತಾಡಿ ಬರೊಕು. ನಿಂಗೆ

ಬೇಕಾದ್ದ್ ಎಲ್ಲ ಅಲ್ಲಿಂದ ಕೊಟ್ಟವೆ. ಹ್ಯಾಟ್, ಬೂಟ್, ಬ್ಯಾಗ್, ಪ್ಯಾಂಟ್ ವಾಚ್ ಎಲ್ಲ ಕೊಟ್ಟವೆ. ಅದರ ಎಲ್ಲ ನೀ ತರೊಕ್' ಹಾಂಗೆಂತ ಹೇಳಿ ಅಂವನ ಕಳ್ಸಿದೊ. ಅಂವ ಬಾತ್ ಅಲ್ಲಿಗೆ ಹೋತ್ ಇಳ್ತ್. ಇಳ್ದ ಕೂಡ್ಲೆ ದಾರಿನ ಮೊಣ್ಣ್ ಮುಚ್ಚಿದೊ. ಮೊಣ್ಣ್ ಮುಚ್ಚಿ ಆಕನ ಅಂವ ಮೊಣ್ಣ್ ಅಡಿಗೆ ಆತಲ್ಲೆ. ಇಂವ ಹೋದರಲ್ಲೇ ಹೆಗ್ಗಣ ಮಾಡಿಸಿದ ಮಾಳಿಲಿ ಸೊಪ್ಪ್‌ನ ಗೂಡ್‌ಲಿದ್ದ ಗೂಡೆನೊಟ್ಟಿಗೆ ಹೇಳ್ದೊ. ಇಂವ ಆ ಬಾವಿಗೆ ಇಳ್ದ ಕೂಡ್ಲೆ ಇವು ಮೊಣ್ಣ್ ಮುಚ್ಚಿದ್ ಆ ಗೂಡೆಗಳ ಮನೆಗೆ ಬನ್ನಿಂತ ಕರ್ದವೆ. 'ಇಲ್ಲೆ. ಬಾಕ್ಕೆ ಮೂರ್ ದಿನ ಕಳಿಯೊಕ್. ಮೂರ್ ದಿನ ಕಳಿಯದೆ ನಾವು ಬಾಕಿಲೆ. ಅವು ಹೇಳಿ ಹೋಗೊಳೊ' ಹಾಂಗೆಂತ ಹೇಳಿ ಗೂಡೆಗ ನಿತ್ತೊ. ಆಗ ಅವ್ಕೆ ಧೈರ್ಯ ಆತ್. ಮೂರ್ ದಿನ ಅಲ್ಲ ಆರ್ ದಿನ ಕಳ್ದರೂ ಇಂವ ಹೋದಂವ ಬಾಕಿಲ್ಲೆಂತ. ಮೊಣ್ಣಡಿಗೆ ಹೋದಂವ ಬಾಕೆ ಉಟ್ಟುಂತ ಅವು ಧೈರ್ಯಲಿದ್ದೊ. ಮೂರನೆ ದಿನ ಆಕನ ಇಂವ ಪ್ಯಾಂಟ್ ಹಾಕಿ ಬೂಡ್ಸು ಹಾಕಿ, ವಾಚ್‌ಕಟ್ಟಿ ಗಡ್ದ್‌ಲಿ ಅವರ ಮನೆಗೆ ಹೋತ್. (ಇದೆಲ್ಲ ತಂದ್‌ಕೊಟ್ಟದ್ ಯಾರ್. ಈ ಹೆಗ್ಗಣ ಮೊರಿ) 'ಹೋ ಬಂದ?''ಬಂದ್‌ಬುಟ್ಟೆ'. 'ಏನ್ ಸಮಚಾರ?''ಸಮಚಾರ ಅಲ್ಲಿ ಬಾರೀ ಖುಷಿ, ಎಲ್ಲವ್ ಹೊಕ್ಕಡ ಒಬ್ಬ ಸಹ ಉಳಿಯದೆ ನೀವೆಲ್ಲವು ಹೋಕ್ಕಡ' ಹಾಂಗೆಂತ. 'ಯಾಗ ಹೋಕ್ಕು?''ಒಂದು ವಾರದೊಳಗೆ ಹೊಕ್ಕು?' ಹಾಂಗಾರೆ ಅದರಿಂದ ಮೊಣ್ಣ್ ತೆಗಿಯೊಂಬಂತ ಹೇಳಿ ಬಾಮಿಂದ ಎಲ್ಲ ಮೊಣ್ಣ್ ತೆಗ್ದೊ. ಆ ಬಾಮಿಂದ ಮೊಣ್ಣ್ ತೆಗಿಯಕನ ಈ ಹೆಗ್ಗಣ ಮೊರಿ ಮಾಡಿಸಿದ ದಾರಿನ ಎಲ್ಲಾ ಈ ಗೂಡೆ ಮುಚ್ಚಿಸಿತ್. ಹೆಗ್ಗಣ ಮೊರಿನ ಕೈಲಿ ರಾತ್ರೆ ಆ ದಾರಿನ ಎಲ್ಲ ಅಡ್ಸಿಸಿತ್.

ಇವು ಒಂದು ವಾರ ಕಳ್ದ್ ಅದರೊಳಗೆ ಎಲ್ಲವು ಹೋದೊ. ಎಲ್ಲವು ಅದರೊಳಗೆ ಹೋಗಿ ಆಕನ ಮೊಣ್ಣೆಲ್ಲ ಅದರೊಳಗೆ ಮುಚ್ಚಿತ್. ಮೊಣ್ಣೆಲ್ಲ ಮುಚ್ಚಿ ಆಕನ ಮತ್ತೆ ಆ ಮನೆ ಎಲ್ಲ ಅವಂಗೆ ಆತಲ್ಲ. ಅವೆಲ್ಲ ಅದರ ಅಡಿಗೆ ಆದೊ. ಆ ಮನೆಲಿ ಇವ್ ಮೂರ್ ಜನ ಹಾಂಗೆ ಇದ್ದೊ. ಈ ಎರಡ್ ಗೂಡೆಗಳೂ ಇಂವನೂ ಅಣ್ಣ ತಂಗೆಕ ಮೂರ್ ಜನ ಇದ್ದೊ. ಒಂದ್ ದಿನ ಇಂವ ಹೇಳ್ತ್, 'ಇನ್ನ್ ಹಿಂಗೇ ಇರ್ದು ಸರಿಯಲ್ಲ. ಇನ್ನ್ ಇವರ್ನೆ ಮೊದ್ವೆ ಆಕ್ಕ್ ನಂಗೆ. ಊರಿಗೇ ಓಲೆಕೊಟ್ಟ್ ಗಂಭೀರಲಿ ಒಂದ್ ಮೊದ್ವೆ ತಯಾರ್ಸಿತ್. ಬೇಕಾದ ಚಪ್ಪರ ಹಾಕ್ಸಿತ್. ಓಲೆ ಕೊಡುವಲ್ಲಿ ಓಲೆ ಕೊಟ್ಟತ್. ಬಾಯಿ ಮಾತ್ ಹೇಳುವಲ್ಲಿ ಬಾಯಿಮಾತ್ ಹೇಳ್ತ್. ಮೊದ್ವೆಗೆ ಜನ ಸೇರ್ದೊ. ಇಂವನ ಅವ್ವ ಅಪ್ಪಂಗೆ ಹೇಳ್ದೊ. ಇಂವನ ಅತ್ತಿಗೆ ಅಣ್ಣಂದರೂ ಬಂದವೆ. ಮೊದ್ವೆ ಊಟ ತಯಾರ್ಸಿದೊ. 'ಎಲೆಕೊಡಿ ಊಟ ಕೊಡಿ'ಂತ ಹೇಳ್ತ್. ಜನಗ ಒಂದ್ ಕರೆಂದ ಎಲೆ ಕೊಟ್ಟ್‌ಕಂಡ್ ಬಂದೊ. ಇನ್ನೊಂದ್ ಕರೆಲಿ ಕುಡ್ಪುಗೆ ಅನ್ನ ಇಕ್ಕುವಲ್ಲಿ ಹಣವನ್ನೇ ಇಳ್ಗಿದ್ ಸಡೇ ಹಣವನ್ನೇ ಇಕ್ಕ್‌ತಾ ಬಂದೊ. ಹಣ ಇಕ್ಕಿಕಂಡ್ ಬಂದರೆ ಅದರ ಹೇಂಗೆ ಊಟ ಮಾಡ್ದು ಅದರ ಎಲ್ಲ ಮುದ್ದೆ ಮಾಡಿ ಹಿಡ್ಕೊಂಡೊ. 'ಇದರ ಊಟ ಮಾಡಿಕೆ ನಾವ್‌ಗೆ ಬೊತ್ತ್'ಂತ ಹಣ ಸಿಕ್ಕಿದಲ್ಲಂತ ಹೇಳಿ ಮೆಲ್ಲ ಒಂದ್ ಕರೆಲಿ ಇಸಿಕಂಡೊ. ಪುನಃ ಒಂದೊಂದ್ ಎಲೆ ಕೊಟ

ಊಟ ಕೊಟ್ಟತ್. ಅವೆಲ್ಲ ಪೊರ್ಲ್ ಊಟ ಮಾಡ್ದೊ. ಊಟ ಮಾಡಿ ಕುದ್ದಾಕನ ಕೇಳ್ತ್. ಅಣ್ಣ ಅತ್ತಿಗೆ ಅವ್ವ ಅಪ್ಪ ಇಷ್ಟ್ ಜನ ಬಂದೊಳೊ ಅಲ್ಲ ಅವರೊಟ್ಟಿಗೆ. 'ನಿಮ್ಮ ಸಮಾಚಾರ ಏನ್'ಂತ?' ಕೇಳ್ತಾ ಉಟ್ಟು. ಕೇಳಿ ಎಲ್ಲ ಆಕನ ಅವೆಲ್ಲ ಕೇಳ್ದೊ 'ನೀವ್ ಯಾವ ಅರ್ಸರ ಮಕ್ಕ?' ಕೇಳಿದ್ ಆಕನ ಅಂವ ಹೇಳ್ತ್ 'ನಾ ಇಂತ ಅರ್ಸರ ಮಂಜ. ನನ್ನ ಅಯ್ಯೆನು ಅಪ್ಪನು ನೀವೇ. ನೀವೇ ಅಂದ್ ನನ್ನ ಮನೆಂದ ಕಳ್ಸಿದ್. ನಂಗೆ ಹಣದ ಹುಗ್ಗೆ ಉಣೊಕ್ ದೇವಲೋಕದ ದೇವತೆನ ತರೊಕ್ ಬೆದ್ರೊಳಗಿದ್ದ ಚದ್ರೆರಂಗಿನ ತರ್ಸೊಕ್'ಂತ. ಅದಕ್ಕೆ ಹಣದ ಹುಗ್ಗೆ ಊಟ ಮಾಡಿಕೆ ಸಾಧ್ಯ ಇಲ್ಲೆ. ದೇವಲೋಕದ ದೇವತೆನ ತಾಕ್ಕೂ ಸಾಧ್ಯ ಇಲ್ಲೆ. ಬೆದ್ರೊಳಗಿದ್ದ ಚೆದ್ರೆಂಗಿನ ತಾಕ್ಕೂ ಸಾಧ್ಯ ಇಲ್ಲೆ. ನೀ ಹೋಗ್ ನನ್ನ ಮನೆಂದಂತ ಹೇಳಿದ ನನ್ನ ಅಪ್ಪ ನೀವೇ'ಂತ ಹೇಳ್ತ್. ಹೇಳಿಯಾಕನ ಅಪ್ಪಂಗೆ ಒಪ್ಪದೆ ಉಪಾಯ ಇಲ್ಲೆ. ಹೌದ್'ಂತ ಹೇಳಿ ಅಪ್ಪ ಒಪ್ಪಿಕನ್ತ್. ಆ ದಿನ ಹಾಂಗೆಂತ ಆದರೆ ನಾವೆಲ್ಲ ಹೋದವೆಂತ ಹೇಳಿ ಅವೆಲ್ಲ ಹೊರ್ಟ್ ಹೋದೊ.

ಅವೆಲ್ಲ ಹೊರ್ಡಿ ಆಕನ ಇಂವ ಹೇಳ್ತ್, 'ಅವ್ವ ನಿಲ್ಲೊಕ್ ಹೊಕೆ ಬೊತ್ತ್. ಇನ್ನ್ ಹತ್ತ್‌ದಿನ ಕಳ್ದ್ ಅವ್ವ ಹೋದು'ಂತ ಅವ್ವನ ನಿಲ್ಸಿಕನ್ತ್. ಅಣ್ಣ ಅತ್ತಿಗೆಕ್ಕ ಅಪ್ಪ ಇಷ್ಟ್ ಜನ ಅವರ ಮನೆಗೆ ಹೋದೊ. ಈ ಅವ್ವ ಎರಡ್ ಸೋಸೆಗ. ಮಂಜ ಶಿಕಾರಿಗೆ ಹೊರ್ಟ್ ಹೋತ್. ಶಿಕಾರಿಗೆ ಹೊರ್ಟ್ ಹೋಗಿ ಆಕನ ಈ ಅವ್ವ ಈ ಸೊಸೆಕಳ ಪೆಟ್ಟಿಗೆ ತೆಗ್ದ್ ಎಲ್ಲ ನೋಡ್ದೊ. ನೋಡಿ ಆಕನ ಈ ಸೀರೆ ಒಂದ್ ಬಾರೀ ಲಾಯಿಕ್ ಉಟ್ಟು. ಅಂದ್ ಇಂವ ತೆಗ್ದ್ ಇಸಿದ ಸೀರೆ. 'ಛೆ! ನನ್ನ ಇಂತ ಸೊಸೆ ಈ ಸೀರೆನ ಪೆಟ್ಟಿಗೆಲಿ ಇಸಿದ್ ಇದರ ಉಡೊಕ. ಹಣವನ್ನೇ ಊಟಕ್ಕೆ ಬಳ್ಸಿ ಆಗುಟು. ಇದರ ಯಾಕೆ ಪೆಟ್ಟಿಗೆಲಿ ಇಸುದ್ ಸೊಸೆ ಉಡೊಕ್'ಂತ ಆ ಸೊಸೆಗೆ ಉಡಿಕೆ ಕೊಟ್ಟತ್. ಅವ್ವ ಉಡಿಕೆ ಕೊಟ್ಟ ಕೂಡಲೆ ಅದ್ ಉಟ್ಟತ್ ಅದ್ ಹೋತ್. ಈ ಮಂಜ ಬಾಕ್ಕೆ ಆಕನ ಸೊಸೆ ಎಲ್ಲಿ ಉಟ್ಟು ಬಂದ್ ಕೇಳ್ತ್, 'ಎಲ್ಲಿಗೆ ಹೋಗುಟು?''ನಾವ್ಗೆ ಗೊತ್ತಿಲ್ಲೆ?' ಪೆಟ್ಟಿಗೆ ನೋಡ್ತ್. ನೋಡ್ರೆ ಸೀರೆ ಇಲ್ಲೆ. 'ಯಾರ್ ಕೊಟ್ಟದ್?''ಅತ್ತೆ ಸೀರೆ ಕೊಟ್ಟದ್'ಂತ ಇಂವನ ಮತ್ತೊಂದ್ ಹೆಣ್ಣ್ ಚೆದ್ರೆಂಗಿ ಹೇಳ್ತ್. 'ಅತ್ತೆ ಸೀರೆ ಕೊಟ್ಟೊ. ಅಕ್ಕ ಉಟ್ಟ್‌ದ್ ಹೋತ್'ಂತ. 'ನಾ ಇನ್ನ್ ತರೊಕಾಗಿದ್ದರೆ ಏನ್ ಕಷ್ಟ ಬರೊಕ್? ನಾ ಹೇಂಗೆ ತಾದು? ನಾ ಎಲ್ಲಿಗೆ ಹೋದು? ಇಂತ ಕಷ್ಟಕ್ಕೆ ನನ್ನ ಅವ್ವ ಹಾಕಿ ಬುಟ್ಟತಲ್ಲೆ. ನೀ ಹತ್ತ್‌ದಿನ ಹೋದು [illegible] ಂತ ಹೇಳ್ದಲ್ಲಿಗೆ ಇಷ್ಟೊಂದ್ ದಾರಿ ಮಾಡಿ ಹಾಕಿತಲ್ಲ'ಂತ ಅಲ್ಲಿಂದಲೇ ಅಂವ ಹೊರ್ಟ್ ಹೋತ್.

ಹೋಗಿ ಹೋಗಿ ಎಲ್ಲಿ ಅವರ ಮನೆ ಏನ್'ಂತ ಗೊತ್ತಿಲ್ಲೆ. ದಾರಿಲಿ ಹೋಕನ ಬೀರಿ ಕಿಚ್ಚಿ ಕಾಡಿಗೆ ಬಿದ್ದ್‌ದ್ ಈ ಚವ್‌ಳಿಗ ಒಂದ್ ಕರೆಲಿ ಬೊಬ್ಬೆ ಹಾಕಿಕೊಂಡ್ ಒಳೊ. 'ಅಣ್ಣ ನಾವ್ಗೆ ಒಂದ್ ಮನೆ ತೋರ್ಸಿ. ನಾವ್ಗೆ ಎಲ್ಲಾರ್ ನಾಲ್ಕ್ ಸೊಪ್ಪಿದಲ್ಲಿ ತಕಂಡೋಗಿ ಬುಡಿ. ನಾವ್ ಬಾರಿ ಕಷ್ಟಲಿ ಒಳೊ'ಂತ ಬೊಬ್ಬೆ ಹಾಕಿಕಂಡ್ ಒಳೊ. ಇಂವ ಒಂದ್ ಸೀರೆ ತುಂಡಿಗೆ ಆ ಚವ್‌ಳಿಗಳ ಎಲ್ಲ ಹಿಡ್ದ್ ಹಾಕಿದ್ ಕಟ್ಟಿ ತಕಂಡ್ ಹೋತ್. ತಕಂಡೋಗಿ ನಾಲ್ಕ್ ಸೊಪ್ಪಿದಲ್ಲಿ ಅವರ ಬುಟ್ಟತ್.

ಮತ್ತೊಂದ್ ಕರೆಲಿ ಹೋಕನ ಬೀರಿ ಕಿಚ್ಚಿ ಬಂದ್ ಪಿಜನ್‌ಗಳಿಗೆ ಜಾಗ ಇಲ್ಲದೆ ಅವ್ ಬಿದ್ದ್ ಮರ್ತ್ವವೆ. 'ಅಣ್ಣ ನಾವ್ಗೆ ಒಂದ್ ದಾರಿ ತೋರ್ಸೊಕ್. ಎಲ್ಲಾರ್ ಕರ್ಕಂಡ್ ಹೋಗಿ ನಮ್ಮ ಬುಡೋಕು'ಂತ. ಅವರ್ನೂ ಒಂದ್ ಕರೆಲಿ ತೆಕಂಡೋಗಿ ನಾಲ್ಕ್ ದರ್ಗ್ ಇದ್ದಲ್ಲಿ ಬುಟ್ಟತ್. ಅದಕ್ಕಿಂದ ಮುಂದೆ ಹೋಕನ ಒಂದ್ ಕುಂಬ್ ಮರಲಿ ಅಡಿಂದಲೇ ಕಿಚ್ಚಿ ಹೋಗುಟು. ಮೇಲ ಚೂರ್ ಬಾಕಿ ಉಟ್ಟು. ಅಲ್ಲಿ ಒಂದು ದುಂಬಿ ನಾಲ್ಕ್ ಮೊರಿಗಳ ಮಾಡಿ ಅದ್ ಮರ್ತ್ವದೆ ಗೋಳಾಡ್ದೆ. ಇಂವ ಎಲ್ಲಿಂದಲೋ ನೀರ್ ತಂದ್ ಹಾಕಿ ಆ ಕಿಚ್ಚಿನ ಕೆಡ್ಸಿ ಅವರ ಬೊದ್ಕಿಸಿತ್. ಅಲ್ಲಿಂದ ಮುಂದೆ ಹೋತ್. ಅಲ್ಲಿಂದ ಮುಂದೆ ಹೋಕನ ಒಂದ್ ಪಳ್ಳಲಿ ಎರಡ್ ಗ್ಲಾಸ್‌ನಷ್ಟ ನೀರ್ ಉಟ್ಟು. ಅಲ್ಲಿ ಒಂದ್ ಸೇರ್ ಕಪ್ಪೆಗ ನೀರಿಲ್ಲದೆ ಮರ್ತ್ವವೆ. 'ಅಣ್ಣ ನೀವ್ ಎಲ್ಲಿಗ ಹೋಗೊವು. ನಮ್ಮ ಒಮ್ಮೆ ತಕಂಡೋಗಿ. ನೀರಿದ್ದಲ್ಲಿ ಬುಟ್ಟ್ ಬುಡಿ'ಂತ ಹೇಳ್ವೆ. ಈ ಸೀರ ತುಂಡುಲಿ ಕಪ್ಪೆಗಳ ಎಲ್ಲ ಹಾಕಿ ತಕಂಡೋಗಿ ನೀರಿದ್ದಲ್ಲಿ ಅವರ ಬುಟ್ಟತ್. ಅದಕ್ಕಿಂತ ಆಚೆಗ ಹೋಕನ ಒಂದ್ ಪಳ್ಳಲಿ ನಾಲ್ಕ್ ಯಾಮೆಗ ಬಿದ್ದ್ ಮರ್ತ್ವವೆ. 'ನೀವ್ ಎಲ್ಲಿಗೆ ಹೋಗೋವ್ ಅಣ್ಣ ನಾವ್ಗೆ ಒಂದ್ ದಾರಿ ತೋರ್ಸಿಬುಡಿ. ನೀರಿಲ್ಲೆ. ನಮ್ಮ ಒಮ್ಮೆ ನೀರಿದ್ದಲ್ಲಿ ತಕಂಡೋಗಿ ಬುಡಿ ಹಾಂಗೆಂತ. ಆದುಂತ ಹೇಳ್ತ್ ಅವರ್ನೂ ನೀರಿದ್ದಲ್ಲಿ ತಕಂಡೋಗಿ ಬುಟ್ಟತ್. ಮತ್ತೆ ಅದಕ್ಕಿಂದ ಮುಂದೆ ಹೋಕನ ಒಂದ್ ಹೊಟ್ಟ್ ಬಾಮಿಗೆ ಹಂದಿಗ ಬಿದ್ದ್ ಬೊಬ್ಬೆ ಹಾಕ್ವೆ. 'ಅಣ್ಣಾ ನಮ್ಮ ಒಮ ಮೇಲೆ ಎತ್ತಿ ಹಾಕಿಬುಡಿ. ನಾವ್ಗೆ ದಾರಿ ಇಲ್ಲೆ'ಂತ. ಹೇಂಗೆ ಈ ಹಂದಿಗಳ ತೆಗ್ದ್ ಬಾಮಿಂದ ಅಂವ ಹಾಕುದು. ಹೆಂಗೊ ಏಳ್ಳಿ ಜರ್ಸಿ ಏಳ್ಳಿ ಜರ್ಸಿ ಕಲ್ಲ್ ಕೊದಂಟಿ ಹಾಕಿದ್ ಅವರ ಹೆಂಗಾರ ಮೇಲಕ್ಕೆ ಹಾಕಿತ್. ಈ ಹಂದಿಗಳ ಎಲ್ಲ ಮೇಲೆ ಗುಡ್ಡೆಗೆ ಹತ್ತಿಸಿ ಬುಟ್ಟತ್. ಹತ್ತಿಸಿ ಬುಟ್ಟ್ ಇಂವ ಹೋತ್. ಹೋಗಿ ಹೋಗಿ ದೇವತೆಗ ಕೇಳ್ದೊ, 'ಹೋ.... ನೀವ್ ಎಲ್ಲಿಂದ ಬಂದದ್? ನೀವ ಏನಾಗಿ ಬಂದದ್‌ಂತ?''ನಾ ಬಂದದ್ ನನ್ನ ಗೂಡೆ ಇಲ್ಲಿಗೆ ಬಂದುಟು' ಹಾಂಗೆ. 'ನಿಮ್ಮ ಗೂಡ ಇಲ್ಲಿಗೆ ಬಂದುಟು. ನಿಮ್ಮ ಗೂಡೆನ ನೀವ್ಗೆ ಕೊಡಕಾರೆ ಏಳ್ ಮುಡಿ ರಾಗಿ, ಏಳ್‌ಮುಡಿ ಸಾಸಿ ಮಿಸ್ರ ಮಾಡಿ ಇಲ್ಲಿ ಈ ಕೋಣೆಲಿ ಇಸಿಯೊಳ. ಬೆಳಗಾಕನ ನೀವ್ ಅದರ ಬೇರೆ ಬೇರೆ ಮಾ ಕೊಡೊಕ್. ಅಲ್ಲರೆ ನೀವ್ ಈಗ ಬಸ್ಮ'ಂತ ಹೇಳ್ದೊ. ಆದುಂತ ಹೇಳ್ತ್. ಕತ್ತಲೆ ಕೋಣೆ ಇಂವನ ಸೇರ್ಸಿ ಬಾಗಿಲ್‌ಹಾಕಿ ಬುಟ್ದೊ. 'ಈ ಏಳ್ ಮುಡಿ ರಾಗಿ, ಏಳ್ ಮುಡಿ ಸಾಸಿವೆನ ನ ಹೇಂಗೆ ಬೊಳ್ಪಾಕನ ಬೇರೆ ಬೇರೆ ಮಾಡ್ದು? ನಾ ಬಾಕನ ಒಂದ್ ಉಪಕಾರ ಮಾಡಿ ಬಂದೊ ಪಿಜಿನ್‌ಗಳಿಗೆ ಜಾಗೆ ಇಲ್ಲದೆ ನಾಲ್ಕ್ ದರ್ಗ್ ಇದ್ದಲ್ಲಿ ಬುಟ್ಟ್ ಬಂದೊಳೆ. ಅವ್ ಆದರೂ ಇಂದ ಸಹಾಯ ಆವೊ ನಂಗೆ' ಹಾಂಗೆಂತ ಇಂವ ಮನಸ್ಸ್‌ಲಿ ಗೇನ ಮಾಡಿಕನ್ತ್. ಒಂದ್ ಕಾಲ್ ಗಂ ಕಳಿಯಕನ ಎಷ್ಟೋ ಪಿಜಿನ್‌ಗ ಬಂದ್ ಇದ್ಕೆ ಸೇರ್ದೊ. ಸೇರಿದ್ ರಾಗಿ ಬೇರೆ ಸಾಸ್‌ವೆ ಬೇರೆ ಬೊಳ್ಪಾಕನ ಈ ಏಳ್ ಮುಡಿ ರಾಗಿನೂ ಸಾಸಿವೆನೂ ಬೇರೆ ಬೇರೆ ಮಾಡ್ದೊ. ಅವು ಬಾಗಿಲ್ ತೆ ನೋಡ್ದೊ. ಯಾರ್? ದೇವತೆಗ. ನೋಡ್ರೆ ಎರಡೂ ಬೇರೆ ಬೇರೆ ಉಟ್ಟು. 'ಹೋ ಇಂವ ಜ

ಮೋಸ ಇಲ್ಲೆ. ಆದರೂ ನಿನ್ನ ಗೂಡೆನ ನಿಂಗೆ ಕಳ್ಸಕ್'ಂತಿದ್ದರೆ ಏಳ್‌ಮುಡಿ ಗದ್ದೆ ಗೋರಿಕೆ ಉಟ್ಟು. ಇಂದ್ ಗೋರಿದ್ ಬಿತ್ತಿ ಆಕ್ಕ್. ಹಾಗೆಂತಿದ್ದರೆ ನಿನ್ನ ಗೂಡೆನ ನಾವು ಕಳ್ಸುದ್'. ಕತ್ತಲೆ ಆಕನ ಹೋಗಿ ಗದ್ದೆ ಪುಣಿಲಿ ನಿತ್ತ್ ಆಲೋಚನೆ ಮಾಡ್ತ್. ಈ ಏಳ್ ಮುಡಿ ಗದ್ದೆನ ಹೆಂಗೆ ಇಂದ್ ಗೋರಿದ್ ಬಿತ್ತಿ ಬೊಳ್ಪಾಕನ ಆದು. ಇದು ಆಕಿಲ್ಲೆ 'ನಾ ಬಾಕನ ದಾರಿಲಿ ಕೆಲವು ಜೀವಾದಿಗಳಿಗೆ ಸಹಾಯ ಮಾಡ್ತಾ ಬಂದೊಳೆ. ನಂಗೂ ಒಂದ್ ಉಪಾಕಾರ ಅವ್ ಆವೊ'ಂತ ಗೇಣ ಮಾಡ್ತ್. ಗೇಣ ಮಾಡಿ ಸುಮ್ಮನೇ ಕುದ್ದತ್. ಗದ್ದೆ ಪುಣಿಲಿ ಹಂಞ ಹೊತ್ತಿಗೆ ಹತ್ತ್ ಐನೂರ್ ಹಂದಿಗಳೂ ಹತ್ತೈವತ್ ಯಾಮೆಗಳೂ ಬಂದ್ ಕೆಲ್ಸ ಮಾಡ್ದೊ. ಹೂಡೊ ಕೆಲ್ಸ, ಪುಣಿ ಹಾಕುದು ಗದ್ದೆ ಗೋರ್ದು ಎಲ್ಲ ಕೆಲ್ಸ ಮಾಡಿದ್ ಬೊಳ್ಪಾಕನ ಗದ್ದೆ ಕೆಲಸ ಎಲ್ಲ ಆತ್. ದೇವತೆಗ ಬಂದ್ ನೋಡ್ದೊ. ಗದ್ದೆ ಕೆಲಸ ಎಲ್ಲ ಆಗುಟು. ಗೋರಿ ಬಿತ್ತಿದ್ ಎಲ್ಲ ಆಗುಟು. ಇಂವ ಜನ ಮೊಸ ಇಲ್ಲೆ. ಹಾಗೆಂತ ಹೇಳ್ದೊ 'ಇನ್ನಾದರೂ ನಾವ್ ಕಳ್ಸಿಕಿಲ್ಲೆ. ನೀವ್ಗೆ ಕಳ್ಸಿಕೆ ನಾವ್ಗೆ ಇನ್ನೂ ಕೆಲ್ಸ ಉಟ್ಟು. ನಮ್ಮ ಓ ಅದೊಂದ್ ಎಲೆ ಬೊಳ್ಳಿಲಿ ಎಲೆ ಉಟ್ಟು. ಒಂದ್ ಇಪ್ಪತ್ತೈದ್ ಸೂಡಿ ಈಗತಂದ್ ಕೊಡೊಕ್'ಂತ ಹೇಳ್ದೊ. ನೆಟ್ಟ ಮೇಲೆ ಅದರಂದ ಎಲೆ ಕೊಯ್ತ್ತಲ್ಲೆ. ಅಲ್ಲಿಗೆ ಮೊನ್ಸ ಆದಂವ ಹೋಗಂವನೂ ಇಲ್ಲೆ. ಹತ್ತ್ ಮಾರ್ ಮುಂದೆ ಹೋಕನ ಚವ್‌ಳಿಗ ಬಂದ್ ಕಚ್ಚೆ. ಹೋಗಿ ನಿಂತ್ ನೋಡ್ರೆ ಎಲೆ ಬೊಳ್ಳಿಗೆ ಹೋಕೆ ಸಾಧ್ಯನೇ ಇಲ್ಲೆ. ನಾ ಹೇಂಗೆ ಇಪ್ಪತ್ತೈದ್ ಸೂಡಿ ಎಲೆ ತಂದ್ ಕೊಡ್ದು. 'ನಂಗೆ ಯಾರಾರ್ ಉಪಕಾರ ಆವೊ' ಹಾಂಗೆಂತ ಹೇಳಿ ಎಲೆಬೊಳ್ಳಿ ಬುಡಕೆ ಹೋತ್. ಎಲೆಬೊಳ್ಳಿ ಬುಡಕ್ಕೆ ಹೋಗಿ ಆಕನ ಈ ಚವ್‌ಳಿಗ ಎಲ್ಲ ಕರೆಗೆ ನಿಂತೊ. ಬೇಕಾದಷ್ಟ್ ಎಲೆ ಕೊಯ್ಕನ್ತ್. ಎಲೆ ಕೊಯ್ದ್ ತಕಂಡ್ ಬಂದ್ ಮನೆಗೆ ಕೊಟ್ಟತ್. ಇಪ್ಪತ್ತೈದ್ ಸೂಡಿನೂ ಅಲ್ಲ ಮೂವತ್ತ್ ಸೂಡಿ ಎಲೆ ತಂದ್ ಕೊಟ್ಟತ್. ಇಂವ ಜನ ಆದು. ನಾವ್ ಹೇಳ್ದಕ್ಕೆಲ್ಲ ಇಂವ ಕೆಲ್ಸಮಾಡಿ ಕೊಟ್ಟತ್ ಹಾಂಗೆಂತ ಹೇಳ್ದೊ ಏಳ್ ಸೀರೆನ ಬುಳ್ಗಿದೊ. ಬುಳ್ಗಿದ್ ಈ ಗೂಡೆಗಳ ಸಾಲಿಗೆ ಕುದ್ರಿಸಿದೊ. ಕುದ್ರ್ಸಿ ಏಳ್‌ಸೀರೆನ ಮುಚ್ಚಿ ಇಸಿದೊ. ಮುಚ್ಚಿ ಇಸಿ 'ಇದರ್ಲ್ಲಿ ನಿನ್ನ ಗೂಡೆ ಯಾವುದುಂತ ಹೇಳಿ ನೀ ಮುಟ್ಟೊಕ್. ಬೇರೆ ಗೂಡೆಗಳ ನೀ ಮುಟ್ಟಿಕೆ ನೊತ್ತ್. ಬೇರೆ ಗೂಡೆನ ನೀ ಮುಟ್ರೆ ನೀ ಇಲ್ಲೆ ಬಸ್ಮ ಆವೊ. ನಿನ್ನ ಗೂಡೆನ ನೀ ಮುಟ್ಟೊಕ್' ಹಾಂಗೆಂತ ಏಳ್ ಸೀರೆನ ಮೇಲೆ ಮೇಲೆ ಮೇಲೆ ಮುಚ್ಚಿಸಿದೊ. 'ಯಾವ ಗೂಡೆಂತ ನಾ ಹೋಗಿ ಮುಟ್ಟುದು? ಇಷ್ಟೆಲ್ಲ ಕಷ್ಟ ಪಟ್ಟೆನಾ ಯಾರಾರ್ ಒಬ್ಬ ನಂಗೆ ಉಪಕಾರ ಮಾಡ್‌ವೊ'ಂತ. ಅಷ್ಟಾಕನ ಈ ದುಂಬಿ ಉಟ್ಟಲ್ಲ ಅದೇ ಗೂಡೆನ ತಲೆ ಸುತ್ತ ಬಂದ್ ಹಾರಾಡ್ತಾ ಉಟ್ಟು. ಅಲ್ಲೇ ಕೈ ಹಾಕಿತ್ ಅಂವ. ಕೈ ಹಾಕಿ ಎತ್ತಿ ಮೇಲೆ ತೆಕನ್ತ್. ಇದೇ ನನ್ನ ಗೂಡೆಂತ. ಸರಿ. ನಿನ್ನ ಗೂಡೆ ಹೌದ್'ಂತ ಹೇಳ್ದೊ. ಗೂಡೆನ ಕರ್ಕನ್ತ್ ಇಂವ ಮನೆಗೆ ಬಾತ್. ಮನೆಗೆ ಬಂದ್ ಅವ್ ಪೊರ್ಲ್ಲಿ ಒಳೊ. ನೀವ್ ಹೋಗಿ ನೋಡಿ ಬನ್ನಿ. [ಕಥಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 40.ಚೆದ್ರಂಗಿ ಹೆಣ್ಣ್ ಕತೆ – ಪಠ್ಯ 2

ಒಂದ್ ಊರ್ಲಿ ಒಂದ್ ಅರ್ಸು ಒಂದ್ ಅಬ್ಬೆ. ಅವ್ಕೆ ಪ್ರಾಯ ಆತ್. ಅವ್ಕೆ ಏಳ್ ಗಂಡ್ ಮಕ್ಕ ಅವ್ ಮೊದ್ವೆ ಆಕ್ಕೆ ಆದೊ. ಅಜ್ಜ ಅಜ್ಜಿಗೆ ಪ್ರಾಯ ಹೋತ್. ಏಳ್ ಗಂಡ್ ಮಕ್ಕಳ ಕರ್ದ್ ಹೇಳ್ದೊ 'ನೀವು ಮೊದ್ವೆ ಆಕ್ಕ್ ನಾವ್ಗೆ ಪ್ರಾಯ ಆತ್. ನೀವು ಏಳ್ ಜನ ಅಣ್ಣ ತಮ್ಮಂದಿರ್ ಒಂದೆ ಮನೆಂದ ಏಳ್ ಹೆಣ್ಣ್ ತರೊಕು'ಂತ ಹೇಳ್ದೊ. ಬೊಳ್ಪಿಗೆ ಎದ್ದೊ. ಮೂಡುದಿಕ್ಕಿಗೆ ಹಣದ ಬುತ್ತಿನು, ಗಂಜಿ ಬುತ್ತಿನು ಕಟ್ಟಿಕಂಡ್ ಹೆಣ್ಣ್ ಮಾತಾಡಿಕೆ ಹೋದೊ. ಎಲ್ಲಿ ಹೋದರ್ ಆರ ಹೆಣ್ಣಲ್ಲದೆ ಏಳ್ ಹೆಣ್ಣ್ ಇಲ್ಲೆ. ವಾಪಾಸ್ ಮನೆಗೆ ಬಂದೊ. ಮನೆಗೆ ಬಂದ್ ಅಜ್ಜ ಅಜ್ಜಿನ ಕರ್ದ್ ಹೇಳ್ದೊ. 'ಎಲ್ಲಿ ಹೋದರೂ ಆರಲ್ಲದೆ ಏಳ್ ಗೂಡೆಗ ಇಲ್ಲೆ. ನಾವ್ ಏನ್ ಮಾಡ್ದು?' ಅಂತ ಹೇಳ್ದೊ. ಹಿಂಗೆ ನಾಲ್ಕ್ ಕಡೆಗೆನೂ ಹೋಗಿ ಆರೇ ಅಲ್ಲದೆ ಏಳ್ ಹೆಣ್ಣ್ ಮಕ್ಕ ಇಲ್ಲೆ. ಆಗ ಅಜ್ಜ ಅಜ್ಜಿ ಹೇಳ್ದೊ 'ನೀವ್ ಆರ್ ಜನ ಮೊದ್ವೆ ಆಗಿ. ಸಣ್ಣ ತಮ್ಮನ ಪ್ರೀತಿಯಿಂದ ನೋಡಿ'ಂತ ಹೇಳ್ದೊ. ಅಂದರೆ ಇನ್ನ್ ಆರ್ ಜನ ಮೊದ್ವೆ ಆದವೆಂತ ಹೇಳ್ದೊ. ಆರ್ ಗೂಡೆಗಳ ನೋಡ್ದೊ ಒಂದೇ ಮನೆಂದ ಆರ್ ಗೂಡೆಗಳ ಮೊದ್ವೆ ಆದೊ. ಮೊದ್ವೆ ಎಲ್ಲ ಆತ್. ಅಜ್ಜ ಅಜ್ಜಿ ಸತ್ತೊ ಅಣ್ಣಂದಿರೆ ಅಷ್ಟರ ತನಕ ತಮ್ಮನ್ ಅಲಾಯಿಕ್ ನೋಡಿಕೊಂಡಿದ್ದೊ.

ಒಂದ್ ದಿನ ದೊಡ್ಡ ಅತ್ತಿಗೆನೊಟ್ಟಿಗೆ ಹೇಳ್ತ್ 'ಅತ್ತಿಗೆ ಅತ್ತಿಗೆ ನನ್ನ ತಲೆಂದ ಹೇನ ನೋಡಿ'ಂತ. ಆಗ ಅತ್ತಿಗೆ ಕರ್ದೊ ತೊಡೆ ಮೇಲೆ ಕುದ್ರಿಸಿದೊ. ಹೇನ್ ನೋಡಿ ನೋಡಿ ಸುಮಾರ್ ಹೊತ್ತಾಕನ ಹೇಳ್ತ್. 'ಅತ್ತಿಗತ್ತಿಗೆ ನಿಮ್ಮ ಮೊಲೆ ಗುಂಡ್ ಕಲ್ಲ್‌ನ ಹಾಂಗೆ ಹೆಟ್ಟಿದೆ'ಂ ಹೇಳ್ತ್. ಆಗ ಅತ್ತಿಗೆಗೆ ಕೋಪ ಬಾತ್. ಅತ್ತಿಗೆ ಹೇಳ್ದೊ 'ನೀ ಬೆದ್ರೊಳಗಿದ್ದ ಚೆದ್ರಂಗಿ ಹೆಣ್ಣ ತಂಬ'ಂತ ಹೇಳಿ ಅಂವನ ಬೆರ್ಸಿದೊ. ಅಲ್ಲಿಂದ ಅಂವ ಮರ್ಸ್ಟ್ ಕಂಡ್ ಹೋತ್. ಹೋ ಹೋಗಿ ಒಂದಾನೊಂದ್ ಕಾಡ್ಲಿ ಹೋಕನ ಒಂದ್ ಅಜ್ಜಿ ಸಿಕ್ಕಿತ್. ಅಜ್ಜಿ ಕೇಳ್ತ್ 'ನೀ ಎಲ್ಲಿ ಹೋದು ಮಂಜ?' ನನ್ನ ಅತ್ತಿಗೆ ಹೇಳ್ದೊ ಬೆದ್ರೊಳಗಿದ್ದ ಚೆದ್ರಂಗಿ ಹೆಣ್ಣ್‌ನ ತಾ ಹಂಗೆ ಅತ್ತಿ ಕಳ್ಸಿದೊ ನನ್ನ. ಏನ್ ಮಾಡ್ದು?' ಅಂದರೆ 'ಓ ಅಲ್ಲಿ ಒಂದ್ ಹತ್ತೆ ಮರ ಉಟ್ಟು. ಆ ಹ ಮರದ ಅಡಿಲಿ ನೀ ಹನ್ನೆರಡ್ ವರ್ಷ, ಹನ್ನೆರಡ್ ದಿನ, ಹನ್ನೆರಡ್ ಗಂಟೆ, ತಪಸ್ಸ್ ಮಾ ಕುದ್ರೊಕು. ಆಗ ಹೂವ್ ಹೋಗಿ ಕಾಯಾಗಿ ಹಣ್ಣ್ ಆಗಿ ಒಡ್ದ್ ಬಾಕನ ಆ ಹಣ್ಣ ಹಿಡ್ಕೊನೊಕ್. ಆಗ ಅದ್ ಬೆದ್ರೊಳಗಿದ್ದ ಚೆದ್ರಂಗಿ ಹೆಣ್ಣಾದೆ'ಂತೆ ಹೇಳ್ತ್ ಅಜ್ಜಿ. ಹಾಂಗೆ ಇಂ ತಪಸ್ಸ್‌ಗೆ ಕುದ್ದಾಕನ ಹತ್ತೆ ಮರಲಿ ಹೂವ್ ಹೋಗಿ ಕಾಯಾಗಿ ಹೆಣ್ಣಾಗಿ ಇಂವನ ಕೈಗೆ ಸಿಕ್ಕಿ ಇಂವ ಅಲ್ಲಿಂದ ವಾಪಾಸ್ ಕರ್ಕೊಂಡ್ ಬಾಕನ ದೊಡ್ಡೊ ಒಂದ್ ಕಾಡಿಗೆ ಬಾಕನ ಅದ್ಕೆ ಕುಡಿಯ ಆತ್. ಅಲ್ಲಿ ಒಂದ್ ಬಾಮಿ ಇತ್ತ್. ಅಲ್ಲಿ ನಾವು ನೀರ್ ಕುಡಿಯೊಣಂತ ನೀರೆಲ್ಲ ಕುಡ್ದೊ. ಇ ಅಲ್ಲಿ ಮಲ್ಗಿದೊ. ಮಲ್ಗಿದ್ ಆಕನ ಆ ಬಾಮಿಗೆ ಸುಮಾರ್ ಜನ ಕುಂಬಾರ್ತಿಗ ನೀರಿಗೆ ಬಾತಿದ

ನೀರಿಗೆ ಬಂದ ಎಲ್ಲಾ ಕುಂಬಾರ್ತಿಗ ನೀರ್ ತೆಕಂಡ್ ಹೋದ್ರೊ. ಒಂದ್ ಕುಂಬಾರ್ತಿ ನಿತ್ತತ್. ಅಕ್ಕಕ್ಕಾ ನಿಮ್ಮ ಚೈನೊಮ್ಮೆ ಕೊಡಿ ನಂಗೆ'ಂತ ಹೇಳ್ತ್. ಚೈನ್ ಕೊಡಿಂತ ಹೇಳ್ಕನ ಚೈನ್‌ಕೊಟ್ಟತ್. ಅಕ್ಕಕ್ಕಾ ನಿಮ್ಮ ಸೀರೆ ಒಮ್ಮೆ ಕೊಡಿ'ಂತ ಹೇಳ್ತ್. ಸೀರೆ ಕೊಟ್ಟತ್. 'ಅಕ್ಕಕ್ಕಾ ನಿಮ್ಮ ಬೊಟ್ಟ್ ಎಲ್ಲ ಒಮ್ಮೆ ಹಾಕಿ ನಂಗೆ'ಂತ ಹೇಳ್ತ್. ಅದೆಲ್ಲ ಕೊಟ್ಟತ್. ಚೆದ್ರಂಗಿ ಹೆಣ್ಣ್‌ನ ವೇಶ ಮಾಡ್ತ್. ಈ ಗೂಡೆನ ನೂಕಿದ್ ಬಾಮಿಗೆ ಹಾಕಿತ್. ಅಂವ ಮಲ್ಗಿದಲ್ಲಿಗೆ ಅವಳ ತೊಡೆನ ಹಾಂಗೆ ಇಸಿತ್. ಇದ್ ಮರ್ಡಿಕೆ ಸುರ್ ಮಾಡ್ತ್. "ಆ ಊರ್ ಗಾಳಿತಾಗಿ, ಈ ಊರ್ ಬಿಸಿಲ್ ತಾಗಿ, ನನ್ನೊಂದ್ ಕಣ್ಣ್ ಹೋಯ್ತುಲ್ಲಾ ಹರಹರಾ"ಂತ. ಅಷ್ಟೊತ್ತಾಕನ ಅಂವಂಗೆ ಎಚ್ಚರಿಕೆ ಆತ್. ನಾ ಆ ಊರಿಂದ ಚೆದ್ರಂಗಿ ಹೆಣ್ಣ್ ತಂದ್ ಈ ಊರಿಗೆ ಎತ್ತಿಕನ ಅದರ ಕಣ್ಣ್ ಒಂದ್ ಹೋತ್‌ಂತ ಹೇಳ್ತ್. ಇನ್ನೆನ್ ಮಾಡ್ದುಂತ ಕರ್ಕಂಡ್ ಬಾತ್.

ಗೂಡೆಂತ ಹೇಳಿ ಆರೆತಿ ಎಲ್ಲ ಮಾಡಿ ಆಕನ ಬೊಟ್ಟ್ ಹಾಕಿಕೆ ಬುಟ್ಟಿಲ್ಲೆ. ಆಗ ಅತ್ತಿಗೆಕ್ಕ ಹೇಳ್ದೊ. 'ಇಂವ ಕುರ್‌ಡಿ ಕುಂಬಾರ್ತಿನ ತಂದೊಳದ್. ಇದ್ ಬೊಟ್ಟ್ ಹಾಕಿಕೆ ಬುಡ್ದುಲ್ಲೆ'ಂತ ಹೇಳ್ದೊ. ಹೇಳಿ ಆಕನ ಇಂವಂಗೆ ಬೇಜಾರ್ ಆತ್. ಇಂವ ಅದರ ಕರ್ಕಂಡ್ ಕೋಣೆಲಿ ಇದ್ದೊ ಇಬ್ಬರ್. ಇಂವ ಯಾಗೋಳ್ ಊಟ ಮಾಡ್ಕನ ಆಗಲಿ, ಎಂತ ಮಾಡ್ಕನನೂ ಹೇಳ್ದು. 'ನೀವು ಕುರ್ಡಿ ಕುಂಬಾರ್ತಿನ ಕೈಲಿ ಮಾಡಿದ ಅಡ್ಗೆನ ಉಂಬೊದ್'. ಇಂವ ಒಂದ್ ದಿನ ನಾಯಿನ ಕರ್ಕೊಂಡ್ ಬೇಟೆಗೆ ಹೋತ್. ಬೇಟೆಗೆ ಹೋಗಿ ನೀರ್ ಕುಡಿಯಕೆ ಬಾತ್. ಎಲ್ಲಿ ನೀರುಟುಂತ ಹೋಗಿ ನೋಡ್ಕನ ಆ ಬಾಮಿಲಿ ನೀರುಟು. ಆ ಬಾಮಿಲಿ ಒಂದ್ ತಾವರೆ ಹೂವಿತ್ತ್. ಆ ತಾವರೆ ಹೂವು ಇಂವನ ನೋಡ್ಕನ ಹಕ್ಕಲೆ ಹಕ್ಕಲೆ ಬಾತ್. ಆ ತಾವರೆ ಹೂವುನ ಇಂವ ಎಡ್ಕಂಡತ್. ತಾವರೆ ಹೂವುನ ತಂದ್‌ದ್ ದಾರಂದಲಿ ಇಸಿತ್. ದಾರಂದಲಿ ಇಸಿ ಆಕನ ಇಂವಂಗೆ ವಾಪಾಸ್ ಹಿಂಗೆ ಹೇಳ್ದು. 'ಯಾಗೋಳ್ ನೋಡ್ ಕುರ್ಡಿ ಕುಂಬಾರ್ತಿ ಮಾಡಿದ ಅನ್ನ ಅಡಿಗೆನೇ ನೀವು ಉಂಬೊದು'. ಇಂವಂಗೆ ಇದರ ಕೇಳಿ ಕೇಳಿ ಆಕನ ಇದ್ ಎಂತ ವಿಷಯ. ಯಾಗೋಳ್ ಹಿಂಗೆ ಹೇಳ್ದುಂತ ಅಷ್ಟಾಕನ ಒಂದ್ ಗುಬ್ಬಿ ಬಾತ್. ಆ ಗುಬ್ಬಿನೊಟ್ಟಿಗೆ ಇಂವ ಹೇಳ್ತ್, 'ಎಂತ ಗುಬ್ಬಕ್ಕ ಹಿಂಗೆ ಯಾಗೋಳ್ ಹೇಳ್ದು'ಂತ. ಅಷ್ಟಾಕನ ಗುಬ್ಬಿ ಹೇಳ್ತ್ 'ಆ ಹೂವು ನಿಮ್ಮ ಮುಂದೆನ ಚೆದ್ರಂಗಿ ಹೆಣ್ಣ್. ಅದ್ ತಾವರೆ ಆಗಿ ನಿಮ್ಮ ಕೈಗೆ ಸಿಕ್ಕಿಯೊಳದ್. ನೀವು ಅದ್ಕೆ ಯಾಗೋಳು ಪೂಜೆ ಮಾಡೊಕು. ಅಂದರೆ ಅದ್ ಚೆದ್ರಂಗಿ ಹೆಣ್ಣಾಗಿ ಬಂದದೆ'ಂತ ಹೇಳ್ತ್. ಹಂಗೆ ಇಂವ ಯಾಗೊಳು ಇದಕ್ಕೆ ಪೂಜೆ ಮಾಡಿಕಂಡ್ ಕುದ್ದತ್. ಅಷ್ಟಾಕನ ಒಂದ್ ದಿನ ಅದ್ ಚೆದ್ರಂಗಿ ಹೆಣ್ಣಾಗಿ ಬಾತ್. ಹೆಣ್ಣಾಗಿ ಬಾಕನ ಈ ಕುರ್ಡಿ ಕುಂಬಾರ್ತಿನ ತಕಂಡೋಗಿ ತಲೆಕಡ್ತ್. ಅಲ್ಲಿಗೆ ಮುಗ್ತ್. [ಕಥಾ ನಿರೂಪಕಿ:ತಾರಾಮಣಿ ಪಡ್ಪು; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 41. ಆರ್ ಜನ ಅಣ್ಣ ತಮ್ಮಂದೆರಿಗೆ ಒಂದೇ ತಂಗೆನ ಕತೆ

ಒಂದಾನೊಂದು ಊರ್ಲಿ ಒಂದು ಅರ್ಸು. ಆ ಅರ್ಸಂಗೆ ಏಳುಜನ ಮಕ್ಕ. ಏಳ್ ಮಕ್ಕಳ್‌ಲಿ ಒಂದು ಹೆಣ್ಣ್ ಆರ್ ಗಂಡ್. ಆ ಗಂಡ್ ಮಕ್ಕಳಿಗೆ ಎಲ್ಲವ್ಕೂ ಮೊದ್ವೆ ಆತ್. ಮೊದ್ವೆ ಆತ್ ಹೆಣ್ಣ್ ಗೂಡೆ ಒಂದು ಒಳ್ತ್. ಅದರ ಅವ್ವ ಅಪ್ಪ ಎಲ್ಲ ಸತ್ತು ಹೋದ್ರೊ. ಇದರ ಲಾಯಕ್‌ಲಿ ನೋಡ್ತಾ ಇದ್ದೊದ್ದಗಡ. ಇದ್ಕೆ ಏನೂ ಒಂದು ಕಷ್ಟ ಕೊಡದೆ. ಅದ್ಕೆ ಯಾವುದು ಬೇಕ್ ಬೇಕಾದಂಗೆ ನೋಡಿಕಂಡ್ ಇದ್ದೊ ಗಡ. ಆಗ ಒಬ್ಬ ಬಿಕ್ಷೆ ಬೇಡಂವ ಬಾತ್‌ಗಡ. ಬಿಕ್ಷೆ ಬೇಡಂವ ಬಾಕನ ಇದರ ಅತ್ತಿಗೆಕ್ಕ ಬಿಕ್ಷೆ ಕೊಡ್‌ಕನ 'ನಿಮ್ಮ ನಾದಿನಿ ಬರೊಕು'ಂತ ಹೇಳ್ತ್‌ಗಡ. 'ಅದ್ ಬಾಕಿಲ್ಲೆ ಅದರ ನಾವು ಹೊರಗೆಲ್ಲೊ ಕಳ್ಸಟ ಇಲ್ಲೆ. ಉಪ್ಪರಿಗೆಂದ್ ಬಾಕಿಲ್ಲೆ ನೀವು ತಕನಿ'ಂತ. 'ಅದ್ ಆಕಿಲ್ಲೆ ಅವರ ಕೈಂದಲೇ ನಂಗೆ ಬಿಕ್ಷೆಕೊಡೊಕು'ಂತ ಹೇಳ್ತ್‌ಗಡ. ಮತ್ತೆ ಏನ್ ಮಾಡ್ದು ? ಹಾಂಗೆ ಅದರ ಬಾಕೆ ಮಾಡಿ ಅದರ ಕೈಲಿ ಬಿಕ್ಷೆ ಕೊಟ್ಟೊಗಡ. ಕೊಟ್ಟಾಕನ ಅದರ ನೋಡಿದ ಅಂವ ಹೇಳ್ತ್‌ಗಡ. ಇದ್ಕೆ ಮೂಗಿಗೊಂದು ಮುತ್ತು ತಲೆಗೊಂದು ಬೊಟ್ಟ್ ಇಲ್ಲದೆ ಏನೂ ಅಂದ ಇಲ್ಲೆ. ಆಗ 'ನಾವು ಇಷ್ಟೆಲ್ಲ ಸೌಕರ್ಯ ಮಾಡಿಕೊಟ್ಟ್ ಇದೊಂದು ಅಂವ ಕೊರತೆ ಹೇಳ್ತಲ್ಲ'. ಹಾಂಗೆ ಇದ್ಕೆ ಈಗ ಇದ್ ಮಾಡೊಕೂಂತ ಈ ಅಣ್ಣಂದಿರ್ ಆರ್ ಜನ ಹೊರ್ಟ್ರೊ. ಹೊರ್ಟ್‌ಕಂಡ್ ಹೋಕನ ಅತ್ತಿಗೆಕ್ಕಲೊಟ್ಟಿಗೆ ಹೇಳ್ದೊ, 'ನಮ್ಮ ತಂಗೆನ ಬಂಗ ಬರ್ಸ್‌ಬೇಡಿ, ಅದರ ಕೈಲಿ ಕೆಲ್ಸ ಮಾಡ್ಸಿಬೇಡಿ. ನಾವು ಬಾವಲ್ಲಿವರೇಗೆ ಅದರ ಒಳ್ಳೊ ಪ್ರೀತಿಲಿ ನೋಡಿಕಂಡ್ ಇರಿ'ಂತ. ಆತ್‌ಂತ ಒಪ್ಪಿಕಂಡೊ. ಇವು ಅತ್ತಿಗೆಕ್ಕ ಹಂಗೆ ಇದ್ದೊ. ಇವು ಆರು ಜನನೂ ಅಣ್ಣಂದಿರು ಹೋದ್ರೊ.

ಹೋಗಿದ್ ಆದ ಮೇಲೆ ಇವು ಏನ್ ಮಾಡ್ದೊ ಈ ಅತ್ತಿಗೆಕ್ಕ ಚೆನ್ನೆಮಣೆ ಆಡಿಕೆ ಕುದ್ದೊ. ಚೆನ್ನೆಮಣೆ ಆಡಿಕೆ ಕುದ್ರುಕನ ಇದರ ಕರ್ದೊಗಡ. 'ಚೆನ್ನೆಮಣೆ ಆಡಿಕೆ ಬಾ'ಂತ 'ನಾ ಬಾದ್ಲೆ'ಂತ ಹೇಳ್ತ್‌ಗಡ. ಇವು ಬಾಕ್ಕೆ ಒತ್ತಾಯ್ ಮಾಡ್ದೊ. ಎಷ್ಟು ಒತ್ತಾಯ ಮಾಡ್ರೂ ಇದ್ ಬಾತ್ಲೆ. ಕಡೆಗೆ ಇವು ಬೇಕ್ ಬೇಕಾದಂಗೆ ಸಿಕ್ಕಾ ಪಟ್ಟೆ ಬೈದೊ. ಬೊಯಿಗಳ್ ಆಕನ ಅದ್ ಸಿಟ್ಟ್‌ಲಿ ಮರ್ಟ್‌ಕಂಡ್ ಸೀದಾ ಹೊರ್ಟ್ ಹೋತ್‌ಗಡ. ಹೊರ್ಟ್ ಹೋಕನ ಇವು ಹೇಳ್ದೊ ಗಡ. 'ನೀ ಚೆನ್ನದ ತೊಟ್ಲು ಬೆಳ್ಳಿ ಸಂಕಲೆ ಹಾಕಿ, ಗಂಡ್ ಕೂಸುನ ಹೆತ್ತ್, ಚೆನ್ನದ ಉರ್ಲಿಲಿ ಬೆಳ್ಳಿ ಸೌಂಟ್‌ಲಿ ತುಪ್ಪ ಹೊಯಿಕಂಡ್ ಬಾಕನ ನಾವು ಉಂಬಕೆ ಬಾಕಿಲ್ಲೆ ಮುಂಡೆಂತ' ಹೇಳ್ದೊಗಡ. ಹಾಂಗೆ ಹೇಳ್ದೊ. ಇದ್ ಅದರ ಕೇಳಿಕನ್ತ್ ಹೋತ್.

ಹೋಗಿ ಒಂದಾನೊಂದು ಊರಿಗೆ ಎತ್ತಿತ್. ಎತ್ತಿ ದೊಡ್ಡಾ ಅರಣ್ಯಕೆ ಹೊತ್‌ಗಡ. ಆ ಅರಣ್ಯಲಿ ಒಂದು ಅರಸುನ ಮಂಜನ ಗುರ್ಜಿಕಟ್ಟಿ ಅದರ್ಲಿ ಹಾಕುದುಗಡ. ಇದ್ಕೆ ಅಲ್ಲಿಗೆ ಎತ್ತಿಕನ ಕತ್ತಲೆ ಆತ್. ಅಲ್ಲೆ ನಿಂತತ್ ಇದ್. ನಿಂತ್ ರಾತ್ರೆ ಆಕನ ಇಂವ ಗುರ್ಜಿಂದ ಎದ್ ಬಾತ್‌ಗಡ. ಬಂದ್ ಇದರೊಟ್ಟಿಗೆ ಮಾತಾಡ್ತ್. ಎಲ್ಲ ವಿಷಯ ಕೇಳ್ತ್. ಇದ್ ಹೇಳ್ತ್. 'ನಂಗೆ ಹಿಂಗಿಂಗೆ ಹೇಳ್ದೊ. ಹಿಂಗಿಂಗೆ ಆತ್'ಂತ. 'ಅಣ್ಣಂದಿರ್ ಹೀಂಗಿಂಗೆ ಹೋಗೋಳಾ'ಂತ. ಹಾಂಗೆ ಅಲ್ಲಿ

ಅವು ಇದ್ದೊ. ಅವ್ಕೆ ಮತ್ತೆ ಅವರೊಳಗೆ ಜೋಸ್ತಿಯಾತ್. ಜೋಸ್ತಿಯಾಗಿದ್ ಅಲ್ಲೇ ಇತ್ತ್ ಇದ್. ಮತ್ತೆ ಇದ್ ಗರ್ಭಿಣಿಯಾತ್. ಗರ್ಭಿಣಿಯಾಗಿ ತಿಂಗ ಆಗಿ ಆಕನ ಇದ್ಕೆ ಹೆರಿಗೆಗೆ ನೆಲೆ ಆಕ್ಕಲ್ಲ. ಹಂಗೆ ಏನ್ ಮಾಡೊಕುಂತ ಅವನೊಟ್ಟಿಗೆ ಕೇಳ್ಕನ 'ನೀ ಇಂತ ದಾರಿಲೆ ಹೋಗ್. ನನ್ನ ಅವ್ವ ಅಪ್ಪನ ಮನೆ ಇಂಥಲ್ಲಿ ಉಟ್ಟು. ಅಲ್ಲಿ ಹೋಗಿ ನೀ ಕೇಳ್. ಅವು ಒಪ್ಪುವೊ'ಂತ ಹೇಳ್ತ್‌ಗಡ. ಆತ್ ಅಂದರೆಂತ ಹೋತ್‌ಗಡ. ಹೋಗಿದ್ ಅದೇ ಮನೆಲಿ ಕೇಳ್ತ್‌ಗಡ. ನಂಗೆ ಯಾರೂ ಇಲ್ಲೆ. ಹಿಂಗಿಂಗೆ ಆಗಿ ಹೋತ್. ನಂಗೆ ಹೆರ್ಗೆಗೆ ನೀವು ಜಾಗೆ ಕೊಡೊಕು'ಂತ. ಆತ್‌ಂತ ಹೇಳ್ದೊಗಡ. ಹಂಗೆ ಇದ್ ಅಲ್ಲಿ ಇತ್ತ್ ಇತ್ತ್ ಇದ್‌ಗಂಡ್‌ಕೂಸ್‌ನ ಹೆತ್ತತ್. ಗಂಡ್ ಕೂಸುನ ಹೆತ್ತ್‌ದ್ ಪೆದ್ದೋಳ್ತಿ ಎಲ್ಲ ನೋಡಿಕೆ ಜನ ಮಾಡ್ದೊ. ಅವು ಜನ ಮಾಡಿ ಬಾರಿ ಲಾಯಿಕ್ ಇದರ ಆರೈಕೆ ಮಾಡ್ದೊ. ಇಂವ ಯಾಗೊಲ್ ಮಧ್ಯ ರಾತ್ರಿಯಾಕನ ಬಾದುಗಡ. ಬಂದ್‌ದ್ ಇದರ್ಲಿ ಮಾತಾಡಿ 'ಹೇಂಗೆ ನನ್ನ ಅಪ್ಪ ಅವ್ವ ನಿನ್ನ ಲೈಕ್‌ಲಿ ನೋಡ್ವನೊ'ಂತ ಎಲ್ಲ ಕೇಳ್ದು. 'ನನ್ನ ಲೈಕ್ ನೋಡ್ವೆ ಏನೂ ತೊಂದರೆ ಇಲ್ಲೆ'ಂತ. ಅಂವ ಮಾತಾಡಿ ರಾತ್ರೆ ಹೋಗಿ ಬುಡ್ದು. ಹಿಂಗೆ ಒಂದು ಎರಡ್ ಮೂರು ದಿನ ಪೆದ್ದೋಳ್ತಿ ನೋಡುವ ಹೆಂಗ್‌ಸ್ ನೋಡಿದ್ ಒಂದು ದಿನ ಆ ಅಬ್ಬೆನೊಟ್ಟಿಗೆ ಹೇಳ್ತ್‌ಗಡ. 'ಹಿಂಗಿಂಗೆ ಬಂದವೆ ಒಂದು ಜನ. ಅದರ ನೋಡಿಕೆ ಆಕನ ನಿಮ್ಮ ಮಂಜನೇ ಆಗಿರೊಕೂಂತ. ಅದ್ ಹೌದೊ. ಹೌದು. ಹಾಂಗೆ ಆದರೆ ಇಂದ್ ಪೆದ್ದೋಳ್ತಿನಕ್ಕಲೆ ನಾ ಮಲ್ಗಿನೆ. ಆತಂದರೆ ಹಾಂಗೆ'. ಅಂದ್ ಇದ್ ಮಲ್ಗಿತ್ ಗಡ. ಮಲ್ಗಿ ಮಧ್ಯರಾತ್ರೆ ಆಕನ ಬಾತ್‌ಗಡ ಇಂವ ಬಾತ್. ಇದರೊಟ್ಟಿಗೆ ಇದೇ ರೀತಿ ಮುಂದೆ ಕೇಳ್ದಂಗೆ ಕೇಳ್ತ್. ಮತ್ತೆ ಅಂವ ಹೊರ್ಟ್ ಹೋತ್. ಮೂರನೆ ದಿನ ಹಾಂಗೆ ಕೇಳಿ ಹೊರಡ್‌ಕನ ಇದ್ ಹಿಡ್ಕನ್ತ್ ಹಿಂದೆಂದ ಮಂಜನ. ಹಿಡ್ದ್ ಮತ್ತೆ ಹೋಕ್ಕೆ ಬುಟ್ಟತ್ಲೆ. ಹಾಂಗೆ ಆತ್ ಹದ್ನಾರ್ ಆತ್. ಕೂಸುನ ತೊಟ್ಲಿಗೆ ಹಾಕುವ ಕ್ರಮ ಉಟ್ಟಲ್ಲ. ಆ ತೊಟ್ಲ್ ಹಾಕುವ ಕ್ರಮ ಎಲ್ಲ ಮಾಡ್ದೊ ಇವು. ಊರಿಗೆ ಎಲ್ಲ ಡಂಗುರ ಹೊಡಿಸಿದೊ. ಹಾಂಗೆ ಎಲ್ಲ ಬಂದೊ. ಬಂದ್ ಇದರ ಅಣ್ಣಂದರ್ ಅತ್ತಿಗೆಕ್ಕಳೂ ಬಂದೊಳೊ. ಬಂದ್ ಎಲ್ಲ ಕೂಸುನ ತೊಟ್ಲಿಲಿ ಹಾಕಿ ಆತ್. ಹಾಕಿ ಆಗಿ ಎಲ್ಲವ್ಕೂ ಊಟಕೊಟ್ಟೊ. ಊಟ ಕೊಡ್ಸಿಕನ ಇವ್ಕೆ ಮೊಣ್ಣ್‌ನ ಪಾಯ್ಸ ಮಾಡ್ಸಿಟು ಗಡ. ಈ ಅತ್ತಿಗೆಕ್ಕಳಿಗೆ. ಅಣ್ಣಂದಿರಿಗೆ ಹಿಂಗೆ ಒಳ್ಳೊಳ್ಳ ತಿಂಡಿ ಬೇರೆ ಮಾಡ್ಸಿಟು. ಹಾಂಗೆ ಎಲ್ಲ ಕುದ್ದೊ. ಕುದ್ದಾಕನ ಇದೇ ಇಕ್ಕಿಕಂಡ್ ಬಾತ್‌ಗಡ. ಅಣ್ಣಂದಿರಿಗೆ ಪಾಯ್ಸ ತಿಂಡಿಗಳ ಇಕ್ಕಿತ್ ಗಡ. ಇವ್ಕೆ ಮೊಣ್ಣ್‌ನ ಪಾಯ್ಸ ಇಕ್ಕಿತ್. ಇಕ್ಕಿ ಕಡೆಗೆ ತುಪ್ಪ ಹೊಯಿಕಂಡು ಬಾತ್‌ಗಡ. ತುಪ್ಪ ಹೊಯಿಕಂಡ್ ಬಂದ್‌ದ್ ಎಲ್ಲ ಆಗಿದ್ 'ಊಟ ಮಾಡಿ'ಂತ ಹೇಳ್ತ್. ಊಟ ಮಾಡ್ದೊ ಇವು. ಊಟ ಮಾಡಿದ್ ಆಕನ ಕೇಳ್ತ್‌ಗಡ ಇದ್. ಅಂದ್ ನೀವು ಚಿನ್ನದ ತೊಟ್ಟಿಲ್‌ಲಿ, ಬೆಳ್ಳಿ ಸಂಕೊಲೆಲಿ ಗಂಡ್‌ಕೂಸ್‌ನ

ತೊಟ್ಟಿಲ್ ಹಾಕಿಕನ, ಚಿನ್ನದ ಊರ್ಲಿ ಬೆಳ್ಳಿ ಸೌಟ್‌ಲಿ ತುಪ್ಪ ಹಾಕ್ಕೊಂಡು ಬಾಕನ ತಿಂಬಕೆ ಬಾಕಿಲ್ಲೆ ಮುಂಡೆಗಳೆಂತ ಹೇಳ್ದರಲ್ಲ. ಈಗ ನೀವು ಬಾತ್ಲೆಯೋ ಮುಂಡೆಗಳೆ'ಂತ ಹೇಳ್ತ್‌ಗಡ. ಅದ್ ಕೇಳಿಯಾಕನ ಈ ಅಣ್ಣಂದರಿಗೆ ಗೊತ್ತಾತ್. ಅವುಲ್ಲೆ ಕೇಳ್ವೆ ಅಲ್ಲ. ಎಂತದ್? ಏನ್‌ಂತ? ಆಗ ಅದ್ ಎಲ್ಲ ಹೇಳ್ತ್. ಹೇಳ್ಕನ ಈ ಅಣ್ಣಂದಿರ್ ಅತ್ತಿಗೆಕ್ಕಳ ತಕಂಡೋಗಿದ್ ತಲೆ ಕಡ್ದೊ ಗಡ. ಮತ್ತೆ ಅವು ಸುಖಲಿ ಒಳೊಗಡ. ನೀವು ಹೋಗಿ ನೋಡಿ ಬರೊಕಡ [ಕಥಾ ನಿರೂಪಕಿ:ಹೇಮಲತ ನೆಡ್ಚಿಲ್; ಸ್ಥಳ:ಮನೆ; ಸಮಯ ಬೆಳಿಗ್ಗೆ; ವರ್ಷ–1991]

## 42. ಏಳು ಜನ ಅಣ್ಣಂದೆರಿಗೆ ಒಂದೇ ತಂಗೆನ ಕತೆ

ಏಳು ಜನ ಅಣ್ಣಂದಿರು ಒಂದು ತಂಗಿ. ಅವು ಆ ತಂಗಿನ ತುಂಬ ಪ್ರೀತಿಯಿಂದ ಸಾಕಿದೊ. ಸಾಕಿ ಸಾಕಿ ದೊಡ್ಡದಾತ್. ದೊಡ್ಡದಾಗಿ ಏಳುಜನ ಅಣ್ಣಂದಿರಿಗೂ ಸಹ ಮೊದ್ವೆ ಆತ್. ಮೊದ್ವೆ ಆಗಿ ಆ ತಂಗೆನ ಏಳು ಉಪ್ಪರಿಗೆಲಿ ಕುದ್ರಿಸಿದೊ. ಅಲ್ಲಿಗೆ ಏಳ್ ಜನ ಅತ್ತಿಗೆಕ್ಕ ಹಾಲ್, ನೀರ್, ಊಟ ಎಲ್ಲಾ ತಂದುಕೊಡ್ದು. ಹಂಗೇ ಇದ್ದ್ ಆ ಏಳ್ ಜನ ಅಣ್ಣಂದಿರಿಗೆ ದಂಡ್‌ಬಾತ್. ಏಳ್ ಜನಕ್ಕೇ ದಂಡ್ ಬಾಕನ ತಂಗೆನ ಅಲ್ಲಿ ಒಂದುಕಡೆ ಕುದ್ರಿಸಿ ಹೋದೊ. ಅಣ್ಣನವು ಬಾಕನ ಮುಟ್ಟ ಕೆಳಗೆ ಇಳಿಯಕ್ಕೆ ಬೊತ್ತ್ ಉಪ್ಪರಿಗೆಂದ. ಇಳ್ದರೆ ವಾಪಾಸ್ ಹತ್ತಿಕೆ ಬೊತ್ತ್‌ಂತ್ ಹೇಳಿ ಅತ್ತೆಗೆಕ್ಕಲಲ್ಲಿ ಹೇಳಿ ಹೋದೊ ಅಣ್ಣನವು. ಹೋಗಿದ್ ಆಕನ ಸ್ವಲ್ಪ ಸಮಯಲಿ ಅಲ್ಲಿಗೆ ಊಟ, ಬಾಚನಿ, ಕನ್ನಡಿ ಕೊಟ್ಟೊ. ಒಂದ್ ದಿನ ಇದರ ಬಾಚನಿ ಕೈಂದ ಬೀತ್. ಕೆಳಗೆ ಬಿದ್ದಾಕನ 'ಅತ್ತಿಗೆತ್ತಿಗೆ ನನ್ನ ಬಾಚನಿಗೆ ಕೊಡಿ'ಂತ ಕೇಳ್ತ್. 'ಬೇಕರೆ ನೀವು ಹೆರ್ಕಿ ಇಳ್ದ್ ತಕೊನಿ'ಂತ ಹೇಳ್ದೊ. ಅಷ್ಟೊತ್ತಿಗೆ ಅದ್ ಇಳ್ತ್. ಇಳ್ದಾಕನ ಹತ್ತಿಕೆ ಬುಟ್ಟತ್ಲೆ ಅತ್ತಿಗೆಕ್ಕ. ಇಳ್ದವು ಹತ್ತಿಕೆ ಬೊತ್ತ್‌ಂತ ಆತ್.

ಹಾಂಗೇ ಇದ್ದೊ. ಇದ್ದ್ ಇದ್ದ್‌ದ್ ಇನ್ನ್ 'ನಂಗೆ ಮೊಸರು ಗಂಜಿಕೊಡಿ ಅತ್ತಿಗೆ'ಂತ ಕೇಳ್ತ್. 'ಮೊಸರು ಗಂಜಿ ಕೊಡೊಕಾರೆ ಕತ್ತಿಲ್ಲದೆ ಸೊಪ್ಪು ಕಡಿಯೊಕು. ಬೊಳ್ಳಿಲ್ಲದೆ ಹೊರೆ ತರೊಕು. ಅಂದರೆ ಮೊಸರು ಗಂಜಿ ಕೊಡ್‌ಕುಂತ ಹೇಳ್ದೊ. ಇದ್ ಕಾಡಿಗೆ ಹೋತ್. 'ಕತ್ತಿ ಇಲ್ಲದೆ ಸೊಪ್ಪು ಹೆರಿಯೊದು ಹೇಂಗೆ? ಬೆಳ್ಳಿಲ್ಲದೆ ಕಟ್ಟುದು ಹೇಂಗೆ?' ಕುದ್ದೊಂಡು ಮರದ ಅಡಿಲಿ ಮರ್ಬತ್. ಅಷ್ಟೊತ್ತಿಗೆ ಕುರೆಂಗ ಎಲ್ಲ ಮರಂದ ಮರಕ್ಕೆ ಹಾರ್ವೆ 'ಅಕ್ಕಕ್ಕಾ ನೀ ಏಕೆ ಮರ್ದುದು?' ಅಷ್ಟಾಕನ ಅದು ಹೇಳ್ದೆ 'ಕತ್ತಿಲ್ಲದೆ ಸೊಪ್ಪು ಹೆರಿಯೊಕು. ಬೊಳ್ಳಿಲ್ಲದೆ ಹೊರೆ ಕಟ್ಟೊಕು' ಹೇಂಗೆ ಆದುಂತ. 'ಅಂದರೆ ನೀ ಮರ್ದ್‌ಬೇಡ. ನಾವು ಸೊಪ್ಪೆಲ್ಲಾ ಮುರ್ದು ಹಾಕ್ವೆ. ನೀ ಎಲ್ಲ ಅರ್ಕೆಲ್ ಹಿಡಿ'ಂತ ಹೇಳ್ವೆ. ಅಷ್ಟೊತ್ತಿಗೆ ಅದ್ ಅರ್ಕೆಲ್ ಎಲ್ಲ ಹಿಡ್ತ್. ಬೊಳ್ಳಿಲ್ಲದೆ ಹೇಂಗೆ ಕಟ್ಟುದುಂತ ಹೇಳಿ ಮರ್ಬ್‌ಕಂಡ್ ಕುದ್ದತ್. ಮರ್ಬ್‌ಕಂಡ ಕುದ್ದಾಕನ ಒಂದು ಕೇರೆ ಬಾತ್. 'ಅಕ್ಕಕ್ಕಾ ನೀ ಯಾಕೆ ಮರ್ದುದು'ಂತ ಕೇಳ್ತ್. ಅಷ್ಟೊತ್ತಿಗೆ ಹೇಳ್ದೇ, 'ನಂಗೆ ಬೊಳ್ಳಿ ಇಲ್ಲೆ ಹೊರೆಕಟ್ಟಿಕೆ ಏನು ಮಾಡ್ದುಂತ'. 'ಅಂದರೆ ನಾ ಉದ್ದಕೆ ಮಲ್ಗಿನೆ. ನೀ ಅದರ ಮೇಲೆ ಸೊಪ್ಪು ಇಸ್. ಮತ್ತೆ ಹೊರೆಕಟ್ಟ್'ಂತ್

ಕೇರೆ ಹೇಳ್ತ್. ಹಂಗೆ ಸೊಪ್ಪುನ ಎಲ್ಲ ಅದರ ಮೇಲೆ ಇಸಿದ್ ತಂದ್‌ದ್ ಹೊರೆಕಟ್ಟಿ ಹಾಕಿತ್. 'ಅತ್ತಿಗೆತ್ತಿಗೆ ತನ್ಯಾನ ಮೊಸರು ಕೊಡಿಂತ' ಹೇಳ್ತ್. 'ತನ್ಯಾನ ಮೊಸರು ಕೊಡೊಕಾರೆ ಒಣಕೆ ಇಲ್ಲದೆ ಭತ್ತ ಮಿಜಿಯೋಕು. ತಡಪೆ ಇಲ್ಲದೆ ಅಕ್ಕಿ ಹೊಡ್ಕೊಕು. ಅಂದರೆ ನಿಂಗೆ ನಾ ತನ್ಯಾನ ಮೊಸರು ಕೊಟ್ಟನೆ'ಂತ ಹೇಳ್ದ್. ಇದ್ ಹೋಗಿ ಭತ್ತ ತಕೊಂಡು ಬಂದಂದೆ. ಕೊಟ್ಟಿಗೆಲಿ ಹೋಗಿ ಮರ್ಪದೆ. 'ನಾ ಒನ್ಕೆ ಇಲ್ಲದೆ ಭತ್ತ ಮಿಜಿಯೊಕು, ತಡಪೆ ಇಲ್ಲದೆ ಅಕ್ಕಿ ಹೊಡ್ಕೊಕು ಹೇಂಗೆ'ಂತ. ಅಷ್ಟೊತ್ತಿಗೆ ಎಲ್ಲಾ ಗುಬ್ಬಿಗ ಹಾರಿಬಂದ್. 'ಅಕ್ಕಕ್ಕಾ ಏಕೆ ಮರ್ರುದು'ಂತ ಕೇಳ್ವೆ. ಅಷ್ಟೊತ್ತಿಗೆ ಹೇಳ್ದ 'ನೀವು ಮರ್ದ್‌ಬೇಡಿ. ನಾ ಎಲ್ಲಾ ಗುಬ್ಬಿಗಳ ಕರ್ರೊಂಡು ಬನ್ನೆ'ಂತ ಹೇಳ್ದ್. 'ನಾವೆಲ್ಲ ಚೊಲ್ಲಿ ಕೊಟ್ಟವೆ'. ಅಷ್ಟೊತ್ತಿಗೆ ಅದ್ ಹೋಗಿ ಎಲ್ಲಾ ಹಕ್ಕಿಗ ಚೊಲ್ಲಿ ಅಕ್ಕಿ ಮಾಡಿಕೊಟ್ಟೊ. 'ಅತ್ತಿಗೆತ್ತಿಗೆ ನಂಗೆ ತನ್ಯಾನ ಮೊಸರು ಕೊಡಿ ಅಕ್ಕಿ ತಕಂಡ್ ಬಂದೆ'ಂತ ಹೇಳ್ತ್. ಒಂದ್ ಹಕ್ಕಿ ಅಕ್ಕಿ ನುಂಗಿತ್. ಅಕ್ಕಿ ನುಂಗಿ ಆಕನ ಅಷ್ಟಾಕನ ಅತ್ತಿಗೆ ಹೇಳ್ಳೊ ಒಂದು ಅಕ್ಕಿ ಕಮ್ಮಿ. ನೋಡ್ಕನ ಒಂದು ಅಕ್ಕಿ ಕಮ್ಮಿ. 'ಆ ಒಂದು ಅಕ್ಕಿನ ತಾರದೆ ಊಟ ಕೊಡಿಕಿಲ್ಲೆ'ಂತ ಹೇಳ್ಳೊ. ವಾಪಾಸ್ ಹೋತ್. ಕೊಟ್ಟಿಗೆಲಿ ಕುದ್‌ಕಂಡು ಮರ್ಪತ್. ಅಷ್ಟಾಕನ ಗುಬ್ಬಿಗ ಎಲ್ಲ ಬಂದೊ. 'ಏಕೆ ಅಕ್ಕ ಮರ್ರುದೂಂತ ಹೇಳ್ಳೊ. ಒಂದು ಅಕ್ಕಿ ಕಡಿಮೆ ಆಗುಟು. ಆ ಅಕ್ಕಿ ತಂದ್ ಕೊಡದಿದ್ದರೆ ನಂಗೆ ಊಟ ಕೊಡ್ದುಲ್ಲೆ'ಂತ ಹೇಳ್ತ್. ಅಷ್ಟೊತ್ತಿಗೆ 'ಎಲ್ಲ ಗುಬ್ಬಿಗಳ ನಾ ಕರ್ದ್ ಕೇಳ್ನೆ. ಯಾವ ಗುಬ್ಬಿ ತಿಂದದ್? ಅದರ ನಾ ಗುದ್ದಿ ಕಾರ್ಸಿನೆ'. ಎಲ್ಲಾ ಹಕ್ಕಿಗಳ ಕರ್ದಾಕನ ಒಂದ್ ಗರ್ಭಿಣಿ ಹಕ್ಕಿ ಒಂದು ಅಕ್ಕಿ ನುಂಗಿತ್. ಅದರ ಗುದ್ದಿ ಕಾರ್ಸಿ ತಂದು ಕೊಟ್ಟೊ. ಮತ್ತೆ ನೋಡ್ಕನ ಸರೀ ಉಟ್ಟು. 'ಅತ್ತಿಗೆತ್ತಿಗೆ ತನ್ಯಾನ ಮೊಸರು ಕೊಡಿ'ಂತ ಹೇಳ್ಳೊ. 'ತನ್ಯಾನ ಮೊಸರು ಕೊಡಿಕಿಲ್ಲೆ. ಬೊಳ್ಳಿಲ್ಲದೆ ನೀರ್ ಏಳಿಯೋಕು ಮತ್ತೆ ತಂದು ಕೂಡೊಕು'. ಇದ್ ಹೋಗಿ ನೋಡ್ಕನ ಬೊಳ್ಳಿ ಬಾಮಿಲಿ ಇಲ್ಲೆ. ಇನ್ನೇನು ಮಾಡ್ದುಂತ ಮರ್ಪ್‌ಕಂಡ್ ಕುದ್ದತ್.

ಮರ್ಪ್‌ಕಂಡ್ ಕುದ್ರ್‌ಕನ ಒಂದು ಕೇರೆ ಬಾತ್. ಕೇರೆನ ಬೊಳ್ಳಿ ಮಾಡಿ, ಬೊಳ್ಳಿ ಉರ್ಲು ಮಾಡಿ ನೀರ್ ಎಳ್ತ್. ನೀರ್ ಎಳ್ದ್ ತಂದ್ ಕೂಡ್ತ್ ಮಂಡೆಗೆ. ಕೂಡ್ಕನ ಮಂಡೆ ಒಟ್ಟೆ ಮಾಡಿ ಇಸಿಯೊಳೊ. ಅತ್ತಿಗೆತ್ತಿಗೆ ನೀರ್ ಕೊಡ್ರೆ ನೀರ್ ತುಂಬುದ್ಲೆಂತ ಹೇಳ್ತ್. ಅಷ್ಟೊತ್ತೆಗೆ ನಿಂಗೆ ತನ್ಯಾನ ಗಂಜಿ ಕೊಡಿಕೆಲ್ಲೆ. ನೀ ನೀರ್ ಕೂಡಿಕೊಂಡು ಬಾ. ಅಷ್ಟಾಕನ ಕುದ್ಕೊಂಡ್ ಮರ್ಪತ್. ಮರ್ದ್‌ಕನ ಒಂದು ಕಪ್ಪೆ ಹೇಳ್ತ್ 'ನಾ ಇದರ ಅಡಿಗೆ ಒಟ್ಟೆಗೆ ಮಲ್ಗಿನೆ. ನೀರ್ ತಂದ್ ಕೊಡುಂತ'. ಹಂಗೆ ಕೂಡಿ ಆಕನ ತುಂಬಿತ್. ಅಷ್ಟಾಕನ ವಾಪಾಸ್ ಹೇಳ್ತ್. 'ನೀರ್ ಕೂಡಿ ಆತ್. ಅತ್ತಿಗೆತ್ತಿಗೆ ತನ್ಯಾನ ಮೊಸರ್ ಕೊಡಿ'ಂತ. 'ತನ್ಯಾನ ಮೊಸರು ಕೊಡಿಕಿಲ್ಲೆ. ಇನ್ನ್ ನೀ ಬೆಳ್ಳಿನ ಕುದುರೆಲಿ ಹೋಗಿ ಅರ್ಸನೊಟ್ಟಿಗೆ ಬರೊಕುಂತ ಆತ್. ಇದ್ ಕಾಡಿಗೆ ಮರ್ಪ್‌ಕೊಂಡ್ ಹೊರ್ಪತ್.

ಹೋಗಿ ಹೋಗಿ ಒಂದ್ ಊರಿಗೆ ಹೋಕನ ಒಂದ್ ಊರ್ಲಿ ಒಂದ್ ಅರ್ಸು ಕುದುರೆಲಿ ಬಂದದೆ. ಬಂದ್ ಅದರ ಕಂಡ್ ಅಕ್ಕ 'ನೀ ಏಕೆ ಮರ್ರುದೂ'ಂತ ಕೇಳ್ದೆ. ನಂಗೆ ನನ್ನ ಅತ್ತಿಗೆಕ್ಕ

ತನ್ಯಾನ ಮೊಸರ್ ಕೊಡೊಕಾರೆ ಬೆಳ್ಳಿನ ಕುದುರೆಲಿ ಅರ್ಸನ ಮಂಜನೊಟ್ಟಿಗೆ ಬರೊಕು'ಂತ ಹೇಳ್ದೊ. 'ಹಾಂಗೆ ಬಂದರೆ ಊಟ ಕೊಡ್ದು'ಂತ ಹೇಳ್ದೊ. ಹಂಗೆ ಇದ್ ಬೆಳ್ಳಿ ಕುದೆರೆಲಿ ಬಾತ್. ಹೋಗಿ ಆಕನ ಅಣ್ಣವು ಬಾಕೆ ಆತ್. ಆಗ ಇದ್ ಇನ್ನ್ ಹೋತ್‌ಂತ ಹೇಳ್ದೊ. ಇವು ಅತ್ತಿಮರ, ಅತ್ತಿಮರ ಎಲ್ಲ ಕಡ್ದೊ. ಕಡ್ದ್ ದೊಡ್ಡೋ ಒಂದು ಕಾಟ ಮಾಡ್ದೊ. ಕಾಟ ಮಾಡಿದ್ ಇದರ ಹೊತ್ತಿಸಿ ಕಿಚ್ಚಿ ಕೊಡಿಕೆ ಎಲ್ಲ ರಡೀ ಆಕನ ಏಳ್ ಜನ ಅಣ್ಣಂದಿರು ತಂಗೆಗೆ ಏಳು ಮುತ್ತು ತಕಂಡು ಬಂದೊ. ಬಾಕನ ತಂಗೆ ಎಲ್ಲಿಂತ ಕೇಳ್ಕನ, 'ಅದರ ನಾವು ಕಾಟಕ್ಕೆ ಕೂಡ್ಸಿದೊ. ಸತ್ತತ್'ಂತ ಆತ್. ಹಂಗೆ ಹೇಳಿಕೊಂಡು ಇದ್ದೊ. ಹಾಂಗೆ ತಂಗೆನು ಅರ್ಸನ ಮಂಜನೂ ಕುದೆರೆಲಿ ಬಂದವೆ. ಕುದುರೆಲಿ ಬಂದದರ ಈ ಅಣ್ಣನವು ನೋಡಿ, 'ನೀವು ಹಿಂಗೆ ಇದರ ಮಾಡ್ದರಿ ಅಲ್ಲ'ಂತ ಈ ಏಳ್ ಜನ ಅತ್ತಿಗೆಕ್ಕಳನ್ನೂ ಆ ಕಾಟಕೆ ಹಾಕಿ ಹೊತ್ತಿಸಿದೊ. [ಕಥಾ ನಿರೂಪಕ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 43. ಶಿವ ಕೊಟ್ಟ ವರದ ಕತೆ

ಒಂದು ಅಪ್ಪ ಒಂದು ಅವ್ವ ಒಂದು ಮಂಜ. ಅವು ಹಿಂಗೆ ಇದ್ದಾಕನ, ಊಟದ ಹೊತ್ತಿಗೆ ಬಾಕ್ಕೆ ಆಕನ ಯಾಗೋಲು ಅವ್ವ ಗಂಜಿ ಕೊಡ್ದು. ಯಾಗೋಳು ಬಂದ್ ಕೊಡಿಕೆ ಆಕನ ಒಂದು ದಿನ ಮಂಜ ಹೇಳ್ತ್. ಇದ್ ಏನ್ ಯಾಗೋಲು ಕೊಡ್ದುಂತ. 'ನಾವ್ಗೆ ಶಿವ ಕೊಡ್ದು ಮಂಜ'ಂತ ಹೇಳ್ತ್. ಅಪ್ಪ ಸತ್ತು ಹೋದೆ. ಆದರೂ ಊಟದ ಹೊತ್ತಿಗೆ ಬಾವ ಕ್ರಮ. ಹಾಂಗೆ ಅಪ್ಪ ಹೆಂಗೂ ಸತ್ತು ಹೋದೊ. ಇನ್ನ್ ನೀನೂ ಅದೇ ರೀತಿ ಮಾಡ್ರೆ ನಾವ್ಗೆ ಬಾರೀ ಕಷ್ಟ ಆದೆ ಅಲ್ಲ. ಅಲ್ಲ ನಾವ್ಗೆ ಶಿವ ಕೊಡ್ದುಂತ 'ಅಂದರೆ ಶಿವ ಎಲ್ಲಿ ಉಟ್ಟು, ನೋಡ ನಾನೇ ಶಿವನಲ್ಲಿಗೆ ಹೊನೆ'ಂತ ಹೊರ್ಟ್ ಹೋತ್. ಹೊರ್ಟ್ ಹೋಕನ ಒಂದು ಮಾಯಿನ ಮರಸಿಕ್ಕಿದೆ. ಅದರ ಹಣ್ಣೆಲ್ಲಾ ಹಾಳ್. 'ಅಣ್ಣಣ್ಣ ಎಲ್ಲಿಗೆ ಹೋದು'ಂತಾಂತ್. 'ನಾ ಶಿವನಲ್ಲಿಗೆ ಹೋದು'ಂತ ಈ ಮರದ ಹಣ್ಣ್‌ನ ಎಲ್ಲವೂ ಕೊಯ್ಯುದು. ತಿಂಬಕೆ ನೋಡಿ ಬಿಸಾಡ್ದುಂತ ಇದ್ ಏನ್‌ಂತ ಒಂದು ಸರ್ತಿ ಕೇಳಿಕೊನೊಕು. ಆಚೆಲಿ ಹೋಕನ ಒಂದು ಸರ್ಪ. ಅದ್ ಅದರ ನಿಧಿ ಮೇಲೆ ಮಲ್ಕೊಂಡುಟ್ಟು. 'ಅಣ್ಣ ನೀ ಎಲ್ಲಿಗೆ ಹೋದು'ಂತ ಕೇಳ್ತ್. 'ನಾ ಶಿವನಲ್ಲಿಗೆ ಹೋದು'. 'ಇದು ಒಂದು ಸಂಗತಿ ಕೇಳೊಕ್ಕಣ್ಣ. ನಂಗೆ ಇದರ ಬುಟ್ಟು ಹೋಕ್ಕೆ ಮನಸಾದ್ಲೆ. ಇದರ್ಲಿ ನಂಗೆ ಅನ್ನ ಆಹಾರ ಇಲ್ಲೆ'. ಅಲ್ಲಿಂದ ಮುಂದೆ ಹೋಕನ ಒಂದು ಕಡೆ ಒಂದು ಕಟ್ಟ ಉಟ್ಟು. ಆ ಕಟ್ಟಕ್ಕೆ ಒಬ್ಬ ಅರ್ಸ. ಎಷ್ಟೊ ಕಟ್ಟ ಕಟ್ರೊ ಕೂಡ ಆ ಕಟ್ಟ ನಿಲ್ಲಟ ಇಲ್ಲೆ. ಅರ್ಸ 'ಎಲ್ಲಿಗೆ ಹೋದು'ಂತ ಕೇಳ್ದೆ. 'ನಾ ಶಿವನಲ್ಲಿಗೆ ಹೋದು'. 'ಅಂದರೆ ಇದೊಂದು ವಿಷಯ ಕೇಳೊಕು. ಎಷ್ಟೊ ಸಲ ಕಟ್ಟ ಕಟ್ಟಿದ್ ಕಟ್ಟ ನಿಲ್ಲಟ ಇಲ್ಲೆ. ಏನ್‌ಂತ ಕೇಳೊಕು'ಂತ. ಶಿವನಲ್ಲಿಗೆ ಹೋಗಿ ಆಕನ ಮಾಯಿನ

ಮರದ ಹಣ್ಣ್ ಹಾಳಾವ ಕಾರಣ ಏನಂದರೆ ಒಬ್ಬ ಗುರು ಆ ಮಕ್ಕಳಿಗೆ ವಿದ್ಯೆ ಕಲಿಸಟ ಇಲ್ಲೆ. ಆದ ಕಾರಣ ಅದ್ ಹಿಂಗೆ ಹಾಳಾದುಂತ ಸರ್ಪ ಎಲ್ಲಿಯಾರ್ ಕೊಟ್ಟರೆ ಆಹಾರ ತಕನಿಕೆ ಆಗದಂತೆ ಆತ್. ಇನ್ನೊಂದು ಕಟ್ಟದ ಕತೆ. ಅವನ ಮಗ ಒಂದು ಹನ್ನೆರಡ್ ಹನ್ನೆರಡ್ ಇಪ್ಪತ್ತನಾಲ್ಕ್ ವರ್ಷ ಋತುವಾದ ಒಂದು ಗೂಡೆ ಉಟ್ಟು. ಅದರ ಯಾರಿಗಾರ್ ಕೊಟ್ರೆ ಈ ಕಟ್ಟ ನಿಂತದೆ. ಅವಂಗೆ ಲೆಕ್ಕಲಿ ಎಲ್ಲಾ ವಿದ್ಯೆನೂ ಸಿಕ್ಕಿದೆ. ಹಾಂಗೆ ಸಣ್ಣದರ್ಲಿ ಒಂದು ಕಥೆ. [ಕತಾ ನಿರೂಪಕ:ಶಿವಪ್ಪಗೌಡ; ಸ್ಥಳ:ಮನೆ; ಸಮಯ:ಮಧ್ಯಾಹ್ನ; ವರ್ಷ–1991]

## 44. ಶೂರ ಎತ್ತುಗಳ ಕತೆ

ಒಂದು ಊರ್ಲಿ ಒಂದು ಅಜ್ಜ ಅಜ್ಜಿ ಇದ್ರೊ. ಅವ್ಕೆ ಒಬ್ಬ ಮಂಜ ಇತ್ತ್. ಅಜ್ಜ ಅಜ್ಜಿ ಸತ್ರೊ. ಮಂಜಂಗೆ ಎರಡ್ ಎತ್ತ್‌ಗ ಇದ್ದೊ. ಅವು ಅಲ್ಲಿಂದ ಬೇರೆ ಊರಿಗೆ ಹೊರಟೊ. ಹೊರಟ್ ಹೋಗ್ತಾ ಇದ್ದಾಂಗೆ ದಾರಿಲಿ ಹೋಕನ ಒಂದು ಮನೆ ಸಿಕ್ಕಿತ್. ಮನೆಲಿ ಒಂದು ಅಜ್ಜಿ ಇತ್ತ್. ಅಜ್ಜಿನೊಟ್ಟಿಗೆ 'ನಾವು ಇಲ್ಲೆ ಇದ್ದವೆ. ನಾವ್ಗೆ ಇಲ್ಲೇ ವಾಸಕೆ ಕೊಡೊಕು'ಂತ ಕೇಳ್ದೊ. ಅಂದ್ ಅಲ್ಲೇ ನಿಂತೊ. ಆ ದಿನ ರಾತ್ರೆ ಹೊತ್ತಾಕನ ಅಜ್ಜಿ ಕತ್ತಿ ಮಸಿಯೋದು ಕೇಳ್ತಾ ಇತ್ತ್. ಅದ್ ಗೊತ್ತಾಗಿ ಎತ್ತ್‌ಗ ಹುಡುಗನೊಟ್ಟಿಗೆ ಹೇಳ್ದೊ, 'ನಾವು ಇಲ್ಲಿಂದ ಪೋಯಿ. ನಾವು ಇಲ್ಲಿ ನಿಂತರೆ ನಮ್ಮ ಬೆಳಿಗ್ಗೆ ಆವ ವರೆಗೆ ಅಜ್ಜಿ ನಿಲ್ಲಿಕೆ ಬುಡ್ದುಲೆ. ಹಾಂಗೆ ನಾವು ಇಲ್ಲಿಂದ ಪೋಯಿ'ಂತ ಹೇಳಿ ಹೊರ್‍ಟೊ. ಬೆಳಿಗ್ಗೆ ಆಕ್ಕೆ ಮುಂದೆ ಹೊರ್‍ಟೊ. ಇಲ್ಲಂದರೆ ಅಜ್ಜಿ ಇವರ ತಿಂಬೊತ್ತಿತ್ತ್.
ಅಲ್ಲಿಂದ ಹಿಂಗೆ ಹೋಗ್ತ ಹೋಗ್ತಾ ಇದ್ದಂಗೆ ಅವಂಗೆ ಬಾರಿ ಹೊಟ್ಟೆ ಹಸಿವಾಗಿ ಬಾರಿ ಸಂಕಟ ಆತ್. ಇಂವ ದಾರಿಲಿ ಬಿದ್ದಾಕನ ಈ ಎತ್ತುಗಳೇ ಹೋಗಿ ಬಾಯಲಿ ನೀರ್ ತುಂಬಿಸಿ ತಂದ್ ಬದ್ಕಿಸಿ ಅಲ್ಲಿಂದ ಮುಂದೆ ಹೋದೊ. ಹೋಗ್ತಾ ಹೋಗ್ತಾ ಒಂದು ಅರ್ಸನ ಆಸ್ಥಾನಕೆ ಹೋದೊ. ಹೋಗಿ ಒಂದು ಕರೆಲಿ ಇವನ ಎತ್ತ್‌ಗ ಇರಿಕೆ ಆಕನ ಅರ್ಸಂಗೆ ಗೊತ್ತಾಗಿ ಅವರ ಅಲ್ಲಿಂದ ಓಡ್ಸೊಕುಂತ ಆತ್. ಅರ್ಸ ಅಲ್ಲಿಂದ ಎರಡ್ ಹುಲಿಗಳ ಕಳ್ಸಿತ್. ಹುಲಿನೂ ಎತ್ತುನೂ ಕಾದಾಡುವ ಹಾಂಗೆ ಮಾಡ್ದೊ. ಅಷ್ಟೊತ್ತಿಗೆ ಎತ್ತ್‌ಗಳೊಟ್ಟಿಗೆ ಇಂವ ಕೇಳ್ತ್. ನಿಮ್ಮ ನಾ ಏನು ಮಾಡೊಕುಂತ. ನಮ್ಮ ಕೊಂಬುಗೆ ಹಾಲ್‌ಬಳ್ಳಿ ಕಟ್ಟ್‌ಂತ. ಹಾಲ್‌ಬಳ್ಳಿಕಟ್ಟಿ ಯುದ್ಧ ಸುರುವಾಗಿ ಎರಡೂ ಹುಲಿಗಳೂ ಸೋತು ಹೋದೊ. ಸೋತು ಹೋದ ಮೇಲೆ ಅರ್ಸ ಅರ್ಧ ರಾಜ್ಯ ಕೊಡೊಕುಂತ ಆತ್. ರಾಜ್ಯ ಕೊಟ್ಟು ಇವರಷ್ಟ್ ಶೂರ ಎತ್ತ್‌ಗ ಇಲ್ಲೆಂತ ನೋಡಿ ಮೆಚ್ಚಿ ಆ ಅರ್ಸ ತನ್ನ ಮಗಳ ಕೊಟ್ಟು ಮಂಜಗೆ ಅಲ್ಲೆ ಮೊದ್ವೆ ಮಾಡಿ ಅವು ಈಗ ಅಲ್ಲಿ ಅರ್ಸನ ಆಸ್ಥಾನಲಿ ಆರಾಮಲಿ ಒಳೊ. [ಕತಾ ನಿರೂಪಕ:ಸಣ್ಣಮನೆ ಕೃಷ್ಣಪ್ಪಗೌಡ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 45. ಮಂತ್ರದ ಕೋಲ್‌ನ ಕತೆ

ಒಬ್ಬ ಒಂದ್ ದನ ಹೊಡ್ಕಂಡ್ ಹೋಕನ ಒಂದ್ ರಕ್ಕಸ ಬಂದ್ ಅಂವನ ಹಿಡ್ಕಂಡ್ ಹೋತ್. ಹಿಡ್ದ್ ಮನೆಗೆ ತೆಕಂಡ್ ಹೋತ್. ತಕಂಡೋಗಿದ್ ಮಾರನೆ ದಿನ 'ಇಂದ್ ನೀ ನಾವ್ಗೆ ಅಡಿಗೆ ಮಾಡಿ ಕೊಡೊಕು. ಅದಕ್ಕೆ ಮುಂದೆ ಹದ್ನಾರ್ ಕೋಣೆ ಉಟ್ಟು. ಹದ್ನಾರ್ ಕೋಣೆ ಬಾಗಿಲ್‌ಲಿ ಒಂದ್ ಕೋಣೆ ಬಾಗಿಲ್ ತೆಗೀಬೇಡ. ಹದಿನೈದ್ ಕೋಣೆ ಬಾಗಿಲ್ ತೆಗ್ದ್ ಎಲ್ಲ ನೋಡ್. ನೋಡಿ ಒಂದ್ ಕೋಣನ ಕಡ್ದ್ ಗೈಪ್‌ಮಾಡ್. ಒಂದ್ ಮುಡಿ ಅಕ್ಕಿ ಉಗ್ಗೆ ಮಾಡ್. ನಾ ಬನ್ನೆ'ಂತ ಹೇಳಿ ಹೋತ್.

ಇಂವ ಎಲ್ಲ ಕೋಣೆ ನೋಡಿಕಂಡ್ ಬಾತ್. ಆಗ 'ಹದಿನೈದ್ ಕೋಣೆ ನೋಡಕ್, ಈ ಕೋಣೆ ಒಂದ್ ಯಾಕೆ ನೋಡಿಕೆ ಬೊತ್ತ್'ಂತ ನೋಡೋಣಾ'ಂತ ಹೇಳ್ತ್ ಅದರ್ರೂ ಬೀಗ ತೆಗ್ತ್. ನೋಡ್ತ್. ನೋಡ್ಕನ ಅಲ್ಲಿ ಪೂರಾ ತಲೆಗ. ಅವೆಲ್ಲ ನಗಾಡ್ದೊ. ನಗಾಡ್ಕನ ಇಂವಂಗೆ ಬೇಜಾರ ಆತ್. ಇವ್ ಯಾಕೆ ನಗಾಡ್ವೆಂತ. ಇಂವ ಕಣ್ಣ ನೀರ್ ಹಾಕಿತ್. ಆಗ ಒಂದ್ ತಲೆ ಹೇಳ್ತ್ 'ಇಂದ್ ನೀ ಹಿಂಗೆ ಇದ್ಯಾ, ನಾಳೆ ನಮ್ಮ ಜೊತೆಗೆ ಬಂದ್ಯಾ'ಂತ ಹೇಳ್ತ್. 'ಅದ್ ಯಾಕೆ? ಏನ್? ಇಂದ್ ನಿನ್ನೊಟ್ಟಿಗೆ ಎಲ್ಲ ಹೇಳಿಕಂಡ್ ಹೋಗುಟಲ್ಲ ಅಂವ. ನೀ ಅಂವ ಹೇಳ್ದಂಗೆ ಎಲ್ಲ ಮಾಡ್ರೆ ನಿನ್ನನ್ನೂ ತಲೆಕಡ್ದ್ ತಂದ್ ಇಲ್ಲಿ ತೂಗುದು'. ಆಗ 'ಹಾಂಗೆ ಮಾಡದಿದ್ದರೆ ಏನಾದು'ಂತ ಕೇಳ್ತ್. ಆಗ ಮತ್ತೊಬ್ಬ ಹೇಳ್ತ್ 'ನೀ ಅಂವ ಹೇಳ್ದಂಗೆ ಒಂದೂ ಕೇಳ್ಬೇಡ. ಇಂದ್ ಎಲ್ಲ ನೀವು ಮಾಡಿ ನಾಳೆಗೆ ನಾ ಮಾಡ್ನೆ. ಇಂದ್ ನೀವು ಹೇಂಗೆ ಮಾಡಿಯರೀಂತ ನೋಡಿಕೊನೆ. ನಂಗೆ ಗೊತ್ತಾಕಿಲ್ಲೆಂತ ಹೇಳಿ ಎಲ್ಲಾ ಮಾಡಿಕಂಡ್ ಬಾದು. ಕಡೆಗೆ ಅಂವಂಗೆ ಪೂಜೆ ಉಟ್ಟು. ಆಪೂಜೆ ಮಾಡ್ಕನ ನಿನ್ನ ಅಡ್ಡ ಬೀಳಿಕೆ ಹೇಳ್ದು. ಇಂದ್ ನೀ ಅಡ್ಡಬೀಳ್ಬಡ. ನಾಳೆ ನಾ ಅಡ್ಡ ಬಿದ್ದನೆ'ಂತ ಹೇಳ್. 'ಅಂವ ಮೂರ್ ಕಳಶಲಿ ನೀರ್ ಇಸಿದೆ. ಕತ್ತಿಗೆ ಪೂಜೆ ಮಾಡ್ದೆ. ಅದ್ಕೆ ಅಡ್ಡ ಬೀಳ್ಕನ ನೀ ಮೂರ್ ಗಡಿ ಕಡಿ'. 'ನೀ ಆ ಮೂರ್ ಕಳಶಲಿ ಕೌಂತಿಡ್. ಅಲ್ಲಿ ಹೋಕನ ಒಂದ್ ಅಂಗಿ ಉಟ್ಟ್ ಅದರ ಹಾಕಿಕೊಂಡ್ ಹೋಗಿ ಬುಡ್. ಆ ಮೇಲೆ ನೀ ಏನಾರ್ ಕಲ್ತ ವಿದ್ಯೆ ಇದ್ದರೆ ಅದರ ಪೂರೈಸಿಕ'ಂತ ಒಂದ್ ತಲೆ ಹೇಳ್ತ್.

ಹಾಂಗೆ ಇಂವ ಕುದ್ದತ್. ಬಾತ್ ರಕ್ಕಸ. ಅಂವ ಬಾಕನ ಇಂವ ಎಂತದೂ ಮಾಡ್ತ್‌ಲೆ. 'ನೀ ಯಾಕೆ ಏನೂ ಮಾಡ್ತ್‌ಲೆ?''ಇಲ್ಲೆ ನಂಗೆ ಇದ್ ಮಾಡೀ ಗೊತ್ಲೆ. ನೀವಿಂದ್ ಎಲ್ಲ ಮಾಡಿ. ಇಂದೆಲ್ಲಾ ನಾ ನೋಡಿ ಕಲ್ತ್ ಕೊನೆ, ನಾಳೆ ನಾ ಮಾಡ್ನೆ'ಂತ ಹೇಳ್ತ್. ಅಂವ ಬಂದ್ ಗೈಪ್ಟ್ ಮಾಡ್ತ್. ಉಗ್ಗೆ ಮಾಡ್ತ್. ಬಿಸಿನೀರ್ ಕಿಚ್ಚ್ ಹಾಕಿ ಮೀತ್. ಪೂಜೆ ಮಾಡ್ತ್ ಮಾಡಿ ಅಡ್ಡಬೀಳ್‌ಂತ ಹೇಳ್ತ್. 'ಇಂದ್ ನೀವ್ ಅಡ್ಡ ಬೀಳಿ ನಾಳೆ ನಾ ಅಡ್ಡ ಬಿದ್ದನೆ'ಂತ ಹೇಳ್ತ್. ಮೂರ್ ಕಳಶನೂ ಇಸಿತ್. ಕತ್ತಿಗೆ ಪೂಜೆ ಮಾಡ್ತ್, ಅಡ್ಡ ಬೀತ್. ಅಡ್ಡ ಬೀಳ್ಕನ ಬೇರಿಬೇರಿ

ಮೂರ್ ಗಡಿ ಒಟ್ಟಿಗೆ ಕಡ್ತ್. ಕಡ್ದ್‌ದ್ ಇದರ್ಲಿ ಕಂತಿದ್ ಎದ್ದ್ ಮುಳ್‌ಗಿದ್ ಈ ಅಂಗಿನ ಹಾಕಂಡ್ ಓಡಿ ಬುಡ್ತ್ ಇಂವ. ಓಡ್ತ್ ಓಡ್ತ್ ಓಡ್ತ್ ಬಾರಿ ದೂರಕೆ ಓಡ್ತ್. ಅಷ್ಟೊತ್ತಿಗೆ ಇಂವ ತುಂಡ್ ತುಂಡ್ ಮೂರ್ ತುಂಡ್ ಕೂಡಿದ್ ಜೀವ ಆಗಿ ಬೆರ್ಸಿಕಂಡ್ ಹೋತ್. ಬೆರ್ಸಿಕಂಡ್ ಹೋಕನ ಇಂವ ಅರ್ಸನ ಮನೆಲಿ ದನ ಮೇಸಿ ಕೊಂಡ್‌ಟ್ಟು. ದನ ಮೇಯ್ಸಿಕೆಂತ ಇದ್ದ್ ಈ ದನಂಗಳ ಇಂವ ನೀರ್ ಕುಡಿಯಕೆ ತಕಂಡೋದೆ. ಕುಡಿಯಕೆ ತಕಂಡೋಕನ ಅಲ್ಲಿ ಒಂದ್ ತಾವರೆ ಹೂವು ಯಾಗೋಳ್ ನಡೂಂದ ಅರಳಿದ್ ಮಧ್ಯಾಹ್ನ ಆಕನ ಮೇಲೆ ಹೋದೆ. 'ಇದ್ ಯಾಕೆ ಮೇಲೆ ಹೋದೆ ನೋಡೋಕು'. ಒಂದ್ ದಿನ ಇಂವ ಹೋಗಿ ಹತ್ತಿ ಕುದ್ದ್‌ಕನ್ತ್. ತಾವರೆ ಬಾಯಿ ಬುಟ್ಟುಕಂಡ್ ಬಾದು. ಇಂವ ಹತ್ತಿಕುದ್ದತ್. ಇಂವನ ತಕಂಡೇ ಹೋತ್. ಮೇಲೆ ತಕೊಂಡೋಗಿ ಸೂರ್ಯನ ಪಾದಕೆ ಅದ್ ಬೀತ್. ಇಂವನೂ ಬೀತ್. ಅಲ್ಲಿಂದ ಇಂವ ಗೋಳೊಂತ ಮರ್ಬ್ತ್. ಆಗ ಸೂರ್ಯ ಕೇಳ್ತ್. 'ಯಾಕೆ ನೀ ಮರ್ಬ್ತಿಯಾಂತ? ಯಾಕೆ ಬಂದ? ನಿಂಗೆ ಏನಾತ್? ನಿಂಗೆ ಯಾರ್ ಒಳೊ?' ಎಲ್ಲ ವಿಚಾರ್ಸಿತ್. 'ನಂಗೆ ಯಾರೂ ಇಲ್ಲೆ. ಯಾರ್ ಸಂಸಾರಾಂತ ಗೊತ್ಲೆ. ಒಂದ್ ಅರ್ಸನ ಮನೆಲಿ ದನ ಮೇಸಿಕಂಡ್ ಒಳದ್. ಆಗ ನಾ ಹಿಂಗೆ ದನನ ಕೆರೆಗೆ ನೀರಿಗೆ ಇಳ್ಸಿಕನ ಯಾಗೋಳ್ ಒಂದ್ ಹೂವ್ ಹಿಂಗೆ ಮೇಲೆ ಬಂದದೆ. ಇದ್ ಯಾಕೆ? ಏನ್? ಎಲ್ಲಿಗೆ? ಹೋದೆಂತ ಹತ್ತಿ ಕುದ್ದ್ ಬುಟ್ಟೆ. ತೊಪ್ಪಾತ್'. 'ನಿನ್ನ ತೊಪ್ಪ್‌ನ ನಾ ಕ್ಷಮಿಸಿಯೊಳೆ. ನಿಂಗೆ ಏನ್ ಬೇಕ್'ಂತ ಕೇಳ್ತ್. 'ನೀವ್ ಕೊಟ್ಟದ್'ಂತ್ ಹೇಳ್ತ್. 'ಅಂದರೆ ನೀ ಈಗ ಹೋಗ್. ನಿಂಗೆ ಏನ್ ಕಷ್ಟಬಾತ್. ಆ ಕಷ್ಟಕಾಲಕ್ಕೆ ಯಾವುದ್ ಬೇಕ್ ನೆನ್ಸಿಕ. ನಿಂಗೆ ಏನ್ ಆಕ್ಕ್ ಆ ಕಾಲಕ್ಕೆ ನೆನ್ಸಿಕ. ಯಾವುದ್ ಬೇಕಾರ್ ಅಲ್ಲಿಗೆ ಕೊಟ್ಟ್ ಬನ್ನೆ'ಂತ ಹೇಳಿ. ಅದೇ ಹೂವುಲಿ ಕುದ್ರಿಸಿ ಸೂರ್ಯ ಅವನ ಕೆಳಗೆ ಇಳ್ಸಿ ಬುಡ್ತ್.

ಇಂವ ಬಂದ್ ತಾವರೆ ಹೂವ್‌ಲಿ ಇಳ್ತ್. ತಾವರೆ ಹೂವ್‌ಂದ ಇಳ್ತ್‌ದ್ ದನ ಮೇಸಿಕಂಡ್ ಹೋತ್. ಹಾಂಗೇ ಹೊಕ್ಕಂಡ್ ಇರ್‌ಕನ ಈ ರಕ್ಕಸ ಇಂವನ ತಕಂಡೋಕೆ ಬಂದದೆ. ಈ ರಕ್ಕಸ ತುಂಡು ತುಂಡಾಗಿ ಸೇರಿ ಜೀವ ಆಗಿ ಬಂದ್ ಹಕ್ಕಲೆ ಎತ್ತ್‌ಕನ 'ದೊಡ್ಡ ಪರ್ವತನೇ ಆಗಲಿ'ಂತ ಅಂವ ಸೂರ್ಯನ ನೆನಸಿ ಒಂದ್ ಕಲ್ಲ ಹಾಕಿತ್. ದೊಡ್ಡಾ ಒಂದ್ ಪರ್ವತ ಆಗಿದ್ ಬಿದ್ದತ್. ಅದರ್ನೂ ಹತ್ತಿ ಇಳ್ದ್ ಹತ್ತಿ ಇಳ್ದ್ ಹಕಕ್ಕಲೆ ಎತ್ತಿ ಬುಡ್ತ್. ಇನ್ನೂ ಹಕ್ಕಲೆ ಎತ್ತ್‌ಕನ 'ದೊಡ್ಡಾ ಒಂದ್ ಬೆದ್ರ್ ಹಿಂಡ್ಲ್ ಆಗಲಿ'ಂತ ಒಂದ್ ಕಲ್ಲ್ ಹಾಕಿ ಓಡ್ತ್. ಹಾಂಗೆ ಇಲ್ಲದಂತಹ ಒಂದ್ ಬೆದ್‌ರ್ ಹಿಂಡ್ಲಾಗಿ ಹುಟ್ಟಿತ್. ಅದರ ಸೆರೆಲಿ ನುಗ್ಗಿ ಏನೆಲ್ಲಾ ಮಾಡಿಕೊಂಡ್ ಹೊರಗೆ ಬಾತ್. ಎತ್ತಿ ಬುಡ್ತ್. ಇಂವ ಅಲ್ಲಿಂದ 'ಪಾತಾಳಂದ ಆಕಾಶವರೆಗೂ ಆವಂತ ಒಂದ್ ಪಾರೆ ಕಲ್ಲಾಗಲಿ'ಂತ ಒಂದ್ ಕಲ್ಲ್ ಹಾಕಿತ್. ಅದೇ ರೀತಿ ಪಾರೆಕಲ್ಲ್ ಎದ್ದತ್. ಈ ಪಾರೆಕಲ್ಲಿಗೆ ಹತ್ತಿ ಇಳ್ದ್ ಹೊಣ್ಕೆ ಹೊಣ್ಕೆ ಹೊಣ್ಕೆ ಅಂವ ಅಲ್ಲೇ ಸತ್ತ್ ಹೋತ್. ಇಂವ ಈ ಚಾಂಬಾರ್ ಅಂಗಿನ ಹಾಕಿಕಂಡ್ ಹೋದೆ.

ಆ ರಾಜ್ಯಲಿ ಒಂದ್ ಅರ್ಸಂಗೆ ಏಳು ಜನ ಮಕ್ಕ ಒಂದ್ ದಿನ ಕುದ್ದ್ ಕಂಡ್ ಕುಶಾಲ್‌ಲಿ ಕೇಳ್ತ್ ಅಪ್ಪ. 'ಹೌದ ಮಕ್ಕಳೆ, ಗಂಡನ ಮನೆ ಉಗ್ಗೆ ಒಳ್ಳೊದಾ, ಅವ್ವ ಅಪ್ಪನ ಮನೆ ಉಗ್ಗೆ ಒಳ್ಳೊದಾ'ಂತ. ಎಲ್ಲವ್ ಹೇಳ್ದೊ ಆರ್ ಜನ 'ಅವ್ವಪ್ಪನ ಮನೆ ಉಗ್ಗೆ ಒಳ್ಳೊದಪ್ಪಾ'ಂತ. ಕಡೇ ಗೂಡೆ ಹೇಳ್ತ್ 'ಅವ್ವಪ್ಪನ ಮನೆಲಿರಿಕನ ಅವ್ವಪ್ಪನ ಮನೆ ಉಗ್ಗೆ ಒಳ್ಳೊದ್, ಗಂಡನ ಮನೆಗೆ ಹೋಕನ ಗಂಡನ ಮನೆ ಉಗ್ಗೆ ಒಳ್ಳೆದಪ್ಪಾ'ಂತ. 'ಆ ನಿಂಗೆ ಈಗಲೇ ಗಂಡನ ಮನೆ ಚಿಂತೆ ಹಿಡ್ದ್ ಬುಡ್ತ. ಈಗ ಅಕ್ಕಂದರಿಗೆಲ್ಲ ಅವ್ವ ಅಪ್ಪನ ಉಗ್ಗೆ ಸಾಕಾತ್ಲೆ. ನಿಂಗೆ ಅವ್ವಅಪ್ಪನ ಮನೆ ಉಗ್ಗೆ ಸಾಕಾತ್. ಗಂಡನ ಮನೆ ಉಗ್ಗೆನ ಈಗ ನೀ ನೆನ್ಸಿದ'ಂತ ಹೇಳಿ ಅರ್ಸ ಮನೆಲಿದ್ದ ಕೆಲಸದವರ ದಾರಿದಾರಿಲಿ ಪಾರಕುದ್ರಿಸಿತ್. 'ಯಾರ್ ರೋಗಿಷ್ಟ ಬಂದದೆಯೋ ಅಂವನ ಕಾಲ್ ಕೈ ಮುರ್ದ್ದ ತರೊಕ್. ಅವನ್ನೆ ಗಂಡ ಮಾಡೊಕ್'ಂತ. ಅವ್ಕೆ ದೊಡ್ಡ ಅರ್ಸ್‌ರ ಮಕ್ಕ ಎಲ್ಲ ಬಂದೊ. ಅವ್ಕೆಲ್ಲ ಮಾತ್‌ಕೊಟ್ಟ್ ಮೊದ್ವೆ ಎಲ್ಲ ನಿಶ್ಚಯ ಮಾಡ್ದೊ. ಎಲ್ಲ ದಿಬ್ಬಣ ಬಂದೊ. ಇದ್ಕೆ ಕುಷ್ಠ ರೋಗದಂವ ಸಿಕ್ಕಿತ್. ಅಂವನ ಕರ್ಕಂಡ್ ಬಂದೊ. ಕೊಠಗೆಲಿ ಇದ್ಕೆ ಹೇಳಿಕಂಡ್ ಬೊಯ್ದೊ. ಕೆಲವ್ ಅಂವಂಗೆ ಬೊಯ್ದೊ. ಅದ್ಕೆ ಬೊಯ್ದೊ. ಕೆಲವ್ ಇಂಥ ಮಾತ್ ಹೇಳ್ದು ಸರಿಯಾಂತ ಹೇಳುವೆ. ಹಿಂಗೆಲ್ಲಾ ಕಡೆಗೆ ಇವರಿಬ್ಬರ ಕೂಡ್ರಿಸಿ ಈ ಕುಷ್ಠಂಗೆ ಒಂದ್ ಕೊಟಗೆಲಿ ಮೊದ್ವೆ ಮಾಡ್ದೊ. ಇವ್ಕೆಲ್ಲ ಮನೆಲೆ ಮೊದ್ವೆ ಮಾಡ್ದೊ. ಇವರ ಮೊದ್ವೆ ಊಟ ತಿಂಡಿ ಎಲ್ಲ ಕೆಲ್ಸ ತೀರ್ತ್. ಇದ್ ಅವ್ವನೊಟ್ಟಿಗೆ ಅನ್ನ ಕೇಳಿಕಂಡ್ ಬಾದು. ಅವ್ವೆ ಇಬ್ಬರ್ ಕುದ್ದ್‌ಕಂಡು ತಿನ್ನುದು.

ಹಿಂಗೆ ಇರಿಕನ ಕಡೆಗೆ ಅರ್ಸಂಗೆ ಒಂದ್ ಕಾಯಿಲೆ ಹಿಡ್ತ್. ಕಾಯಿಲೆ ಹಿಡ್ದ್ ಮೊದ್ದ್ ಮಾಡ್‌ಕನ ಅಂವಂಗೆ ಮಾಸ ತಿನ್ನೊಕ್'ಂತ ಆಸೆ. ಕಾಡ್‌ಗೆ ಹೋಕ್'ಂತ ಹೇಳಿ ಅಳಿಯಂದರೆಲ್ಲ ಬಾಕ್ಕೆ ಮಾಡ್ತ್. 'ನಂಗೆ ಮೃಗ ಮಾಸ ತಿನೊಕ್. ಮೃಗ ತರೊಕ್'ಂತ ಹೇಳಿ ಕಾಡ್‌ಗೆ ಕಳ್ಸಿತ್. ಅದ್ ಇಂವಂಗೂ ಗೊತ್ತಾತ್. ಇಂವ ಹೇಳ್ತ್. 'ಹೋಗ್ ನಿನ್ನ ಅವ್ವನೊಟ್ಟಿಗೆ ಕೇಳ್. ಒಂದ್ ಬೆಡಿಯೂ ಒಂದ್ ಕತ್ತಿನೂ ತಾ'ಂತ ಹೇಳ್ತ್. ಅದ್ ಬಂದ್ ಕೇಳ್ತ್. ಕೇಳ್ಕನ ರಾಜ ಹೇಳ್ತ್. 'ಎಂತದ್ ಗಡ. ಅಲ್ಲ ಅದರ ಗಂಡನೂ ಹೇಳ್ತ್‌ಗಡ ಕತ್ತಿನೂ ಒಂದ್ ಬೆಡಿನೂ ತಂಬಾ'ಂತ. 'ಎಂತಕ್ಕೆ ಎಲ್ಯಾರು ಹೊನ್ಕಿ ಬಿದ್ದ್ ಸಾಯಕ್ಕಾ'ಂತ ಅರ್ಸ ಹೇಳ್ತ್‌ಗಡ. ಮತ್ತೆ ಒಂದ್ ಬೆಡಿನೂ ಕೊಟ್ಟತ್. ಇದರ ತಕಂಡ್ ಹೋತ್ ಇಂವ. ಹೋಗಿ ದೊಡ್ಡಾ ಒಂದ್ ಕಾಡಿಗೆ ಎತ್ತಿಕನ ಇದರ ಎಲ್ಲ ಬಿಚ್ಚಿ ಅತ್ತ ಅಡಿಲಿ ಇಸಿತ್. ಸೂರ್ಯನ ನೆನ್ಸಿತ್. ಬೆಳ್ಳಿ ಕುದ್‌ರೆಲಿ ಅಂವಂಗೆ ಬೇಕಾದ ಸಾಮಾನ್ ಒಂದ್ ಪುಸ್ತಕ ಅಲ್ಲಿಂದ ತರ್ಸಿದೊ. ಎಲ್ಲ ಆಗಿ ಡ್ರೆಸ್ ಮಾಡಿ, ತಲೆಗೆ ರುಮಾಲ್ ಹಾಕಿ, ಮೈಗೆ ಶಾಲ್ ಹಾಕಿ, ಕೈಗೆ ಬಲೆ ಉಂಗುರ ಎಲ್ಲ ಹಾಕಿ ಮರದ ಕೊಡಿಗೆ ಹತ್ತಿತ್. ಅಲ್ಲಿ ಈ ಪುಸ್ತಕ ಹಿಡ್ಕಂಡ್ ಓದಿಕೆ ಸುರ್ ಮಾಡ್ತ್. ಅಷ್ಟೊತ್ತಿಗೆ ಆ ಮರದ ಕೆಳಗೆ ದೊಡ್ಡೊ ಒಂದ್ ಮೈದಾನ ಆತ್. ಆ ಮೈದಾನಲಿ ಒಂದ್ ಕೆರೆ. ಅಲ್ಲಿಗೆ ಮೃಗಾದ ಮೃಗ ಹಕ್ಕಿ ಪಕ್ಷಿಂದಿತ್ತ ಪೂರಾ ಬಂದೊ. ಅಲ್ಲಿ ಬಂದ್ ನೀರ್ ಕುಡ್ಕಂಡ್ ಆಟ ಆಡಿಕಂಡ್ ಕಚ್ಚಿಕಂಡ್ ಎಲ್ಲ ಒಳೊ. ಎಲ್ಲೆಲ್ಲಿ

ಎಂತದ್ ಹುಡ್ಕಿರು ಇವ್ಕೆ ಎಂತದೂ ಸಿಕ್ಕಿತ್ಲೆ. ಕಡೆಗೆ ಇವ್ಕೆ ಸಂಕಟ ಮರ್ಕಟ ಆತ್. ಅಯ್ಯೋ ಎಲ್ಲಿ ನೀರ್ ಉಟ್ಟಪ್ಪಾಂತ ಒಂದ್ ನೀರಿದ್ದಲ್ಲಿಗೆ ಪೋಯ ನೀರ್ ಕುಡ್ಕೊಂಡ್ 'ಮಾವಂದ ಮುಂದೆ ಕಾಡ್‌ಲಿ ನಾವ್ ಸತ್ತವೆ ಅಲ್ಲ'ಂತ ಹೇಳಿಕಂಡ್ ಹೋದೊ. ಹೋಕನ ಇವ್ಕೆ ನೀರ್ ಕಂಡದೆ. ನೀರ್ ಕಂಡದೆ ಮೃಗನೂ ಅಷ್ಟೇ ಉಟ್ಟು. ನೋಡ್ರೆ ಇಂವ ಮೇಲೆಂದ ಊರ್‍ಗಿದೆ ಪದ. ಇವ್ಕೆ ನೀರ್ ಕೇಳಿಕೆ ಧೈರ ಬಾತ್ಲೆ. ಅಲ್ಲಿಂದ ಕೈ ಮುಗ್ದೊ. ಕೈಮುಗ್ದಾಕನ ಕೆಳಗೆ ಇಲ್ಕೊಂಡ್ ಬಾತಂವ. 'ಏನಾಕ್ ನೀವ್ಗೆ?''ನಾವ್ಗೆ ನೀರ್ ಕುಡಿಯೊಕ್'. 'ಹೋ ಕುಡಿನಿ'ಂತ ಹೇಳ್ತ್. ಅಲ್ಲಿಂದ ನೀರ್ ಕುಡ್ದ್ ಬಂದೋ. ಬಂದರೆ ಕೇಳಿಕೆ ಧೈರ ಇಲ್ಲೆ ಇವ್ಕೆ. ಮನಸು ಬಾದ್ಲೆ. ಎಂತದ್ ಆಕ್‌ಂತ 'ಮಾಸ ತಿಂಬಕೆ ನಮ್ಮ ಕಾಡಿಗೆ ಕಳ್ಸಿದೊ. ಯಾವುದೊಂದ್ ನಾವ್ಗೆ ಕಾಂಬಕೆ ಸಿಕ್ಕಿತ್ಲೆ. ಹಾಂಗೆ ಆಕನ ನಾವ್ಗೆ ಒಂದ್ ಮೃಗ ಬೇಕಾಗಿತ್ತ್'ಂತ್ ಹೇಳ್ದೊ. 'ಆತ್ ತೊಂದರೆ ಇಲ್ಲೆ. ನಿಮ್ಮ ಕಾಲ್ನ ಒಂದೊಂದ್ ಕಿಣ್ಕ್‌ನಿಕೆ ಬೆರ್ಲ್ ನಂಗೆ ಕೊಡೊಕು'ಂತ ಹೇಳ್ತ್. ಆರ್ ಜನರ್ದ್ ಒಂದೊಂದ್ ಬೆರ್ಲ್‌ನ ಕತ್ತರಿಸಿಕನ್ತ್. ಒಂದೊಂದ್ ಕೊತ್ತಿನ ತಕೊಂಡ್ ಹೋಗಿಂತ ಹೇಳ್ತ್. ಅಲ್ಲಿಂದ ಒಂದೊಂದ್ ಕೊತ್ತಿನ ತಕಂಡ್ ಇಂವ ಒಂದ್ ಕುತ್ರಿನ ತಕನ್ತ್. ಇಂವನ ಕುದ್ರೆಲಿ ಬಂದ್ ಸಾಮಾನ್ ಕುದ್ರೆಲಿ ತಗ್ಸಿತ್. ಇಂವನ ಕತ್ತಿ ಬೆಡಿನ ತಕನ್ತ್. ಕುತ್ರಿನ್ ತಕಂತ್ ಬಾತ್. ಬಂದ್ ಇಂದ ತಕಂಡೋಗ್ ನಿನ್ನ ಅಪ್ಪನ ಕೈಗೆ ಕೊಡ್‌ಂತ ಹೇಳ್ತ್. ಕೊಟ್ಟತ್. 'ಎಂತದ್ ?''ಒಂದು ಕುತ್ರಿನ ತಾತ್'. 'ಕುತ್ರಿಯಾ ಯಾರಾರು ಹೊಡ್ದಾಕಿದ ಕೊತ್ತಿನಾ'ಂತ ಹೇಳ್ತ್. ಆಗ ಮತ್ತೆ ಅದರ ಗೈಪ್ ಎಲ್ಲ ಮಾಡ್ದೊ. ಕತ್ತಲೆಗೆ ಊಟಕೆ ಆಕನ ನೀ ಹೋಗ್. 'ಕೊತ್ತಿನ ಗೈಪ್ ಬೇಡ. ಕುತ್ರಿನ ಗೈಪ್ ಇದ್ದರೆ ಎರಡ್ ತುಂಡ್ ಬೇಕಡಾ'ಂತ ಹೇಳ್ತ್ ಹಾಂಗೆ ಹೋತ್. ಅವ್ವಾ 'ಕೊತ್ತಿನ ಗೈಪ್ ಬೇಡಗಡ. ಕುತ್ರಿನ ಗೈಪ್ ಇದ್ದರೆ ಎರಡ್ ತುಂಡ್ ಕೊಡೊಕ್'ಂತ ಹೇಳ್ದೊ. ಆಗಲೂ ಅಪ್ಪ ಇಚಾರ ಮಾಡ್ತ್, 'ಎಲ್ಲಿಂದ ಗಡ ಅದರ ಅಪ್ಪನ ಮನೆಂದನ ಕೊತ್ತಿ ಅದರ ಗಂಡನೇ ತಂದದೋ ಏನೊ' ತಮಾಸೆ ಮಾಡ್ತ್. ಮತ್ತೆ ಅವ್ವ ಗೈಪ್ ಉಗ್ಗೆ ಕೊಟ್ಟತ್. ಉಂಡ್ ಮಲಗಿದೊ.

ಮಾರನೆ ದಿನವ್ ಕಾಡಿಗೆ ಹೋದೊ. ಮಾರನೆದಿನ ಹೋದರ್ ಸಹ ಹೋಗಿ ಬೆಳ್ಳಿ ಕುದುರೆ ತಾತ್. ರಾಮಾಯಣ ಭಾರತ ಓದಿಕಂಡ್, ಅಲ್ಲಿಗೆ ಎಲ್ಲ ಮೃಗಗ ಬಂದೊ, ಬಿಸಿಲಿಗೆ ತಡಿಯಕೆ ಬೊತ್ತಾಗಿ ಇವನೊಟ್ಟಿಗೆ ಬಂದೊ, ಕೈಮುಗ್ದ್ ಕೇಳಿಕೆಂಡೊ. ಎರಡ್ನೆ ಮೃಗ ಕೇಳ್ದೊ. ಮೃಗ ಕೊಡೊಕ್ 'ನಿಮ್ಮ ಎಡದ ಕೈದ್ ಒಂದೊಂದ್ ಬೆರ್ಲ್ ಕೊಡೊಕ್'ಂತ ಕೇಳ್ತ್. ಅಂದ್ ಆರ್ ಜನರ ಎಡದ ಕೈನ ಆರ್ ಬೆರ್ಲ್ ಕೊಟ್ಟೊ. ಕೊಟ್ಟ್‌ದ್ ಅಂದೊಂದ್ ನಾಯಿನ ಕೊಟ್ಟತ್. ಇಂವ ಒಂದ್ ಬರಿಂಕನ ತಕನ್ತ್. ಇಂವ ಬೆಳ್ಳಿ ಕುದುರೆಲಿ ಡ್ರೆಸ್ ಪೂರ ಕೋಸಿತ್. ಇಂವನ ಡ್ರೆಸ್ಸ್‌ನ ಹಾಕನ್ತ್. ಬರಿಂಕನ ಹೊತ್ತ್‌ಕಂಡ್ ಬಾತ್. ಬಂದ್ 'ಇಂದ ತಕಂಡೋಗಿ ನಿನ್ನ ಅಪ್ಪಂಗೆ ತಿಂಬಂಕೆ'ಂತ ಹೇಳ್ತ್. ತಕಂಡ್ ಬಂದ್ ಕೊಟ್ಟ್‌ತ್. 'ಅವ್ವ ಅಪ್ಪಂಗೆ ತಿಂಬಕೆ ಗಡಾ'ಂತ

ಹೇಳ್ತ್. 'ಎಂತ ಗಡ ?''ಅಲ್ಲ ಅಪ್ಪಂಗೆ ತಿಂಬಕೆ ಗಡಾಂತ ಒಂದ್ ಬೊರಿಂಕ ತಂದುಟು'. 'ಬರಿಂಕನಾ ಯಾರ್ದಾರ್ ನಾಯಿನೊ'ಂತ ಹೇಳ್. ಅದರ ಬೇರೆ, ಇದರ ಬೇರೆ ಗೈಪ್ ಮಾಡ್ಡೊ. ಕತ್ತಲೆ ಆಕನ ಹೆಣ್ಣ್‌ನ ಕಳ್ಸಿತ್ ಇಂದಾ ಬರಿಂಕನ ಗೈಪು ಇದ್ದರೆ ನಾಲ್ಕು ತುಂಡು ಕೊಡೊಕಡ. ಆಗಲೂ ಅಪ್ಪ ಬೊಯ್ತ್. ಇದ್ ತಕಂಡ್ ಬಂದ್ ಕೊಟ್ಟಿತ್. ಉಂಡ್‌ದ್ ಮಲಗಿದೊ.

ಮಾರನೆ ದಿನನ್ ಬೇಟೆಗೆ ಹೋದೊ. ಅವ್ಕೆ ಒಂದೊಂದ್ ಕುರೆನ ಕೊಟ್ಟಿತ್ ಇಂವ ಒಂದ್ ಮೊಲನ ತಕಂಡ್ ಬಾತ್. ಮೊಲನ ತಕಂಡ್ ಬಂದ್ 'ಇಂದ ನಿನ್ನ ಅಪ್ಪಂಗೆ ಮೊಲ ತಿಂಬಕೆ ಕೊಡ್'ಂತ ಹೇಳ್ತ್. ಕತ್ತಲೆ ಆಕನ ಉಗ್ಗೆ ಕೇಳಿಕೆ ಹೋಕನ 'ಮೊಲನ ಗೈಪ್ ಇದ್ದರೆ ನಾಲ್ಕ್ ತುಂಡ್ ಬೇಕಡ'. 'ಮತ್ತೇನ್ ಕುರೆನ ಗೈಪ್ ಬೇಡಗಡ'ಂತ ಹೇಳಿ ಬುಡ್‌ಂತ ಹೇಳ್ಡೊ. ಹಂಗೆ ಹೇಳ್ತ್ ಇದ್. ಆಗಲೂ ಇದ್ಕೆ ಬೊಯ್ತ್. ಬೊಯ್ದ್ ಇದ್ಕೆ ಉಗ್ಗೆ ಗೈಪ್ ಎಲ್ಲ ಕೊಟ್ಟೊ ಉಂಡ್‌ದ್ ಎಲ್ಲ ಮಲಗಿದೊ.

ಇನ್ನೊಂದ್ ಸಲ ಆ ಜಾಗಲಿ ಬಾರಿದೊಡ್ಡ ಒಂದ್ ಆಟ ಆತ್. ಈ ಆಟಕೆ ಇವ್ ಎಲ್ಲ ಬಾರಿ ಶೃಂಗಾರ ಮಾಡಿ ಕುದ್‌ರೆಲಿ ಕುದ್ದ್‌ಕಂಡ್ ಎಲ್ಲ ಹೊರ್ಟೊ. ಆಗ ಇಂವ ಹೇಳ್ತ್ ಹೋಗ್ ನಿನ್ನ ಅವನೊಟ್ಟಿಗೆ ಕೇಳ್. ನಿನ್ನ ಡ್ರೆಸ್‌ನ ತಂಬ ನಾವ್ ಪೊಯಿ. ನಾವ್ ಸಹ ಒಂದ್ ಆಟ ನೋಡೋಣಾಂತ ಹಾಂಗೆ ಹೋಗಿ ಕೇಳ್ತ್. ಕೇಳ್ಕನ ಅಷ್ಟೆ ಇಚಾರಿಸಿತ್. 'ಆಟ ಬುಟ್ಟ್‌ದ್ ಅವರ್ನೆ ನೋಡ್‌ವೊ ಯಾರಾರ್ ಅವರ ನಾತಲಿ ಅಲ್ಲಿ ಯಾರ್ ಕುದ್ರ್‌ವೊ ಗಡ. ಆ ಕುಷ್ಠನ ನಾತಲಿ'ಂತ ಬೊಯಿತ್ ಗಡ ಅಪ್ಪ. ಹಾಂಗೆ ಅವು ಅಂಗಿ ಬಟ್ಟೆ ಎಲ್ಲ ಹಾಕಿದೊ ಹೋದೊ. ಹೋಗಿ ಸುಮಾರ್ ದೂರಕೆ ಎತ್ತಿಕನ ಇಂವ ಸೀರೆನ ನೇಚಿತ್, ಇಂವಗೆ ಬೇಕಾದಷ್ಟ್ ಬಟ್ಟೆ ಅದಕ್ಕೆ ಬೇಕಾದಷ್ಟ್ ಬಟ್ಟೆ ಚಿನ್ನ ಎಲ್ಲ ತಕಂಡ್ ಬಾತ್. ಇದರೆಲ್ಲಾ ಬಿಚ್ಚಿದ್ ಬಂದ್ ಕರೆಲಿ ಮಾರಪ್ ಮಾಡಿ ಇಸಿದೊ. ಕುದ್‌ರೆಲಿ ಕುದ್ದ್‌ಕೊಂಡ್ ಹೋದೊ. ಕುದ್‌ರೆಲಿ ಕುದ್ದ್‌ಕೊಂಡು ಹೋಕನ ಇವರ ಪೊರ್ಲ್ ನೋಡಿ ಆಟ ಅಡ್‌ವವ್ ಕೂಡಾ ಇವರ್ನೇ ನೋಡ್ವೆ. 'ಇವು ಯಾವ ಊರ್‌ಂದ ಬಂದದ್?''ಇದ್ ಯಾವ ಊರ್ನ ಕುದ್‌ರೆ?' ಅಲ್ಲಿಂದ ಸುದ್ದಿ ಆತ್. ಇವರ ಕರ್ದ್ ಆಟದವರ ಹಕ್ಕಲೆ ಕುದ್ರಿಸಿದೊ. ಲಾಯ್‌ಕ್‌ಲಿ ನೋಡ್ಡೊ. ಸಾಧಾರಣ ಆಟ ಅಕೇರಿ ಆತ್. ಇನ್ನ್ ನಾವ್ ಪೋಯಿಂತ ಹೊರ್ಟ್ ಬಂದೊ ಇವ್. ಎಲ್ಲಾರ್‌ಂದ ಮುಂದೆ ಬಾಕನ ಇವರ ಎಲ್ಲವ್ ನೋಡ್ಯೊಳೊ. 'ಇಂತ ಜನನ ನಾವ್ ಹುಟ್ಟಿದ ಮೇಲೆ ಕಂಡತ್ಲೆ ಅಲ್ಲಾಂತ'. ಬಂದ್ ಇದರ ಎಲ್ಲ ಬಿಚ್ಚಿ ಡ್ರೆಸ್ ಮಾಡಿ ಕಳ್ಸಿದೊ. ಅವರ ಹಳೆ ಡ್ರೆಸ್ಸ್‌ನ ಹಾಕಂಡ್ ಬಂದೊ ಅವ್.

ಅಲ್ಲಿಂದ ಇದ್ ಸುರ್ ಮಾಡ್ತ್. ಓಹೋ ಇಷ್ಟ್ ಇದ್ದ್ ನನ್ನ ಭಂಗ ಬರ್ಸುದ್‌ಂತ ಮನಸ್ಲೆ ನೆನ್ಸಿಕಂಡತ್. ದೊಡ್ಡ ದೊಡ್ಡ ಸೌದೆ ತಂದ್ ಎಲ್ಲ ಕಟ್ಟಿ ಹಾಕಿತ್. ಅಂವ ರಾತ್ರೆ ಎಲ್ಲವ್ ನಿದ್ರೆ ಆಕನ ಹೋಗಿ ಮೀಕಂಡ್ ಬಾದು. ಅಂವ ಮೀಕಂಡ್ ಬಾಕನ ಮೆಣಸಿನ ಕಾಯಿ ಹಾಕಿತ್. ಹಾಕಿಕನ ನಿದ್ದೆ ಬಾದ್ಲೆ ಅಲ್ಲ. ಅಂವ ಹೋಗಿ ಅಲ್ಲಿ ಮೀಯಕೆ ತಲೆ ನೀರ್ ಹೊಯಿಕಂಬಕನ ಈ

ಚೋಲಿನ ತೆಗ್ದ್ ಕಿಚ್ಚಿಗೆ ಹಾಕಿ ಬುಡ್ತ್ ಇದ್. ಅಲ್ಲಿಂದ ಓಡಿ ಬಾತ್, ನೀ ಇಷ್ಟ್ ಅಂಬೆರ್ಪ್ ಮಾಡಿ ಬುಟ್ಟ ಅಲ್ಲ. ಇನ್ನ್ ಸ್ವಲ್ಪ ದಿನ ಇತ್ತಲ್ಲಾಂತ, ಹಾಂಗೆ ಮಲ್ಗಿದೊ. ಮಲ್ಗಿದವು ಎದ್ರುದೇ ಇಲ್ಲೆ. ಮಧ್ಯಾಹ್ನವರೆಗೆ ಅಂವ ಕರಿಕರಿಬಾತ್. ಅತ್ತ ಹೋತ್ ಕಂಡದೆ ಕುಷ್ಠನ ಎಲ್ಲ ಕಿಚ್ಚಿ ಹಾಕಿತ್ ಕಂಡದೆಂತ ಹೇಳಿಕಂಡ ಅಪ್ಪ ಅಲ್ಲಿಂದ ಬೊಯ್ದುವೆ. ಮತ್ತೆ ಬೊಳ್ಪಾಕನ ಎದ್ದತ್ಲೆ. ಮಧ್ಯಾಹ್ನ ಆಕನ ಊಟಕೆ ಬಾತ್ಲೆಂತ ಹೇಳಿ ಅಯ್ಯೆ ಬಂದ್ ಕರ್ದ್ ನೋಡ್ರೆ ಈ ಅಳಿಯಂದ್ರೆಲ್ಲ ಯಾಕೆ? ಇಂವ ಅಷ್ಟು ಪೊರ್ಲುಟು. ಇಂವನ ಮತ್ತೆ ಕರ್‍ಕೊಂಡ್ ಹೋದೊ. ಕೆಲ್ಸದವೆಲ್ಲಾ ಹೇಳ್ದೊ ಬಾರೀ ಪೊರ್ಲುಟ್ಟಂವ. ಎಂತಂತ ಗೋತ್ಲೆ. ಯಾಗೋಳ್‌ನಂಗೆ ಅಂವನ ಕುಷ್ಠ ರೋಗ ಇಲ್ಲೆ ಲಾಯ್ಕ್ ಉಟ್ಟು. ಮತ್ತೆ ಅಂವಂಗೆ ಬಟ್ಟೆ ಎಲ್ಲ ಎಲ್ಲಿಂದ? ಎಲ್ಲ ಕೊಟ್ಟ್ ಕಳ್ಸಿ ಬಟ್ಟೆ ಹಾಕಿಸಿ ಇಂವನ ಕರ್ಕಂಡ್ ಬಂದೊ. ಕರ್ಕಂಡ್ ಬಂದ್‌ದ್ ಇವರ ಲಾಯ್ಕ್‌ಲಿ ಕುದ್ರಿಸಿದೊ. ಕುದ್ರಿಸಿ ಎಲ್ಲ ವಿಚಾರ ಮಾಡ್ದೊ. ನೀ ಯಾಕೆ ಹೀಂಗೆ ಮಾಡ್ಕೊಂಡಿದ್ದಿ? ಇಂವ ಒಂದೂ ಹೇಳ್ತ್‌ಲೆ. ಕಡೆಗೆ ಅವ್ ಆರ್ ಜನವೂ ಬಂದೊ. ಬಂದ್ ನೋಡ್ರೆ ನಿಮ್ಮ ಎಲ್ಲಿಯೋ ಕಂಡೊಳೆ ಅಲ್ಲ, ನಿಮ್ಮ ಎಲ್ಲಿಯೋ ನಾವ್ ಕಂಡೊಳಲ್ಲಾಂತ ಹೇಳ್ದಲ್ಲದೆ ಇಂತದೂಂತ ಇವ್ಕೆ ಹೇಳಿಕೆ ನೆನ್ಪು ಬಾದ್ಲೆ. ಅಲ್ಲಿಂದ ಮಾವನ ಕೈಗೆ ಇದರ ಹಾಕಿದೊ. ಕುರೆನ ತಕಂಡೋದ ದಿನ ಕೆಬಿ, ಕೈಬೆರ್ಳ್, ಕಾಲ್ ಬೆರ್ಳ್ ತೆಗ್ದ್ ಮಾವನ ಕೈಗೆ ಕೊಟ್ಟತ್. ಮಾವಂಗೆ ಕೊಟ್ಟಾಕನ ಮಾಂವ ನಂತರ ಹೇಳ್ತ್. 'ಕುರೆನೂ ತೀನ್ತ್, ನಾಯಿನೂ ತೀನ್ತ್, ಕೊತ್ತಿನೂ ತೀನ್ತ್'. ಮತ್ತೆ ಅವರೆಲ್ಲಾ ತಕಂಡೋಗಿ ತಲೆ ಕಡ್ತ್‌ಗಡ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 46. ಯೋಗ್ಯನಾದ ಗಂಡನ ಕತೆ

**ಉಪಕತೆ: 1**. ಒಂದ್ ರಾಜ್ಯಲಿ ಒಂದ್ ಬಾರೀ ದೊಡ್ಡ ಅರ್ಸ. ಆ ಅರ್ಸಂಗೆ ಒಬ್ಬ ಮಗ. ಆ ಮಗಳಿಗೆ ಮನೆಲಿ ಕುದ್ರಿಕೆ ಇಷ್ಟ ಇತ್ಲೆ. ಹಾಂಗೆ 'ಒಂದ್ ಶಿಲ್ಪಿಕಲ್ತ ಆಚಾರಿನ ಕರ್ದ್ ಬಾರಿ ದೊಡ್ಡ ಒಂದ್ ಪರ್ವತ. ಆ ಪರ್ವತದ ತಲೆಲಿ ಬಾರಿ ಬಂದೋಬಸ್ತ್‌ನ ಮನೆ ಮಾಡೊಕ್'ಂತ ಹೇಳಿ ಆಚಾರಿಗೆ ಕಂತ್ರಾಟ್ ಕೊಟ್ಟ್ ಮನೆಕಟ್ಟಿಸಿತ್. ಈ ಮನೆಕಟ್ಟಿಸಿ ಆತ್, ಮಗಳ ಕರ್ಕಂಡೋಗಿ ಒಕ್ಕಲ್ ಮಾಡಿಯಾದರ್ ಅಂವ ಆಚಾರಿಗೆ ದುಡ್ಡು ಕೊಟ್ಟತ್ಲೆ. ಅಂವ ಬಾರಿ ಶಿಲ್ಪಿಕಲ್ತ ಆಚಾರಿ. ಅಂವ ಅಲ್ಲಿಗೆ ಮನೆಗೆ ಯಾರ್ ಹೋದರೂ ಮನೆಗೆ ಹುಗ್ಗದ ರೀತಿಲಿ ಮನೆಲಿ ಪಾರ ಎಲ್ಲ ಮಾಡಿ ಬುಟ್ಟ್‌ಬುಡ್ತ್.

ಆಗ ಇನ್ನೊಂದ್ ರಾಜ್ಯಲಿ ಮೂರ್ ಜನ ಗಂಡ್‌ಗ. ಅಪ್ಪನ್ ಅವ್ವನ್ ತೀರಿಹೋದೊ. ತಿರಿ ಹೋಗಿ ಆಕನ ಸಣ್ಣಂವ ಹೇಳ್ತ್ 'ನಂಗೆ ಪಟ್ಟ ಕಟ್ಟೊಕ್'ಂತ. ನಡ್‌ವಣ ಹೇಳ್ತ್ 'ನೀವ್ ಬುಟ್ರೆ ಪಟ್ಟ ನಂಗೆ'ಂತ. ಅಣ್ಣ ಹೇಳ್ತ್. ಸಭೆ ಸೇರ್ದವ್ ಪೂರ ಬೊಯ್ದೊ. 'ಅಣ್ಣ ಇರ್‌ಕನ ನೀವ್ ತಮ್ಮಂದ್‌ರ್ ಪಟ್ಟ ಕಟ್ಟಿಕೆ ಕೇಳಿಕೆ ಬೊತ್ತ್. ನೀವ್ ರಾಜಸ್ಥಾನಲಿ ಕುದ್ರಿಕೆ ಬೊತ್ತ್. ಅಣ್ಣ

ಇರೊಕ್'. ಅಲ್ಲಿ ಚರ್ಚೆ ಆತ್. ಚರ್ಚೆ ಆತ್ ಆತ್ ಏಳೆಂಟ್ ರಾತ್ರೆ ಹಗಲ್ ಚರ್ಚೆ ಆತ್. ಊಟ ತಿಂಡಿ ಒಂದೂ ಇಲ್ಲೆ. ಅಷ್ಟೊತ್ತಿಗೆ ಅಲ್ಲಿಗೆ ಒಂದ್ ಸನ್ಯಾಸಿ ಹೋತ್. ಅಂವ ಹೋಗಿ ಹೇಳ್ತ್ 'ಓ ಇಂತ ಹಿಮಾಲಯಂತ ಹೇಳ್‌ವ ದೊಡ್ಡಾ ಒಂದ್ ಪರ್ವತ. ಆ ಪರ್ವತದ ತಲೆಲಿ ಒಂದ್ ಗೂಡೆ ಉಟ್ಟು. ಆ ಗೂಡೆನ ಯಾರ್ ಮೊದ್ವೆ ಆದೊ. ಅವ್ಕೆ ಅಪ್ಪನ ಪಟ್ಟ'. ಹಾಂಗೆ ಹೇಳಿಯಾಕನ ತಮ್ಮ ಹೊರ್ಟ್ತ್. ನಾ ಹೋಗಿ ಮೊದ್ವೆ ಆಕ್ಕೊಂಡ್ ಬನ್ನೆ. ನಂಗೆ ಪಟ್ಟಕಟ್ಟೊಕ್‌ಂತ ಹೇಳಿ ಹೋತ್. ಹೋಗಿ ಹೋಗಿ ಹೋಗಿ ಕತ್ತಲೆ ಆಕನ ಅಲ್ಲಿಗೆ ಎತ್ತಿತ್. ಅಲ್ಲಿ ಎತ್ತ್‌ಕನ ಅಲ್ಲಿ ದೂರ ಒಂದ್ ಗಂಟೆಮಣಿ ತೂಗಿತ್ತ್ ಗಡ ಆಚಾರಿ. ಈ ಗಂಟೆಮಣಿನ ಆಡ್ಸಿ ಆಕನ ಅಲ್ಲಿ ನಾಯಿ, ಹುಲಿ, ಕರಡಿ, ಸಿಂಹ, ರಾಕ್ಷಸ, ಎಲ್ಲರ ಅಂವ ಪಾರ ಮಾಡಿಟು. ಈ ಗೂಡೆಗೆ ಒಂದ್ ಮಂಚ. ಇನ್ನ್ ಎದುರ್ಗೆ ಒಂದ್ ಮಂಚ. ಈ ಮಂಚಲಿ ಇದ್ ಹೋಗಿ ಒಕ್ಕ್‌ಲಾದ ಹಂಗೆ ಅದ್ ಅದ್ಕೆ ಅಡಿಗೆ ಊಟ, ನಿದ್ದೆ, ಒಂದೂ ಇಲ್ಲೆ. ಯಾವ್ದೂ ಇಲ್ಲೆ. ಮಲ್ಗಿದ್ ನಿದ್ದೆನೆ. ಆಗ ಈ ಹೋದವ್ ಪೂರ ಹಿಂಗೆ ಇದರ ಮೊದ್ವೆ ಆಕ್ಕ್‌ಂತ ಹೋದವು ಪೂರ ಗಂಟೆ ಆಡ್ಸುದ್. ಗಂಟೆ ಆಡ್ಸಿ ಆಕನ ಹುಲಿಯೋ ಸಿಂಹನೊ ಯಾವುದಾದರ್ ತಿಂದ್‌ಕಂಡ್ ಹೊದು. ಹಿಂಗೆ ಆಗಿ ಸಾಧಾರಣ ಹತ್ತ್ ಹನ್ನೆರಡ್ ವರ್ಷ ಆತ್. ಈ ಹತ್ತ್ ಹನ್ನೆರಡ್ ವರ್ಷಲಿ ಈ ಗೂಡೆಗೆ ನಿದ್ದೆ ಅಲ್ಲದೆ ಯಾವುದೊಂದ್ ಇಲ್ಲೆ. ಅಂದ್ ಇಂವನ ತೀನ್ತ್. ಇಂವನ ಇಲ್ಲಿ ಬಾವಂತ ಹೇಳಿ ಮೂರ್ ನಾಲ್ಕುದಿನ ಪಾರಕಾದರೂ ಇಲ್ಲೆ. ಅಷ್ಟೊತ್ತಿಗೆ ಏನ್ ಬಾತ್ಲೆಂತ ನೋಡೋಣಂತ ಹೇಳಿ ಎರಡ್ನೆ ಅಣ್ಣ ಹೋತ್. ಎರಡ್ನೆ ಅಣ್ಣನೂ ಅಲ್ಲಿಗೆ ಹೋತ್. ಅವನ್ ಹೋಗಿ ಗಂಟೆ ಮಣಿ ಆಡ್ಸಿತ್. ಅಂವನ್ ಅಲ್ಲಿ ಹೋತ್. 'ಆಮೇಲೆ ಅಯ್ಯೋ ಅಪ್ಪನಅಮ್ಮನ ಬದ್‌ಕ್‌ಗಾಗಿ ಎರಡ್ ತಮ್ಮಂದಿರಿಬ್ಬರ್ ಹೋದೊ. ಎಲ್ಲೂ ಕಾಂಬೊದ್ಲೆ. ಯಾವ ಊರಿಗೆ ಹೋದೊ? ಏನಾದೊ?' ಅಂತ ಹೇಳ್ಕೊಂಡ್ ಅಣ್ಣ ಬೇಜಾರ ಮಾಡ್ಕೊಂಡ್ ಕಣ್ಣೀರ್ ಹಾಕ್ಕಂಡ್ ಹೋತ್. ಹೋಗಿ ಹೋಗಿ ಆಕನ ಅದರ ಅಡೀಲಿ ಉಟ್ಟು ಈ ಆಚಾರಿ ಮನೆ. ಪರ್ವತದ ತಲೆಲಿ ಗೂಡೆ. ಈ ಆಚಾರಿ ಮನೆಗೆ ಹೋತ್. ಇಂವ ಕತ್ತಲೆ ಆಕನ ಹೋಗಿ ಆಕನ 'ಏನ್ ಬಂದರಿ? ಯಾವ ಊರಿಂದ ಬಂದರಿ? ಏನ್ ಕತೆ?' ಅಂತ ಕೇಳ್ತ್. ಎಲ್ಲ ಇಚಾರ್ಸಿತ್ ಆಚಾರಿ. ಆದರೆ ಇಂವ ಹಿಂಗೆ ಹಿಂಗೆಂತ ಹೇಳ್ತ್. ಕುದ್ರಿಕೆ ಎಲ್ಲ ಕೊಟ್ಟ್, ಅಂವಂಗೆ ಮೀಯಕೆ ಊಟ ತಿಂಡಿ ಎಲ್ಲ ಕೊಟ್ಟ್, 'ಅವ್ ಈ ರೀತಿಲಿ ಇರ್‌ವೊ. ನಾನೇ ಕಟ್ಟಿದ ಮನೆ. ನನ್ನ್ ಕೈಲಿ ಕಂತ್ರಾಟ್ ಕೊಟ್ಟ್‌ದ ಅದರ ಅಪ್ಪ ಕಟ್ಟಿಸಿದ ಮನೆ. ಅದ್ಕೆ ಇಂತಿಂತವರ ಎಲ್ಲ ನಾ ಪಾರಮಾಡ್ಯೊಳೆ. ನಂಗೆ ಅಂವ ಕಂತ್ರಾಟ್ ಕೊಟ್ಟದಲ್ಲದೆ ಏನೂ ದುಡ್ಡ್ ಕೊಟ್ಟತ್ಲೆ. ಹಾಂಗೆ ಆಕನ ಅದ್ಕೆ ನೀವ್‌ಗೆ ಎಲ್ಲ ಹೇಳಿಕೊಟ್ಟನೆ ಮಲ್ಗಿ'ಂತ ಹೇಳ್ತ್. ಮಲ್ಗಿತ್. ಮಾರನೆದಿನ ಅಂವ ಎಲ್ಲ ಹೇಳಿಕೊಟ್ಟತ್. ಎಲ್ಲ ಬಂದ್ ತಯಾರ್ ಮಾಡ್ತ್. ಇಂವನ ಕಳ್ಸಿತ್. ಅದ್ ಎಲ್ಲ ಒಂದ್ ತರದ ಮಾಯದ ಹಾಂಗಿದ್ದವ್. ಇಂವ ಎಲ್ಲ ಹೇಳಿ ಕೊಟ್ಟುಟು. ಹಾಂಗೆ ಇಂವ ಮೊಣಿ

ಆಡ್ಲಿತ್ಲೆ. ಸೀದಾ ಹೋತ್. ಹೋದಾಂಗೆ ನಾಯಿ ಬಾತ್. ನಾಯಿಗೆ ತಿಂಡಿ ಕೊಟ್ಟತ್. ಮತ್ತೆ ಹುಲಿ ಬಾತ್, ಕರಡಿ, ಸಿಂಹ ಎಲ್ಲವ್ಕ್ ತಿಂಡಿಕೊಟ್ಟತ್. ಅವು ಎಲ್ಲ ಕಚ್ಚಿಕೊಂಡೊ. ಅಷ್ಟೊತ್ತಿಗೆ ರಕ್ಕಸ ಬಾತ್. ರಕ್ಕಸಂಗೆ ಅಂವ ಬೆತ್ತ ಕೊಟ್ಟುಟು. ಬೆತ್ತಲಿ ಒಂದ್ ಪೊಲಿ ಕೊಟ್ಟಾಕನ ಅಂವ ನೆಳ ಆತ್. ನೆಳ ಹೋಗಿ ಆ ಗೂಡೆನ ಮೈಲಿ ಕುದ್ದತ್. ಕುದ್ದದ್ ಆಕನ ಒಂದ್ ಕಥೆ ಹೇಳ್ದೆ. ಕಥೆಗೊತ್ತುಟ್ಟ –

"ಒಂದ್ ರಾಜ್ಯಲಿ, ಒಂದ್ ಹಾರಂವ. ಅಂವಂಗೆ ಮಕ್ಕ ಇಲ್ಲೆ. ಬದ್ಕ್ ಉಟ್ಟು. ತಂಗೆ ಮಕ್ಕ ಇಲ್ಲದವಂಗೆ ಬದ್ಕ್ ಉಟ್ಟು. ನಂಗೆ ಮಕ್ಕ ಇಲ್ಲದವಂಗೆ ಬದ್ಕ್ ಯಾಕೆ ? ನಾ ಕಾಶಿಗೆ ಹೊನೆ. ಕಾಶಿಗೆ ಹೊರಟತ್ ಗಡ. ಹೊರ್ಟ್ದ್ ಹೋಕನ ಅದ್ಕೆ ಮುಂದೆನೇ ದೊಡ್ಡಾ ಮಳೆ ಬಾತ್. ಒಂದ್ ದಿನಕ್ಕೆ ಮುಂದೆ ಈ ಮಳೆಗೆ ಮೀನ್ ಉಬರ್ ಹತ್ತಿಕನ ಅದರ ತಿಂಬಕೆ ಹತ್ತಿದ ಮೊಸಲೆ ಒಂದ್ ಹಳ್ಳಲಿ ಬಿದ್ದ್‌ಕಂಡುಟು. ಅದ್ಕೆ ನೀರ್ ಮುಗ್ದದ್ ಗೊತ್ಲೆ. ಅಷ್ಟಾಕನ 'ಇನ್ನ್ ಎಲ್ಲಿಗೆ ಹೋದು? ಎಂತದ್'ಂತ ಇಲ್ಲೆ. ಅಲ್ಲಿಂದ ಇಂವನ ಕರ್ತ್. ಯಾರ? ಹಾರಂವನ. ಕರ್ದ್ದ್ ದಮ್ಮಯ್ಯ ಹಾಕಿತ್. 'ನೀ ಬಾ ನನ್ನ ಒಮ್ಮೆ ತಕಂಡೋಗಿ ಒಂದ್ ಮೊಣಕಾಲ್ ನೀರಿಗೆ ಒಮ್ಮೆ ಬುಟ್ಟ್ ಬುಡ್'. 'ನೀ ಎಲ್ಲಿಗೆ ಹೋಂವವ?''ನಾ ಹಿಂಗಿಂಗೆ ಕಾಶಿಗೆ ಹೋದು'. ಆಗ 'ನಿಂಗೆ ಕಾಶಿಗೆ ಹೋದ ಪುಣ್ಯ ಇಲ್ಲೆ ಸಿಕ್ಕಿದೆ'. 'ನೀ ನನ್ನ ತಕಂಡೋಗಿ ಮೊಣಕಾಲ್ ನೀರಿಗೆ ಬುಟ್ಟ್ ಬುಡ್'ಂತ ಹೇಳ್ತ್. ಅದ್ ಏನ್ ಮಾಡ್ತ್ 'ನಿನ್ನ ಸೀರೆನ ಹಾಸ್, ಅದ್ಕೆ ನಾ ಮಲ್ಗಿನೆ'. ಹಂಗೆ ಇಂವನ ಹೆಗಲ್‌ಲಿದ್ದ ಸೀರೆನ ಹಾಸಿತ್. ಅದ್ ಮಲ್ಗಿತ್. ಅದರ ತೆಗ್ದ್ ಬೆನ್ನ್ ಮೇಲೆ ಹಾಕಿಕಂಡ್ ಹೋತ್.

ಹೋಗಿ ಹೋಗಿ ಹೋಗಿ ಒಂದ್ ಕೆರೆಗೆ ಇಲ್ದ್‌ದ್ ಮೊಣಕಾಲ್ ನೀರಿಗೆ, ಸೊಂಟ ನೀರಿಗೆ ಹೋಕನ ಹೇಳ್ತ್ 'ಎದೆ ನೀರಿಗೆ ಪೋಯಿ'. ಎದೆ ನೀರಿಗೆ ಹೋಕನ ಬುಟ್ಟತ್. ಬುಟ್ಟಾಕನ ನಾಲಿ ಮೇಲೆ ಹಿಡ್ಕನ್ತ್. ಹಾರಂವನ. 'ಅಯ್ಯೋ ಶಿವನೇ ನೀ ಇಂತ ಕಷ್ಟಕೊಟ್ಟಿಯಲ್ಲಾ. ನಿಂಗೆ ನಾ ಉಪಕಾರ ಮಾಡ್ದಲ್ಲಿಗೆ ನೀ ಉಪದ್ರ ಮಾಡ್ಯಲ್ಲ'. ಆಗ ಅಲ್ಲಿ ಒಂದ್ ಮಾಯಿನ ಮರ ಉಟ್ಟು. ಕೇಳ್ ಆ ಮಾಯಿನ ಮರದೊಟ್ಟಿಗೆ. 'ಉಪಕಾರ ಮಾಡಿದವಂಗೆ ಉಪದ್ರ ಉಟ್ಟೋ ಇಲ್ಲೆಯೊ'ಂತ ಕೇಳ್. ಆಗ ಮಾಯಿನ ಮರ ಹೇಳ್ತ್ 'ಸಣ್ಣ ಒಂದ್ ಕೊರಂಟ್‌ನ ದೊಡ್ಡಿತ್ ಮಾಡ್ರೆ, ಹೂವ್ ಹೋಕನ ನೋಡಿಕೆ ಸುರ್ ಮಾಡ್ರೆ, ಮಿಡಿಯಾಕನ ಕಲ್ಲ್ ಕೊದಂಟಿ ಕೊಟ್ರೆ'ಂತ ಹೇಳ್ತ್. ನೋಡ್ ಆಗ 'ಉಪಕಾರ ಮಾಡ್ದವಂಗೆ ಉಪದ್ರ ಉಟ್ಟಲ್ಲಾ'ಂತ. ಇಲ್ಲೆಲ್ಲೆ ಅದ್‌ಬೊತ್ತ್.

ಇನ್ನೊಂದ್‌ಟ್ಟು. ಇನ್ನೊಂದ್ ಎತ್ತ್ ಬಾತಲ್ಲಿ. ಎತ್ತ್ ಬಾಕನ ಎತ್ತನೊಟ್ಟಿಗೆ ಕೇಳ್ತ್. 'ಏನ್ ಉಪಕಾರ ಮಾಡ್ದವಂಗೆ ಉಪದ್ರ ಉಟ್ಟ?''ಉಪಕಾರ ಮಾಡ್ದವಂಗೆ ಉಪದ್ರ ಉಟ್ಟು'. 'ಸಣ್ಣದಿರಿಕನ ನಮ್ಮ ಕರ್‌ಬುಟ್ಟ್ ಸಾಂಕ್‌ವೆ, ಕುಡಿಯಕೆ ಕೊಟ್ಟವೆ. ಎಲ್ಲಾ ಮಾಡ್ವೆ. ಕಡೆಗೆ ಹೂಡ್ವೆ,

ಹೂಡಿ ಎತ್ತ್ ಬುಟ್ಟ್ ನಿನ್ನ ಹುಲಿಯೇ ತಿನ್ನಲಿಂತ ಬೆನ್ನಿಗೊಂದ್ ಹೊಡ್ದ್ ಬುಟ್ಟವೆ'ಂತ. ನೋಡ್ ನೋಡ್ ನೋಡ್ ಅಂವನ ಸಾಕ್ಷಿ ಸರಿ ಉಟ್ಟಲ್ಲ. ಅಷ್ಟೊತ್ತಿಗೆ 'ಇಲ್ಲೆಲ್ಲೆ ಎರಡೇ ಸಾಕ್ಷಿಯಾದ್. ಇನ್ನ್ ಮೂರಾಕ್'ಂತ ಹೇಳ್ತ್ ಆ ಹಾರಂವ.

ಅಷ್ಟೊತ್ತಿಗೆ ಒಂದ್ ಕುದ್ಕ ಬಾತ್. ಕುದ್ಕ ಬಂದ್ 'ಯಾರಲ್ಲಿ? ಏನ್ ಮಾತಾಡ್ದು? ಯಾರ‍್ಯ? ಏನ್ ಮಾತಾಡ್ದು? ಅಂತ ಜೋರ್ ಮಾಡ್ತ್'. ಆಗ ಹಾರಂವ ಹೇಳ್ತ್. 'ಹಿಂಗೆ ಈ ರೀತಿಲಿ ನನ್ನ ಸೋಲಿಸಿತ್ ಇಂವ. ನನ್ನ ಮೊಣಕಾಲ್ ನೀರಿಗೆ ಬುಡ್'ಂತ ಹೇಳ್ತ್. ಕುತ್ತಿಗೆ ನೀರಿಗೆ ಬುಡ್'ಂತ ಹೇಳ್ತ್. ಕುತ್ತಿಗೆ ನೀರಿಗೆ ಬುಡ್‌ಕನ ಈಗ ಹಿಡ್ದುಟ್ಟು'. 'ಛಿ! ಕುತ್ತಿಗೆ ನೀರ‍್ಲಿ ಒಂದ್ ಪಂಚಾತಿಗೆ ಉಟ್ಟ ಇದ್ ಎಂತದ್ ಬನ್ನಿತ್ತ'ಂತ ಕರ್ತ್. ಕುದ್ಕ ಕರ್ದ್‌ದಾಕನ ಮೇಲೆ ಬಾತ್. ಮೇಲೆ ಬಾಕನ 'ಉಪಕಾರ ಮಾಡ್ದವಂಗೆ ಉಪದ್ರ ಇದೆಯಾ'ಂತ ಹೇಳ್ತ್. ಕುದ್ಕ ಅಂವನ ಸರಿ ಮಾಡ್ದೆ ಗಡಂತ ಹೇಳ್ತ್ ಇಂವ. ಅಷ್ಟೊತ್ತಿಗೆ ಹಾರಂವನ ಸೊಂಟಲಿ ಬುಟ್ ರಟ್ಟೆಲಿ ಕುದ್ದತ್. ಅಷ್ಟೊತ್ತಾಕನ ಕುದ್ದ ಮಂಚ ಒಂದ್ ಗೇನ್ ಜಾರ್ತ್.

**ಉಪಕತೆ : 2.** ಒಬ್ಬ ಅರ‍್ಸ. ಅಂವ ಹಾರಂವ. ಅಂವ ಹಿಂಗೆ ಕಾಶಿಗೆ ಹೊರ‍್ಟತ್. ಹಾರಂವ ಕಾಶಿಗೆ ಹೊರ‍್ಡ್‌ಕನ ಅಂವನೊಟ್ಟಿಗೆ ಒಂದ್ ಮರದ ಕೆಲಸದ ಆಚಾರಿ ಅವನೂ ಹೊರ‍್ಟತ್ ಗಡ. ಅವನೊಟ್ಟಿಗೆ ಒಬ್ಬ ಚಾಲ್ಯ ಹೊರ‍್ಟತ್ ಗಡ. ಒಬ್ಬ ಚಿನ್ನದ ಕೆಲಸದಂವ ಹೊರ‍್ಟತ್ ಗಡ. ಹಿಂಗೆ ಒಂದ್ ನಾಕೈದ್ ಜನ ಸೇರಿ ಕಾಶಿಗೆ ಹೋದೊ ಗಡ. ಐದ್ ಜನ ಹೋಗಿ ಹೋಗಿ ಒಂದಾನೊಂದ್ ರಾಜ್ಯಕ್ಕೆ ಎತ್ತಿಕನ ಕತ್ತಲೆ ಆತ್. ಯಾವ ಊರ್ ದೇಶಾಂತರ ಗೊತ್ತ್ಲೆ. ಮನೆಮಠ ಇಲ್ಲೆಂತ ಹೇಳಿ ಒಬ್ಬ ಮರಕ್ಕೆ ಹತ್ತಿ ನೋಡ್ತ್‌ಗಡ. ನೋಡ್ಕನ ಒಂದ್ ಜಾಗೆಲಿ ಒಂದ್ ಚೂರು ದೀಪ ಕಂಡಲ್ಲಿಗೆ ಹೋದೊ. ಅಲ್ಲಿ ಹೋಕನ ಹಾರಂವ ಪೂಜೆ ಮಾಡಿ ಒಂದ್ ದೀಪ ಉರ‍್ಸಿ ಬಾಗಿಲ್ ಹಾಕಿ ಹೋತ್‌ಗಡ. ಅಲ್ಲಿ ಹೋಗಿ ಆಕನ ಅದ್ಕೆ ಮಲ್ಗಿಕೆ ಕುದ್ರಿಕೆ ಜಾಗ ಕೊಟ್ಟತ್. ನಾವ್ಗೆ ಇಷ್ಟೆಂತ ಎಲ್ಲ ಹೇಳಿ ಸ್ವಾಮಿಗೆ ಕೈ ಮುಗ್ದೊಗಡ. ಎಲ್ಲ ಹೊರಗೆ ಮಲ್ಗಿದೊ. ಮಲ್ಗಿಕನ ಒಬ್ಬ ಎಚ್ಚರಿಕೆ ಇರೊಕ್, ಬಾಕಿ ಜನ ಮಲ್ಗೊಕ್'ಂತ ಹೇಳಿ ಈ ಮರದ ಕೆಲಸದ ಆಚಾರಿ ಕುದ್ದತ್ ಗಡ. ಅಂವ ಕುದ್ದ್‌ಕಂಡ್ ಹಿಂಗೆ ನೋಡ್ಕನ ಒಂದ್ ಮರದ ತುಂಡ್ ಇತ್ತ್. ಅದರ ಕೆತ್ತಿದ್ ಒಂದ್ ಹೆಣ್ಣ್ ರೂಪ ಮಾಡ್ತ್. ಕೆತ್ತಿ ಕೆತ್ತಿ ಆ ಹೆಣ್ಣ್ ರೂಪ ಮಾಡಿ ಆಕನ ಅಂವಂಗೆ ನಿದ್ದೆ ಬಾತ್. ಅಷ್ಟೊತ್ತಿಗೆ ಚಾಲ್ಯ ಎದ್ದತ್. ಅಂವ ಹಂಞ ನೂಲ್ ತಕಂಡ್‌ತ್ತ್ ಗಡ. ಅಂವ ಕುದ್ದ್‌ಕಂಡ್ ಈ ರೂಪನ ನೋಡಿ ಆಕನ ಅದರ ಒಂದ್ ರವ್ಕೆ ನೆಯ್ದ್ ಹಾಕಿತ್. ಅಷ್ಟಾಕನ ಅವಂಗೆ ನಿದ್ದೆ ಬಾತ್ ಮತ್ತೆ ಚಿನ್ನದ ಕೆಲಸದ ಆಚಾರಿಗೆ ಎಚ್ಚರಿಗೆ ಆತ್. ಚಿನ್ನದ ಆಚಾರಿ ಕೆಲಸದ ಎದ್ದ್‌ದ್ ನೋಡ್ತ್ ನೋಡ್ರೆ ಬರೀ ಒಂದ್ ಬೊಂಬೆ. ಇದ್ಕೆ ಒಂದ್ ಹಂಞ ಚಿನ್ನ ಹಾಕಿರೆ ಪೊರ‍್ಲ್ ಕಾಂಬೊದಲ್ಲೆಂತ ಹೇಳಿ ಅದಕ್ಕೆ ತಾಳಿ, ಮೂಂಕುತಿ, ಕಡಗ, ಕಾಲುಂಗುರ ಇಷ್ಟ್ ಮಾಡಿ ಹಾಕಿತ್ ಗಡ. ಅಷ್ಟಾಕನ ಕೋಳಿ ಕೂಂಗಿತ್. ಬೊಳ್ಪಾಕ್ಕೆ ಸಮಯ ಬಾತ್ ಇವ್ ಎಲ್ಲಾ ಮಲ್ಗಿದೊ. ಈ ಹಾರಂವ

ಎದ್ದತ್.  ಹಾರಂವ ಎದ್ರ್‌ಕನ ಇಲ್ಲೊಂದ್ ಲೈಕ್‌ದ್ ಒಂದ್ ಬೊಂಬೆ ಉಟ್ಟು. 'ಓಹ್ ಇದರ ಜೀವಮಾಡಿ ಬುಟ್ಟರೆ ಒಂದ್ ಹೆಣ್ಣಾದೆ'ಂತ ಹೇಳ್ತ್‌ಗ. ಸ್ವಾಮಿನ ನೋಡಿ ತೀರ್ಥ ಪ್ರಸಾದ ಹಾಕಿ ಅಂವ ಬ್ರಹ್ಮನ ನೆನ್ಸ್ ಪ್ರತಿಮೆನ ಜೀವ ಮಾಡ್ತ್‌ಗಡ. ಜೀವ ಮಾಡಿ ಹೆಣ್ಣ್ ಗೂಡೆ ಆತ್‌ಗಡ. ಅಷ್ಟೊತ್ತಿಗೆ  ಚಾಲ್ಯ ಹೇಳ್ತ್ 'ಸೀರೆ ಹಾಕಿದ್ ನಾ'.  'ನಂಗೆಂತ ಆಚಾರಿ' ಹೇಳ್ತ್. 'ಚಿನ್ನ ಹಾಕಿದ್ ನಾ'. ನಂಗೆ ತಾಲಿ ಎಲ್ಲ ಹಾಕೊಳೆಂತ. ಮರದ ಕೆಲಸದ ಆಚಾರಿ ಹೇಳ್ತ್, 'ನಾ ಮಾಡದಿದ್ದರೆ ನೀವ್ ಏನ್ ಮಾಡಿದ್ದರಿಂತ'. ಇನ್ನೊಬ್ಬ ಹೇಳ್ತ್, 'ನಾ ನಿಮ್ಮ ಕರ್ಕಂಡ್ ಬಾರದಿದ್ದರೆ ನೀವ್ ಏನ್ ಮಾಡಿದ್ದರಿಂತ?' ಜೀವ ಮಾಡ್ದಂವ ಹೇಳ್ತ್ 'ನಾ ಜೀವ ಮಾಡದಿದ್ದರೆ ಬೊಂಬೆನೆ ಅಲ್ಲಾ'ಂತ ಅವರೊಳಗೆ ಜಗಳ  ಆಕ್ಕಂಡ್ ಉಟ್ಟ್‌ಗಡಾಂತ ಹೇಳ್ಕನ ಈ ನೆಳ ಹೋಗಿ ಕಟ್ಟೆಲಿ ಕುದ್ದತ್ ಗಡ. ಅಲ್ಲಿಗೆ ಒಂದ್ ತರಾ ಎಚ್ಚರಿಕೆ ಆತ್. ಇನ್ನೊಂದ್ ಗೇನ್ ಜಾರಿ ಮಂಚ  ಹಕ್ಕಲೆಬಾತ್. ಆಗ ಈ ಹೆಣ್ಣ್ ಯಾರಿಗೆ ಆದೆಂತ ಆ ಗೂಡೆಗಾಗಿ ಚರ್ಚೆ ಮಾಡ್ವೆ (ಅದ್ ಅರ್ಸಂಗೆ, ಅಲ್ಲ....ಚಿನ್ನ ಹಾಕಿದವಂಗೆ) ಅಲ್ಲಿಗೆ ಅಷ್ಟೊತ್ತಿಗೆ ಪೂಜೆನ ಹಾರಂವ ಬಾತ್. ಪೂಜೆ ಹಾರಂವ ಬಾಕನ ಹಿಂಗೆ ಜಗಲಿಲಿ ಒಳೊ. ಆಗ ಅಂವ  ಊರವರ ಕರ್ಸಿತ್. ಊರವರ ಕರ್ಸಿ ಆಕನ ಅರ್ಸ ಬಂದ್ ಹೇಳ್ತ್. ಈ ಸ್ಥಳಕ್ಕೆ ನೀವ್ ಬಂದರಿ. ಬಂದಲ್ಲಿಗೆ ನಿಮ್ಮ  ಗುರ್ತಕ್ಕೆ ಇಲ್ಲಿ ಚಾಕರಿಗೆ ಗೂಡೆ. ನೀವ್ ಹೋಗಿಂತ ಆಗೂಡೆ ಅಲ್ಲಿಗೆ ಆತ್‌ಗಡ. ಆಗ ಈ ನೆಳ ಅಲ್ಲಿ ಹೋಗಿ ಕುದ್ದತ್. ಅದ್ಕೆ ಒಂದ್ ಪೆಟ್ಟ್‌ಕೊಟ್ಟತ್. ಅಷ್ಟೊತ್ತಾಕನ ಕುದ್ದ ಮಂಚ ಇನ್ನೂ ಒಂದ್ ಗೇನ್ ಜಾರ್ತ್. ಇನ್ನೊಂದ್ ಕತೆ.

**ಉಪಕತೆ : 3**  ಒಂದು ಅವ್ವನ್ ಅಪ್ಪನ್ ಒಂದು ಮಂಜ, ಮಗ. ನಾಲ್ಕ್ ಜನ. ಆಗ ಈ ಗೂಡೆಗೆ ಪ್ರಾಯ ಬಾತ್. ಒಬ್ಬ ಬಾತ್. ಅಪ್ಪನೊಟ್ಟಿಗೆ ಹೆಣ್ಣ್ ಕೇಳ್ತ್. ಅಪ್ಪ ಹೆಣ್ಣ್ ಕೊಟ್ನೆಂತ ಒಪ್ಪಿತ್. ಇನ್ನೊಂದ್ ಕಡೆಂವ ಬಾತ್. ಅವ್ವನೊಟ್ಟಿಗೆ ಕೇಳ್ತ್. ಅವ್ವ ಹೆಣ್ಣ್ ಕೊಟ್ಟನೆಂತ ಹೇಳ್ತ್. ಅವ್ವನೂ ಮಾತ್ ಕೊಟ್ಟತ್. ಇನ್ನೊಂದ್ ಕಡೆಂವ ಬಾತ್. ಅಣ್ಣನೊಟ್ಟಿಗೆ ಹೆಣ್ಣ್ ಕೇಳ್ತ್. ಅಣ್ಣನೂ ಹೆಣ್ಣ್‌ಕೊಟ್ನೆಂತ ಹೇಳ್ತ್. ಮಾತ್ ಕೊಟ್ಟತ್. ಈ ಮಾತಕೊಟ್ಟ ದಿನ ಎಲ್ಲರ್‍ದೂ ಒಂದೇ ಆತ್. ಎಲ್ಲ ಮೊದ್ವೆಗೆ ಸಾಮಾನ್ ಜೋಡ್ಸಿದೊ. ಚಪ್ಪರ ಹಾಕಿ ಜನ ಸೇರ್ಸಿದೊ. ಅಷ್ಟೊತ್ತಿಗೆ ಅವು ದಿಬ್ಬಣ ಎಲ್ಲ ಬಂದೊ. ಮೂರ್ ಕಡೆಂದ ದಿಬ್ಬಣ ಬಂದೊ. ಮೂರ್ ಕಡೆಂದ ದಿಬ್ಬಣ ಬಂದಾಕನ ಇವರೊಳಗೆ ಅವ್ವ ಹೇಳ್ತ್. 'ನಾ ಹತ್ತ್ ತಿಂಗ ಹೊತ್ತ್ ಸಾಂಕದಿದ್ದರೆ ನೀ ಹೇಂಗೆ ಮಾತ್ ಕೊಟ್ಯ್ಯಾ'ಂತ ಮಂಜನೊಟ್ಟಿಗೆ ಕೇಳ್ತ್. ಅಪ್ಪ ಹೇಳ್ತ್. 'ನಾ ಹುಟ್ಟಿಸಿದ ಮಗಳ ನಾ ಹೇಳ್ದಲ್ಲಿಗೆ ಕೊಡದೆ ನೀ ಹೇಂಗೆ ಮಾಡ್ಯಾಂತ?''ನೀವ್ ಇಬ್ಬರ್ ಸತ್ತಮೇಲೆ ನಾ ನೋಡಂವ ಅಲ್ಲಾ'ಂತ ಇವರೊಳಗೆ ಚರ್ಚೆ ಆತ್.

ಇವರೊಳಗೆ ಚರ್ಚೆ ಆಕ್ಕಂಡಿರ್‌ಕನ ಈ ಗೂಡೆ ಪಾಸಣ ತಿಂದ್ ಸತ್ತ್‌ಬುಡ್ತ್. ಅಷ್ಟಾಕನ ಸತ್ತೊತ್ತ್‌ಂತ ಹೇಳಿ ಇದರ ಕಡೆನವ್ ಬಣ್ಣ ಬಂಗಾರ  ತಕಂಡ್ ಅತ್ತ ಹೋದೊ. ಅಲ್ಲಿಂದ ಈ ಅಪ್ಪನ ಕಡೆಂವ ಎದ್ದ್ ಹೋಗಿಯೇ ಬುಟ್ಟತ್. ಇದ್ ಯಾವ ರಗಳೆ ಬೇಡಂತ್ ಅವ್ವನ ಕಡೆಂವ

'ನಾ ತಂದ ತಾಳಿ ಮೂಕ್‌ತಿ ಹಾಕಿ ನಾ ವಾಪಾಸ್ ತಕಂಡೋದ್'ಂತ ಹೇಳಿ ತಾಳಿ ಮೂಕ್‌ಂತಿ ಎಲ್ಲ ಕಟ್ಟಿತ್. ಅಣ್ಣನ ಕಡೆಂವ 'ನಾ ತಂದ ಬಟ್ಟೆ ಬರೆ ಯಾಕೆ ತಕಂಡೋದ್'ಂತ ಹೇಳ್ತ್. ಈ ಬಟ್ಟೆನ ಎಲ್ಲ ಉಡ್ಸಿದೊ. ಇಂವ ಹೋಗಿ ಹೋಗಿ ಒಂದಾನೊಂದ್ ರಾಜ್ಯಲಿ ಎತ್ತ್‌ಕನ ಕತ್ತಲೆ ಆತ್. ಇಂವ 'ಎಲ್ಲಾರ್ ದೇಶಾಂತರ ಹೋಗಿ ಸತ್ತ್‌ಬುಟ್ನೆ'ಂತ ಹೋದ್ದ್. ಅಲ್ಲಿ ಹೋಕನ ಒಂದ್ ಸಣ್ಣ ಪಾಪದ ಅಜ್ಜಿನ ಮನೆ ಉಟ್ಟ್. ಅದ್ ಎಲ್ಲಾರ್ ಬೇಡಿಕಂಡ್ ಬಂದ್ ಬೆಚ್ಚಮಾಡಿ ತಿಂಬೊದ್. ಅಲ್ಲಿ ಹೋಗಿ ಅಜ್ಜಿಯೇಂತ ಕರ್ತ್. ಅಜ್ಜಿಗಳಿಗೆಲ್ಲ ಪಿಳ್ಳಿಕಾಂತ ಹೇಳ್ರೆ ಬಾರಿ ಪ್ರೀತಿ ಅಲ್ಲ. ಅಜ್ಜಿ ಎಲ್ಲಾ ಕುದ್ರಿಕೆ ಕೊಟ್ಟತ್. ಎಲ್ಲಿಂದ ಬಂದ ಮಂಜ? ಯಾಕೆ ಬಂದ? ಏನ್ ಏಂತದ್'ಂತ ವಿಚಾರ್ಸಿತ್. ವಿಚಾರ್ಸಿ ಆಕನ ಹೇಳ್ತ್ ಇದ್. 'ಹೀಂಗಿಂಗೆ ಸಂಗತಿ ಅಜ್ಜಿ. ನಾವ್ ಮೂರ್ ಕಡೆವ್ ದಿಬ್ಬಣ ಹೋದೊ. ಒಂದ್ ಹೆಣ್ಣ್‌ಗೆ ಅವು ಮೂರ್ ಕಡೆಯವ್ಕೆ ಮಾತ್‌ಕೊಟ್ಟೊ ಹಂಗೆ ಆಕನ ನಂಗೆ ಇದ್ ಬೇಡೇ ಬೇಡಂತ ನಾ ಹೊರ್ಟ್ ಬಂದೇ ಬುಟ್ಟೆ' ಅಜ್ಜಿ. 'ಅದ್ ಮೊದ್ದ್ ಕುಡ್ದ್ ಸತ್ತ್‌ಬುಡ್ತ್'ಂತ. 'ಅಂದರೆ ಮಂಜ ಇಷ್ಟ್ ಗಂಜಿ ಊಟಾ ನಾ ಬೇಡಿಕಂಡ್ ಬಂದದ್. ಇದರ ಊಟ ಮಾಡ್. 'ಇಂದಾ ಸಿಂತಾಸಿ(ಸಂಜೀವಿನಿ) ಕಡ್ಡಿ ಉಟ್ಟ್ ಇಲ್ಲಿ. ಕುಪ್ಪ್ ಗೂಡ್‌ಲಿ ಒಂದ್ ಕಡ್ಡಿ ಸಿಕ್ಕುಟು. ಈ ಕುಪ್ಪ್ ಗೂಡ್‌ನ ಕಡ್ಡಿನ ತಕಂಡೋಗಿ ಆದ್ಕೆ ಒಂದ್ ಬಿಂದಿಗೆಲಿ ನೀರ್ ತೆಗ್ದ್ ಆ ನೀರಿಗೆ ಈ ಕಡ್ಡಿನ ಕಂತಿಸಿ ಮೂರ್ ಸರ್ತಿ ತಲೆಂದ ಕಾಲೊರಗೆ ಈಸ್. ಆ ಕಡ್ಡಿಲಿ ಮೂರ್ ಸರ್ತಿ ಮೂಕ್‌ಗೆ, ಬಾಯಿಗೆ ನೀರ್ ಬುಡ್. ಅದ್ ಜೀವ ಆಗಿ ಎದ್ದದೆ'ಂತ ಹೇಳ್ತ್. ಹಾಂಗೆ ಕೊಟ್ಟ ಗಂಜಿನ ಉಂಡ್‌ಕನ್ತ್. ಈ ಕಡ್ಡಿನ ತಕನ್ತ್. ಸೀದಾ ಹೋತ್. ಹೋತ್ ಹೋತ್ ಕೋಳಿ ಕೂಂಗೊ ಹೊತ್ತಿಗೆ ಹೋಗಿ ಎತ್ತಿಬುಡ್ತ್. ಇವೆಲ್ಲಾ ಬಿದ್ದ್‌ಕಂಡ್ ಮರ್ಟ್‌ಕಂಡ್ ಮಲಗಿಕಂಡ್ ಒಳೊ. ಇಂವ ಹೋತ್ ಅದರ ಗುಡಗೆ ತೆಗ್ತ್. ಇಂವ ಒಂದ್ ಗಿಂಡಿಲಿ ನೀರ್ ತೆಗ್ತ್. ಅದರ ತಲೆ ಮೈಗೆ ಪೂರ ಈಸಿತ್. ಅದರ ಬಾಯಿಗೆ ಕೊಟ್ಟತ್. ಮೂರಿಕೆಗೆ ಕೊಟ್ಟಾಕನ ಅಯ್ಯಪ್ಪಂತ ಹೇಳಿ ಎದ್ದ್ ಕುದ್ದತ್. ಆ ಎದ್ದ್‌ಕುದ್ರ್‌ಕನ ಅಣ್ಣನ ಕಡೆಂವ ಹೇಳ್ತ್ 'ನಾ ಸೀರೆ ರವ್ಕೆ ಪೂರ ಹಾಕೊಳೆ. ನಂಗೆ ಹೆಣ್ಣ್'ಂತ. ಅವ್ವನ ಕಡೆಂವ ಹೇಳ್ತ್ 'ನಾ ಚಿನ್ನ ಹಾಕಿದ್ ಬಟ್ಟೆ ಬರೆ ಎಲ್ಲಾ ಹಾಕೊಳೆ ನಂಗೆ ಹೆಣ್ಣ್'ಂತ. ಅಪ್ಪ ಹೇಳ್ತ್ 'ನಾ ಹೇಳ್ದಲ್ಲಿಗೆ'ಂತ. ಇಂವ ಒಂದ್ ಹೇಳ್ತ್‌ಲೆ. ಹಿಂಗೆ ಆಗಿ ಅವರೊಳಗೆ ಚರ್ಚೆ ಆದೆ. ಆಗ ಈ ಗೂಡೆ ಯಾರಿಗೆಂತ ಕೇಳ್ದೆ ಇಂವ. ಆಗ ನೆಳ ಹೋಗಿ ಕೆಪ್ಪಟೆಲಿ ಕುದ್ದತ್. ಅಲ್ಲಿಗೆ ಅದ್ ಒಂದ್ ಬೊಡ್ತ್. ಇಂವನೂ ಬೊಡ್ತ್. ಅಲ್ಲಿಂದ ಅದರ ಮೇಲೆ ಆಚಾರಿ ಒಂದ್ ತೀರ್ಥ ಕೊಟ್ಟತ್. ತೀರ್ಥನೂ ಹಾಕಿತ್. ಅಷ್ಟೊತ್ತಿಗೆ ಎದ್ದ್ ಕುದ್ದತ್. ಇಂವನ ಮಂಚ ಅದರ ಮಂಚ ಕೂಡ್ತ್. ಅದ್ ಎದ್ದ್ ಕುದ್ದತ್. ಕುದ್ದ್ ಈ ರಕ್ಕಸ, ನೆಳ ಉಟ್ಟಲ್ಲ ಅಂವ ಹೆಂಗೂ ಕೆಲಸಕ್ಕೆ ಜನ ಆತ್. ಇದ್ ಪೂರಾ ಮಾಯ ಆಗಿ ಹೋತ್. ಆಮೇಲೆ ಆಚಾರಿನ ಕರ್ಸಿ ಅಂವಂಗೆ ಈ ಒಪ್ಪಿದ ದುಡ್ಡುಟ್ಟಲ್ಲ (ಕಂತ್ರಾಟ್ ಕೊಟ್ಟದ್ ಮಗಳಿಗೆ ಗೊತ್ತುಟು)

ಮಗ ಎಲ್ಲ ದುಡ್ಡ್ ಕೊಟ್ಟ್‌ದ್ ಈ ಮನೆ ಸೌಕರ್ಯನೂ ಮಾಡಿಕಂಡೊ. ಆ ಮನೆಗೂ ಆಚಾರಿ ಕರ್ಕೊಂಡ್ ಹೋದೆ. ಕರ್ಕಂಡ್ ಹೋಗಿ ಆಕನ ಇಂವಂಗೆ ಹೇಳ್ದೆ ಆಚಾರಿ 'ಯಾಗೋಳ್ ನೀವ್ ಮನೆಕಟ್ಟೋವ್ ಶಿಲ್ಪಿ ಕಲ್ತ ಆಚಾರಿನ ಹುಡ್ಕಿಕೆ ಬೊತ್ತ್. ಶಿಲ್ಪಿಗ ಆಚಾರಿನ ಕೈಲಿ ನೀವ್ ಮನೆಕೆಲ್ಸ ಮಾಡ್ರೆ ಮನೆ ನೀವ್ಗೆ ಲಾಯಿಕ್‌ಲಿ ಉಟ್ಟು. ಅದಲ್ಲದೆ ಏನಾರ್ ಒಂದ್ ಉಪದ್ರ ಇಸಿಯೇ ಇಸಿದೆ. ಈ ಕಾಲಕ್ಕಲ್ಲ ಯಾವ ಕಾಲಕ್ಕಾದರೂಂತ ಹೇಳಿ ಆಶೀರ್ವಾದ ಕೊಟ್ಟ್ ಆಚಾರಿ ಬುಟ್ಟತ್. ಇಂವಂಗೆ ಅಪ್ಪನ ಮನೆ ಪಟ್ಟನೂ ಸಿಕ್ಕಿತ್. ಹೆಣ್ಣ್‌ನ ಮನೆಯೂ ಸಿಕ್ಕಿತ್. ಸೌಖ್ಯಲಿ ಒಳೊಗಡ ಈಗ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 47. ಮೋಸಗಾರ್ತಿ ಹೆಣ್ಣ್‌ನ ಕತೆ

ಒಂದು ಗಂಡ ಹೆಣ್ಣ್. ಒಂದು ಮನೆಲಿ ಅವ್ವೇ ಇಬ್ಬರು. ಹಿಂಗೆ ಒಳ್ಳೊದರ್ಲಿ ಕಾಲ ಕಳಿತ್ತಾ ಇದ್ದೊ. ಆಗ ಅಲ್ಲಿ ಏನಾತ್‌ಂತ ಹೇಳ್ರೆ ಈ ಹೆಣ್ಣ್‌ನ ಸಹವಾಸಕ್ಕೆ ಬೇರೊಂದು ಹುಡುಗ ಸೇರ್ತ್. ಅವಳೊಟ್ಟಿಗೆ. ಅದ್ ಗಂಡಂಗೆ ಗೊತ್ತಾತ್. ಗೊತ್ತಾಗಿ ಇಂವ ಕಾದ್ ಕುದ್ದು ಕ್ಲೋಸ್ ಮಾಡ್ತ್. ಮಾಡಿ ಒಂದು ಮರದ ತಲೆಗೆ ತೂಗಿತ್. ಆಗ ಇದ್ ಅಲ್ಲಿಂದ ಕೊಳ್ತ್ ಬಿದ್ದದೆ ಅಲ್ಲಿ ಅಡಿಗೆ. ಅಲ್ಲಿ ಆ ಗರಿಕೆ ಹುಳ್ಳುಂತ ಹೇಳ್ವಂತದ್ ಹುಟ್ಟಿತ್. ಇದರ ತಿಂಬಕೆ ಒಂದು ಮೊಲ ಬಾದು ಯಾಗೋಳು. ಆಗ ಈ ಗಿರಾಕಿ ಉಟ್ಟಲ್ಲ ದಿನಂಪ್ರತಿ ಹೋದು ಆ ಶವ ನೋಡ್ದು ಬಾದು. ಹೀಂಗೆ ನೋಡಿಕಂಡ್ ಒಂದು ದಿನ ಇದ್ ಹೋಕನ ಮೊಲ ಅಲ್ಲಿಗೆ ಎತ್ತುವ ಸಮಯವು ಇಂವ ಅಲ್ಲಿಂದ ಬೊಳ್ಳಿ ತುಂಡಾಗಿ ಬೀಳ್ದನೂ. ಮೊಲ ಪಡ್ಚ. ಇದರ ಹೆರ್ಕಿಕೊಂಡ್ ಬಾತಿದ್. ಯಾರ್? ಹೆಣ್ಣ್. ಹೆಣ್ಣ್ ಮೊಲನ ಗೈಪು ಮಾಡ್ತ್. ಗೈಪು ಮಾಡಿ ಹಾಂಗೆ ಇಕ್ಕಿ ಕೊಡಿಕೆ ಆಕನ ಏನಾತ್‌ಂತ ಹೇಳ್ರೆ ಅದರ ಎಲುಬುನ ತಾಯ್ತ ಮಾಡಿ ಎದೆಗೆ ಹಾಕನ್ತ್. ಹಾಕಿದ್ ಇವಂಗೆ ಹೇಳ್ತ್ 'ಎದೆ ಮೇಲೆ ಮಿಂಡ ಮೊಗ್ಲ ಅಡಿಲಿ ಗಂಡ. ಇದರ ಒಡ್ಸಿಕೊಡದಿದ್ದರೆ ನಾಳೆಗೆ ನಿಮ್ಮ ತಲೆ ಕಡ್ಸಿನೆ'ಂತ. ಇವಂಗೆ ಏನಾರ್ ಗೊತ್ತುಟ್ಟ ಅದ್. ಇಲ್ಲೆ.

ಆಗನ ಕಾಲಲಿ ನೋಡಿ ಈ ಕಾಯೆಣ್ಣೆ ದೀಪ ಉಟ್ಟಲ್ಲ ಕತ್ತಲೆ ಆಕನ ಹೋಗಿ ಎಲ್ಲ ಒಂದು ಅಶ್ವತ್ಥ ಕಟ್ಟೆಗೆ ಸೇರುವೊ. ಅದರ ಟೈಮಿಗೆ ಸರಿಯಾಗಿ ಅಂದ್‌ನ ದಿನ ಈ ದೀಪ ಹೋಕೆ ಆಕನ ತಡವಾತ್. ಆಗ ಅಲ್ಲಿಗೆ ಇವನ ತಂಗೆನಲ್ಲಿಂದ ದೀಪ ಬಂದುಟು. ಇದು ಹೋಕನ ಕೇಳ್ತ್. 'ಏನ್ ಇಷ್ಟ್ ತಡವಾದ್ ?"ನಮ್ಮಲ್ಲಿ ತಡವಾದ್‌ಂತ ಹೇಳ್ರೆ ಹೀಂಗೀಂಗೆ ಸಂಗತಿ. ಮಿಂಡನ ಎಲುಬುನ ಎದೆ ಮೇಲೆ ಹಾಕಿ ಗಂಡಂಗೆ ಇಂದೊಂದು ಕಥೆ ಹೇಳ್ಯುಟ್ಟು. "ಎದೆ ಮೇಲೆ ಮಿಂಡ, ಮೊಗ್ಲ ಅಡಿಲಿ ಗಂಡ. ಇದರ ಒಡ್ಸಿಕೊಡದಿದ್ದರೆ ತಲೆ ಕಡಿವೆ"ಂತ ಹೇಳ್ಯುಟ್ಟು. ಹಾಂಗೆ ಅದರ ಚರ್ಚೆಗೆ ಬಾಕನ ನಂಗೆ ತಡವಾತ್'. ಆಗ ಇವನ ತಂಗೆಯಲ್ಲಿದ್ದ ದೀಪ ಕೇಳಿಕಂಡ್‌ತ್ ಅದರ.

ಇಂವ ಇಲ್ಲಿಗೆ ಹೇಳದೆ ಬೊತ್ತಾಗಿ ತಂಗೆನಲ್ಲಿಗೆ ಹೋತ್. 'ಏನಣ್ಣ ಇಷ್ಟ್ ಬೇಜಾರ್ ಸಂಗತಿ ?"ಹಿಂಗಿಂಗೆ'. 'ಹಂಗಾದರೆ ನೀ ಹೆದ್ರ್‍ಬೇಡ. ನಾ ಒಳೆ. ನೀ ಹೇಳ್ ಎದೆ ಮೇಲೆ ಮಿಂಡ ಮೊಗ್ಲ ಅಡಿಲಿ ಗಂಡ. ಮೊಲನ ಕೊಂದವನು ಸತ್ತು ಆರು ತಿಂಗಲಾಯಿತು. ನಿನ್ನೆ ಸತ್ತ ಮೊಲ ಇವತ್ತು ಹೊಡ್ದಾಯಿತ'ಂತ ಅದ್ ಹೇಳ್ದ ಕಥೆ. ಇಷ್ಟ್ ಹೇಳಿ ಬುಟ್ರೆ ಆಗೋತ್. ಅದರ ಈ ದೀಪವೂ ಕೇಳಿಕನ್ತ್. ಅದ್ಕೆ ತಂಗಿಗೂ ಗೊತ್ತಾತ್. ಇವು ಬಂದೊ, ಬಂದಾಕನ ಇಂವ ಹೆಣ್ಣ್‌ನೆದುರು ಹೇಳ್ತ್. ಇಂದಾ ಇಂತದ್ ಹಿಂಗೆ. ನಿನ್ನ ಸಹವಾಸ ಮಾಡ್ದವನ ಹೊಡ್ದ್ ನಾ ಮರಕ್ಕೆ ತೂಗಿದ್. ಅದ್ ಕರಗಿ ಬಿದ್ದ್ ಬಿದ್ದ್ ಮೊಲ ಸತ್ತತ್. ಅದರ ಗೈಪು ಮಾಡಿ ಕೊಟ್ಟೊ ನಂಗೆ. ಮಿಂಡನ ಎಲುಬುನ ಎದೆ ಮೇಲೆ ಹಾಕನ್ತ್. ಅದರ ಕಟ್ಟಿದ್ ಹೇಳ್ದ ಕತೆ ಇದ್. ಹೌದೊ ಅಲ್ಲಂತ ಹೇಳಿಕ್ಕಾದೆಯೊ. ಆ ಕತೆನ ಈ ತಂಗೆನ ದೀಪ ಒಡ್ಸಿಕೊಟ್ಟ್ ಅಕೇರಿಗೆ ಹೆಣ್ಣ್‌ನ ತಲೆಕಡ್ದ್ ಬುಟ್ಟತ್ ಅಂವ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 48.ಎತ್ತ್‌ನ ಮಂಜನೂ ಹುಲಿನ ಮಂಜನೂ ಕತೆ

ಒಂದು ಊರ್‍ಲಿ ಅಜ್ಜ ಅಜ್ಜಿ. ಅಜ್ಜಂಗೊಂದು ಎತ್ತ್. ಅಜ್ಜಿಗೊಂದು ಹಸ್. ಅಜ್ಜಿನ ಹಸ್ ಕರ್ ಹಾಕಿತ್. ಅಜ್ಜಂಗೆ ಅಜ್ಜಿಗೆ ಜಗಳ ಆತ್. ಜಗಳ ಆಗಿದ್ ಅಜ್ಜ ಏನ್ ಮಾಡ್ತ್. ಅಜ್ಜಿನ ಹಸ್‌ನ ಹೊಡ್ದ್ ಗುಡ್ಡೆಗೆ ಬುಟ್ಟತ್. ಹಸ್ ಕರ್‌ನ ಕರ್ಕಂಡ್ ಗುಡ್ಡೆಗೆ ಹೋತ್. ಹೋಗಿ ಒಂದಾನೊಂದು ಊರಿಗೆ ಎತ್ತ್‌ಕನ ಅಲ್ಲಿ ಒಂದು ಹುಲಿ ಉಟ್ಟು. ಹುಲಿ ಮರಿನೂ ಉಟ್ಟು. ಅಷ್ಟಾಕನ ಈ ಕರು ಹೇಳ್ತ್. 'ಅವ್ವಾ ನನ್ನಾಂಗೆ ಇದ್ದ ಕೂಸು ಅಲ್ಲೊಂದು ಉಟ್ಟು. ನೀ ಹೋಗಿ ಅದರ ತಕಂಡ್ ಬರೊಕುಂತ'. 'ಅಂತೋ ಮಗ. ಅದರ ನಾವು ತಾಕೆ ಹೋದರೆ ನಮ್ಮ ಅದರ ಅವ್ವ ಬಂದ್‌ದ್ ತಿಂಬೊದೂ'ಂತ ಹಸ್ ಹೇಳ್ತ್. 'ಅದಾತ್ಲೆ ನೀ ಹೋಗಿ ತರೊಕೇ ತರೊಕು'ಂತ ಹೇಳ್ದ್. ಅದ್ಕೆಂತ ಮಾರ್‍ನೆ ದಿನ ಹಸ್ ಕರ್‌ಗಳ ತಕಂಡ್ ಬಾತ್. ತಕಂಡ್ ಬಂದ್ ಒಂದು ಮರದ ಅಡಿಲಿ ಹಾಕಿದ್ ಮೇವು ಮಾಡಿಕೊಂಡಿದ್ದೊ. ಸುಮಾರ್ ಹೊತ್ತಾಕನ ಹುಲಿ ಬಾತೇ ಬಾತ್. ಹುಲಿ ಬಂದ್ ಇದ್ ಯಾರ್? ಏನ್? ಎಂತದ್‌ಂತ ವಿಚಾರ್‍ನೆ ಮಾಡ್ದ್. ಆಗ ಕರ್ ಹೇಳ್ದ್. ಅಯ್ಯೋ ಇದು ನನ್ನ ಅತ್ತೆ. ನೀ ಏನೂ ಮಾಡಿಕೆ ಬೊತ್ತ್‌ಂತ. ಹಾಂಗೆ ಒಟ್ಟಿಗೆ ಮೇವುಗೆ ಹೋಕ್ಕೊಂಡಿದ್ದೊ. ಈ ಹಸ್‌ನು ಹುಲಿನೂ, ಮೇವುಗೆ ಹೊಕ್ಕೊಂತ ಇದ್ದ್ ಇದ್ದ್ ಯಾಗೋಳು ಕೆಳಗೆ ಹಸ್ ನೀರ್ ಕುಡಿದು. ಮೇಲೆ ಹುಲಿ ನೀರ್ ಕುಡಿದು. ಒಂದು ದಿನ ಹಸ್ ಮೇಲೆ ನೀರ್ ಕುಡ್ತ್. ಹುಲಿ ಕೆಳಗೆ ನೀರ್ ಕುಡ್ತ್. ಅಷ್ಟೊತ್ತಿಗೆ ಹುಲಿ ಏನ್ ಮಾಡ್ತ್? 'ಆಹಾ ಇದ್ ಕುಡ್ದ್ ಬುಟ್ಟ ನೀರೇ ಇಷ್ಟ್ ರುಚಿ ಉಟ್ಟು. ಇದರ ಹೊಡ್ದು ತಿಂದರೆ ಏನಾದುಂತ ಹೇಳಿದ್ ಅದರ ಹೊಡ್ತ್ ತೀನ್ತ್'.

ಆಗ ಹುಲಿಮರಿ ಒಂದೇ ಹೋತ್‌ಗಡ ಹುಲಿನ ಹಕ್ಕಲೆ. ಅವ್ವ ಅತ್ತೆ ಎಲ್ಲೋಳೊಂತ. ನ್ನೊಟ್ಟಿಗೆ ಇಂದ್ ಮೇವುಗೆ ಬಾತ್ಲೆ ಮಂಜ. ಎಲ್ಲಿ ಹೋಗುಟೋ ಏನೊ? ಬಾತ್ಲೆನ? ಅದ್ ುಲಿನ ಮೊರಿ ಛಲಾ ಹಿಡ್ಡದೆ, ಹಠ ಹಿಡ್ಡದೆ. ಎಲ್ಲಿ ಹುಡ್ಕುದು? ಏನೋಂತ ಹಾಂಗೆ ುಮಾರ್ ಹೊತ್ತ್ ಆಕನ ಅವ್ವ ನಿನ್ನ ಆಟಪಾಠ ಎಲ್ಲ ನಂಗೆ ಕಲ್ಸೊಕು. ಹುಲಿ ಒಂದು ದೊಡ್ಡ ುಡ್ಡೆಗೆ ಕರ್ಕೊಂಡು ಹೋದೆ. ಹೋಗಿ ಅಲ್ಲಿ ಒಂದು ಬಾಮಿ ಉಟ್ಟು. ಆ ಬಾಮಿ ಹಕ್ಕಲೆ ುದ್ರ್‌ಕನ ಅತ್ತ ಇತ್ತ, ಅತ್ತ ಇತ್ತ ಸುಮಾರ್ ಆಡ್ದೆ, ಇನ್ನ್ ನೀ ಕುದ್ರವ್ವ. ಈ ಬಾಮಿ ಕರೇಲಿ ನಾ ುಡ್ನೆಂತ ಹೇಳ್ದೊ. ಆಡ್ತ್. ಆಡ್ಕನ ಈ ಬಾಮಿಕರೆಲಿ ಅತ್ತ ಇತ್ತ ಹಾರ್ತ್. ಅಯ್ಯೆನ ಹುಲಿನ ುೂಡಿ ಹಾಕಿತ್. ಹುಲಿನ ಮೊರಿ ವಾಪಾಸ್ ಈ ಕರುನ ಹಕ್ಕಳೆ ಬಾತ್.

ಎರಡೂ ಅಣ್ಣಾ ತಮ್ಮಂಗ ಆಗಿದ್ ಒಳ್ಳೊದರ್ಲಿ ಹೋದೊ. ದೂರ ಒಂದಾನೊಂದು ುೂರಿಗೆ ಹೋದೊ. ಅಷ್ಟಾಕನ ಇವ್ಕೆ ಗತಿ ಇಲ್ಲೆ. ಹೊಟ್ಟೆ ಹಸ್ದ್ ಉಂಬಕೆ ಕುಡಿಯಕೆ ಆಗಿ ಇವು ುರ್‌ಕಂಡು ಹೋದವೆ. ಆಗ ಈ ಪಾರ್ವತಮ್ಮ ಈಸ್ವರ ದೇವ್ರು ಹೋದವೆ ಅಲ್ಲಿ. ಹೋಕೆ ುಕನ ಈಸ್ವರ ದೇವ್ರು ಹೊರ್ಡ್‌ಕನ ಹೇಳ್ದುಗಡ. ಪಾರ್ವತಮ್ಮ ನೀ ಬರ್ಬಡ. ಹೆಣ್ಣ್ ಜಾತಿಂತ ುೇಳ್ವಂತದ್. ಕಂಡದರ ಹೇಳ್ದು ಆಗಲೆ ನೀ ಬರ್ಬಡಾಂತ. ಹಾಂಗೇ ಹೇಳಿಕೆ ಆಕನ ಹಟಾ ುಡ್ದ್‌ದ್ ಏನಾರ್ ಅವುಕೆ ಒಂದು ದಾರಿ ಹೇಳ್ದು. ಬರೊಕು ಹೋಗಿಂತ. ಅಲ್ಲ ನೀ ಹೋಗುಂತ ಾರ್ವತಮ್ಮನ ಕಳ್ಸಿದೊ. ಹೋಗಿ ಆಕನ 'ನೀವು ಏನು ಮರ್ರುದು? ಏನ್ ಆಗುಟು? ಏನ್ ುಷ್ಟ?"ನಾವು ಹೀಂಗಿಂಗೆ ದೇಶಾಂತ್ರಿ ಹೋವವು. ನಾವ್ಗೆ ದಿಕ್ಕ್ ದೆಸೆಂತ ಇಲ್ಲೆ. ಅಂದರೆ ನೀವು ುನ್ನೂ ದೇಶ ತಿರ್ಗಿ ನೀ ಎತ್ತ್‌ನ ಮಂಜ ಆಕ್ಕು. ನೀ ಹುಲಿನ ಮಂಜ ಆಕ್'ಂತ ಹೇಳಿ ಪಾರ್ವತಮ್ಮ ುರಕೊಟ್ಟ್‌ದ್ ಬಂದೊ.

ಅಲ್ಲಿಂದ ಒಂದಾನೊಂದು ಊರಿಗೆ ಹೋದೊ. ಹೋಗಿ ಆಕನ ಈ ಎತ್ತ್‌ನ ಮಂಜಂಗೆ ುೊದ್ವೆ ಆತ್. ಒಂದು ಅರ್ಸುನ ಮಗಳ ಮೊದ್ವೆ ಆತ್. ಅರಸುನ ಮಕ್ಕಳ ಮೊದ್ವೆ ಆಕನ ಇವು ುಲ್ಲಿಂದ ಸಾಲಾಗಿ ತಿರ್ಗಿದೊ ಅಲ್ಲ. ಈ ಹುಲಿನ ಮಂಜ ಏನ್ ಹೇಳ್ತ್ 'ಅಣ್ಣ ನೀ ಇಲ್ಲೇ ಇರ್ ನಾ ುೋನೆ. ಮತ್ತೆ ನಾ ಇನ್ನೂ ದೇಶ ತಿರ್ಗಿನೆ'. ಏನು ಮಾಡ್ದು ಹೋತಲ್ಲಿಂದ. ಹೋಗಿ ಆಕನ ುದರಿಂದ ಆಚೆಗೆ ಹೋಕ್ಕೆ ಆಕನ 'ನಂಗೆ ನಿಂಗೆ ಕಷ್ಟ ಬಂದರೆ ಏನ್ ಗತಿಂತ ತಮ್ಮ ನೀ ಎಲ್ಲಿ ುೋಗಿ ನೆಲೆ ಆದೊ ಅಲ್ಲಿ ಒಂದು ತುಳಸಿಗಿಡ ನೆಡ್. ನಾ ನೆಲೆ ಆದಲ್ಲಿ ನಾ ಒಂದು ತೊಳ್ಸಿ ಗಿಡ ುಟ್ಟನೆ'ಂತ. ಎತ್ತ್‌ನ ಮಂಜನ ಹುಲಿನಮಂಜ ಬುಟ್ಟುಹೋತ್. ಹುಲಿಮಂಜ ಹೋಗಿದ್ ುಂಗೆ ಸುಮಾರ್ ದೇಶಾಂತ್ರ ಹೋಗಿ ಆಕನ ಅಲ್ಲಿ ಅವಂಗೆ ಒಂದು ಅರ್ಸುನ ಮಗಳ ಮೊದ್ವೆ ಆತ್. ುೊದ್ವೆ ಆಗಿ ಆಕನ ಈ ಎತ್ತ್‌ನ ಮಂಜನ ಜೋಯಿಷರ್ ಬಂದ್‌ಕಂಡು ಜೀವಕಳೆನ, ುಂದ್ರಾಯುಧನ ಕೇಳ್ವೆ. ಇಲ್ಲದಿದ್ದರೆ ಅವನ ಏನೂ ಮಾಡಿಕೆ ಆದ್ಲೆ. ಎಲ್ಲಿ? ಏನ್? ಎಂತದ್

ನೀ ಅದರ ಕೊಡೆಕುಂತ. ನಿನ್ನ ಜಾತಕ ನೋಡೋಣಂತ. ಅದರ ಏನಾರು ಹಾಳ್ ಮಾ
ಇಂವ ಸತ್ತದೆಂತ ಉಟ್ಟು. ಬಂದೊ ಇದರ ನೋಡಿದ್ ಎಲ್ಲ ಕೊಟ್ಟತ್. ಎತ್ತ್‌ನ ಮಂಜನ ಸುಟ
ಬೂದಿ ಮಾಡ್ದೊ. ಬೂದಿ ಮಾಡ್ಕನ ಈ ಹುಲಿನ ಮಂಜಂಗೆ ಗೊತ್ತಾತ್. ತೊಳ್ಸಿ ದ
ಬಾಡಿಕೊಂಡ್ ಬಾತ್. ಹುಡುಕಿಕೊಂಡು ಬಾಕೆ ಆಕನ ಇಂವ ಸತ್ತುಟು. ಈ ಬೂದಿನ ಎಲ್ಲ ಗು
ಮಾಡ್ತ್. ಅವನ ಚಂದ್ರಾಯುಧನ ತಕನ್ತ್. ಅದರ್ಲಿ ದರ್ಬೆ ಕೋಲ್‌ಲಿ ನೀರ್ ಹಾಕಿತ್. ಅಂ
ಅಯ್ಯೋಂತ ಹೇಳಿ ಕುದ್ದತ್. ಎತ್ತ್‌ನ ಮಂಜ. ಅವು ಅಣ್ಣಾ ತಮ್ಮ ಅಲ್ಲಿಂದ ಹಾಂಗೇ ಜೊತೆ
ಇದ್ದೊ. ಹುಲಿನ ಮಂಜ ಮನೆಂದ ಬಂದ್ ಎತ್ತ್‌ನ ಮಂಜ ಮನೆಲಿ ಸುಖಲಿ ಒಳೊ. [ಕತ
ನಿರೂಪಕಿ:ಕುಸುಮಾದರ ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 49.ತಬ್ರಿ ಮಕ್ಕಳ ಕತೆ

ಒಂದು ಊರ್ಲಿ ತವರಿಲ್ಲದ ತಬ್ಬೊರಿಂತ ಎರಡ್ ಮಕ್ಕಳಿದ್ದೊ. ಆ ಮಕ್ಕಳಿಗೆ ಅಪ್ಪ ಒಳೊ
ಅವ್ವ ಇಲ್ಲೆ. ಹಾಂಗೆ ಆಕನ ಈ ಅಪ್ಪ ಯಾಗೊಳು ಕೂಲಿಕೆಲ್ಸಕೆ ಹೋಗಿದ್ ತಂದಾಕುದ
ಮಕ್ಕಳಿಗೆ. ಮಕ್ಕಳಿಗೆ ಕೂಡ ಜೀವನ ಸಾಗ್ಸಿಕೆ ಬಾರೀ ಕಷ್ಟ ಆದೆ. ಅಪ್ಪಂದ ಒಬ್ಬಂದ ಆದ್ದ
ಆದರೂ ಈ ಮಕ್ಕ ಬಾರೀ ಕಷ್ಟಲಿ ಏನೆಲ್ಲಾ ಮಾಡಿ ಜೀವನ ಸಾಗ್ಸುವೆ. ಜೀವನ ಎಲ್ಲ ಸಾಗಿಸಿದ
ಅಲ್ಲಿ ನೆರೆಕರೆಲಿ ಒಂದು ಹೆಂಗ್ಸು ಉಟ್ಟು. ಆ ಹೆಂಗ್ಸಿಗೆ ಗಂಡ ಇಲ್ಲೆ. ಮೊದ್ವೆ ಆಗಿದ್ ಎರಡ
ಮೂರು ವರ್ಷ ಕಳ್ದುಟು. ಒಂದು ಕೂಸುಟು. ಹಾಂಗೆ ಈ ಹೆಂಗ್ಸ್ ಯಾಗೋಳು ಬಂದ
ಮಕ್ಕಳೊಟ್ಟಿಗೆ ಹೇಳ್ದು. 'ಅಪ್ಪನೊಟ್ಟಿಗೆ ಮೊದ್ವೆ ಆಕ್ಕೆ ಹೇಳೊಕು'ಂತ. ಹಾಂಗೆ ಮಕ್ಕಳೊಟ್ಟ
ಯಾಗೋಳು ಹಿಂಗೆ ಹೇಳ್ಕನ ಮಕ್ಕಳಿಗೆ ಅಪ್ಪನೊಟ್ಟಿಗೆ ಹೇಳಿಕೆ ಬೇಜಾರ ಆದೆ. ಮಕ್ಕಳಿ
ಎಷ್ಟಾದರ್ ಅಪ್ಪ ಮೊದ್ವೆ ಆಗಿಂತ ಹೇಳ್ದು ಬೇಜಾರದ ಸಂಗತಿ ಅಲ್ಲ?

ಹಾಂಗೆ ಮತ್ತೆ ಯಾಗೋಲು ಇದ್ ಬಂದ್ ಬೊಯ್ದದೆಂತ ಲಾಸ್ಟ್‌ಗೆ ಈ ಮಕ್ಕ ಹೇಳ್ವೆ. 'ಅ
ನೀವು ಮೊದ್ವೆ ಆಕ್ಕಡ. ಸುಮಾರ್ ಜನ ಹಿಂಗಿಂಗೆ ಹೇಳ್ವೆ. ಆ ನೆರೆ ಕರೆಲಿದ್ದ ಹೆಂಗ್ಸ್ ಕೂ
ಹೇಳ್ವೆ'ಂತ. ಹಾಂಗೆ ಯಾಗೋಲು ಹೇಳ್ಕನ ಅಪ್ಪ ಕೂಡ ಹೇಳ್ವೆ. 'ಮಕ್ಕಳೆ ನಾ ಕೂಡ ಮೊ
ಆದರೆ ಇನ್ಸ್ ನೀವ್ಗೆ ಚಿಕ್ಕವ್ವ ಬಾದು. ಈ ಅವ್ವ ನೋಡ್ದಾಂಗೆ ಚಿಕ್ಕವ್ವ ನೋಡಿಕಿಲ್ಲೆ, ಹಾಂ
ಆದ್ದರಿಂದ ನೀವ್ಗೆ ಜೀವನ ಸಾಗ್ಸಿಕೆ ಕಷ್ಟ ಆದು'ಂತ ನಾ ಮೊದ್ವೆ ಆತ್ಲೆಂತ ಹೇಳ್ದೆ. ಅಷ್ಟಾಕನ
ಹೆಂಗ್ಸ್ ಬೈದದೆ ಅಲ್ಲ. ಈ ಮಕ್ಕ ಅಪ್ಪನೊಟ್ಟಿಗೆ ಯಾಗೋಲು ಹೇಳ್ವೆ. ಅಪ್ಪ 'ಅಕ್ಕ್ ಹಂಗಾ
ನಾ ಮೊದ್ವೆ ಆನೆ'ಂತ ಹೆಣ್ಣ್ ಹುಡ್ಕಿಕೆ ಎಲ್ಲ ಹೋದವೆ. ಹೆಣ್ಣ್ ಹುಡ್ಕಿಕೆ ಹೋದರೆ ಈ ಹೆಂಗ್
ಒಳ್ಳೊ ಮನಸುಟು. ಈ ಅಪ್ಪನೊಟ್ಟಿಗೆ ಮೊದ್ವೆ ಆಕ್ಕೆ. ಅದ್ಕೆ ಈ ಹೆಂಗ್ಸ್ ಯಾಗೋಲು ನ
ಮೊದ್ವೆ ಆಕಲ್ಲೆಂತ ಹೇಳುವಲ್ಲಿಗೆ ಈ ಅಪ್ಪ ಕೆಲ್ಸಕೆ ಹೋಕನ ಮಕ್ಕ ಮಾತ್ರ ಅಲ್ಲ ಒಳದ್. ಇ

ಬಂದ್ ಗಂಜಿ ಮಡಿಕೆಗೆ ಕಲ್ಲ್ ಮೊಣ್ಣ್ ಎಲ್ಲ ತಂದಾಕುದು. ಆಗ ಅಪ್ಪ ಬಂದ್ ಬೊಯ್ದ. ಎಂತ ಮಕ್ಕಳೆ?"ಹಿಂಗೆಂತ. ಇದೊಂದು ಕುತಂತ್ರ ಮಾಡ್ದು. ಲಾಸ್ಟ್‌ಗೆ ಇದ್ ಹೇಳ್ದೆ. ನೀವ್ಗೆ ಚಿಕ್ಕವ್ವನ ತಂದರೂ ಸರಿಯಾಕಿಲ್ಲೆ. ನನ್ನ ತಂದರೆ ಇದೆಲ್ಲ ಸರಿಯಾದುಂತ. ಹಾಂಗೆ ಮತ್ತೆ ಇಂವ ಮೊದ್ವೆ ಆದೆ ಈ ಹೆಂಗ್ಸ್‌ನ.

ಒಂದು ಹಂಞ ಸಮಯ ಮಕ್ಕಳ ಲಾಯಿಕ್ ನೋಡಿಕಂಡದೆ ಚಿಕ್ಕವ್ವ. ಎಷ್ಟಾದರೂ ಚಿಕ್ಕವ್ವ ಅಲ್ಲ. ಇವೆರಡ್ ಮಕ್ಕ ಬೇರೆ ಅಲ್ಲ. ಹಾಂಗೆ ಆಗಿದ್ ಚಿಕ್ಕವ್ವ ಹೇಳ್ದೆ. 'ನೀವ್ ಈ ಎರಡ್ ಮಕ್ಕಳ ಅತ್ತ ದೂರ ಕಳ್ಸೊಕು. ಇದೆಂತಕೆ ಪ್ರೇಜನ ಇಲ್ಲೆ'ಂತ. 'ನಾ ಇರಿಕನ ನನ್ನ ಕೂಸು ಇರಿಕನ ಮತ್ತೆ ಇವು ನೀವ್ಗೆಂತಕೆ'ಂತ ಹೇಳ್ದೆ. ಹಾಂಗೆ ಆಕನ ಈ ಅಪ್ಪಂಗೆ ಮರ್ಗ್ಟ್‌ಕಂಡು ಯಾಗೋಲು ಬೇಜಾರ ವ್ಯಥೆ. ಮತ್ತೆ ಒಂದು ದಿನ ಇದರ ಬೈಗಳು ತಡಿಯಕ್ಕೆ ಆಗದೆ ದೊಡ್ಡ ಕಾಡಿಗೆ ಕರ್ಕಂಡ್ ಹೋದೆ. ಮಕ್ಕಳ ಕರ್ಕಂಡ್ ಹೋಗಿದ್ ಅಲ್ಲಿ ಕಾಡ್‌ಲಿ ತಿಂಬಕೆ ಏನೂ ಇಲ್ಲೆ. ಆದರೂ ಮಕ್ಕಳೊಟ್ಟಿಗೆ ಹೇಳ್ದೆ. 'ನಾ ಮಧ್ಯಲಿ ಮಲಗಿನೆ. ನೀವಿಬ್ಬರೂ ಆಚೆ ಈಚೆ ಮಲಗಿ'ಂತ. ಹಾಂಗೆ ಈ ಮಕ್ಕ ಎರಡ್ ಅಪ್ಪಂಗೆ ತಬ್ಬಿ ಮಲಗ್ವೆ. ಲಾಸ್ಟ್‌ಗೆ ಇವ್ಕೆ ಎರಡ್ ಮಕ್ಕಳಿಗೆ ನಿದ್ದೆ ಆಕನ ಈ ಅಪ್ಪ ಎರಡ್ ದೊಡ್ಡ ಕಾಯರ ಮುಳ್ಳು, ಬೇರೆಲ್ಲ ಮುಳ್ಳು ತಂದ್‌ದ್ ಅಲ್ಲಿ ಒಂದು ಬಿಳಿ ಸೀರೆ ಹೊದಿಸಿದ್ ಇಂವ ಎಲ್ದ್ ಬಂದದೆ. ಲಾಸ್ಟ್‌ಗೆ ಮಕ್ಕಳಿಗೆ ಕಂತಿಕಂತಿಸಿದೆ. ಎದ್ದ್ ಕೋಳಿ ಕೂಂಗುವ ಹೊತ್ತಿಗೆ ನೋಡ್ಕನ ಕಂತಿಕಂತಿಸಿದೆ. ಎಂತ ಅಪ್ಪ ಜಿವ್ನನ್ನಿ ಇಸುದುಂತ ಕುದ್ದ್‌ಕಂಡವೆ. ಈ ಅವ್ವ ಕೂಡ ಇಲ್ಲದೆ ನಾವು ಇಷ್ಟ್ ತಬ್ರಿ ಆದರೂ ನೀವು ಕೂಡ ಹಿಂಗೆ ಜಿವ್ನನ್ನಿ ಉಪದ್ರ ಕೊಟ್ಟರಾಂತ ಲಾಸ್ಟ್‌ಗೆ ಎದ್ದ್ ನೋಡ್ಕನ ಇವು ಮುಳ್ಳು ಎಲ್ಲ ಅನ್ಕಿಸಿ ಇವು ಎದ್ದ್‌ಕಂಡ್ ಹೋಗೊಲು. ಲಾಸ್ಟಿಗೆ ಮಕ್ಕ ಮರ್ಗ್ಟ್‌ಕಂಡೊಳೊ. ಮರ್ಗ್ಟ್ ಮರ್ಗ್ಟ್ ಮರ್ಗ್ಟಾಕನ ಲಾಸ್ಟ್‌ಗೆ ಇವ್ಕೆ ಹೊಟ್ಟೆಗೆ ಏನೂ ಇಲ್ಲೆ ಅಲ್ಲ. ಹಿಂಗೆ ಎರಡ್ ದಿನ ಹೊಟ್ಟೆಗೆ ಇಲ್ಲದೆ ಗೆಡ್ಡೆ ಗೆಲ್ಸ್ ಎಲ್ಲ ತಿಂದ್‌ಕಂಡೊ. ಲಾಸ್ಟ್‌ಗೆ ಈ ಹೈದ ಒಂದು ಐಡಿಯ ಮಾಡ್ತ್. 'ನಾ ಮರಕ್ಕೆ ಹತ್ತಿ ನೋಡ್ನೆ. ಎಲ್ಲಿಂದ ಹೊಗೆ ಕಂಡದೆ. ದೂರಂದ ಮನಿ ಕಾಂಬೊದು. ಆ ಅಂದಾಜಿಗೆ ನಾವು ಪೊಯಿ'ಂತ ಹಾಂಗೆ ಈ ಹೈದನ ತಂಗೆ ಕೂಡ ಹೇಳ್ತ್. 'ಹಾಂಗೆ ಮಾಡಣ್ಣಾ'ಂತ ಅಣ್ಣ ಮರಕ್ಕೆ ಹತ್ತಿ ನೋಡ್ತ್.

ಎತ್ತರಂದಲಿ ನೋಡ್ಕನ ಕಾಂಬೊದ್ಲೆ. ಆದರೂ ಬಾರೀ ದೂರಂದ ಒಂದು ಹೊಗೆ ಕಂಡಡೆ. ಈ ಹೊಗೆನ ಕಂಡ್ ಅದರ ಅಂದಾಜಿಗೆ ಇಬ್ಬರ್ ಬಲ್ಲೆ ಹುಕ್ಕೊಂಡೇ ಮರ್ಗ್ಟ್‌ಕಂಡ್ ಮರ್ಗ್ಟ್‌ಕಂಡ್ ಹೋದವೆ. ಆಗ ಅವು ಸಾಯಕೆ ಆದಂಗೆ ಆಗೋಳೊ. ಹೊಟ್ಟೆಗೆ ಇಲ್ಲದೆ ಅಲ್ಲಿಗೆ ಎತ್ತಿ ಆಕನ ಒಂದು ಚಿನ್ನದ ಆಚಾರಿ ಉಟ್ಟು. ಅಂವ ಅಲ್ಲಿ ಚಿನ್ನದ ಕೆಲ್ಸ ಮಾಡಿಕೊಂಡುಟು. ಲಾಸ್ಟ್‌ಗೆ ಚಿನ್ನದ ಆಚಾರಿ ಹೇಳ್ದೆ. 'ನೀವು ಬಂದರೆ ನಮ್ಮಲ್ಲಿ ಹಿಂಗಿಂಗೆ ನಿಲ್ಲಕ್'ಂತ. 'ಊಟ ಎಲ್ಲ ಮಾಡಿಕಂಡ್ ಇರಿ. ಮತ್ತೆ ನೀವ್ಗೆ ದೊಡ್ಡ ಸಂಬಳ ಕೊಡಿಕಿಲ್ಲೆ. ಆದರೆ ನಿಮ್ಮ ಜೀವನ

ಹೋದಲ್ಲ'ಂತ ಹೇಳ್ದಿ. ಹಾಂಗೆ ಅವಿಬ್ಬರೂ ಅಲ್ಲೆ ಹಂಇ ಸಮಯ ನಿಂತವೆ. ಲಾಸ್ಟ್
ಮಕ್ಕಳಿಗೆ ಬೇಜಾರ್ ಆದೆ. ಆಚಾರಿಗೆ ಮಕ್ಕಳ ಸಾಂಕಿಕೆ ಆದ್ಲೆ. ಹಾಂಗೆ ಮಕ್ಕ ಹೇಳ್ವೆ 'ನೀವ
ಬಾರಿ ತೊಂದರೆ. ನಾವು ಎಲ್ಲಿಂದಲೋ ಬಂದವು. ನಮ್ಮ ಕಲ್ಸಿನಿ ನಾವು ಹೋದವೆ'ಂತ
ಆದರೂ ಅವಂಗೂ ಈ ಮಕ್ಕಳ ಮೇಲೆ ಬಾರೀ ಪ್ರೀತಿ. ಎಷ್ಟಾರೂ ತಬ್ರಿ ಮಕ್ಕಳಲ್ಲಂತ
ಹಾಂಗಾಗಿ ಆ ಮಕ್ಕಳಿಗೆ ಒಬ್ಬೊಬ್ಬರಿಗೆ ಒಂದೊಂದು ಚಿನ್ನದ ಉಂಗುರ ಹಾಕಿ ಕೊಟ್ಟದೆ
ನೆನ್ಪುಗೆಂತ ಇದರ ಹಾಕಿಕೊಂಡು ಮಕ್ಕ ಸೀದ ಮರ್ಸ್ಟ್ಕಂಡ್ ಹೋದವೆ. ಹೋಕನ ಒಂದು ಕಡೆ
ಒಂದು ಹೈದ ಉಟ್ಟು. ಅಂವ ಒಬ್ಬನೆ ಒಂದು ಮನೆಲಿ. ಇವು ತಿಂಗಳ ಬೊಳ್ಬಿಗೆ ಹೋಗುತ್ತಾ
ಒಳೊ. ಅವಂಗೆ ಒಂದು ನಾಯಿ ಉಟ್ಟು. ಅಂವಂಗೆ ಮೊದ್ವೆ ಆತ್ಲೆ. ಅಂವ ನಾಯಿನೊಟ್ಟಿ
ಹೇಳ್ದೆ 'ಓ ಅಲ್ಲೆ ಎರಡ್ ಜನ ಹೋದವೆ. ಗೂಡೆಂತ ಆದರೆ ನೀ ಕರ್ಕೊಂಡು ಬಾ'ಂತ. 'ನಾ
ಮೊದ್ವೆ ಆನೆ'ಂತ. ಹಾಂಗೆ ನಾಯಿ ಓಡಿಕಂಡ್ ಬಂದ್ ಹೇಳ್ದೆ. 'ನೀವು ಬರಕಡ'ಂತಾ. ಮತ್ತೆ
ಹುಡುಗ ಬಾದು ಬೇಡಗಡಾಂತ. ಹಾಂಗೆ ಗೂಡೆ ಸೀದ ಹೋದೆ. ಹಾಂಗೆ ಆಕನ ಅಂವ
ಗೂಡೆನ ಇಸಿಕಂಡದೆ. ಮತ್ತೆ ಇಂವ ಹೇಳಿ ಹೋದೆ. 'ನಾ ಹೋನೆ ನಂಗೆ ಯಾರ್ ಗಂಜಿ
ಕೊಟ್ಟವೆ ? ನಾ ಹೋನೆ'ಂತ ಅಂವ ಮರ್ಸ್ಟ್ಕಂಡ್ ಹೋದೆ.

ದೂರಕೆ ಹೋಕನ ಒಂದು ಗೂಡೆ ಉಟ್ಟು. ಗೂಡೆಗೆನೂ ಒಂದು ನಾಯಿ ಉಟ್ಟು. ಅದ್ಕೆನೂ
ಯಾರೂ ಇಲ್ಲೆ. ಅದ್ ನಾಯಿನೊಟ್ಟಿಗೆ ಹೇಳ್ದೆ 'ಹುಡುಗಾಂತ ಆದರೆ ನೀ ಕರ್ಕೊಂಡ್ ಬಾ'ಂತ
'ನಾ ಅವನ ಮೊದ್ವೆ ಆನೆ'ಂತ. ನಾಯಿ ಹೋಗಿ ಹೇಳ್ದೆ. 'ನೀವು ಬರೊಕಡ ಹೀಂಗಿಂಗೆ'ಂತ
ಇಲ್ಲಿ ಬಂದಾಕನ ಈ ಗೂಡೆ ಇಂವನ ಮೊದ್ವೆ ಆದೆ. ಮೊದ್ವೆ ಎಲ್ಲ ಆಗಿದ್ ಲಾಸ್ಟ್‌ಗೆ ಇಬ್ಬರಿಗೂ
ಪರಿಚಯ ಇರ್ದುಲೆ. ತಂಗೆಯೂ ಅಣ್ಣನೂ ಯಾಗೋಲು ಮರ್ದುದು. ಒಳ್ಳೊ ಅರಮನೆ
ಜೀವನ. ಅಣ್ಣಂಗೆನೂ ತಂಗೆಗೆನೂ ಮಕ್ಕ ಆದೆ. ಲಾಸ್ಟ್‌ಗೆ ಒಂದು ಕಡೆಲಿ ದೊಡ್ಡ ಮಾಯಿನ
ಕಾಯಿ ಮರ ಉಟ್ಟು. ಆ ಮಾಯಿನ ಕಾಯಿ ಹಣ್ಣ್ ಹೆರ್ಕಿಕನ ಅಣ್ಣನ ಮಕ್ಕಳಿಗೂ ಈ ತಂಗೆ
ಮಕ್ಕಳಿಗೂ ಪೆಟ್ಟಾದೆ. ಪೆಟ್ಟಾಗಿ ರಾಜಿ ಮಾಡಿಕ್ಕಾಗಿ ಹಂಇ ಸಮಯ ನೋಡ್ವೆ. ಅಷ್ಟಾಕನ ಈ
ಮಕ್ಕಳಿಗೆ ಯಾರ್ ಯಾರ್'ಂತ ಗೊತ್ತಾದೆ. ಮತ್ತೆ ಎರಡ್ ಕಡೆಂದಲೂ ಪಂಚಾತಿಗೆ ಆದೆ
ಪಂಚಾತಿಗೇಲಿ ಎರಡೂ ಕಡೆಂದಲೂ ಹೇಳ್ವೆ 'ನಾವು ಹಿಂಗಿಂಗೆ ಆಗಿ ಬದ್ಕಿದವು . ಹಿಂಗಿಂಗೆ
ಆತ್'. ಲಾಸ್ಟ್‌ಗೆ ಕೈಲಿ ಉಂಗುರ ನೋಡ್ದೊ. ಇದ್ ನೋಡ್ಕನ ಇದ್ ನನ್ನ ತಂಗೆ, ಇದ
ಅಣ್ಣಂತ ತಬ್ಬಿಕೊಂಡೊ. ನಾವು ಮುಂದೆನ ಸಂಸಾರ ಅಲ್ಲಾಂತ ಹಾಂಗೆ. ಮತ್ತೆ ಸಂತೋಷಲಿ
ಜೀವನ ತೆಗ್ದವೆ. ಈ ಕತೆ ಮುಗ್ತ್.[ಕತಾ ನಿರೂಪಕಿ:ತಾರಾಮಣಿ ಪಡ್ಪು; ಸ್ಥಳ:ಮನೆ; ಸಮಯ:ಹಗಲು
ವರ್ಷ–1991]

## 50.ಸವತಿ ಮತ್ಸರದ ಕತೆ

ಒಂದು ಊರ್ಲಿ ಒಂದು ಅರ್ಸು ಇತ್ತ್. ಅರ್ಸುಗೆ ಒಂದು ಹೆಣ್ಣ್ ಇತ್ತ್. ಆ ಹೆಣ್ಣ್ ಹೆರಾದೆ ಇತ್ತ್. ಹಾಂಗೆ ಮತ್ತೊಂದು ಹೆಣ್ಣ್‌ನ ಮೊದ್ವೆ ಆತ್. ಮೊದ್ವೆ ಆಗಿ ಆರೇಲು ತಿಂಗ ಆಕನ ಅವಂಗೆ ದಂಡ್‌ಗೆ ಹೋಂವ ಒಂದು ವಾರ್ತೆ ಬಾತ್. ದಂಡಿಗೆ ಹೋಗದೆ ಉಪಾಯ ಇಲ್ಲೆ ಅಲ್ಲ. ಅಂದರೆ ನಾ ಹೋನೆ ಪೊರ್ಲುಲಿ ನೋಡಿಕನಕ್ ಹಂಗೆ ಹಿಂಗೆ ಹೇಳಿ ಅಂವ ಬುದ್ಧಿವಾದ ಹೇಳ್ತ್. ಹಂಗೆ ಇದ್ಕೆ ಹೆರಿಕೆ ದಿನ ಆತ್. ಆ ದಿನ ಹೊಟ್ಟೆ ಬೇನೆ ಬಾತ್. ಆಗ ಅಕ್ಕನೊಟ್ಟಿಗೆ ಕೇಳ್ತ್. ಹೊಟ್ಟೆಬೇನೆ ಬಂದರೆ ಅಕ್ಕ ಏನು ಮಾಡೊಕುಂತ. 'ಹಾಂಗೆ ಕಡ್ಕಲ್ಲ್ ಗುಂಡು ಹೊತ್ತ್‌ಕಂಡ್ ಕಣ್ಣಿಗೆ ಸೀರೆ ಕಟ್ಟಿ ಕುದ್ರೊಕು'ಂತ ಹೇಳ್ತ್. ಹಂಗೆ ಮಾಡ್ತ್ ಇದ್. ಹಾಂಗೆ ಹೆತ್ತತ್. ಹೆತ್ತರೆ ಗಂಡ್ ಕೂಸು. ಇದರ ತಕಂಡೋಗಿ ತೊಳಸಿ ಬಲ್ಲೆ ಉಟ್ಟು. ತೆಗ್ದ್ ಇಟ್ಟತ್. ಹೆತ್ತಲ್ಲಿಗೆ ಒಂದು ಓಂತಿನ ಹೊಡ್ಕಂಡ್ ತಂದ್ ಹಾಕಿತ್. ಕಣ್ಣ್‌ಸೀರೆ ಬಿಚ್ಚಿತ್. 'ನೀ ಹೆತ್ತದ್ ಎಂತದ್ ಓಂತಿಯಲ್ಲಾಂತ ಹೇಳ್ತ್'. ಸುಮ್ಮನೆ ಆಕನ್ತ್. ಹಂಗೇ ಒಂದು ವರ್ಷ ಕಳ್ತ್.

ಆ ಊರ್ಲಿ ಈ ಮನೆ ಮನೆ ಬೇಡಿಕಂಡ್ ಬಾವ ಒಂದು ಅಜ್ಜ ಇದ್ದದೆ. ಆ ಅಜ್ಜ ಹೂಮಾಲೆ ಕಟ್ಟಿಕಂಡ್ ಏನೆಲ್ಲ ಹಿಂಗೆ ಜೀವನ ಮಾಡಿಕೆ ಬೇಕಾಗಿ ಬಂದೊ. ಅಲ್ಲಿ ಕೊಟ್ಟ ಅಕ್ಕಿಯೊ ಎಲ್ಲ ತಕಂಡೋಗಿ ಅಂವ ಜೀವನ ಮಾಡ್ತಾ ಇದ್ದದೆ. ಹಾಂಗೆ ಈ ಕೂಸು ಮರ್ದುದರ ಕೇಳಿ ಈ ಕೂಸುನ ತಕಂಡೋಗಿ ಅಂವ ಸಾಂಕಿತ್. ಅಂವಂಗೆ ತುಳಸಿರಾಜಾಂತ ಹೆಸರಿಸಿತ್. ಒಂದು ವರ್ಷ ಕಳ್ದ ಕೂಡ್ಲೆ ಎರಡನೇ ಸರ್ತಿ ಇದ್ ಬೊಸುರಾತ್. ಬೊಸರಾಕನ ಅದೇ ಸಮಯಕ್ಕೆ ಇವಂಗೆ ವಾರ್ತೆ ಬಾತ್. ಇಂವ ಎದ್ದ್ ಸೀದಾ ಹೋತ್. ಹಾಂಗೆ ಎರಡ್ನೆ ಹೆತ್ತತ್. ಹೆತ್ತದೆ ಹೆಣ್ಣ್ ಕೂಸು. ಅದರ ತಕಂಡೋಗಿ ಕೇದಗೆ ಬಲ್ಲೆಗೆ ಹೆರ್ಕಿ ಇಟ್ಟತ್. ಹಾಂಗೆ ಓಂತಿ ಎಂತದೋ ಬೇರೆ ಹೊಡ್ಕಂಡ್ ತಂದ್ ಹಾಕಿತ್. ಹಂಗೆ ಹೇಳ್ತ್ ಇದ್. 'ನೀ ಹೆತ್ತದೆಂತದಕೆ ಎಂತ ಎಂತದಲ್ಲ'. ಅದಕ್ಕೂ ಸುಮ್ಮನೆ ಆಕನ್ತ್. ಹಾಂಗೆ ಅರ್ಸರಿಗೆ ಎಲ್ಲ ದೂರು ಕೊಟ್ಟತ್. ಹಿಂಗಿಂಗೆ ಹೆತ್ತುಟು. ಹಾಂಗೆ ಹಿಂಗೆಂತ ಹೇಳಿ. ಇದ್ ಸುಮ್ಮನೆ ಆಕನ್ತ್.

ಹಾಂಗೆ ಮೂರನೆ ಸರ್ತಿ ಗರ್ಭಿಣಿ ಆಕನನೂ ಇವಂಗೆ ದಂಡಿಗೆ ಹೋಕೆಂತ ಹೇಳಿ ಅಂವ ದಂಡಿಗೆ ಹೋತ್. ನೀ ಇದರನ್ನಾದರೂ ಪೊರ್ಲು ನೋಡಿಕನಕ್‌ಂತ ಬುದ್ಧಿವಾದ ಹೇಳಿ ಹೋತ್. ಇದ್ ಅದರ ಬುದ್ದಿ ಹಂಗೇ ಹೇಳ್ತ್. ಹಂಗೇ ತಕಂಡೋಗಿ ಮುಡೆಗ ಬಲ್ಲೆಗೆ (ಮುಂಡೋವು) ಹೆರ್ಕಿಟ್ಟತ್. ಮೂರ್ನೆದರನ್ನೂ ಅವನೇ ತಕಂಡೋಗು ಸಾಂಕಿತ್. ಅದ್ಕೆ ಕೇದಗೆ ರಾಣಿಂತ ಹೆಸರ್ ಹಾಕಿತ್. ಇದ್ಕೆ ಮುಡೆಗ ರಾಣಿಂತ ಹೆಸರ್ ಹಾಕಿತ್. ಇಂವ ಒಂದು ನಾಲ್ಕು ವರ್ಷ ಕಳ್ದಾಕನ

ಮಕ್ಕಳು ನಾನು ಬನ್ನೆ ನಾನು ಬನ್ನೆಂತ ಅಜ್ಜನೊಟ್ಟಿಗೆ ಹೊರಟು ಬಂದೊ. ಹಾಂಗೆ ಈ ಅರ್ಸ
ಮನೆಗೆ ಬಂದೊ. ಹೂ ಮಾಲೆಲ್ಲ ಕೊಟ್ಟತ್. ನಿನ್ನ ಹೆಸರೆಂಗೆ ನಿನ್ನ ಹೆಸರೆಂಗೆ ಎಲ್ಲ ಕೇಳ್ತ್
ನನ್ನ ಹೆಸರ್ ತುಳಸಿರಾಜ. ನಿನ್ನ ಹೆಸರ್ ಕೇದಗೆ ರಾಣಿ. ನಿನ್ನೆಸರ್ ಮೂಡೆಗೆ ರಾಣಿ. ಅಕೇರಿಗೆ
ಅಜ್ಜನೊಟ್ಟಿಗೆ ಎಲ್ಲ ವಿವರಿಸಿ ಎಲ್ಲ ಕೇಳ್ತ್.

ಹಿಂಗಿಂಗೆ ಸಿಕ್ಕಿದ ಮಕ್ಕೊ. ಹೀಂಗಿಂಗೆ ಅವುಕ್ಕೆ ಹೆಸರಾಕಿದ್. ಕಡೆಗೆ ವಿಚಾರ್ಸಿ ನೋಡ್ರೆ
ಹೀಂಗೆ ಸಂಗತಿ. ಕಡೆಗೆ ಈ ಮಕ್ಕಳ ತಂದ್ ಈ ಅರ್ಸ ಸಾಂಕಿತ್. ಸಾಂಕಿ ಈ ಅಜ್ಜಂಗೆ
ಅರ್ಧಾಂಶ ರಾಜ್ಯನೂ ಕೊಟ್ಟತ್. ಈ ಹೆಂಗ್ಸ್‌ನ ತಕಂಡೋಗಿ ಮೂರು ದಾರಿ ಕೂಡುವಲ್ಲಿ
ತಲೆಕಡ್ಡ್ ಹೋತ್. ದೊಡ್ಡ ಹೆಂಗ್ಸ್‌ನ. ಇಲ್ಲಿಗೆ ಮುಗ್ತ್. [ಕತಾ ನಿರೂಪಕಿ:ಲಕ್ಷ್ಮಿ ಕುರುಂಜಿ; ಸ್ಥಳ:ಮನೆ;
ಸಮಯ:ಹಗಲು; ವರ್ಷ–1991]

## 51. ನೂರೊಂದು ಮಕ್ಕಳ ಕತೆ

ಒಂದಾನೊಂದು ಊರ್ಲಿ ಒಂದು ಅರ್ಸು ಗಡ. ಆ ಅರ್ಸುಗೆ ಎರಡ್ ಅಬ್ಬೆಗ. ಅಂವಂಗೆ ಮಕ್ಕ
ಇಲ್ಲೆ ಗಡ. ಹಾಂಗೆ ಅಂವ ಒಂದು ದಿನ ಹಳ್ಳದ ಕರೆಗೆ ಹೋತ್‌ಗಡ. ಹೋಗಿ ಆಕನ ಒಂದು
ಎಸ್‌ಂಡು ಸಿಕ್ಕಿತ್. ಆ ಎಸ್‌ಂಡ್‌ನ ಹಿಡ್ಕಂಡ್ ಬಂದ್ ನೋಡ್ಕನ ಅದರ್ಲಿ ನೂರೊಂದು ಮೊರಿಗ
ಒಳೊಗಡ. ಈ ಒಂದು ಎಸ್‌ಂಡ್ ನೂರೊಂದು ಮೊರಿಗಳ ಸಾಂಕೊಕ್ಕಾದರೆ ಆಗ ನಂಗೆನೂ
ನೂರೊಂದು ಹೆರುವ ಹೆಣ್ಣ್‌ನ ಮೊದ್ವೆ ಆಕ್ಕುಂತ ಹೇಳಿ ಹೋತ್‌ಗಡ ಹುಡ್ಕಿಕಂಡ್.

ಹುಡ್ಕಿಕಂಡ್ ಹೋಕನ ಒಂದು ಊರ್ಲಿ ಏಳ್ ಜನ ಮಕ್ಕ ಒಳೊಗಡ. ಈ ಏಳ್ ಜನ ಹೆಣ್ಣ್
ಮಕ್ಕಳೊಟ್ಟಿಗೆ ಹೋಗಿದ್ ಕೇಳ್ತ್‌ಗಡ. 'ವಜ್ರದೊ ಉಂಗಿಲೊ ದೀಪನ ಮಗ ನೂತೊಂಜಿ
ಬಾಲೆನ್ ಪೆದುವನಾಂತ' ಕೇಳ್ತ್‌ಗಡ. 'ವಜ್ರದ ಉಂಗುರೊನು ದೀಡ್ಯರ ಬಲ್ಲಿ ನೂತೊಂಜಿ
ಬಾಲೆನ್ ಪೆದ್ಯರಲ ಬಲ್ಲಿಂತ' ದೊಡ್ಡ ಮಗ ಹೇಳ್ತ್‌ಗಡ. ಎರಡ್ನೆದರೊಟ್ಟಿಗೆ ಕೇಳ್ತ್. ಅದೂ
ಹಂಗೇ ಹೇಳ್ತ್. ಹಾಂಗೆ ಈ ಆರ್ ಜನನೂ ಅದೇ ರೀತಿ ಹೇಳ್ದೊ. ಏಳನೆದ್ ಹೇಳ್ತ್‌ಗಡ. 'ವಜ್ರದ
ಉಂಗಿಲೂ ದೀಡ್ಯರಲಾ ದೀಡುವೆ, ನೂತೊಂಜಿ ಬಾಲೆಲೆನ್ ಪೆದ್ಯರಲೂ ಪೆದುವೆ ಅಪ್ಪೇ'ಂತ
ಹೇಳ್ತ್‌ಗಡ. ಅದಕ್ಕೆ ವಜ್ರದ ಉಂಗುರ ಹಾಕಿತ್ ಮೊದ್ವೆ ಆತ್. ಹಾಂಗೆ ಮನೆಗೆ ಕರ್ಕಂಡ
ಬಾತ್. ಕರ್ಕಂಡ್ ಬಂದ್ ಹಂಞ ಸಮಯ ಆಕನ ಇದ್ ಗರ್ಭಿಣಿ ಆತ್. ಗರ್ಭಿಣಿ ಆಗಿದ
ತಿಂಗ ಇದ್ಕೆ ಸುಮಾರ್ ಆಕ್ಕಂಡ್ ಬಾತ್. ಅಷ್ಟಾಕನ ಅವಂಗೆ ದಂಡ್‌ಂದ ಓಲೆ ಬಾತ್‌ಗ
ಬರೊಕುಂತ. ಹೋಗದೆನೂ ಉಪಾಯ ಇಲ್ಲೆ. ಹೋಕನ ಈ ಅಬ್ಬೆಗಳೊಟ್ಟಿಗೆ ಹೇಳ್ತ್‌ಗಡ
'ಇದರ ನೀವ್ ಲಾಯಿಕ್ ನೋಡಿಕನಿ. ಹೆರಿಗೆಗೆ ಹೊಟ್ಟೆಬೇನೆ ಬಾಕನ ಒಂದು ಸರಿಗೆ ಕ
ಹೋನೆ. ಆಗ ನೀವು ಅದರ ಆಡ್ಸಿ ಬುಡಿ. ನಾ ಕೂಡ್ಲೆ ಬನ್ನೆಂತ'. ಹಾಂಗೆ ಅಂವ ಅಲ್ಲಿ ಎತ್ತಿ
ಕೂಡ್ಲೆ ಇವು ಇಲ್ಲಿಂದ ಅಬ್ಬೆಗ ತಂತಿ ಆಡ್ಸಿದೊ ಗಡ. ಅಂವ ಓಡಿ ಬಾತ್‌ಗಡ. ಓಡಿ ಬಂದ

ದ್ ಉಷಾರುಟ್ಟು. ಹಾಂಗೆ ತಿರ್‍ಗಿ ವಾಪಾಸ್ ಹೋತ್. ಇದೇ ರೀತಿ ಸುಮಾರ್ ಸರ್ತಿ ಇವು ಂಗೇ ಮಾಡ್ದೊಗಡ. ಇದ್ ಸುಮ್ಮನಾರು ಮಾಡ್ದುಂತ ಒಂದು ಸಲ ಬಾತೇ ಇಲ್ಲೆಗಡ.

ಕಡೆಗೆ ಇದ್ಕೆ ಹೊಟ್ಟೆಬೇನೆ ಬಾತ್. ಹೊಟ್ಟೆ ಬೇನೆ ಬಂದ್‌ದ್ ಇನ್ನ್ ಹೆರ್‍ಗೆ ಆಕ್ಕಲ್ಲ. ಇದ್ ಅಕ್ಕಂದರೊಟ್ಟಿಗೆ ಕೇಳ್ತ್ 'ಏನು ಮಾಡ್ದು'ಂತ. ಆಗ ಅಕ್ಕಂದರ್ ಹೇಳ್ದೊ ಗಡ. 'ಕಡ್ಕಲ್ಲ್ ಬುಂಡ್‌ನ ಸೊಂಟಕ್ಕೆ ಕಟ್ಟಿ ಅಟ್ಟಕ್ಕೊಮ್ಮೆ, ಕೆಳಗೊಮ್ಮೆ ಇಳಿ'ಂತ. ಇದ್ ಅಟ್ಟಕ್ಕೊಮ್ಮೆ ಅಡಿಗೊಮ್ಮೆ ಇಳ್ತ್. ಇದ್ ಸೀರೆಕಟ್ಟಿದೊ. ಅಷ್ಟಾಕನ ಅದಕ್ಕೆ ಹೆರ್‍ಗೆ ಆತ್. ನೂರೊಂದು ಮಕ್ಕಳ ಹೆತ್ತತ್‌ಗಡ. ಇದ್ ಹೆತ್ತಾಕನ ಅಕ್ಕಂದರ್‌ಗೆ ಮತ್ಸರಾತ್. ಅವು ಏನ್ ಮಾಡ್ದೊ. ಈ ಮಕ್ಕಳ ಎಲ್ಲ ಒಂದು ಪೆಟ್ಟಿಗೆಲಿ ತುಂಬಿಸಿ ತಕಂಡೋಗಿದ್ ಒಂದು ಗೊಬ್ಬರದ ಗುಡ್ಡೆಗೆ ಹಾಕಿದೊ. ಹಾಕಿ ನೂರ ಒಂದು ಕಪ್ಪೆ ತಂದ್ ಇದರ ಹಕ್ಕಳೆ ಬುಟ್ಟೊ. ಬುಟ್ಟ್‌ದ್ ಕಣ್ಣಂದ ಸೀರೆ ಬಿಚ್ಚಿದೊ. ಬಿಚ್ಚಿದ್ 'ಇಂದ ನೀ ಹೆತ್ತ ಮಕ್ಕ ಇಷ್ಟೆ. ಕಪ್ಪೆನೇ ಹೆತ್ತದ್'ಂತ ಹೇಳ್ದೊ. ಮತ್ತೆ ಅರ್‍ಸುಗೆ ಇಲ್ಲಿಂದ ಓಲೆ ಕಳ್ಸಿದೆ ಅರ್‍ಸು ಬಾತ್. ಬಂದ್ ನೋಡ್ರೆ ಕಪ್ಪೆಗ. ಮತ್ತೆ ಕಪ್ಪೆಗಳ ಎಲ್ಲ ಹೊಡ್ದ್ ಕೊಂದೊ ಇವು. ಕೊಂದ್‌ದ್ ಅದ್ ಹಾಂಗೆ ಇತ್ತ್. ಈ ಗೊಬ್ಬರದ ಗುಡ್ಡೆಲಿ ಒಂದು ಕಬಿಲ್ಚಿ ಹಸ್‌ನ ಕಟ್ಟಿ ಇಸಿಯೊಳ. ಆ ಕಬಿಲ್ಚಿ ಹಸ್ ಯಾಗೋಲು ಕರ್‌ಬುಡಿಕನ ಮೆಟ್ಟಿ ಕಂಕನೆ ಆಗಿ ಈ ಮಕ್ಕ ಪೂರ ಅದರ ಕುಡ್ದ್ ದೊಡ್ಡಿತಾದೊ. ಇದ್ ಇವ್ಕೆ ಗೊತ್ತಾತ್. ಗೊತ್ತಾಗಿ ಈ ಮಕ್ಕಳ ಎಲ್ಲ ಒಂದು ದೊಡ್ಡ ಪೆಟ್ಟಿಗೆಲಿ ಹಾಕಿ ಸಮುದ್ರಕೆ ಹಾಕಿದೊ ಗಡ.

ಮಕ್ಕ ಸಮುದ್ರಲಿ ಹೋಗಿ ಹೋಗಿ ಒಂದು ಬಟ್ಟೆ ಒಗೆವವಂಗೆ ಸಿಕ್ಕಿತ್. ಅಂವ ಆ ಪೆಟ್ಟಿಗೆನ ಮೇಲೆ ಇಸಿದ ಅದರ ಮುಚ್ಚಳ ತೆಗ್ದ್ ನೋಡ್ತ್ ಗಡ. ನೋಡ್ಕನ ಇದರ್ಲಿ ನೂರೊಂದು ಮಕ್ಕ ಒಳೊ. ಈ ನೂರೊಂದು ಮಕ್ಕಳ ತಕಂಡೋಗಿ ಅಂವ ಸಾಂಕಿತ್. ಸಾಂಕಿ ಸಾಂಕಿ ಮಕ್ಕ ಎಲ್ಲ ದೊಡ್ಡದಾದೊ. ದೊಡ್ಡದಾಗಿ ಏನೋ ಆಗಿ ಅವುಕೆ ಹೀಂಗಿಂಗೆಂತ ಸುದ್ದಿಯಾತ್. ಒಂದು ಕಡೆ ಇಷ್ಟ್ ಮಕ್ಕ ಒಳೊ. ಅದ್ ಅಂದರೆ ಏನು ಮಾಡ್ದು ಅವರ ಕರ್‍ಲೊಕು. ಹೆಂಗೆ ಕರ್‍ಸುದು? ಸಾಂಮ್ರಾಜನ ಊಟ ಕೊಡ್ಸುದುಂತ ಆತ್. ಹಾಂಗೆ ಅವ್ಕೆ ಎಲ್ಲಾ ಓಲೆ ಕಳ್ಸಿತ್. ಬಂದ್ ನೋಡ್ಕನ ಇದ್ಕೆ ಇದ್ ನನ್ನ ಮಕ್ಕಳೇಂತ ಆತ್. ಏನೋ ಮೋಸ ಇರೊಕುಂತ ಈ ಅಯ್ಯೆ ಬಂದ್ ಅವರ ನೋಡ್ಕನ ಅಯ್ಯೆಗೆ ಬಾರಿ ಬೇಸರ ಕಂಡತ್ ಗಡ. ಇದ್ ನನ್ನ ಮಕ್ಕಳೇ. ಇವು ಏನೋ ಅಕ್ಕಂದಿರ್ ನನ್ನ ಮೋಸ ಮಾಡ್ದ್ಯೊಳಾಂತ. ಆಗ ಅದರ ಹೆಂಗೆ ಇನ್ನ್ ಇತ್ಯರ್ಥ ಮಾಡೋಕಲ್ಲ. ಅಂದರೆ ನನ್ನ ಮಕ್ಕ ಆದರೆ ಅವೆಲ್ಲ ಸಾಲಿಗೆ ನಿಲ್ಲಲಿ. ಏನಾರ್ ಬಟ್ಟೆ ಅಡ್ಡ ಹಿಡ್ದ್ ನಿಲ್ಲಿ. ನಾ ಮೊಲೆ ಹಾಲ್ ಹಿರ್ದನೆ. ಆ ಮೇಲೆ ಹಾಲ್ ನನ್ನ ಮಕ್ಕ ಆದರೆ ಪೂರ ಮೇಲೆಲ್ಲ ಬೀಳ್ದು. ನನ್ನದ್ ಅಲ್ಲದೆ ಬೀಳಿಕಿಲ್ಲೆ ಹಾಂಗೆ ಆತ್‌ಂತ ಆತ್. ಹಾಂಗೆ ಮಾಡ್ತ್. ಅದರ ಮೊಲೆ ಹಾಲ್ ಮಕ್ಕಳ ಮೇಲೆಲ್ಲ ಬೀತ್. ಬಿದ್ದಲ್ಲಿಗೆ ಮಕ್ಕಳ್‌ಂತ ಆತಲ್ಲ. ಕಡೆಗೆ ಅರ್‍ಸ್ ಮುಂದೆನ ಎರಡ್ ಅಬ್ಬೆಗಳೊಟ್ಟಿಗೆ ಕೇಳ್ತ್. 'ಸತ್ಯ ಸಂಗತಿ ನೀವು ಹೇಳೊಕು'ಂತ. ಅವು ಹೇಳ್ದೊ 'ನಾವು ಹೀಂಗೀಗೆ ಮಾಡ್ದ್'ಂತ. ಈ

ಅಬ್ಬೆಗಳ ತಕೊಂಡೋಗಿ ಮೂರು ದಾರಿ ಕೂಡುವಲ್ಲಿ ತಲೆ ಕಡ್ಸಿತ್ ಗಡ ಅಂವ. ಮತ್ತೆ ಈ ಹೆಣ್ಣ್‌ನೂ, ಮಕ್ಕಳೂ ಅರ್ಸನೂ ಸುಖಾಲಿ ಒಳೊಗಡ. ನೀವು ಹೋಗಿ ನೋಡಿಕೊಂಡ್ ಬರೊಕಡ.[ಕತಾ ನಿರೂಪಕಿ:ದೇವಕಿ ಅಮ್ಮೂರು; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 52.ತೋಳ – ಬೆಳ್ಳಕ್ಕಿ – ಇರುವೆ – ಕಪ್ಪೆ ಸಹಾಯಕರಾದ ಕತೆ

ಒಂದು ಓಡಾರಿನೂ ಓಡಾರ್‍ತಿನು. ಅವು ಮೊಡ್ಕಗೆ ಮೊಣ್ಣಿಗೆ ಹೊರ್‍ಟ್ಬೊಳ. ಹೊರ್‍ಪ್ದಾಕನ ಅದ್ ಬೊಸ್ರಿ ಹೆಂಗ್ಸ್. 'ನಾ ಬಾದ್ಲೆ'ಂತ ಹೇಳ್ತ್. ಅಂವ ಒತ್ತಾಯ ಮಾಡಿ ಕರ್‍ಕಂಡ್ ಹೋಗಿದ್ ಆಕನ ಅಲ್ಲಿ ಮೊಣ್ಣು ತುಂಬ್ಸಿಕನ ಇದ್ಕೆ ಬೇನೆಬಾತ್. ಬೇನೆ ಬಂದಾಕನ ಓಟೆ ಹಿಂಡ್‌ಳ್‌ನ ಅಡಿಲಿ ಅದ್ ಹೆತ್ತತ್. ಹೆತ್ತ್‌ದಾಕನ ಈ ಕೂಸ್‌ನ ಬುಡಿಕೆ ಮನಸ್ಸ್ ಬಂದದೆಯೋ. ಇಂವ ಎರಡ್ ಹೆಡಗೆಲಿ ಮೊಣ್ಣು ತುಂಬ್ಸಿತ್. ಹೊರ್‍ಸಿತ್. ಆಗ ಹೇಳ್ತ್, 'ಕೂಸುನ ತಕೊನ್ದು ಬೇಡನಾ'ಂತ. ಆದು ಬೇಡಾಂತ ಹೇಳ್ತ್. 'ನಾ ಚರ್‍ಕಿಕೊನೆ'ಂತ ಹೇಳ್ತ್. 'ಚರ್‍ಕಿಕೊಂಡರೆ ಒಂದು ಮುದ್ದೆ ಮಣ್ಣು ಹೋದ್ಲೆನಾ'ಂತ ಹೇಳ್ತ್. 'ಅಂದರೆ ಮೊಟ್ಟೆಲಿ ಕಟ್ಟಿಕೊನೆ'ಂತ ಹೇಳ್ತ್. 'ಮೊಟ್ಟೆಲಿ ಕಟ್ಟಿಕೊಂಡರೆ ಒಂದು ಮುದ್ದೆ ಮೊಣ್ಣು ಹೊಕಿಲ್ಲೆನಾ'ಂತ ಕೇಳ್ತ್. ಮತ್ತೆಂತರ ಮಾಡ್ದು ಆ ಓಟೆ ಬುಡಲಿ ಹಾಕಿತ್ ಇದ್. ದರ್‍ಗ್ ಮುಚ್ಚಿತ್ ಇದ್ ಬಾತ್. ಬಂದ್‌ದ್ ಇಂವ ಇತ್ತ್.

ಅಷ್ಟೊತ್ತಾಕನ ಮೂರು ಚೆನ್ನನಾಯಿಗ ಬಂದೊ. ಮೂರು ಚೆನ್ನನಾಯಿ ಬಾಕನ ಈ ಕೂಸು ಮರ್‍ದುದು ಕೇಳ್ದೆ. ಓ ನನ್ನ ತಂಗೆ ನನ್ನ ತಂಗೆಂತ ಓಡಿ ಬಂದ್ ಚರ್‍ಕಿಕೊಂಡ ಅವು. ಚರ್‍ಕಿದಾಕನ ಅವು ಅದರ ಅವರ ಅರಮನೆಗೆ ತೆಕಂಡೋದೊ. ಬೇಟೆ ಆತ್ಲೆ. ಅಲ್ಲಿ ಸಾಂಕಿಕಂಡ್ ಇದ್ದೊ. ಹಾಲ್ ಕೊಟ್ಟ್‌ಕಂಡ್, ಮಾಸ ಕೊಟ್ಟ್‌ಕಂಡ್ ಹಿಂಗೆಲ್ಲ. ಹೀಂಗೆ ಅದ್ ದೊಡ್ಡದಾತ್ ದೊಡ್ಡ ಗೂಡೆ ಆತ್. ಮತ್ತೆ ಚಿನ್ನ ಮಾಡ್ಸಿದೊ. ಕೈಗೆ, ಕಾಲಿಗೆ, ಕೆಬಿಗೆ ಎಲ್ಲ ದಿಕ್ಕಿಗೂ ಅದ್ಕೆ ಚಿನ್ನ ಆತ್. ತಲೆ ಕೂದಲಿಗೆ ಮುತ್ತು ಚುರಿಯೊಕುಂತ ಹೇಳ್ದೊ ಅಣ್ಣಂದರ್. ಹಾಂಗೆ ಒಂದು ಕಲ್ಲ್‌ಗುಂಡೊ ಕಟ್ಸಿದೊ. ಅದರ ಒಳಗೆ ಇದರ ಹಾಕಿದೊ. ಆರ್ ತಿಂಗಳ ಸೌದೆನೂ ಮಾಡ್ದೊ. ಆರ್ ತಿಂಗಳ ಕಿಚ್ಚಿನೂ ಇಸಿದೊ. ಮಡ್ಲ್ ಎಲ್ಲಾ ತಂದ್ ಇಸಿದ್ ಅವು ಹೋದೊ. ನಾವು ಮುತ್ತು ತಂದವೆ ತಂಗೆ ನಿಂಗೆಂತ ಹೇಳಿದ್.

ಹೋಗಿದ್ ಹೋಗಿದ್ ಒಂದಾನೊಂದು ಊರಿಗೆ ಎತ್ತಿಕನ ಅವು ಮುತ್ತು ತಕಂಡ್ ಹೊರ್‍ಟೊ. ಹೊರ್‍ಡಿಕೆ ಆಕನ ಇದ್ಕೆ ಅಣ್ಣಂದರ್ ಹೇಳ್ಯೋಳ ನೀ ಎಲ್ಲಾ ಮಾಸನೂ ಕಿಚ್ಚಿ ಹಾಕಿರೂ ಈ ಮಾಸನ ಕಿಚ್ಚಿ ಹಾಕಿಕೆ ಬೊತ್ತ್‌ಂತ. ಇದ್ ಏನ್ ಮಾಡ್ತ್ ಮಾಸನ ಕಿಚ್ಚಿಗೆ ಹಾಕಿ ಬುಡ್ತ್. ಸಂದ್ ಸಂದ್‌ಗೆ ಕಿಚ್ಚಿ ಹಾಕಿತ್. ಕಿಚ್ಚಿ ಸುಟ್ಟೇ ಹೋತ್. ಕಿಚ್ಚಿ ಉಟ್ಟ ಇದ್ಕೆ? ಏನ್ ಮಾಡ್ರು ಕಿಚ್ಚಿ ಎಲ್ಲಿಂದ ತಾದು? ಎಲ್ಲೂ ಇಲ್ಲೆ? ಹೋತ್. ಹೋಗಿ ಹೋಗಿ ದೊಡ್ಡಾ ಒಂದು ಕಾಡಿಗೆ ಹೋತ್. ಕಾಡಿಗೆ ಹೋದರುನೂ ಎಲ್ಲೂ ಇದ್ಕೆ ಕಿಚ್ಚಿ ಕಾಂಬೊದ್ಲೆ. ಒಂದು ಮರದ ಕೊಡಿಗೆ ಹತ್ತಿ ನೋಡ್ತ್. ಹತ್ತಿ

ನೋಡ್ಕನ ಒಂದು ದಿಕ್ಕ್‌ಂದ ಒಂದು ಕಾಡ್‌ಂದ ಒಂದು ದೂಜಿಯಷ್ಟ್ ಹೊಗೆ ಹೋದೆ. ಅಲ್ಲಿಂದ ಇಳ್ತ್ ಹೋತಲ್ಲಿಗೆ ಸೀದಾ. ಹೋತ್ ಹೋಗಿ ಆಕನ ಒಂದು ರಕ್ಕಸಿ ಅಜ್ಜಿನ ಮನೆಗೆ ಹೋತದ್. ರಕ್ಕಸಜ್ಜಿನ ಮನೆಗೆ ಹೋಕನ ಆ ರಕ್ಕಸಿ ಅಜ್ಜಿ ಹೇಲಿಕೆ ಹೋಗುಟು. ಹೋಗಿ ಬಾಕನ ಒಂದು ಮಗ ಉಟ್ಟು ಅದ್ಕೆ. ಆ ಮಗ ಏನ್ ಮಾಡ್ತ್. ಇದರ ನೋಡ್ಕನ ಆಸೆ ಆತ್ ಅದ್ಕೆ. ಹೇ ನನ್ನ ಅಯ್ಯೆ ಇದ್ದರೆ ತಿಂದ್ ಬುಟ್ಟಿದ್ದ ಅಲ್ಲೆಂತ ಆಸೆ ಆತ್ ಅದ್ಕೆ. 'ಎಂತಕೆ ಬಂದದ್'ಂತ ಕೇಳ್ತ್. 'ನಂಗೆ ಕಿಚ್ಚಿ ಬೇಕ್ ಅಕ್ಕ'ಂತ ಹೇಳ್ತ್. 'ಕಿಚ್ಚಿ ಕೊಡೊಕಾರೆ ಒಂದು ಹೊರೆ ಸೀರೆಕೊಟ್ಟತ್. ನೀ ಈ ಸೀರೆನ ಬೆಳ್ಳಂಗೆ ಮಾಡಿ ತರೊಕು. ಮತ್ತೆ ನಿಂಗೆ ಕಿಚ್ಚಿಕೊಟ್ಟನೆ'ಂತ ಹೇಳ್ತ್. ಇದ್ಕೆ ಒಗ್ಗುಕೊಡಿಕೆ ತೀರ್ದುಲೆ. ಇದ್ ನೆನ್ಸಿತ್ 'ಯಾರ್ ಮಾಡಿದ ಧರ್ಮ ಇಲ್ಲಾರು ನನ್ನ ಅಪ್ಪಯ್ಯ ಮಾಡಿದ ಧರ್ಮಲಿ ಆದರೂ ನಂಗೆ ಸೀರೆ ಬೆಳ್ಳಂಗೆ ಮಾಡಿಕೊಡಿಕೆ ಸಾಯ ಆಗಲಿ'ಂತ ಹೇಳ್ತ್. ಕೊರುಂಗುಗ ಬಂದೊ. 'ಯಾಕೆ ಮರ್ದುದಕ್ಕಾ ?' ಅಂತ ಕೇಳ್ತ್. 'ಇಂದ ನಂಗೆ ಮಸಿ ಹಿಡ್ದ ಸೀರೆ ಕೊಟ್ಟೊಳೊ. ಬೆಳ್ಳಂಗೆ ಮಾಡಿಕೊಡೊಕಡ'. ಅವು ಬಂದೊ ಜಬ್ಬು ಜಬ್ಬಿ ಹಾಕಿ ಅದರ ಬೆಳ್ಳಂಗೆ ಮಾಡಿ ಕೊಟ್ಟೊ.

ಹಿಂದಕ್ಕೆ ತಂದ್ 'ನಂಗೆ ಕಿಚ್ಚಿ ಕೊಡೂ'ಂತ ಹೇಳ್ತ್. 'ಓ ನಿಂಗೆ ಕಿಚ್ಚಿ ಕೊಡೊಕೊ. ನಂಗೆ ಇದ್ ಒಂದು ಮುಡಿ ರಾಗಿದನೂ ಒಂದು ಮುಡಿ ದಾಸ್ಮೆನೂ ಬೆರ್ಸಿಕೊಟ್ಟತ್. ಇದರ ಹೆರ್ಕಿದ್ ಬೇರೆ ಬೇರೆ ಮಾಡಿ ಕೊಡೊಕೂ'ಂತ. ತಕಂಡೋತ್ ಕೊಟಗೆಲಿ ಕುದ್ದುಕಂಡ್ ಮರ್ಟತ್. ಅಷ್ಟೊತ್ತಾಕನ ಪಿಜಿನ್‌ಗ ಬಂದೊ. 'ನೀ ಯಾಕಕ್ಕ ಮರ್ದುದು. ಅಯ್ಯೊ ನಂಗೆ ಈ ರೀತಿನ ಕಷ್ಟಕೊಟ್ಟೊ. ಇದರ ಬೇರೆ ಬೇರೆ ಮಾಡಿ ಕೊಡೊಕಡಾ'ಂತ ಆತ್. 'ಅಯ್ಯೊಕ್ಕ ನೀ ಯಾಕೆ ಮರ್ದುದು ನಾವು ಬೇರೆ ಬೇರೆ ಮಾಡಿಕೊಟ್ಟವೆ'ಂತ ಹೇಳ್ದೊ. ತುಂಬ ಪಿಜಿನ್‌ಗ ಸೇರಿ ಬೇರೆ ಬೇರೆ ಮಾಡಿಕೊಟ್ಟೊ. ದಾಸ್ಮೆ ಬೇರೆ ರಾಗಿ ಬೇರೆ ಮಾಡಿಕೊಟ್ಟೊ. ಮಾಡಿಕೊಟ್ಟದ್ 'ಕಿಚ್ಚಿ ಕೊಡಕ್ಕಾ'ಂತ ಕೇಳ್ತ್. ಅಷ್ಟಾಕನ ಒಟ್ಟೆ ಮಡ್ಕೆಕೊಟ್ಟತ್. ಇದರ ನೀರಡಿಗೆ ಇಸಿದ್. ನೀರ್‌ಕೂಡಿದ್ ಬಾ. ಮತ್ತೆ ನಾ ಕಿಚ್ಚಿ ಕೊಟ್ನೆಂತ ಹೇಳ್ತ್. ಅಷ್ಟರವರೆಗೂ ಅಯ್ಯೆ ಬಾತ್ಲೆ. ಈ ನೀರ್ ಕೂಡ್ದಾಗೆ ಈ ಮಡಿಕೆಲಿ ಹೋತ್. ಎಂತದ ಮಾಡ್ದು ಅಷ್ಟೊತ್ತಾಕನ ಕಪ್ಪೆಗ ಬಂದೊ. 'ನೀ ಯಾಕೆಕ್ಕ ಮರ್ದುದುಂತ ಹೇಳ್ದೊ'. 'ಇಂದ ನಂಗೆ ಒಟ್ಟೆ ಮಡಿಕೆ ಕೊಟ್ಟೊಳದ್ ನೀರ್ ಕೂಡಿಕೆ. ಅದರಂದ ಹೇಂಗೆ ನೀರ್ ಕೂಡಿಕೊಡ್ದೂ'ಂತ ಹೇಳ್ತ್. ಅದ್ಕೆ ಒಂದು ದೊಡ್ಡ ಕಪ್ಪೆಹೋತ್. ಒಟ್ಟೆಗೆ ಅಡ್ಡ ಕುದ್ದತ್. ಮತ್ತೆ ನೀರ್ ಕೂಡಿದ್ ಬಂದ್ 'ಕಿಚ್ಚಿ ಕೊಡಕ್ಕಾ'ಂತ ಕೇಳ್ತ್. ಈ ಮೂರರ್ಲೊ ಅಯ್ಯೆ ಬಾತ್ಲೆಲ್ಲಂತ ಹೇಳ್ತ್ ಕಿಚ್ಚಿ ಕೊಟ್ಟತ್. ಕಿಚ್ಚಿ ಕೊಟ್ಟದ್ ಒಂದು ಓಡು ಹೊದ್ರಿ ಹೊರ್ದ್ ಅದರ ಕೈಲಿ ಕೊಟ್ಟತ್. 'ಇಂದ ಈ ಹೊದ್ರಿನ ನೀ ಹೋವ ದಾರಿ ಪೂರ ಹರ್ಡಿಕಂಡ್ ಹೋಕ್ ಬಲಾ'ಂತ ಕಿಚ್ಚಿ ಕೊಟ್ಟತ್. ಇದ್ ಸಾಧಾರಣ ಒಂದು ಅರ್ಧದಾರಿಗೆ ಎತ್ತಿಕನ ರಕ್ಕಸಜ್ಜಿಬಾತ್. ಹಾಂ...ಮೊನ್ಸನ ಮೂರಿ ಬಂದದೆ. 'ಒಂದು ಗೂಡೆ ಬಂದಿತ್ತ್'. 'ಎಂತಾ

ಗೂಡೆ ಗೊತ್ತುಟ ತಿಂದ್ ಬುಡೊಕ್ಕಾಗಿತ್ತ್. ಅಷ್ಟ್ ಲಾಯಿಕಿತ್ತ್ ಗೂಡೆ'ಂತ ಹೇಳ್ತ್. ನಾ ಹೊದ್ರಿ ಹೊರ್ದು ಕೊಟ್ಟೊಲೆ. ಹೋಗ್ ಅದೇ ದಾರ್ಲಿಂತ ಹೇಳ್ತ್. ಇದ್ ಆ ದಾರಿಲೇ ಬಾತ್. ಬಂದ್ ಎತ್ತಿದಾಂಗೆ ಇದರ ಆರ್ಭಟೆ ಕೇಳ್ತ್ ಗೂಡೆಗೆ. ಇದ್ ಬಾತ್ ಬಾಗಿಲ್ ಪಕ್ಕ ಹಾಕನ್ತ್ ಕಿಚ್ಚಿ ತೆಕಂಡ್.

ಅಷ್ಟೊತ್ತಿಗೆ ಒಬ್ಬ ಅಣ್ಣ ಚಾಲೆ ನೆಟ್ಟ್ ಹೋಗುಟು, ಒಬ್ಬ ಹಣ್ಸ್‌ನ ದೈ ನೆಟ್ಟ್ ಹೋಗುಟು. ಮತ್ತೊಬ್ಬ ಒಂದು ಬಾಳೆ ನೆಟ್ಟ್ ಹೋಗುಟು. ಈ ಮೂರು ಜನ ಅಣ್ಣಂದರೂನು ಇದ್ ಬಾಗಿಲ್‌ತೆಗಿ ಬಾಗಿಲ್ ತೆಗಿಂತ ಹೇಳ್ತ್. ಬಾಗಿಲ್ ತೆಗ್ತ್‌ಲೆ. ಅಷ್ಟೊತ್ತಾಕನ ಹೇಳ್ತ್ "ಮುತ್ತಿಗೋದರು ಬಂದಾರಕ್ಕ ಬಾಗಿಲ್ ತೆಗಿ ರಾಮದೇಯೀ" ಅಂತ ಹೇಳ್ತ್. ಅಷ್ಟೊತ್ತಾಕನ ಚಾಲೆ ಹೇಳ್ತ್ "ಮುತ್ತಿಗೋದವರು ಬರ್ಲಿಲ್ಲಕ್ಕ ಬಾಗಿಲ್ ತೆಗಿಬೇಡ ರಾಮದೇಯೀ"ಂತ. ಹಾಂಗೆ ಮೂರು ಸರ್ತಿ ಹೇಳ್ಕನನೂ ಚಾಲೆ, ಹಣ್ಸ್‌ನ ಮರ, ಬಾಳೆದೈ ಎಲ್ಲಾವೂ ಇಲ್ಲೆಂತ ಹೇಳ್ವೆ ಅಷ್ಟಾಕನ ಹೋತ್. ಬಾಳೆನ ಮೊಟ್ಟೆದ್ ಸಿಗ್ದ್‌ದ್ ಹಾಕಿ ಬಾತ್. ಮೂರರ್‍ನೂ ಸಿಗ್ದ್ ಬಾತ್.

ಎರಡ್ನೆ ಅಷ್ಟೊತ್ತಾಕನ ಅಣ್ಣಂದರು ಎತ್ತಿದೊ. ಅಣ್ಣಂದರ್ ಬಂದ್ ಹೇಳಿದೊ 'ಮುತ್ತಿಗೋದವರು ಬಂದಾರಕ್ಕ ಬಾಗಿಲ್ ತೆಗಿ ರಾಮದೇಯೀ'ಂತ. ಇದ್ಕೆ ಬಾಗಿಲ್ ತೆಗಿಯಕೆ ಧೈರ್ಯ ಬಾತ್ಲೆ. ಅಷ್ಟೊತ್ತಾಕನ ಹಣ್ಸನ ಮರದ ಗೆಲ್ಲ್, ಚಾಲೆ, ಬಾಳೆ ದೈ ಎಲ್ಲ ಹೇಳ್ದೊ "ಮತ್ತಿಗೋದವರು ಬರದಾರಕ್ಕ ಬಾಗಿಲ್ ತೆಗಿ ರಾಮದೇಯಿ"ಂತ. ಬಾಗಿಲ್ ತೆಗ್ತ್. ಬಾಗಿಲ್ ತೆಗ್ದ್ ಬಟ್ಲ್‌ಲಿ ಹಾಲ್, ಗಿಂಡ್ಯೆಲಿ ನೀರ್ ತಕಂಡ್ ಅಣ್ಣನವರ ಹಕ್ಕಳೆ ಬಾಕನ ಈ ರಾಕ್ಷಸಜ್ಜಿ ಇಸ್ಸದ ಹಲ್ಲ್‌ನ ಬಾಗಿಲಿಗೆ ಕುತ್ತಿ ಇಸಿಟ್ಟು ದಾರ್ಲಿ ಬಂದ್ ಕಾಲಿಸಿತ್ ಅದ್ಕೆ. ಗೂಡೆ ಅಡ್ಡ ಬೀತ್. ಅಣ್ಣಂದರ್ ತಲೆ ಕಾಲ್ ಬಿದ್ದ್ ಮರ್‍ಗೊ. ಮರ್‍ಗೊದಾಕನ ಇದ್ ಅಡ್ಡ ಬಿದ್ದ್ ಸತ್ತೇಹೋತ್. ಸತ್ತ್ ಹೋದ ಮೇಲೆ ಎಂತರ ಮಾಡ್ದು. ಚಿನ್ನಾದ ಚಿನ್ನ ಎಲ್ಲ ನಮ್ಮ ತಂಗೆಗೆ ನಾವು ಮಾಡ್ಸಿದೊ ತಲೆಕೂದಲಿಗೆ ಒಂದು ಮುತ್ತು ಸುರಿಯೊಕುಂತ ನಾವು ಗೇಣ ಮಾಡಿ ಹೋಗಿದ್. ಬಾಕನ ಹಿಂಗೆ ಆಗಿ ಹೋತಲ್ಲೆಂತ ಒಳ್ಳೊ ಮರ್‍ಗೊ ಅವು. ಇನ್ನೆನು ಮಾಡ್ದುಂತ ಬಾಗಿಲ್‌ಲಿ ದೊಡ್ಡ ಒಂದು ಕಾಟ ಕೂಡ್ಸಿದೊ. ಇದರ ತಕೊಂಡೋಗಿ ಇಸಿದೊ. ಇಸಿ ಕಿಚ್ಚಿ ಕೊಟ್ಟ್ ಅವು ಹಹಾಂತ್ರಿ ಹೊಡೋ.[ಕತಾ ನಿರೂಪಕಿ:ಹೇಮಲತ ನೆಡ್ಜಿಲ್; ಸ್ಥಳ:ಮನೆ; ಸಮಯ ಹಗಲು; ವರ್ಷ–1991]

## 53.ಸಹಾಯಕನಾದ ಸರ್ಪದ ಕತೆ

ಒಂದು ಗಂಡ ಹೆಣ್ಣ್. ಅಂವಂಗೆ ಎರಡ್ ಮಕ್ಕ. ಅಂವಂಗೆ ಮುಂದೆ ಮೊದ್ವೆ ಆಗಿ ಹೆಣ್ಣು ಸತ್ತುಟ್ಟು. ಮತ್ತೊಂದು ಹೆಣ್ಣ್‌ನ ತಂದದ್. ಆ ಮುಂದೆದರ್ಲಿ ಒಂದು ಗೂಡೆ. ಆ ಗೂಡೆನ ಬೇಕಾದಷ್ಟ್ ಬಂಜ ಬರ್ಸುದು. ಸಣ್ಣಯ್ಯೆ ಮಗಳಿಗೆ ಉಂಬಕೆ ತುಪ್ಪ ಹೊಯ್ದ್ ಕೊಡ್ದು. ತಬ್ಬ

ಗೂಡೆಗೆ ಎಣ್ಣೆ ಹೊಯ್ದ್ ಕೊಡ್ದು. ಅವ್ಕೆ ಎರಡ್ ಗೋದಿಗೆದ್ ಕಂಬ ಉದ್ದಿಕೆ. ಈ ತುಪ್ಪ ಹೊಯ್ದು ಗೂಡೆ ಉದ್ದಿದ ಕಂಬ ಬೂದಿ ಹರ್ತ್. ಇದ್ ಉದ್ದಿದ ಕಂಬ ಲಾಯ್ಕತ್. ಎಣ್ಣೆನಂಗೆ ಆತ್. ಹಾಂಗೆ ಇದ್ ಆಕನ ಒಂದು ದಿನ ಗೂಡೆನ ಏನ್ ಮಾಡ್ದೊ. ಇದರ 'ನೀ ಕಡ್ಯಕ್ಕಿನ ತೊಳ್ಕಂಡ್ ಬರೊಕು'ಂತ ಒಟ್ಟೆ ಚಿಪ್ಪಿಲಿ ಕಡ್ಯಕ್ಕಿ ಕೊಟ್ಟತ್. 'ನೀರ್ಲಿ ಹೋಗಿ ತೊಳ್ಕಂಡ್ ಬರೊಕು'ಂತ. ಇದ್ ಆಲೋಚನೆ ಮಾಡ್ತ್, 'ಹೆಂಗೆ ತೊಳ್ಕಂಡ್ ಬಾದೂ?' ಇದ್ ತೊಳ್ಕಂಡ್ ಬಾಕ್ಕೆ ನೀರಿಗೆ ಹೋಕ್ಕನ ಅದ್ ಎಲ್ಲ ಹೋತ್. ಈ ಕಡ್ಯಕ್ಕಿ ಹೋದಾಂಗೆ ಗೂಡೆನು ಹೋತ್. 'ನಿತ್ಯಕ್ಕಾ ನಿತ್ಯಕ್ಕಾ ನಾ ಬನ್ನೆ ನೀ ನಿಲ್ಲ್ಂತ'. ಇದ್ ನಿಂತದೆಯಾ. ಹೋತ್ ಹಾಂಗೇ ಹೇಳಿಕಂಡ್. ಎಲ್ಲಿನೂ ಅದ್ ನಿಂತದೆಯಾ, ಹೋತ್. ಹೋಗಿ ಹೋಗಿ ಎತ್ತಿಕನ ದೊಡ್ಡಾ ಒಂದು ಪದವುಗೆ ಹೋತ್. ಅಡ್ಕಕೆ ಹೋಗಿದ್ ಅಲ್ಲಿ ಏನ್ ಮಾಡ್ತ್ಯೊಳ ಆ ದಾರಿಲಿ ಕೃಷ್ಣದೇವರ್ ಹನ್ನೆರಡ್ ಕರ್'ಗಳ ಮೀಸಿಕಂಡ್ ಒಳೊ. ಅಲ್ಲಿ ಹೋಗಿದ್ ಆಕನ ಇದ್ ಹೇಳ್ದೆ ಅಲ್ಲಿ 'ನಿತ್ಯಕ್ಕಾ ನಿತ್ಯಕ್ಕಾ ನಾ ಬನ್ನೇ ನೀ ನಿಲ್ಲ್'ಂತ. ಮತ್ತೆ ಎತ್ತ್‌ಕನ ಹೊತ್ತ್ ಹಿಂಬೊತ್ತಾತ್. 'ನೀ ಎಂತದ್ ಹೇಳ್ದು'ಂತ ಹೇಳ್ದೊ. 'ನನ್ನ ಕಡ್ಯಕ್ಕಿ ಹೋತ್. ಅದಕ್ಕೆ ನಾ ಹೇಳ್ದು. ನಿಲ್ಲ್ ನಾನು ಬನ್ನೆ'ಂತ. 'ಅದು ಹೋದೆ'. ಅದ್ ಹೋಗಲಿ ನೀ ಬಾಂತ ಹೇಳ್ತ್.

ಅವು ಏನ್ ಮಾಡ್ದೊ. ಓ ಅದರ್ಲೆ ನಂಗ ಒಳೊ. ಅದರ ಎಲ್ಲ ಹೊಡ್ಕಂಡ್ ಬಾ ಪೊಯಿ ನಾವು ಮನೆಗೆಂತ ಹೇಳ್ದೊ. ಇದ್ ಹೊಟ್ಟೆ ಇಸುವ ಮರ್ಕಕೆ ಸಾಬಾನ್‌ನ ತೆಗ್ತ್ ಹನಿಹನಿ ಕೈ ಕಾಲ್ ಎಲ್ಲ ತೊಳ್ತ್ ಇದ್ ಬಾತ್. ಮತ್ತೆ ಬಂದಾಕನ ಕೇಳ್ದೊ 'ನಿಂಗೆ ಕಡ್ಯಕ್ಕಿ ಗಂಜಿ ಅಕ್ಕೊ, ದೇವರಿಗೆ ಮಾಡಿದ ನೈವೇದ್ಯ ಅಕ್ಕೊ, ಒಳ್ಳೊಕ್ಕಿ ಗಂಜಿ ಅಕ್ಕ್'ಂತ ಕೇಳ್ದೊ. 'ನಂಗೆ ಕಡ್ಯಕ್ಕಿ ಗಂಜಕ್ಕ್'ಂತ ಹೇಳ್ತ್. ಅಪ್ಪೊತ್ತಾಕನ ಮತ್ತೆ ಕೇಳ್ದೊ. 'ನಿಂಗೆ ಕೋಳಿ ಗೂಡಕ್ಕೊ. ನಾಯಿ ಹೆಡಗೆಕ್ಕೊ'. ಹಾಸಿಕ್ಕೆಂತ ಕೇಳ್ದೊ. 'ನಂಗೆ ನಾಯಿ ಹೆಡಗೆನಕ್ಕ್'ಂತ ಹೇಳ್ತ್. ಇದ್ಕೆ ಹಾಸಿಗೆ ತಂದ್ ಕೊಟ್ಟೊ. ಮಾರನೆ ದಿನ ಏನ್ ಹೇಳ್ದೊ. ಮಾರನೆ ದಿನ ಬೊಳ್ಪಿಗೆ ಒಂದು ಕರಡಿಗೆನ ಕೊಟ್ಟೊ ಅದರ ಕೈಲಿ. ಅದರ್ಲಿ ಚಿನ್ನ ನಾಣ್ಯ ಎಲ್ಲ ತುಂಬಿಸಿ ಕೊಟ್ಟೊ. 'ಇದರ ನೀ ಹೋಗ್ ತಕಂಡ್'ಂತ ಹೇಳ್ದೊ. ಹೋಗಿದಾಕನ 'ಹೋ ಬಾತ್ಯ. ಗೂಡೆ ಬಾತ್ ತಕಂಡ್‌ಬಾತ್'. 'ಸಣ್ಣಯ್ಯೆನ ಕೈಲಿ ಕೊಡ್'ಂತ ಹೇಳ್ತ್. ಸಣ್ಣಯ್ಯೆನ ಕೈಲಿ ಕೊಟ್ಟತ್. ಇದ್ ನೋಡ್ಕನ ಎಂತದ್ ಚಿನ್ನ ನಾಣ್ಯ. ಅದ್ ಎಲ್ಲ ರುಪಾಯಿ ಎಲ್ಲ ಉಟ್ಟು. 'ಹೋ ಇದ್ ತಕಂಡ್ ಬಾತ್'ಂತ ಹೇಳಿ ಮಾರನೆ ದಿನ ಅದರ ಕೈಲಿ ಕೊಟ್ಟತ್. ಮಗಳ ಕೈಲಿ. ಚಿಕ್ಕಮ್ಮನ ಮಗಳ್‌ನೂ ಹಾಂಗೆ ಹೋತ್. 'ನಿಚ್ಚಕ್ಕಾ ನಿರ್ಯಕ್ಕಾ ನಾ ಬನ್ನೇ ನೀ ನಿಲ್ಲ್'ಂತ. ಇದ್ ನಿಂತದೆನಾ ಇಲ್ಲೆ. ಹೇಳಿ ಹೇಳಿ ಹೋಕೆ ಆಕನ ಮಾರನೆ ದಿನನೂ ಹೋದ್ದ್ ಅಲ್ಲಿಗೆ. ಈ ಗೂಡೆ ಹೋತ್ಲೆ. ಈ ಗೂಡೆ ಹೋಕನ ನಾನೂ ಕಡ್ಯಕ್ಕಿ ತೊಳ್ದೆ. ಅದ್ ಪೂರ ಹೋತ್. ಹೋ ಅದ್ ಹೋದರೆ ಹೋಗಲಿ. ಬಾಂತ ಹೇಳ್ದೊ. ಬಂದಾಕನ ಅದ ಅಲ್ಲಿ ದನಂಗ ಒಳೊ. 'ಅದರ ಹೊಡ್ಕಂಡು ಬಾ'ಂತ ಹೇಳ್ದೊ. ಹೊಡ್ಕಂಡ್

ಬಾತ್. 'ಹಟ್ಟಿಗೆ ಹೊಡ್ಕಂಡ್ ಕೂಡ್ಂತ ಹೇಳ್ದೊ'. 'ಕೂಡ್ತ್'. ಒಂದು ತುಂಡು ಸಾಬನ ಕೊಟ್ಟತ್ ಅದ್ಕೆ. 'ಸಾಬನ್ ಹಾಕಿ ಮಿಂದ್‌ಕೊಂಡ್, ಕೈಮೊರೆ ತೊಳ್ಕೊಂಡ್ ಬಾ'ಂತ. ಇದ್ ಏನ್ ಮಾಡ್ತ್ ಪೊರ್ಲು ಮೀತ್. ಪೊರ್ಲು ಸಾಬನ್ ಹಾಕಿತ್. ಪೊರ್ಲು ಲಾಯಿಕ್ ಎಲ್ಲ ಸೀರೆ ಎಲ್ಲ ಒಗ್ತ್. ಬಾತ್. ಬಂದ್ ಕೇಳ್ದೊ 'ನಿಂಗೆ ಗಂಜಿ ಎಂತದ್ ಕಡ್ಯಕ್ಕಿ ಆಕ್ಕೊ ದೇವ್ರಿಗೆ ಮಾಡ್ದ ನೇವೇದ್ಯ ಅಕ್ಕೊ'ಂತ. 'ಅಲ್ಲ ಒಳ್ಳೊಕ್ಕಿದ್ ಗಂಜಿ ಅಕ್ಕೊ'ಂತ. 'ನಂಗೆ ನೇದ್ಯ ಅಕ್ಕ್'ಂತ ಹೇಳ್ತ್. ಇದ್ಕೆ ಕಡ್ಯಕ್ಕೆ ಗಂಜಿ ತಂದ್ ಕೊಟ್ಟೊ. 'ನಿಂಗೆ ಮಲ್ಗಿಕೆ ಎಂತದ್ ಅಕ್ಕ್ ಹಂದಿಗೂಡು ಅಕ್ಕೊ, ನಾಯಿ ಹೆಡ್ಗೆ ಅಕ್ಕೊ, ಕೋಳಿಗೂಡಕ್ಕೊ ಹಾಸಿಗೆಕ್ಕ'ಂತ ಕೇಳ್ದೊ. 'ನಂಗೆ ಹಾಸಿಗೆ ಅಕ್ಕ್'ಂತ ಹೇಳ್ತ್. ಅದ್ಕೆ ನಾಯಿ ಹೆಡ್ಗೆ ತಂದ್ ಕೊಟ್ಟೊ. ಮಾರನೆ ದಿನ ಏಳ್ ಮಲೆಗೆ ಹೋದೊ. ಒಂದು ಕರಡಿಗೆ ತಕಂಡ್ ಹೋದೊ. ಹೋಗಿ ಏಳ್ ಜಡೆ ಸರ್ಪನ ತುಂಬ್ಸಿದೊ. ಇದರ ಕೈಲಿ ತಂದ್‌ಕೊಟ್ಟೊ. 'ಇಂದ ತಕಂಡೋಗಿ ನಿನ್ನ ಅಮ್ಮನ ಕೈಲಿ ಕೊಡ್ಬೇಡ'. 'ನೀ ತಕಂಡೋಗಿ ಅಕ್ಕಿ ಮಡಿಕೆಯೊಳಗೆ ಇಸೊಕು'ಂತ ಹೇಳ್ದೊ. ಹೋ ನನ್ನ ಮಗಳ್ ತಾತ್ಂತ ಹೇಳ್ತ್. ಬಾರಿ ಖುಷಿ ಆತ್. ತಂದ್ ಅಟ್ಟಲಿ ಅಕ್ಕಿ ಮಡಿಕೆಯೊಳಗೆ ಇಸಿತ್. ಇಸಿದ್ ಮಾರನೆ ದಿನ ಅಕ್ಕಿ ತೆಗಿಯಕೆ ಹೋಕನ ಅಯ್ಯೆಗೆ ಕೊಡ್ಡಿತ್. ಅಯ್ಯೆ ಸತ್ತತ್.[ಕತಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 54. ಸೌದೆ ಮಾರಂವ ಶ್ರೀಮಂತನಾದ ಕತೆ

ಒಂದು ಊರ್ಲಿ ಒಂದು ಪಾಪದಂವ ಹೇಳ್ರೆ ಒಂದು ಅಜ್ಜ. ಸೌದೆ ಹೊತ್ತ್ ಕೂಲಿ. ಅವನ ಹೊಟ್ಟೆ ಜೀವನಕೆ ಅಂವಂಗೊಂದು ಮಂಜ. ಅಯ್ಯೆ ಇಲ್ಲೆ. ಈ ಒಂದು ಹೊರೆ ಸೌದೆ ಹೊತ್ತ್‌ಕಂಡ್ ಹೋಗಿ ಅಂಗಡಿಗೆ ಮಾರಿ ಎಂಟಾನೆ ಸಿಕ್ಕಿರೆ ನಾಲ್ಕಾನೆ ಖರ್ಚುಮಾಡ್ದು. ಆಗ ನಾಲ್ಕಾನೆ ಎಂಟಾನೆ ಅಲ್ಲ. ಹಿಂಗೆ ಮಾಡಿ ಮಾಡಿ ಹೈದಂಗೆ ವಿದ್ಯೆ ಕಲ್ಸಿತ್. ಈ ಒಳ್ಸಿದ ದುಡ್ಡಿಲೇ ಅವಂಗೆ ವಿದ್ಯೆ ಕಳ್ಸಿತ್. ಆಗ ಇವನ ನೆರೆಕರೆಯವು ಬೇಕಷ್ಟ್ ದೊಡ್ಡ ದನಿಕರು (ಈಗ ಬೆಳ್ಯಪ್ಪಣ್ಣ ಇದ್ದ ಹಾಂಗೆ) ಆದರೆ ಏನಾದರ್ ಇದ್ದರೆ ಅಲ್ಲಿ ಹೋದರೆ ಇಷ್ಟಾದರ್ ಕೊಡದೆ ಇರಿಕಿಲ್ಲೆ. ಹಿಂಗೆ ಇದ್ದ್ ಕಲಿವಂತದ್ ಕಲ್ತತ್. ಅದರ ಅಪ್ಪ ಕಲ್ಸುವಂತಾದ್ ಆತ್. 'ಮಂಜ ಇನ್ನ್ ನೀ ಮೊದ್ವೆ ಆಕ್ಕು. ನನ್ನಂದ ಬೊತ್ತು ಸೌದೆ ಹೊರಿಕೆ. ನಾವ್ಗೆ ಗಂಜಿ ಬೇಯ್ಸಿಕೆ ಆತ್'. 'ನೀ ಹೋಗಪ್ಪ ಹೆಣ್ಣ್ ನೋಡಿಕೆ'ಂತ ಅಪ್ಪನ ಕಳ್ಸಿತ್.

ಈ ಅಪ್ಪ ಊರೂರು ತಿರ್ಗಿರೂ ಅಜ್ಜಂಗೆ ಒಪ್ಪುವ ಗೂಡೆ ಸಿಕ್ಕುದ್ಲೆ. ನನ್ನ ಮಂಜಂಗೆ ಈ ಗೂಡೆ ಅಕ್ಕ್ಂತೇಲಿ ಆತ್ಲೆ. ತಿರ್ಗಿ ಬಾತ್. ಏನಾತ್ ? ನಂಗೆ ಎಲ್ಲಿ ಹೋದರು ಗೂಡೆ ಇಲ್ಲೆ

ಒಂದು ದಿಕ್ಕಿಗೆ ಹೋದೆ ಅಯ್ಯೆ ಇಲ್ಲೆ. ಒಂದು ದಿಕ್ಕಿಗೆ ಹೋದೆ ಅಪ್ಪ ಇಲ್ಲೆ. ನಾ ಹಾಂಗೆ ತಿರ್ಗಿ ಬಂದೆ. ನೀನೇ ಹೋಗ್'. ಆಗ ಈ ಖರ್ಚಿಗೆ ತಕ್ಕ ದುಡ್ಡುನ. ಅಜ್ಜ ಗಂಟ್ ಕಟ್ಟಿಸಿಟು. ಮಾರನೆ ದಿನ ಹುಡುಗ ಹೊರ್ಬತ್. ಹೊರ್ಡ್ಕನ ನೂರು ರುಪಾಯಿ ಹಿಡ್ಕನ್ತ್. ಒಂದು ಕಡೆಗೆ ಹೋತ್. ಅಲ್ಲಿ ಹೋಕನ ಏನು ಮಾಡ್ವಂತ ಹೇಳ್ರೆ 'ಒಂದು ಎಲಿ ಮಾಳಿಗೆ ನಾಲ್ಕ್ ಜನ ಕೂಡಿಕೊಂಡು ಕಿಚ್ಚಿ ಹಾಕ್ಕಂಡ್ ತಿರ್ಗುವೆ'. ಅಲ್ಲಿ ಹೋಗಿ ಇಂವ ನಿಂತತ್. ಯಾಕೆ ನೆಣ್ಸ್? ಭತ್ತ, ಅಕ್ಕಿ ನಮ್ಮದ್ ಯಾವುದೂ ಮಡ್ಗುಗ್ದಿಲ್ಲೆ. ಅದರ ಕೊಲ್ಲದೆ ನಾವು ಬುಡಿಕಿಲ್ಲೆ. 'ಮಾರಾಯರೆ ನಾವು ಮಾಡ್ದರ ಅವು ಬುಡಿಕಿಲ್ಲೆ, ಮಾರಾಯರೆ ನಾವು ಮಾಡ್ದರ ಅವು ಜೀವನ ತೆಗಿಯಕ್ಕೆ ಇದ್ದವೇ ಅಲ್ಲ. ಆದ್ದರಿಂದಾಗಿ ಅವರ ಕೊಲ್ಲಿಕೆ ಬೊತ್ತ್'. 'ಅದಾಕಿಲ್ಲೆ ಇಂದೆನಿ ನೀವ್ಗೆ ನಾಲ್ಕ್ ಜನಕ್ಕೆ ನೂರು ರುಪಾಯಿಂತ ತೆಗ್ದ್ ಕೊಟ್ಟತ್'. ಅವು ಇದರ ತೆಕಂಡ್ ಹೋದೊ. ಇಂವ ಈ ಮಾಳಿ ಎಲ್ಲಿತ್. ನಾಲ್ಕ್ ಮೊರಿಗಳ ಹಿಡ್ಕಂಡತ್. ಎಲಿ ಮೊರಿಗಳ ತಕಂಡ್ ಬಾತ್. ಬಾಕನ ಅಪ್ಪ ಕೇಳ್ತ್ ಏನಾತ್ ಮಂಜಂತ. ನಂಗೆಲ್ಲೂ ಸರಿ ಆತ್ಲೆ ಅಪ್ಪ. ಅಂತೂ ನೂರು ರುಪಾಯಿ ಕೊಟ್ಟು ನಾಲ್ಕ್ ಎಲಿ ಮೊರಿಗಳ ತಕಂಡೆ. ಅಪ್ಪಂಗೆ ಸಿಟ್ಟ್ ಬಾತ್. ಏನ್ ಮಾಡ್ದು? ಎಲಿ ಮೊರಿಗಳ ಬುಟ್ಟತ್. ನಾಳೆ ಹೋನೆಂತ ಮಾರನೆ ದಿನ ಇಷ್ಟೇ ದುಡ್ಡ್ ತಕನ್ತ್.

ಮಾರನೆ ದಿನ ಒಂದು ಕಡೆ ಹೋತ್. ಅಲ್ಲಿ ಹೋಕನ ಹಿಂಗೆ ಅರ್ಸುನ ಮನೆ ಬಾಗಿಲ್‌ಲಿ ಒಂದು ದೊಡ್ಡ ಹುತ್ತ. ಆ ಹುತ್ತಕೆ ಪಾರ ಕುದ್ದೊಳೊ. ಅಲ್ಲಿ ಹೋಗಿ ಯಾಕೆಂತ ಕೇಳ್ಕನ ಇಂತದೊಂದು ಉಟ್ಟು ಇದರ್ಲಿ. ಒಂದು ಸರ್ಪ. ಆಗ ನಮ್ಮ ಹಸ್ ಮಕ್ಕ ಎಲ್ಲ ಅಲ್ಲಿ ಓಡ್ಯಾಡ್ದಲ್ಲ. ಅದ್ಕೆ ಹೆದರ್ಕೆ ಆತ್. 'ಅರ್ಸುಗಳ ಅಪ್ಪಣೆ ಆಗುಟು ನಾವ್ಗೆ. ಯಾವ ರೀತಿಲಾದ್ರು ಕೊಲ್ಲೊಕು'ಂತ ಹಾಂಗೆ ಕುದ್ದದ್. 'ಮಾರಾಯ ಸರ್ಪಂತ ಹೇಳ್ರೇ ಏನ್ ? ಅಂವ ಆದಿಶೇಷ. ಏನೇ ಅಂವಂಗೆ ಚೇಷ್ಟೆ ಆದರೆ ಮಾತ್ರ ಅಂವ ನಮ್ಮ ಚೇಷ್ಟೆಗೆ ಬಾದು. ಅಲ್ಲಂದ್ರೆ ಬಾಕಿಲ್ಲೆ'. 'ಅದರ ಬುಡೊಕು'. 'ಅದ್ ಆಕಿಲ್ಲೆ?''ಬುಡಿಕೆ ಆಕಿಲ್ಲೆ?''ಇಂದೆನಿ ನೀವ್ಗೆ ನೂರು ರುಪಾಯಿ'. ಅವ್ಕೂ ನೂರು ರೂಪಾಯಿ ಕೊಟ್ಟತ್. ಕಳ್ಸಿತ್. ಅದರ ಎದೂರಿಗೆ ದೂರಲಿ ಮಾಳಲಿ ಕುದ್ಕನ್ತ್.(ಇವಂಗೆ ಹೆದ್ರಿಕೆ ಉಟ್ಟು) ಇಂವ ಹೋಗಿ ಎಷ್ಟೊ ಹೊತ್ತಾದ ಮೇಲೆ ಅಂವ ಹೊರ್ಪ್ ಬಾತಲ್ಲಿಂದ. ಜೆಡೆ ತೆಗ್ದ್ ನಿತ್ತ್ ಹೇಳ್ತ್ 'ಯಾಕೆ ನೀ ಕುದಾ?' ಆಗ 'ನಿನ್ನ ಕೊಲ್ಲಿಕೆ ಬೇಕಾಗಿ ನಾಲ್ಕ್ ಜನ ಇಲ್ಲಿ ಕತ್ತಿ ಬೆಡಿ ಹಿಡ್ದ್ ಕೂತಿದ್ದೊ. ಅವ್ಕೆ ನಾ ನೂರು ರುಪಾಯಿ ಕೊಟ್ಟ್ ಅವರ ನಾ ಕಳ್ಸಿಯೊಳೆ. ನಿನ್ನ ಕೊಲ್ಲೊಕು'ಂತಲ್ಲ. 'ನಿನ್ನ ಪೊರ್ಲು ನಂಗೆ ನೋಡೊಕುಂತ ನಾ ಕುದ್ದಂವ ಇಲ್ಲಿ ಆತ್'ಂತ ಹೇಳ್ತ್. ವಾಪಾಸ್ ಮಾಳಕ್ಕೆ ಹೋತ್. ಅತ್ತಲೆ ಹೋಗಿದ್ ಒಂದು ಉಂಗುರ, ಒಂದು ಬೆತ್ತದ ಕೋಲು ತೆಕಂಡ್ ಇಂವ ಸರ್ಪ ಬಾತ್. 'ನಿಂಗೆ ಇದ್. ನಿಂಗೆ ಎಲ್ಲಿ ಇಷ್ಟ್ ಬಾತ್ ಅಂತ ಜಾಗೆ ನೋಡಿದ್ ನಿಂಗೆ ಏನೇನ್ ಬೇಕ್ ಅಂತದರ ಗೇಣ ಮಾಡಿ ಈ ಉಂಗುರನ ಬೆರ್ಳಿಗೆ ಹಾಕಿ ಈ ಬೆತ್ತಲಿ ಮೂರು ಬರೆ ಎಳಿಯೋಕು'. ಆತ್. ತೆಕಂಡ್ ಬಾತ್. ಇಲ್ಲಿ

ಬಂದಾಕನ ಅಪ್ಪ ಕೇಳ್ತ್, 'ಏನ್ ಇಂದಪ್ಪ ಹಿಂಗಿಂಗೆ ಕೊಟ್ಟ್‌ದ್ ಇಂತ ಒಂದು ಸರ್ಪ ನಂಗೆ ಎರಡ್ ಸೊತ್ತು ಕೊಟ್ಟುಟು'. ಅದ್ಕೂ ಇವಂಗೆ ಸಿಟ್ಟ್ ಬಾತಲ್ಲಿ. ದುಡ್ಡು ಎಲ್ಲಾ ಖರ್ಚಾದೆಂತ ಹೇಳಿ.

ಮಾರನೆ ದಿನ ಹೊನೆಂತ ಹೇಳ್ತ್. ಮಾರನೆ ದಿನ ನೂರು ರೂಪಾಯಿ ತಕಂಡ್ ಹೋತ್. ಮಾರನೆ ದಿನ ನೂರು ರುಪಾಯಿ ತಕಂಡ್ ಹೋತ್. ಮಾರನೆ ದಿನ ಹೋಕನ ಒಂದು ದಿಕ್ಕಿಲಿ ಬೊಮ್ಮಕ್ಕನಂತೆ ಇದ್ದವು ಕೊತ್ತಿಗೆ ಹಾಕಿ ಬೊಡ್ಡವೆ. ಯಾಕೆ ? 'ಹಾಲ್ ಮಡ್ಗಿದರ ಹಾಲೆಲ್ಲ ಕುಡ್ಡ್ ಬುಡ್ತದ್. ನಾವ್ಗೆ ಮೊಜ್ಜಿಗೆ ಇಲ್ಲೆ, ಹಾಲ್ ಇಲ್ಲೆ, ತುಪ್ಪ ಇಲ್ಲೆ, ಇದರ ಮೊಡ್ಗಿಕಿಲ್ಲೆ. ಕೊತ್ತಿನ ಎಲಿ ಬಂದರೆ ಹಿಡಿಯೊಕು. ಹೆಗ್ಗಣ ಬಂದರೆ ಹಿಡಿಯೊಕು ಹಾಲ್ ಕುಡ್ಡು ಬುಡ್ತ್'. 'ಅದ್ಕೆ ಅದ್ ಮಿನಿ ಆಕಿಲ್ಲೆ ನೀ ಹೋಗ್. ಇಂದ ನಿಂಗೆ ನೂರು ರುಪಾಯಿ. ಕೊತ್ತಿನ ಬುಟ್ಟ್ ನೂರು ರುಪಾಯಿ ತಕನ್ತ್, ಕೊತ್ತಿನ ಬುಟ್ಟತ್'. ಕೊತ್ತಿನ ಹಿಡ್ಕನ್ತ್ ಬಾತ್ ಇಂವ. ಬಂದ್‌ದ್ ಇದೇ ಮನೆಲಿ ಕೊತ್ತಿನ ಬುಟ್ಟತ್. ಈ ಅಪ್ಪ ಕೇಳ್ಕನ ಹೇಳ್ದು ಇದೇ ಮಾತ್‌ನ. 'ಇಂದೊಂದು ಕೊತ್ತಿ ತಂದೆ'ಂತ. 'ಛೇ ! ಮಂಜ'. ದುಡ್ಡಲ್ಲಿಗೆ ಮುನ್ನೂರು ಹೋತ್ತ್.

ಮಾರನೆ ದಿನ ಹೊನೆಂತ ಹೇಳ್ತ್. ಮಾರನೆ ದಿನ ಹಿಂಗೆ ರೋಡ್‌ಲಿ ಹೋಕೆ ಆಕನ ದೂರಲಿ ಬಾಕನ ಕುದ್ಕೊಂಡುಟು. ಅಲ್ಲಿಂದ ಗಿಳಿ ಹೇಳ್ತ್ 'ನರ್ಸಣ್ಣನೊಟ್ಟಿಗೆ ನೋಡ್‌ನೋಡ್ ನಮ್ಮವನಾಂಗೆ ಬೇಡಂವ ಬಂದದೆ'ಂತ ಅದ್. ಇಂವ ಕೇಳಿಕಂಡತ್. ಹೈದ ಹೋಗಿ ಹೋಗಿ ಹಕ್ಕಳ ಅಂಡಿದೊ. ಮಾತ್‌ಕತೆ ಎಲ್ಲ ಆತ್. ಕೇಳ್ತ್, 'ಈ ಗೀಣನ ನಂಗೆ ಕೊಟ್ಯಾ'ಂತ. 'ಅದರಂದಾಗಿ ನನ್ನ ಜೀವನ'. 'ಇಂದ ನಿಂಗೆ ನೂರು ರೂಪಾಯಿ. ಗೀಣನ ಕೊಡ್'. ತೆಕನ್ತ್ ಹೋತ್. ಆಗ ಇಲ್ಲಿಗೆ ನಾನೂರು ರುಪಾಯಿ ಆತ್. ಅಲ್ಲಿಂದ ಅಂದ್ ಕತ್ತಲೆಗೆ ಕೇಳ್ತ್ ಅಪ್ಪನೊಟ್ಟಿಗೆ ಅಪ್ಪ, 'ನಾ ಗೂಡೆನ ನೋಡ್ಯೊಳೆ. ನಾಳೆ ನೀವು ಹೋಕ್ಕು'. 'ಎಲ್ಲಿ ?''ನಮ್ಮ ಅರ್ಸುಗ ಒಳೊ ಅಲ್ಲೆ. ಅವರ ಮಗ ಒಂದು ಇಲ್ಲೆಯಾ. ಮೇಲೆ ಕೊಟ್ಟಿಗೆಲಿ. ಅದರ್ನೆ ಮಾತಾಡ್ದು. ಹೇಂಗೆ ಧೈರ ಬಂದದೆಯಾ' ಹೇಳ್ತ್ ಮಂಜ. 'ನಾಳೆಗೆ ಎಷ್ಟಾರು ನೋಡು ಹುಳಿ, ತಂಗಲಂತ ಹೇಳಿ ಅಲ್ಲಿಗ ಹೋದರೆ ಸಿಕ್ಕಿದೆ. ಅವರ ಮಗಳ ನಾವು ಮಾತಾಡಿಕೆ ಹೋದರೆ ನಾವ್ಗೆ ಅದು ಇಲ್ಲೆ ಮತ್ತೆ. ಅಲ್ಲಿ ಹೋಗಿ ನೋಡೋಣ'. ಕಳ್ಸಿತ್ ಅಪ್ಪನ. ಹೋತ್. ಅಂವ ಮೇಲ್ ಉಪ್ಪರಿಗೆಲಿ ಉಟ್ಟು. ಇಲ್ಲಿ ಗೇಟ್ ಪಾರದವು ಒಳೊ. ಇಂವ ನಿಂತತ್. 'ಏನ್ ಬಂದದ್?''ಅರ್ಸುಗಳ ಕಾಣೊಕು' ಅಂವ ಹೋಗಿ ಹೇಳ್ತ್. ಬರ್ಲಿಂತ ಹೋತ್. ಹೋಗಿ ಕುದ್ರಿಕೆ ಹೇಳ್ತ್. ಕುದ್ದತ್. ಇಂವ ನಿಧಾನಂದ ಮೇಲೆ ಕೇಳ್ತ್, 'ನಾ ಬಂದ ಸಂಗತಿ ಹೇಳ್ನೆ. ಕೋಪ ಮಾಡಿಕೆ ಬೊತ್ತ್'. 'ಆತ್ ಆತ್ ಹೇಳ್‌ನೋಡ'. ಆಗ ಹೇಳ್ತ್ 'ನಿಮ್ಮಲ್ಲಿ ಒಂದ್ ಮಗ ಉಟ್ಟು. ನನ್ನಲ್ಲಿ ಒಂದು ಮಂಜ ಉಟ್ಟು. ಅವರಿಬ್ಬರ ಲಗ್ನಕ್ಕೆ ಜೋಡಿಸೊಕುಂತ ಹೇಳಿ ನಾ ಬಂದದ್'. ಮೇಲೆಂದ ಅಲ್ಲಿಂದ ಹೊನ್ನಿಕಂಡ್ ಬಾತ್ ಕೆಳಗೆ. ಎದ್ದತ್ ಸೀದಬಾತ್. 'ಏನಾತ್ ಅಪ್ಪ?''ನಿನ್ನ ಮಾತ್ ಕೇಳಿ ಎರಡ್ ತೊಳ್ತ ಸಿಕ್ಕಿ

ನಂಗೆ'. 'ಕುಡಿಯಕೆ ಇಷ್ಟು ನೀರೂ ಇಲ್ಲೆ'. 'ಹಾಂಗಲ್ಲ ನೀವು ಕೇಳ್ದ ಲೈನ್ ತೊಪ್ಪಿ ಹೋತ್'. 'ನಾಳೆ ವಾಪಾಸ್ ಹೋಕ್ಕು'. ಹೋಗಿ ಹೇಳೊಕು, 'ಅರ್ಸುಗಳೇ ನಿನ್ನೆ ನಾ ಬಂದೆ. ನೀವು ಹೊಡ್ದರಿ ಮೆಟ್ಟಿದರಿ. ನಂಗೆ ಬೇಜಾರ ಇಲ್ಲೆ. ನೋಡಿ ಹಣ್ಣ್ ಇದ್ದ ಮರಕ್ಕೆ ಎಷ್ಟೊ ಹಕ್ಕಿಗ ಬಂದವೆ ಅಲ್ಲ. ಎಲ್ಲ ಹಕ್ಕಿಗಳಿಗೆ ಒಳ್ಳೊ ಹಣ್ಣ್ ಸಿಕ್ಕಿದೆಯಾ? ಸಿಕ್ಕುದ್ಲೆ? ಹೆಣ್ಣಿದ್ದ ಮನೆಗೆ ಎಷ್ಟೊ ಗಂಡ್ ಬಾಕ್ಕೆ ಸಾಕ್. ಅವು ಬಂದ ಕೂಡ್ಲೆ ಹೆಣ್ಣಾದ್ಲೆ. ಅವರವರ ಹಣೆಲಿ ಹೇಂಗೆ ಬರ್ದುಟು ಹಾಂಗೆ ಆದು'ಂತ ಕೇಳಿ ದೊಣ್ಣೆ ಕುಟ್ಟಿಕಂಡ್ ಅಜ್ಜ ಹೋತ್.

ನನ್ನಾಂಗೆ ಹೋಗಿ ಗೇಟ್ ಪಾರದವರೊಟ್ಟಿಗೆ ಹೇಳ್ಕನ ಅವು ಹೋಗಿ ಹೇಳ್ದೊ. 'ಬರ್ಲಿಂತ ಆತ್'. ಧೈರ್ಯಲಿ ಕುದ್ದತ್. ಇದೇ ರೀತಿ ಹೇಳ್ತ್. 'ನೋಡಿ ಅರ್ಸುಗಳೇ. ಒಂದು ಹಣ್ಣ್‌ನ ಮರಲಿ ಎಷ್ಟೊ ಹಣ್ಣುಟು. ಎಷ್ಟೊ ಹಕ್ಕಿಗ ಬಂದವೆ. ಜಾತಿಲ್ಲದ ಜಾತಿನ ಹಕ್ಕಿಗ ಬಂದವೆ. ಎಲ್ಲವ್ಕೂ ಒಳ್ಳೊ ಹಣ್ಣ್ ಸಿಕ್ಕುದ್ಲೆ. ಸಿಕ್ಕವಂಗೆ ಸಿಕ್ಕಿದೆ. ಹೆಣ್ಣಿದ್ದ ಮನೆಗೆ ಎಷ್ಟೊ ಗಂಡ್ ಬಂದವೆ. ಎಲ್ಲವ್ಕೂ ಸಿಕ್ಕಿದೆಯಾ? ಮುಂಡಲಿ ಹೆಂಗೆ ಬರ್ದುಟ್ಟಾ ಅದ್ ನಿಘಂಟ್'. ಅರ್ಸು ಕುದ್ದು ಆಲೋಚನೆ ಮಾಡಿ ಮಾಡಿ ಹೇಳ್ತ್. 'ನನ್ನಲ್ಲಿ ಇರುವಷ್ಟೇ ಐಶ್ವರ್ಯ ಐಭಾಗ್ಯ ನಿನ್ನ ಮಂಜನಲ್ಲಿ ಇದ್ದರೆ ನಾ ಧರ್ಮಧಾರೆ ಹೊಯ್ದು ಕೊಟ್ನೆ'ಂತ ಕೇಳಿ ಕೊಂಡತ್. ಇಂವ ಬಾತ್. ಒಂದು ಹರ್ಕ್‌ಲ್ ಬಿಡಾರಲಿ ಒಳದಲ್ಲ. ಏನಾತ್ ಮಂಜ. ಇಂದ್ ಪೆಟ್ಟ್ ಗಿಟ್ಟ್ ಯಾವುದೂ ಇಲ್ಲೆ ನಂಗೆ. 'ಅವರಲ್ಲಿರುವಷ್ಟೇ ಐಶ್ವರ್ಯ ಐಭಾಗ್ಯ ಇದ್ದರೆ ನಿಂಗೆ ಧರ್ಮಧಾರೆ ಹೊಯ್ದು ಕೊಟ್ಟವೆಗಡ'. ಒಹೊ ಆತ್‌ಂತ ಹೇಳ್ತ್ ಈ ಕೊತ್ತಿನ, ಈ ಎಲಿನ, ಗಿಣಿನ ಎಲ್ಲ ಹಿಡ್ಕಂಡತ್ ಹೋತ್.

ಹೋಕನ ದೊಡ್ಡ ಒಂದು ಮೈದಾನ ಅದ್ಕೆ ಕಂಡದೆ. ಎಷ್ಟೊ ಜಾಗ ಉಟ್ಟು ಅದರ್ಲಿ ಅಲ್ಲಿ ಉಂಗುರನ ಬೆರ್ಲಿಗೆ ಹಾಕನ್ತ್. ನಂಗೆ ಬೇಕಾದ ದನಕರು, ಆಸ್ತಿಪಾಸ್ತಿ, ಚಿನ್ನ ಒತ್ತರೆ ಆಕ್ಕುಂತ ಹೇಳಿ ಮೂರು ಬರೆ ಏಳ್ತ್. ನೋಡ್ರೆ ನೋಡಿ ಒಂದು ಕರೆಲಿ ಹೂಡ್ವೆ, ಒಂದು ಕರೆಲಿ ಕೊಯ್ದುವೆ ಏನೋ ಏನೋ. ನೋಡಿಕೆ ಬೊತ್ತ್. ಇಂವನ್ ಬಾತ್. ಅಪ್ಪನೊಟ್ಟಿಗೆ ಹೇಳ್ತ್. ಇವು ಹೋದೊ ಇತ್ತಂದ. ಇಂತ ದಿನ ನಾವು ಮನೆ ನೋಡಿಕೆ ಬಂದವೆಂತ. ಹೈದ ಏನ್ ಮಾಡ್ತ್ ಸುಮ್ಮಂಗೆ ಆಕಿಲ್ಲೆ ನನ್ನ ಹಿತ್ಲಿಗೆ ಗೇಟ್ ಮಾಡೊಕು, ಮನೆ ಎಷ್ಟೊ ದೊಡ್ಡದ್ ಉಟ್ಟಲ್ಲ. ಅವ್ಕೆ ಅದರ್ಲಿ ತೋರ್ಸಿ ಕೊಡೊಕು. ಮತ್ತೆ ನೋಡೋಣಾಂತ ಆತ್. ಸುತ್ತಾಕೆ ಬೇಲಿ ಆತ್ ಗೇಟ್ ಮಾಡ್ತ್. ಬಂದೊ ಅಲ್ಲಿನವು ಅರ್ಸುಗಳ ಕೂಡಿಕಂಡ್. ಬಂದ್ ಬಂದ್ ಇವನ ಗೇಟ್ ಹಕ್ಕಳೆ ಬಾಕನ ಈ ಹೆಣ್ಣ್ ಕೊಟ್ನೆಂತ ಹೇಳ್ದ ಅರ್ಸುಗೆ ಇವನ ಗೇಟು ದಾಟಿಕೆ ಧೈರ್ಯ ಬಾತ್ಲೆ. ಇಂವ ನಿಂತತ್. ಅಷ್ಟೊತ್ತಿಗೆ ಬಾಕಿದ್ದವೆಲ್ಲಾ ದಾಟಿದೊ. ಇಂವಾ ಬಾತ್ ಸೀದ. ಬಂದ್ ಕೈ ಮೇಲೆ ಹಿಡ್ದ್ ಎಳ್ಕೊಂಡ್ ಹೋತ್. ಉಯ್ಯಾಲೆ ಮೇಲೆ ಕುದ್ರಿಸಿತ್. ಇಲ್ಲಿ ಕುದ್ರಿ ಬೆಂಚಿಲಿ ಕುದ್ರ್‌ಬೇಡಿ. ಎಲ್ಲ ಸುತ್ತು ತಿರ್ಗಿ ನೋಡ್ದೊ. ಮಾತುಕತೆ ಎಲ್ಲ ತೀರ್ತ್. ನಿಘಂಟಾತ್ ಇಂತ ದಿನ ಲಗ್ನಮಾಡ್ದು,

ನಿಂಗೆ ಧರ್ಮಧಾರೆಯೇ ಕೊಡ್ದುಂತ ಆತ್ ಒಪ್ಪಿಕನ್ತ್. ಅವು ಹೋರ್ಪ್ ಬಂದೊ. ಇಂವನ ಮನೆಂದ ಬಂದಾಕನ ಈ ಅರ್ಸು ಅಷ್ಟು ದೊಡ್ಡಂವ ಆದರೂ ಹೋಗಿ ಸಾಮಾನು ಜೋಡ್ನೊಕು. ಇಂವಂಗೆ ಬಾಯಿಲಿ ಹೇಳ್ರೆ ಆತ್. ಅದೇ ಕ್ರಮ ಮಾಡ್ತ್. ಅಂವ ಸಾಮಾನ್ ಜೋಡ್ಸಿಕನ ಇಂವ ಬಾಯಲ್ಲೆ ಹೇಳಿ ಬುಡ್ತ್. ಇಂವಂಗೆ ಬೇಕಾಷ್ಟ್ ಇಲ್ಲಿ ಆತ್. ಇನ್ನ್ ಏನ್ ಮಾಡ್ದು.
ಇನ್ನ್ ಹಾಂಗಲ್ಲ ನನ್ನ ಜಾಲ್ಂದ ಈ ಹೆಣ್ಣು ಕೊಡುವ ಅರ್ಸುನ ಜಾಲಿಗೆ ಮುಟ್ಟ ಬೆಳ್ಳಿ ಚಪ್ಪರ ಮಾಡೊಕೊ. ಅಲ್ಲಿ ಸೋಗೆ ಚಪ್ಪರ ಇರ್ದು ಆ ಚಪ್ಪರಕ್ಕೆ ಹೋಗಿ ಮುಟ್ಟೊಕು ಇತ್ತಂದ. ಬೆಳ್ಳಿ ಚಪ್ಪರಂತ ಹೇಳ್ತ್ ಕುದ್ದತ್. ಬೆಳಿಗ್ಗೆ ಎದ್ದ್ ಆ ಅರ್ಸು ಅಲ್ಲಿಂದ ಮೇಲುಪ್ಪರಿಗೆಂದ ನೋಡ್ರೆ ಆ ಚಪ್ಪರ ಫಳಫಳಫಳಂತ ಹೇಳ್ದೆ. ಇವಂದ್ ಅಲ್ಲಿ ಸೋಗೆ. ನಂಗೆ ನಾಚಿಗೆ ಗೇಡಾತಲ್ಲೆ. ಕುದ್ದತ್ ಅವನ ಚಪ್ಪರದಡಿಗೆ ದಾಟಿಕೆ ಅಲ್ಲಿ ಕುದ್ದೊ. ಅಲ್ಲಿ ಕುದ್ದೊ ಇವರ ಕಾರ್ಯಕ್ರಮ ಎಲ್ಲ ಆತ್. ತಾಳಿ ಕಟ್ಟುದು ಎಲ್ಲ ಆತ್. ಎಂತದೆಲ್ಲ ಉಟ್ಟಲ್ಲ. ಅದೆಲ್ಲ ತೀರ್ಸಿದೊ. ದಿಬ್ಬಣ ಬಂದೊ. ಬಂದ್ ಇವು ಅಜ್ಜ ಸೊಸೆ ಇಂವ ಮೂರೇ ಜನ ಮನೆಲಿ. ಈ ಕೊತ್ತಿ, ಗೀಣ, ಎಲಿಂತ ಹೇಳ್ದಂಗೆ. ಆಗ ಅಲ್ಲಿ ಒಂದು ಅರ್ಸು. ಅಂವ ಎಲ್ಲವರೊಟ್ಟಿಗೆ ಕೇಳಿಕಂಡು ಹೋತ್. ಈ ಸೌದೆ 'ಮಾರಿಕಂಡಿದ್ದ ಅಜ್ಜನ ಮಂಜ ಇಷ್ಟ್ ಬಲ ಆಕ್ಕುಂತ ಆದರೆ ಇದ್ಕೆ ಕಾರಣ ಏನ್ ? ಯಾರಿಗಾದರೂ ಗೊತ್ತುಟ ಹೇಳೊಕು'. ಯಾರೊಟ್ಟಿಗೆ ಕೇಳ್ರು ಗೊತ್ತೆ. 'ನಂಗೆ ಗೊತ್ತೆ. ನಂಗೆ ಗೊತ್ತೆ'ಂತ ಹೇಳ್ದೊ.

ಆಗ ಅಲ್ಲಿ ಒಂದು ಅಜ್ಜಿ ಅದ್ ಹಂಞ ಚಾಂಡಾಳಿ. ಅದ್ಕನೇ ಗೊತ್ತು. 'ಅದ್ ಹೌದ್. ಒಂದು ಉಂಗಿಲ ಮತ್ತೊಂದು ಬೆತ್ತ. ಅದರಿಂದಾಗಿ ಅಂವ ಆದ್ದ್. ಅಂದರೆ ಅದರ ತಾಕ್ಕೆ ತೀರ್ದೊ?' ಹೇಂಗೆ ತಾದು ನೋಡೋಣಂತ ಹೇಳ್ತ್ ಅಜ್ಜಿ. ಹಾಂಗೆ ಹೇಳ್ತ್. ಈ ಅಜ್ಜಿಗೆ ಖರ್ಚಿಗೆ ಬೇಕಾದ್ದರ ಕೊಟ್ಟತ್ ಈ ಅರ್ಸು. ದೋಣ್ಣೆ ಕುಟ್ಟಿತ್ ಅಲ್ಲಿಗೆ ಹೋಗಿ ಆಕನ ಅವಂಗೂ ಬೇಜಾರತ್. ಈ ಅಜ್ಜಿನ ನೋಡ್ಕನ. ಈ ಗೂಡೆ ಒಂದೇ ಅಲ್ಲ. ಮತ್ತೆ ಅಜ್ಜಿ ಅಲ್ಲ. 'ಉಗ್ಗವ್ವ ನೀವು ಇಲ್ಲಿ ನಿಲ್ಲಿ. ನನ್ನ ಗೂಡೆಗೆ ಪಾರ. ಯಾರು ಇಲ್ಲೆ. ನಾ ಎಲ್ಲಿಯಾರು ಹೋನೆ ಎಲ್ಯಾರು ಬನ್ನೆ. ಹೀಂಗೆ ಇರಿ. ತಿಂದ್‌ಕಂಡ್, ಉಂಡ್‌ಕಂಡ್ ಇರಿ'. ಹಂಗೇ ಇತ್ತ್. ಎರಡ್ ಮೂರು ದಿನ ಕಳ್ದಾಕನ ಹೇಳ್ತ್ ಗೂಡೆನೊಟ್ಟಿಗೆ 'ಏ ಮಗಳೆ ? ಏಂತವ್ವ ?''ಹೆಣ್ಣಿಗೂ ಮಣ್ಣಿಗೂ ಸಿಂಗಾರ ಮಾಡ್ದಷ್ಟ್ ಪೊರ್ಲ್ ನೋಡ್. ಹಾಂಗೆ ಆಕನ ಮನೆ ಎಲ್ಲ ನಿನ್ನದ್. ಲಾಯಿಕುಟು. ಅಂತೂ ಇನ್ನ್ ಒಂದು ಕೊರತೆ ಉಟ್ಟು ನಿನ್ನಲ್ಲಿ'. ಏನ್ ? 'ನಿನ್ನ ಗಂಡನ ಕೈಲಿ ಒಂದು ಮುದ್ರೆದ ಉಂಗಿಲ ಉಟ್ಟಲ್ಲ ಅದರ ನಿನ್ನ ಕೈಲಿ ಹಾಕಿರೆ ನಿನ್ನ ಸೌಂದರ್ಯ ಹೇಳ್ದು ಬೇಡ'. 'ಕೊಡಿಕಿಲ್ಲೆ ಅವು'. 'ಕೊಡುವೊ. ಯಾಗ ಕೇಳೊಕು ಗೊತ್ತುಟ. ನೀವು ಒಟ್ಟಿಗೆ ಮಲ್ಗುವ ಸಮಯಲಿ ಕೇಳ್ ಕೊಟ್ಟದೆ'. ಇದ್ ಒಂದು ಎರಡ್ ದಿನ ಇತ್ತ್. ಅಷ್ಟೊತ್ತಿಗೆ ಇವಂಗೆ ದಂಡಿಗೆ ಹೋಕ್ಕೆ ಬಾತ್. ಹೈದಂಗೆ. ಆಗ ಈ ಅಜ್ಜಿನ ಕರ್ದ್ ಹೇಳ್ತ್, 'ಅವ್ವಾ ನಾ ಎಂಟ್ ದಿನಲಿ ಬಾಕೆ ಸಾಕ್. ನಾ ಬಾವಲ್ಲಿವರೆಗೂ ಗೂಡೆನ ಬುಟ್ಟ್ ನೀವು ಹೋಕೆ ಬೊತ್ತ್. ಎಲ್ಲಿಗೂ. ನಾ ಇಂತ ಕಡೆ ಹೋನೆ'.

ಅಕ್ಕ ಮಂಜ'. 'ಉಂಗಿಲ ಈ ಗೂಡೆ ಕೈಲಿಟು'. ಅಜ್ಜಿ ಹೇಳ್ತ್, 'ಇಂದ್ ನೋಡ್ ಓ ಅಲ್ಲಿ ಹಳ್ಳ ಉಟ್ಟಲ್ಲ. ಹಳ್ಳಕೆ ಪೋಯಿ. ಲೈಕ್‌ಲಿ ಮೀಂದ್ ಬಾಂವೊ'. ಇದ್ ಸಣ್ಣ ಗೂಡೆ. 'ಆದು ಪೋಯಿ'. ಅಜ್ಜಿ ಅಲ್ಲಿ ಏನ್ ಹೇಳ್ತ್, 'ಮಗಳೆ ನಿನ್ನ ಚಿನ್ನಾಬಣ್ಣಾ ಎಲ್ಲ ತೆಗ್ದ್ ಪಾರೆ ಮೇಲೆ ಇಸೊಕು. ನಾ ಪಾರ ಕುದ್ದನೆ. ನೀ ಮುಂದೆ ಮೀ ಮತ್ತೆ ನೀ ಹತ್ತಿದ ಮೇಲೆ ನಾ ಮಿಂದನೆ. ಇವು ಎಲ್ಲಾ ಕುತ್ತಿಗೆ ಮೇಲೆ ಇದ್ದ್‌ದ್ ಕೆಬಿದ್ ತೆಗ್ದ್ ಇಸಿತ್. ಸಣ್ಣ ಗೂಡೆ ಅಲ್ಲ. ನೀರ್‌ಲ್ಲಿ ಕಂತಿಕಂಡ್, ಎದ್ದ್‌ಕಂಡ್ ಇರ್ಕನ ಈ ಉಂಗುರ ತೆಗ್ದ್ ಬೆರ್ಳಿಗೆ ಹಾಕಿತ್. 'ಹೋಗ್ಲಿ ನನ್ನ ರಾಜ್ಯಕ್ಕೆ'ಂತ ಹೇಳ್ತ್ ಅಜ್ಜಿ. ಎಲ್ಲಿಟು ? ಹುಡ್ಗಿಬೆತ್ತಲೆ. ಏನು ಮಾಡ್ದು? ಅಲ್ಲಿಂದ ಹತ್ತಿತ್ ಬಾತ್.

ಈ ಮನೆ ಉಟ್ಟಲ್ಲ ಅಲ್ಲಿಗೆ ಬಾಕನ ಕೊತ್ತಿಕೇಳ್ತ್, 'ಅಕ್ಕಾ ಯಾಕೆ ಮರ್ಬಿಯಾಂತ?''ನಿನ್ನ ಅಣ್ಣ ಕಟ್ಟಿದ ಅರಮನೆ ಎಲ್ಲಿಟು ? ಪೂರ ಹೋತ್'. 'ನಾ ನೋಡ್ ಒಲೆ ಚಿಂಟೆಲಿ ಬೇಕಷ್ಟ್ ಹಾಳ್ ಕುದ್ದ್ ಒಳ್ಳೊ ಸುಕೊ ನಿದ್ದೆಲಿದ್ದೆ. ಈಗ ನೋಡು ಪಾರೆಕಲ್ಲ್ ಮೇಲೆ ಮಲ್ಕೊಂಡದ್ ನಾ'. ಅಷ್ಟೊತ್ತಿಗೆ ಗೀಣ ಬಾತ್. 'ಯಾಕೆ ಮರ್ಬಿಯಾ?''ನಿನ್ನ ಅಣ್ಣ ಕಟ್ಟಿದ ಅರಮನೆ ಎಲ್ಲಿಟು?''ನೋಡ್ ಹಾರ್ಮೊನಿ ಪೆಟ್ಟಿಗೆ ಹಕ್ಕಳೆ ಅದರ ಬಾರ್ಸಿಕಂಡ್ ನಾ ಹಾಡ್ ಹೇಳಿಕಂಡ್ ಕುದ್ದ್‌ಕಂಡಿದ್ದೆ. ಈಗ ಮರದ ಒಟ್ಟೆಗೆ ಹುಕ್ಕಿನೆ ಹೊರ್ಬನೆ. ಲಾಯಕಾತಲ್ಲೆ ಇನ್ನೇನು ಮಾಡ್ದು'. ಅಷ್ಟೊತ್ತಿಗೆ ನಾಯಿ ಒಂದುಟ್ಟು. ನಾಯಿನೊಟ್ಟಿಗೆ ಕೇಳ್ತ್, 'ಏನ್ ನಾ ನೋಡ್ ಗೇಟ್‌ಲೇ ಕುದ್ದ್‌ಕಂಡಿದ್ದೆ. ನಂಗೊಂದು ಮಂಚ ಉಟ್ಟು. ಅದರ್ಲಿದ್ದೆ ನೋಡ್ರೆ ಮೊಣ್ಣ್ ಚಿಂಟೆ ಮೇಲೆ ಒಳೆ ಕುದ್ದ್‌ಕಂಡ್. ಏನು ಮಾಡ್ದು?' ಆತ್ ಇನ್ನ್ ಏನ್ ಮಾಡುವ ದಾರಿಂತ ಹೇಳಿಕಂಡ್ ಇವು ಕೊತ್ತಿ ನಾಯಿ, ಎಲಿ, ಗೀಣ ಇಷ್ಟ್ ಕೂಡ್ದೊ. ಕೂಡಿ ಹೇಳ್ದೊ. 'ಅಕ್ಕ ನೀ ಈ ಕಲ್ಲ್ ಮೇಲೆ ಕುದ್ದ್‌ಕ. ಎಲ್ಲಿಯೂ ಹೋಕೆ ಮಾತ್ರ ಬೊತ್ತ್. ರಾತ್ರಿ ಅಲ್ಲ, ಹಗಲಲ್ಲ'. ಏನಾದರೂ ನೋಡ್ಕನ ಈ ಉಂಗುರ ಹಾರ್ಸಿಕೆ ಮಾಡ್ದ ಅರಸು ಉಟ್ಟಲ್ಲ ಅವರ ಇದಕ್ಕೂ ಇವರ್ದಕ್ಕೂ ದೊಡ್ಡ ಹೊಳೆ. ಹೊಲೆ ಕರಲಿ ಹೋಗಿ ಕುದ್ದೊ. ಕುದ್ದಾತ್. ಈ ಉಂಗುರನ ತಕಂಡ್ ದಾಟೊಕಲ್ಲ. ಹೇಂಗೆ ದಾಟುದು? ನಾಯಿ ಹೇಳ್ತ್ 'ನನ್ನ ಬಾಲಕೆ ಚುರಿನಿ ನಾ ಮೀಸಿಕಂಡೆ ಹೋಂಣೆ'ಂತ. ಆಗ ಒಂದು ಹೇಳ್ತ್. 'ನಿನ್ನ ಬಾಲ ಕೆಚ್ಚೆ'. ಆಗ ಅಷ್ಟೊತ್ತಿಗೆ ಎಲಿ ಹೇಳ್ತ್. 'ನಾ ತಕಂಡ್ ಬನ್ನೆ'ಂತ. 'ನಿನ್ನ ಇಷ್ಟ್ ತೋರದ ಮಿನ್ ಹಿಡ್ದ್ ನುಂಗಿರೆ ಅದ್ ಹೋತ್'. ಅದೂ ಇಲ್ಲೆ. ಛೆ! ಗುಲಾಮತ್ ಆತಲ್ಲೆ. ಇನ್ನೇನು ಮಾಡ್ದು?

ಅಷ್ಟೊತ್ಕಾನ ಗೀಣ ಹೇಳ್ತ್ ನಾ ಆಕಾಶಲಿ ಹೋದಲ್ಲ. ನನ್ನ ಕೊಕ್ಕಿಗೆ ಚುರಿನಿಂತ. ನಾ ಬನ್ನೆ. ಎಲ್ಲ ನಿಫಂಟಾತ್. ಇದರ ಕೊಕ್ಕಿಗೆ ಚುರ್ದೊ. ಇವು ಮುಂದೆ ಹೋದೊ ಮೀಸಿಕಂಡ್. ಎಲಿ, ಕೊತ್ತಿ, ನಾಯಿ ಹೋಗಿ ಆಚೆ ಕರೆಲಿ ಕುದ್ದ್‌ಕಂಡೇ ಇದ್ ಇಲ್ಲಿಂದ ಹಾರ್ತ್. ಹೋಗಿ ಹೋಗಿ ಅತ್ತನ ಕರೆಗೆ ಎತ್ತಿತ್‌ಂತ ಹೇಳ್ಕನ ಇದರ ಕೊಕ್ಕುಂದ ಬಿದ್ದ್ ಹೋತ್. ಎಂತರ ಮಾಡ್ದು?

ಏನೂ ಉಪಾಯ ಇಲ್ಲೆ. ಅಷ್ಟೊತ್ತಿಗೆ ಅಲ್ಲಿ ಒಬ್ಬ ಒಂದು ಗಾಳ ಹಾಕಿಕಂಡ್ ಬಾತ್. ಬಂದ್ ಬಂದ್ ಈ ಉಂಗಿಲ ಬಿದ್ದ ಜಾಗೆಗೆ ಇಂವ ಅದರ ಹೊಡ್ದಾಡಿ ಹೊಡ್ದಾಡಿ ಮೀನ್‌ನ ಏನ್ ಮಾಡ್ತ್. ಈ ಮಿನ್‌ನ ಕಚ್ಚಿಕೊಂಡು ಒಂದೇ ಓಟ. ನಾಯಿಗೆ ಹೊಡಿಯಕೆ ಬಾಕನ ಕೊತ್ತಿ ಒಂದು ಕಡೆಂದ ಪರ್ದುದು. ಎಲಿ ಎಲ್ಲ ಒಂದು ಸುಮಾರು ಒಂದು ಎರಡ್ ಪರ್ಲಾಂಗ್ ದೂರ ಬಂದೊ ಅವನ ಬಂಗ ಬರ್ಸಿ ಬಾಕನ ಈ ನಾಯಿ ಕುದ್‌ಕಂಡ್ ನೋಡ್ದೆ. ಈ ಮೀನ್ ಎಲ್ಲಿಟು? ಬಂದೊ ನೋಡ್ದೊ. ಮೀನ್‌ನ ತಕಂಡು ಹೋದೊ. ವಾಪಾಸ್. ಈ ಗೂಡೆ ಕುದ್‌ಕಂಡುಟ್ಟಲ್ಲ ಅಲ್ಲಿಗೆ ಹೋದೊ. ಇದರ ತಕಂಡ್ ಇದರ ಹೊಟ್ಟೆ ಬಾರಿ ನೋಡೊಮ. ಹೊಟ್ಟೆ ಬಾರ್ತ್. ಬಾರ್ಕನ ಉಂಗುರ ಸಿಕ್ಕಿತ್. ಗೂಡೆ ಉಷಾರಾತ್. ಅಲ್ಲಿಂದ ಉಷಾರಾಗಿ ಹಿಂಗೆ ಗೂಡೆನೂ ಇವು ಮಾತ್ರ ಒಳದ್.

ಇಂವ ದಂಡಿಗೆ ಹೋಗಿ ವಾಯಿದೆ ತೀರಿ ಬಾತ್. ಬಾಕನ ಇದ್ ಹೇಳ್ತ್. ಆಗ ಅಜ್ಜಿ ಇಲ್ಲ ಅಜ್ಜಿ ಎತ್ತ ಹೋತ್ ? ಅಜ್ಜಿ ಹಿಂಗಿಂಗೆ ಮಾಡಿ ಹೋತ್. ನಾ ಇಷ್ಟ್ ಗೋಳ್‌ಲಿ ಇದ್ದೆ. ಈ ಪ್ರಾಣಿಗ ಇಷ್ಟ್ ಹೋಗಿ ಅದರ ತಕಂಡ್ ಬಂದೋಳ. ಆಗಲಿ ನಾ ಮಾಡ್ದ ಉಪಕಾರಕ್ಕೆ ನಂಗೆ ಉಪಕಾರ ಕೊಟ್ಟೊಳ ಅವುಂತ ಹೇಳಿ ಅಲ್ಲಿ ಅವು ಆಮೇಲೆ ಸುಖ ಸಂತೋಷಲ್ಲಿ ಒಳೊ.[ಕತಾನಿರೂಪಕ:ವಿಶ್ವನಾಥ ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಬೆಳಿಗ್ಗೆ 10 ಗಂಟೆ; ವರ್ಷ–1991]

## 55.ಎತ್ತಂಡೆ ಬುಡಂಡೆ ಕತೆ

ಒಂದು ಅರ್ಸು. ಆ ಅರ್ಸು ನನ್ನಂತಹ ಪಾಪದವ. ಅರ್ಸುಗೊಂದು ಮಗ ಉಟ್ಟು. ನನ್ನ ಮಗಳ ನಿಂಗೆ ಕೊಟ್ನೆ. ನೀ ನನ್ನಲ್ಲಿ ಮನೆ ಅಳಿಯನಾಗಿ ನಿಲ್ಲೊಕು. ನಿಂತತ್ ಇಂವ. ನಿಂತ ಗೂಡೆಗೆ ಪ್ರಾಯಬಾತ್. ಇವಂಗೆ ಕೆಲಸೆಂತದ್. ಹೂಡ್ದು. ಬಾಕಿ ಎಲ್ಲ ಕೆಲಸಾತ್. ಗೂಡೆ ಕೊಡಿಕೆ ಮುಂದೆ ಇಂವ ಗದ್ದೆಲಿ ಎತ್ತ್ ಕಟ್ಟಿ ಬುಡಿಕನ ನೇಗಿಲಿನ ಹಿಡಿಕೈ ಉಟ್ಟಲ್ಲ ಮುರ್ದೋತ ಏನ್ ಮಾಡ್ದು ಇವಂಗೆ ಗೊತ್ತುಟ್ಟಾ ? ಇಂವ ಎತ್ತ್ ನಿಲ್ಸಿತ್. ಗದ್ದೆ ಪುಣಿಲಿ ಕುದ್ ಮರ್ಗ ಆಗ ಪಾರ್ವತಿ ಪರಮೇಶ್ವರನವು ಊರ್‌ಮೇಲೆ ಹೋಕೆಂತ ಹೊರಟ್ ಬಂದೊ. ಆಗ 'ಪಾರ್ವ ಮಾತಾಡ್ಬೇಡ ನಾವು ಪೋಯಿ'. 'ಅಲ್ಲಲ್ಲ ಕೇಳಿ ಪೋಯಿ'. 'ಏನ್ ?''ಹಿಡಿಕೈ ಮುರ್ದೋತ ನಾ ಇನ್ನ್ ಎಂತರ್ಲಿ ಹೂಡ್ದು? ನನ್ನ ಎಜಮಾನ್ರ್ ಬಂದರೆ ನಂಗೆ ಜೋರು ಮಾಡ್ವೊ'. ' ಹಾಂಗೆಯಾ ತುಂಡಿಗೆ ತುಂಡು ಪತ್ತಂಡೆ'ಂತ ಹೇಳ್‌ಂತ ಪರಮೇಶ್ವರ ಹೇಳ್ತ್. ಇಂವ ತುಂಡ ನೇಗಿಲ್‌ಗೆ ಇಸಿದ್ 'ಪತ್ತಂಡೆ'ಂತ ಹೇಳ್ತ್. ಸರಿ ಆತಲ್ಲ! ಹೂಡ್ತ್. ಹಿಂಗೆ ಕೆಲವು ದಿನ ಹೋಕ ಈ ಗೂಡೆ ಉಟ್ಟಲ್ಲ ಇವಂಗೆ ಕೊಟ್ನೆಂತ ಹೇಳ್ದಲ್ಲ. ಇದರ ಬೇರೆ ಜನಂಗೆ ಮೊದ್ವೆ ಮಾ ಕೊಡುವ ಅಂದಜಾತ್. ಏನು ಮಾಡ್ದು? ಉಟ್ಟು. ಅಲ್ಲಿ ಒಂದು ಮಾತಿಗೆ ತಪ್ಪಿದೆ. ಏನ ಮಾಡಿಕೆ ಆದ್ಲೆ ? ಹಂಗೇ ಇತ್ತ್ ಆಲೋಚನೆ ಮಾಡಿಕಂಡ್.

ಮೊದ್ವೆ ಜಂಬರ ಎಲ್ಲ ಕಾರ್ಯಕ್ರಮ ಎಲ್ಲ ತೀರಿ ರಾತ್ರೆ ಮದು ಮಂಜಂಗೆ ಹೇಲ್ ಬಾತ್. ಇಂವ ಹೋತ್ ನೀರ್ ಮಂಡೆ ಹಿಂಗೆ ಇಸಿಕಂಡುಟ್ಟು ಜಾಲ್‌ಲಿ. ಇದರೆಲ್ಲ ಜಾರ್ಸಿತ್. ಅದರ್ಲ್ಲೆ ಹೇಲಿಕೆ ಕುಡ್ಡತ್. ಆಗ ಇಂವ ಏನ್ ಹೇಳ್ತ್, 'ಮದುಮಂಜನ ಕುಂಡೆಗೂ ಅಂಡೆಗೂ ಪತ್ತಂಡೆ'ಂತ ಹೇಳ್ತ್. ಅಲ್ಲಿ ಹಿಡ್ತ್. ಅಷ್ಟೊತ್ತಾಕನ ಆ ಮೊದಳಿಗ ಗೂಡೆ ಉಟ್ಟಲ್ಲೆ. ಇಂವ ನೇಚಿರೆ ನೇಚಿರೆ, ನೇಚಿಕೆ ಆದೆನ. ನೀರುಟ್ಟಲ್ಲ ಅಂಡೆಲಿ. ಇದ್ ಹೋಗಿ ಮದೋಲಿಗನ ಕೈಮೇಲೆ ಹಿಡ್ದ್ ಎಳ್ತ್. 'ಮದುಮಂಜನ ಕೈಗು ಮದೋಳಿಗಳ ಕೈಗೂ ಪತ್ತೆಂಡೆ'ಂತ ಹೇಳ್ತ್. ಅದ್ ಅಂಟಿತ್. ಅಷ್ಟೊತ್ತಿಗೆ ಬೊಳ್ಪಾತ್. ಇದರ ಒಬ್ಬ ತುರ್ಕ ಹೈದ ನೋಡಿಕಂಡುಟ್ಟು. ಮೊದೊಳಿಗ ಮದುಮಂಜ ಅಲ್ಲ ಒಳದ್. 'ನಾ ಇವರ ಎಳ್ದ್ ಕುದ್ರಿಸಿನೆ'ಂತ ಹೇಳ್ತ್ ಹೋತ್. ಕೈ ಕೊಡಿಕನ 'ತುರ್ಕನ ಕೈಗೂ ಮೊದೊಲಿಗರ ಕೈಗೂ ಪತ್ತೆಂಡ'ಂತ ಹೇಳ್ತ್. ಅದ್ ಹಿಡ್ಕನಲಿ. ಪಕ್ಕ ಎದ್ದತ್. ಕೊಟಗೆಗೆ ಹೋಗಿ ಒಂದು ಕರುನ ಬೊಲ್ಲು ಬಿಚ್ಚಿ ಬುಟ್ಟತ್. ಬಾತ್ ಈ ತುರ್ಕಂದರ ಕರು ಎಳಿಯಕೆ ಹೋದು. ಈ ಗೋಳು ನೋಡಿ ನೋಡಿ ಸಾಕಾತ್ ಇವಂಗೆ. ಹಾಂಗೆ ಇಂವ ಎಲ್ಲವರ ಪತ್ತಂಡ ಮಾಡ್ದೆ. ಅತ್ತೆ ಮಾವನನೂ ಪತ್ತಂಡೆ ಮಾಡ್ದೆ. ಮತ್ತೆ ಈ ಗೋಳ್‌ನ ಇವನೇ ನೋಡ್ಬೇಡ. ಎಲ್ಲ ಹಿಂದಕೆ ಹೋಗಿ ಎಲ್ಲವರ ಬುಡಿಕೆ ಹೇಳ್ತ್. ಅದ್ ಈಶ್ವರ ಪಾರ್ವತಿ ಹೇಳಿಕೊಟ್ಟೊಳೊ. ಬುಡೊಕುಂತ ಆದರೆ ಬುಡಿಕೆ ಹೇಳೊಕು. ಅಂತು ಹೊಕುಂತಾದರೆ ಹಿಂಗೆ ಪತ್ತಂಡೆಂತ ಹೇಳ್ರೆ ಸಾಕ್. ಹಾಂಗೆ ಹಿಂದಕ್ಕೆ ಇಂವ ಎಲ್ಲವರ ಬುಡ್ಸಿತ್. ಮತ್ತೆ ಈ ಗೂಡೆ ಇವಂಗೆ ಆತ್.[ಕತಾ ನಿರೂಪಕ:ಕೃಷ್ಣಪ್ಪಗೌಡ ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಮಧ್ಯಾಹ್ನ; ವರ್ಷ–1991]

## 56.ದೇವ್ರುಕೊಟ್ಟ ಕಾಯಿ ಕತೆ

ಒಂದು ಅಣ್ಣನು ತಮ್ಮನು. ಎರಡ್ ಜನವೂ ಪಾಪದವು. ಆದರೆ ಏನಾತ್‌ಂತ ಹೇಳ್ರೆ ಈ ತಮ್ಮ ಏನಾತ್? ಸ್ವಲ್ಪ ಅವನ ಬುದ್ಧಿವಂತಿಗೆ ಒಳ್ಳೊದಿತ್ತ್. ಅಂವ ಸಣ್ಣ ರೂಪಲಿ ಒಂದು ಸೇರ್ ಅಕ್ಕಿ ಇನ್ನೊಬ್ಬನಲ್ಲಿಂದ ತರುವಂತದುಟ್ಟಾ. ಇಲ್ಲೆ. ಮತ್ತೊಬ್ಬ ಏನಾತ್‌ಂತ ಹೇಳ್ರೆ ಅಂವ ಯಾಗೋಳು ಕಟ್ಟಿಗೆ ಹೊರ್ದು. ಸೌದೆ ಹೊರ್ದು. ಕತ್ತಲೆಗೆ ಬಾದು ಊಟಮಾಡ್ದು. ಆಗ ಇವನ ತಮ್ಮನ ಹೆಣ್ಣ್ ಬಾರಿ ಹಗೆದ್. ಹಿಂಗೆ ಇತ್ತ್. ಒಂದು ದಿನ ಏನಾತ್‌ಂತ ಹೇಳ್ರೆ ಇಂವ ಹೋಕನ ಯಾಗೋಳು ಸೌದೆ ಹೊತ್ತ್‌ದಲ್ಲ. ಪಾಪಂತ ಹೇಳಿ ದೇವ್ರು ಪ್ರತ್ಯಕ್ಷ ಆದೊ. ದೇವ್ರು ಸಣ್ಣ ಒಂದು ಅಜ್ಜನಾಂಗೆ ಬಾತ್. 'ಹೌದೊ ಮಗನೆ ನೀ ಯಾಗೋಳು ಹಿಂಗೆ ಮಾಡಿ ನಿಂಗೆ ಪ್ರಾಯ ಹೋದ ಕಾಲಕ್ಕೆ ನಿಂಗೆ ಇದೇ ಗತಿಯೋ? ಏನು ಮಾಡ್ದು? ನನ್ನ ಯೋಗ. 'ಅಂದರೆ ನಾ ಒಂದು ನಿಂಗೆ ಬುದ್ಧಿ ಹೇಳಿಕೊಟ್ಟನೆ. ನೀ ಒಳ್ಳೊದಾಗ್‌ಂತ ಬುದ್ದಿ ಹೇಳಿ ಕೊಟ್ಟರೆ ಹೇಂಗೆ? ನನ್ನ ಬುದ್ದಿ ನಂಗೆ ಪೂರ ತಿಳಿಯಕೆ ಬೊತ್ತಾರೆ? ಎಂತದ್ ಮಾಡ್ದುಂತ ಇವಂಗೆ ಮನ್ಸ್‌ಲಿ ಆತ್.

ಆಗ ದೇವು ಗ್ರೆಸಿಕಂಡೊ. 'ಇವಂಗೆ ಹಾಂಗೆ ಎಲ್ಲ ಹೇಳಿಕೊಡ್ದೆಲ್ಲ ಬೇಡ'ಂತ ಹೇಳ್ತ್. ಮೂರು ಕಾಯಿ ಕೊಟ್ಟತ್.

ಕಾಯಿನ ತಕಂಡ್ ಬಾತ್. ಯಾಗೊಳು ಒಂದು ಗಡಿ ಕಾಯಿ ತಾಕ್ಕೇ ಇವಂಗೆ ಆದ್ಲೆ ಇಂದ್ ಮೂರು ಕಾಯಿ ತಾತ್. ತಕಂಡ್ ಬಾತ್. ಬಾಕನ ಈ ಹೆಂಗ್‌ಸ್ ನೋಡಿಕನ್ತ್ ಯಾರ್? ತಮ್ಮನ ಹೆಣ್ಣ್. ಮೂರು ಕಾಯಿ ತಕಂಡದ್ ಅದ್ಕೆ ನೋಡಿಕೆ ಆದ್ಲೆ. ಹಂಞ ಹೊತ್ತಿಗೆ ಆಕನ ಗಂಡ ಬಾತ್. 'ನೋಡಿ ನಿಮ್ಮ ಅಣ್ಣ ಮೂರು ಕಾಯಿ ಹೊತ್ತುಕಂಡ್ ಹೋದೆ. ಇಂದ ಹಂಞ ಹುಷಾರುಟ್ಟ್, ಹಂಞ ಸೌದೆ ಹೆಚ್ಚಾಗುಟ್ಟಾ'ಂತ ಅದೆ. 'ನೀವ್ಗೆ ತಾಕೆ ಬೊತ್ತ್'? ಇಂವ ಸುಮ್ಮನೆ ಆಕನ್ತ್. ಈ ದೇವು ಏನ್ ಹೇಳಿ ಕೊಟ್ಟೊಳೊ ಈ ಮೂರು ಕಾಯಿನ ಗೊತ್ತುಟ್ ಊದು ಬತ್ತಿ ಕರ್ಪೂರ ಏನೂ ಬೇಕಾರೂ ಎಲ್ಲ ನಾ ಕೊಟ್ನೆಂತ ಅವನೆ ಬೇಕಾದಷ್ಟು ಕೊಟ್ಟುಟು 'ನಾವ್ಗೆ ಸೌಕರ್ಯ, ಸೌಭಾಗ್ಯ ಆಕುಂತ ಹೇಳಿ ಮೂಡ ಮೋರೆ ಹಾಕಿದ್ ಒಂದು ಕಾಯಿ ಒಡಿಯೊಕು'. ಎರಡ್ನೆದರ ನಿಂಗೆ, 'ಹಣ ಸಂಪತ್ತು ಎಲ್ಲ ಬೇಕ್‌ಂತ ಒಂದು ಕಾಯಿ ಒಡಿ ಇನ್ನೊಂದು ಕಾಯಿನ 'ಸರ್ವರೂ ಸಾವಿರ ಜನ ಬಂದರೂ ಕೂಡ ನನ್ನೊಟ್ಟಿಗೆ ಎಲ್ಲವೂ ಒಳ್ಳೊದು ಬೇಕ್'ಂತ ಒಡಿಂತ ಹೇಳ್ತ್.

ಇಂವ ಬೊಳ್ಪಿಗೆ ಎದ್ದತ್. ಇಂವ ಒಂದೊಂದೇ ಗ್ರೇಸಿತ್. 'ಎಲ್ಲ ಸೌಭಾಗ್ಯ ಆಕ್ಕು, ಭೂವಿ ಆಕ್ಕು'ಂತ ಹೇಳಿ ಒಡ್ತ್ ಒಡ್ತ್ ಒಡ್ತ್ ಎಲ್ಲಾ ಒಡ್ತ್. ಮನೆ ಗಿನೆ ಏನೋ ಆತ್. ಇಲ್ಲಿ ನೋಡ್ಕ ಈ ಹೆಂಗಸಿಗೆ ಏನಾತ್. 'ಈ ಮೂರು ಕಾಯಿಲಿ ಇಷ್ಟೆಲ್ಲ ಎಂತದ್'ಂತ ಹೇಳ್ತ್. ಹೋತ 'ಇಂದನಿ ಒಂದು ಇರ್‍ಲ್ಲಿ ಆಗಿದ್. ನೀವು ನಾಳೆ ಹೋಗಿ ಮೂರು ಕಾಯಿ ತರೊಕು'ಂತ ಹೇಳ್ 'ಪೋಯಿ ಅಂದರೆ ನಾಳೆ ಹೋನೆ. ಅಣ್ಣ ಹೋದ ದಾರಿ ಕೇಳಿ. ಅಣ್ಣನಕ್ಕಳೆ ಎಲ್ಲಿ'ಂತ ಕೇಳ್ ಎಲ್ಲಿ ಹೋದು. ಈ ದಾರಿಲಿ ಹೋದು. ಈ ದಾರಿಲಿ ಹೋಕನ ನಿಂಗೆ ಯಾರ್ ಕಾಂಬ ಸಿಕ್ಕಿದೊ? 'ಒಂದು ಅಜ್ಜ ಕಾಂಬಕೆ ಸಿಕ್ಕಿತ್. ಮೂರು ಕಾಯಿಕೊಟತ್ಟ್ ನಂಗೆ. ಇಷ್ಟಾತ್'ಂ ಇಂವ ಸತ್ಯ ಹೇಳ್ತ್. 'ಯಾವ ದಾರಿ? ಯಾವ ಕಲ್ಲ್?''ಓ ಇಂತ ಕಲ್ಲ್ ಹಕ್ಕಳೆ'. ಇಂ ಮರದಡಿಗೆ ಕುದ್ದ್ 'ನಾವ್ಗೆ ಅವ್ವೆ ಕೊಟ್ಟದ್'. ಮೊಚ್ಚ್ ತಕನ್ತ್. ಸೌದೆ ಒಡಿಯಕೆ ಹೋತ ನೋಡಾಂತ ಸೌದೆ ಒಡ್ದ್ ತೆಗ್ದ್ ಹಾಕಿತ್ ಬಾತ್. ಅಷ್ಟಾಕನ ಈ ಅಜ್ಜ ಅಲ್ಲಿ ಕುದ್ದ್ಕಂಡುಟ ಯಾಗೋಳು ಇದೇ ಕೆಲ್ಸ ನಂಗೆ. 'ನಂಗೆ ಏನಾರ್ ಒಳ್ಳೊದು ಮಾಡೊಕು'ಂತ ಕೇಳ್ತ್. ನಿ ಒಳ್ಳೊದು ಮಾಡಿಕೆ ಎಂತ ಉಟ್ಟು? ಇಂವ 'ನಿನ್ನೆ ಯಾರಿಗೋ ಒಂದು ಮೂರು ಕಾ ಕೊಟ್ಟೊಳೆ'. 'ಅಂವ ನನ್ನ ಅಣ್ಣ ಒಳ್ಳೊದರ್ಲಿ ಉಟ್ಟು ಒಳ್ಳೊದಾಗುಟು. ಇಂದ ಹಿಂಗಿ 'ಮುಂದೆ ಭೂಮಿ ಮನೆ, ಆಮೇಲೆ ಜನ, ಆಮೇಲೆ ನಿಂಗೆ ಬೇಕಾದ ಯಾವ ಕಾರ್ಯ ಬೇಕ್

ಾರ್ಯನೆ'ಂತ ಹೇಳ್ತ್. 'ಹಾಂಗೆ ಗ್ರೇಸಿ ಗ್ರೇಸಿ ಒಡಿಯೊಕು'.

ಇವಂಗೆ ಏನಾತ್? ಮರ್ರೊತ್ತ್ ಅದ್. ಕಾಯಿ ಚೊಲ್ಲಿದ್ ಇಸಿಯಾಕನ ಇವಂಗೆ ನೆಂಪಿಲ್ಲೆ. ಹೆಂಗಸ್ ಅಲ್ಲಿ ನಿಂತ್‌ಕಂಡುಟು. ಇಂವ ಕಾಯಿ ಒಡ್ಡದೆ. 'ಎಂತಕೆ ಒಡ್ಡ್ ಹಾಕುದು'ಂತ ಕೇಳ್ತ್. 'ಹಾಕುದೆಂತಕೆ ಕೊಡು ಇನ್ನೊಂದು ಕಾಯಿ ಕೊಡು'ಂತ ಹೇಳ್ತ್. ಮತ್ತೆ ಎಂತಕೆಂತ ಕೇಳ್ತ್. 'ನಿನ್ನ ಅಯ್ಯೆ ಬೊದ್ದೆ'ಂತ ತೆಗ್ದ್ ಓಡ್ತ್. ಇದರ ಮೈ ಇಡೀ ಆತ್. ಹಿಂದಕೆ ಹೇಳ್ತ್. ಒಡಿನಿಂತ. ಇನ್ನ್ ಎಲ್ಲ ಹೋಗಲಿಂತ. ಎಲ್ಲ ಹೋತ್. ಇದ್ದದ್ ಹೋತ್. ಇದ್ದ ಒಂದ್ ಇಲ್ಲೆ. ಇನ್ನ್ ಮುಂದೆನ ಹಾಂಗೆ ಆಗಲೀಂತ. ಮುಂದೆನ ಹಾಂಗೆ ಆತ್. ಮೊದಲಿನಂಗೆ ಆತ್. ಹಿಂಗೆ ಕತೆಮುಗ್ತ್. [ಕತಾ ನಿರೂಪಕ:ಮೋಹನಗೌಡ ಮಡ್ತಿಲ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 57. ಇಕ್ಕಾಳ್ ಸಟ್ಟುಗ – ಮುತ್ತುಗಾರ್ ಕುದುರೆ'; 'ಕಟ್ಟೋಳು ಹಗ್ಗ ಕುಟ್ಟೊಳು ದೊಣ್ಣೆ' ಕತೆ

ಒಂದಾನೊಂದು ಊರ್‌ಲಿ ಒಂದು ಅಜ್ಜಿ ಇತ್ತ್‌ಗಡ. ಅಜ್ಜಿಗೆ ದನಗಳ ನೋಡಿಕೆ ಒಬ್ಬ ಹೈದ. ಆ ಹೈದಂಗೆ ಮೂರ್ ಪುಂಡಿ ಕಟ್ಟಿಕೊಟ್ಟತ್. ಆ ಮೂರ್ ಪುಂಡಿ ಕಟ್ಟಿ ಕೊಟ್ಟ್‌ದ್ ಆ ಪುಂಡಿ ತೆಕಂಡ್ ಹೋಗಿ ಬೆಟ್ಟದ ಹಕ್ಕಲೆ ಹೋಗಿ ಮಧ್ಯಾಹ್ನ ಆಕನ ಅದರ ಬಿಚ್ಚಿ ಒಂದು ತಿಂದರೆ ಸಾಲದ್. ದೊಡ್ಡ ಪಾರೆಕಲ್ಲ್‌ಲಿ ಕುದ್ದ್‌ದ್ 'ಒಂದು ತಿಂದರೆ ಸಾಲದ್ ಎರಡ್ ತಿಂದರೆ ಬಾರದ್ ಸಾಯಲಿ ಮೂರರ ತಿಂದನೆ'ಂತ ಹೇಳ್ತ್‌ಗಡ. ಹಂಗೆ ಮೂರರ ತಿಂದನೆಂತ ಹೇಳ್ಕನ 'ಅಯ್ಯಯ್ಯೋ ನಮ್ಮ ಯಾರ್ ತಿಂಬೊವಪ್ಪಾ'ಂತ ಹೇಳಿ ದೆವ್ವಂಗ ಒಂದ್ ಇಕ್ಕಾಲ್ ಸೆಟ್ಟ್‌ಗೊ ಕೊಟ್ಟೊ. ಯಾರಿಗೆ? ಹೈದಂಗೆ. ಕೊಟ್ಟ್ ಅದರ ತೆಕಂಡ್ ಹೋಗಿ ಅಜ್ಜಿನೊಟ್ಟಿಗೆ ಹೇಳ್ತ್ ಗಡ. 'ಅಜ್ಜಿ ಅಜ್ಜಿ ನೀ ಇಕ್ಕಾಳ್ ಸಟ್ಟ್‌ಗೋ'ಂತ ಹೇಳ್ಬೆಡಾ. ಅಜ್ಜಿ 'ಇಕ್ಕಾಳ್ ಸಟ್ಟ್‌ಗೊ'ಂತ ಹೇಳ್ತ್‌ಗಡ. ಇಕ್ಕಿ ಇಕ್ಕಿ ಇಕ್ಕಿದ್ ಬೇಕಷ್ಟೆ ಯಾವ ತಿಂಡಿ ಬೇಕೋ ಅದರೆಲ್ಲಾ ಇಕ್ಕಿ ಆತ್‌ಗಡ.

ಮರು ದಿನನ್ ಮೂರ್ ಪುಂಡಿ ಕಟ್ಟಿಕಂಡ್ ಹೋತ್. ಅದ್ಕೆ ಬೇಕಷ್ಟ್ ತೀಂತ್. 'ಒಂದು ತಿಂದರೆ ಸಾಲದ್, ಎರಡ್ ತಿಂದರೆ ಬಾರದ್, ಸಾಯಲಿ ಮೂರಾರ್ ತಿಂದನೆ'ಂತ ಹೇಳ್ತ್‌ಗಡ. ಆ ಮೂರು ದೈವಂಗಳೂ ಒಂದು 'ಮುತ್ತು ಗಾರ್ ಕುದುರೆ'ನ ತಂದ್ ಕೊಟ್ಟೊ. (ಆ ಮೂರ್ ದೆವ್ವ ಕೂಡಿ, ನಮ್ಮ ತಿಂಬವ ಬಾತಲ್ಲೆಂತ ಹೇಳಿ) ಮುತ್ತು ಗಾರ ಕುದುರೆನ ಕೊಟ್ಟ್‌ದಾಕನ ಅದರ ಮನೆಗೆ ತೆಕಂಡ್ ಹೋತ್. 'ಅಜ್ಜಜ್ಜಿ ನೀ ಮುತ್ತುಗಾರ್ ಕುದುರೆ'ಂತ ಹೇಳ್ಬೇಡತ ಹೇಳ್ತ್. ಯಾಕೆ? ಇಕ್ಕಾಲ್ ಸಟ್ಟ್‌ಗಾಂತ ಹೇಳಿ ಇಕ್ಕಿದ್ ಬೇಕಷ್ಟೆ ತಿಂದ್‌ದಾತ್‌ಂತ ಹೇಳಿ 'ಮುತ್ತ್‌ಗಾರ್

ಕುದುರೆ'ಂತ ಹೇಳ್ತ್‌ಗಡ ಅಜ್ಜಿ. ಅಜ್ಜಿಗೆ ದೊಡ್ಡಾ ಮುತ್ತ್‌ಗಾರ್ ರಾಶಿ ರಾಶಿ ಎಷ್ಟೋ ಆತ್. ಅದರ ರಾಶಿ ಹಾಕಿದ್ ತೆಗ್ದ್ ಅಡಂಗಿಸಿತ್. ಮಾರ್ನೆದಿನ ಬಾತ್. ಮೂರು ಪುಂಡಿ ಮರುದಿನನ್ ಕಟ್ಟಿಕಂಡ್ ಹೋತ್. 'ಒಂದು ತಿಂದರೆ ಸಾಲದ್. ಎರಡ್ ತಿಂದರೆ ಬಾರದ್, ಸಾಯಲಿ ಮೂರಾರ್ ತಿಂದರೇ'ಂತ ಹೇಳ್ತ್. ಅಷ್ಟೊತ್ತಿಗೆ ದೆವ್ವಗ 'ಒಂದು ಕಟ್ಟೋಳು ಹಗ್ಗ ಕುಟ್ಟೋಳು ದೊಣ್ಣೆ' ಕೊಟ್ಟೊ. ತೆಕಂಡ್ ಹೋಗಿ ಮನೆಗೆ ಕೊಟ್ಟತ್. ಹೈದ ಅಜ್ಜಿನೊಟ್ಟಿಗೆ ಹೇಳ್ತ್. 'ಕಟ್ಟೊಳ್ ಹಗ್ಗ ಕುಟ್ಟೊಳ್ ದೊಣೆ'ಂತ ಹೆಳ್ಬೇಡಾಂತ. ಅಜ್ಜಿ ಹೇಳ್ತ್ 'ಕಟ್ಟೊಳ್ ಹಗ್ಗ ಕುಟ್ಟೊಳ್ ದೊಣ್ಣೆ'ಂತ. ಕಟ್ಟೊಳ್ ಹಗ್ಗಲಿ ಕಟ್ಟಿಹಾಕಿ ಕುಟ್ಟೊಳ್ ದೊಣ್ಣೆಲಿ ಸಮಾ ಅಜ್ಜಿಗೆ ಕುಟ್ಟಿತ್. 'ದಮ್ಮಯ್ಯ ನಿನ್ನ ಇಕ್ಕಾಳ್ ಸಟ್ಟುಗಾನ್ ಕೊಟ್ಟನೆ, ಮುತ್ತುಗಾರ್ ಕುದುರೆನೂ ಕೊಟ್ಟನೆ'ಂತ ಅಜ್ಜಿ ಹೇಳ್ರೆ ಅದ್ ಬುಟ್ಟದೆನೆ. ಮತ್ತೆ ಹೈದ ಬಂದ್ 'ಸಾಕ್ ಮಾಡ್'ಂತ ಹೇಳ್ತ್. ಮತ್ತೆ ಬುಟ್ಟತ್ ಅಲ್ಲಿಗೆ ಮುಕ್ತ್. [ಇಕ್ಕಾಳ್ ಸಟ್ಟುಗ ಅಂದರೆ ಅಕ್ಷಯ ಪಾತ್ರೆ] ದೆವ್ವಗ ಹೈದ ಕುದ್ದ ಕಲ್ಲ್‌ಲಿ ಇದ್ದೊ. ಇಂವ ಒಂದ್ ತಿಂದರೆ ಸಾಲದ್ ಎರಡ್ ತಿಂದರೆ ಬಾರದ್ ಎಂದ್ ಹೇಳ್ಕನ ಹೆದರಿ ಇಕ್ಕಾಲ್ ಸೆಟ್ಟುಗ ಕೊಟ್ಟ್, ಮಾರಯನೀ ಬೇಕಷ್ಟ್ ತಿಂದ್‌ಕೊಂತ ಹೇಳ್ದೊ.[ಕತಾ ನಿರೂಪಕ:ಓಡ್ಯಪ್ಪಗೌಡ ಸ್ವರಂಜ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 58.ಕೊಪ್ಪರಿಗೆ ಹುಡುಕಾಟದ ಕತೆ

ಒಂದಾನೊಂದು ಊರ್ಲಿ ಒಂದು ಎರಡ್ ಮನೆ ಇತ್ತ್. ಒಂದು ಮನೆಯವು ಎದ್ದ್ ಬೆಳಿಗ್ಗೆ ಜಾಲಿಗೆ ಬಂದ್ ಮೂಡಕ್ಕೆ ದೇವರಿಗೆ ಕೈಮುಗಿಯೋತಿದ್ದೊ. ಅದರ ಪಕ್ಕದ ಮನೆಯವು ನೋಡಿ ಇವು ಯಾಕೆ ಕೈಮುಗಿಯೋದುಂತ ಆಲೋಚನೆ ಮಾಡ್ದೊ. ಆಲೋಚನೆ ಮಾಡಿ ಕೆಲವು ದಿನದ ಮೇಲೆ ಅವು ಹೋದೊ. ಕಾಡಿಗೆ ಹೋಗಿ ಹೋಗಿ ಹೋಗಿ ಮಾಯಿಲಕೋಟೆ ಅಂತ ಹೇಳುವ ಒಂದು ಗುಡ್ಡೆ ಉಟ್ಟು. ಆ ಗುಡ್ಡೆಯ ಅಡಿಗೆ ಹೋಕನ ನಾಕ್ ಕೈನ ಕೊಪ್ರಿ(ಕೊಪ್ಪರಿಗೆ) ಸಿಕ್ಕಿತ್. ಅದರ ನೋಡಿ ಬಾರಿ ಸಂತೋಷ ಪಟ್ಟೊ. ಸಂತೋಷ ಮಾಡಿ ತಮ್ಮನ ಮನೆಗೆ ಕಲ್ಸಿತ್. ನೀ ಹೋಗಿ ಗೋಣಿ ತಕಂಡ್ ಬಾ. ನಾವುಗೆ ಬೇಕಾದಷ್ಟ್ ಹೊತ್ ಕಂಡ್ ಪೋಯಿಂತ ಕಳ್ಸಿತ್. ಹಾಂಗೆ ಅಂವ ಬಾತ್. ಬಂದ್ ಮನೆಲಿ ಉಂಡತ್. ಉಂಡ್ ಆಮೇಲೆ ಅಂವ ಬುತ್ತಿ ಬೇಕ್'ಂತ ಮನೆಯವರೊಟ್ಟಿಗೆ ಕೇಳ್ತ್. ಬುತ್ತಿ ಕಟ್ಟಿಕಂಡ್ ಅಂವ ಆಲೋಚನೆ ಮಾಡಿ ಅದಕ್ಕೆ ಮದ್ದ್ ಬೇಕಾದ್ ಅಂವ ಹಿಡ್ಕಂಡ್ ಬಾತ್. ಬಂದ್ ಅರ್ಧ ಗುಡ್ಡೆಲಿ ಈ ಮದ್ದ್‌ನ ಈ ಹುಗ್ಗಿಗೆ ಹಾಕಿತ್. ಹಾಕಿ ಸೀದ ಹೋತ್. ಹೋಗಿ ಹಕ್ಕಲೆ ಹೋಕನ ಅಣ್ಣ ಏನ್ ಮಾಡ್ತ್ ನಂಗೆ ಒಬ್ಬಂಗೇ ಇದ್ ಆಕ್'ಂತ ಹೇಳ್ತ್. ತಮ್ಮಂಗೆ ಗುಂಡ್‌ಹೊಡ್ ಗುಂಡ್ ಹೊಡ್ದಾಕನ ಇಂವ ಬೀತ್. ಯಾರ್ ? ತಮ್ಮ. ಬಿದ್ದ ಮೇಲೆ ಇಂವ ಬಾತ್ ಬಂದ್ ಗೋಣಿಗೆ ಕೈ ಹಾಕಿತ್. ಗೋಣಿಗೆ ಕೈ ಹಾಕಿಕನ ಗೋಣಿಲಿ ಏನಾ ತೋರ ಕಂಡತ್

ೋರ ಕಂಡಾಕನ ಒಳಗೆ ಬಿಚ್ಚಿ ನೋಡ್ತ್. ನೋಡ್ಕನ ಹುಗ್ಗೆನು ಬುತ್ತಿ ಇತ್ತ್. ಇವಂಗೆ ಒಳ್ಳೊ ೊಟ್ಟೆ ಇಸಿಕಂಡ್ ಇತ್ತ್. ಇಂವ ಅಲ್ಲೇ ಆಚೆಗೆ ಒಂದ್ ಪಾರೆ ಕಲ್ಲ್‌ಲಿ ಕುದ್ದ್ ಉಂಡತ್. ುಂಡ್ ಆಗಿ ಆಕನ ಈ ಇಸ(ವಿಷ) ಇವಂಗೆ ಏರಿ ಇವನೂ ಅಲ್ಲಿ ಬಿದ್ದ್ ಹೋತ್. ಆ ಕೊಪ್ರಿ ಲ್ಲೇ ಉಟ್ಟು . ಯಾರಾದರ್ ಹೋದಾರೆ ಹೋಗಿ. [ಕತಾ ನಿರೂಪಕ:ಶಿವಪ್ಪಗೌಡ ಮಡಪ್ಪಾಡಿ; ್ಥಳ:ಮನೆ; ಸಮಯ:ಹಗಲು; ವರ್ಷ–1991]

## 59.ಕಾಲ್ದೀಪದೊಳಗೆ ಅರ್ಸು ಮಗಳ ಕತೆ

ಒಂದಾನೊಂದು ಊರ್ಲಿ ಒಂದು ಅರ್ಸು ಇತ್ತ್. ಅವಂಗೆ ಒಂದು ಮೊದ್ವೆ ಆತ್. ಮೊದ್ವೆ ಆಗಿದ್ ಹಂಞ ಸಮಯ ಆಕನ ಒಂದು ಹೆಣ್ಣ್ ಕೂಸುನ ಹೆತ್ತತ್ ಅದ್. ಹೆತ್ತ್‌ದ್ ಹೆಣ್ಣ್ ಸತ್ತ್ ಹೋತ್. ಹೆಣ್ಣ್ ಸತ್ತ್ ಹೋಗಿದ್ ಇಂವ ಸುಮಾರ್ ಸಮಯ ಅದ್ ಒಂದೇ ಕೂಸ್‌ನ ಸಾಂಕಿತ್. ಸುಮಾರ್ ದೊಡ್ಡಿದಾತ್. ಸಾಧಾರಣ ಒಂದು ಹತ್ತ್ ಹದಿನೈದು ವರ್ಷಾ ಆಕನ ಪ್ರಾಯಕೆ ಬಾತ್. ಪ್ರಾಯಕೆ ಬಾಕನ ಬಾರಿ ಸೋಕ್‌ನ ಹೆಣ್ಣಾತ್. ಹೆಣ್ಣಾಗಿ ಆಕನ ಇಂವ ಹೇಳ್ತ್. ಊರ್ಲೆಲ್ಲ ಕೇಳ್ತ್. 'ತಾನ್ ಮಾಡಿದ ನಟ್ಟಿನ ತಾನೇ ತಿನ್ನೊಕೊ, ಅಲ್ಲ ಇನ್ನೊಬ್ಬರಿಗೆ ಕೊಡೊಕ'ಂತ ಹೇಳಿ. ಅವು ಏನೋ ಗ್ರೇಸಿ ಊರವು ಹೇಳ್ದೊ. 'ತಾನ್ ಮಾಡಿದ ನಟ್ಟಿನ ತಾನೇ ತಿನ್ನೊಕು, ಇನ್ನೊಬ್ಬಂಗೆ ಕೊಡೊಕು'ಂತ ಅಂದರೆ 'ನನ್ನ ಮಗಳ ನಂಗೇ ಮೊದ್ವೆ ಆಕು'ಂತ ಹೇಳ್ತ್. ಹಂಗೆ ಹೇಳಿದ್ ಎಲ್ಲವ್ಕೆ ಪ್ರಚಾರ ಮಾಡ್ತ್. ಅದರ ಕೆಲಸದ ದಾಸಿ ಹೇಳ್ತ್ (ಅಮ್ಮಾ). 'ಅಕ್ಕಾ ನಿಮ್ಮ ಅಪ್ಪ ನಿಮ್ಮ ಮೊದ್ವೆ ಆದವೆ ಗಡ'ಂತ. 'ಎಂತ ನೀ ಹೇಳ್ಯ? ಹುಚ್ಚ ನಿಂಗೆ'ಂತ ಹೇಳಿ ಜೋರ್ ಮಾಡ್ತ್ ಅದರ. 'ಅಲ್ಲ ಸತ್ಯಕೆ ಆದರ್ ಹೌದು'ಂತ ಹೇಳಿ ಬೇಜಾರಲಿತ್ತ್. ಬೇಜಾರಲ್ಲಿದ್ದ್‌ದ್ ಹಂಜ್ಞ ಸಮಯ ಆಕನ ಇದಕ್ಕೆ ಕೇಳಿಕೆ ಬಾಯಿ ಬಾತ್ಲೆ. ಮತ್ತೆ ಕೇಳಿ ಬುಡ್ತ್. 'ಯಾಕೆ ಮಗಳೆ? ನೀ ಏನ್ ಬಾರಿ ಬೇಜಾರಲಿ ಒಳ? ಎಂತದ್'ಂತ ಕೇಳ್ತ್. 'ಹೌದಪ್ಪ ನೀವೊಂದು ಬೇಡದ ಮಾತ್‌ಗಳ ಆಡಿಯೊಳರಿ ಗಡ. ಹೌದ?''ಎಂತ ಮಗ ಹೇಳ್?''ನನ್ನ ನೀವು ಮೊದ್ವೆ ಆನೆಂತ ಹೇಳ್ಯೊಳರಿಯ?'. 'ನಿಂಗೆ ಹೇಳ್ದವು ಯಾರ್?''ದಾಸಿ ಹೇಳ್ತ್'. 'ಹೌದ್. ನಾ ಈಗ ಎಲ್ಲಾ ಊರಿಗೆ ಡಂಗುರ ಇಸ್ಯೊಲೆ. ನನ್ನ ಮಗಳ್ನೆ ಮೊದ್ವೆ ಆದುಂತ ಹೇಳಿ ನಾ ನಿಶ್ಚಯ ಮಾಡ್ಯೊಲೆ. ಅದಕ್ಕೆ ಮೊದ್ವೆ ಆನೆ'ಂತ ಹೇಳ್ತ್. 'ಮೊದ್ವೆ ಆದಂದರೆ ತೊಂದರೆ ಇಲ್ಲೆ. ನನ್ನಷ್ಟೆ ನಂಗೆ ಬೇಕಷ್ಟ್ ಚಿನ್ನನ ನನ್ನ ಮೈಗೆ ಹಾಕೊಕು. ಆಮೇಲೆ ನನ್ನಂದ್ ದೊಡ್ಡ ಕಾಲ್ದೀಪ ನೀವು ಮಾಡೊಕು'ಂತ ಹೇಳ್ತ್. 'ಅಕ್ಕಂತ ಹೇಳ್ತ್. ಅಕ್ಕಂತ ಹೇಳಿ ಇಂವ ಬೇಕಷ್ಟ್ ಚಿನ್ನ ಎಲ್ಲ ಇದ್ಕೆ ಮಾಡಿ ಹಾಕಿತ್. ಒಂದು ದೊಡ್ಡ ಕಾಲ್ದೀಪ್ಪ ತರ್ಸಿತ್. 'ತಂದ್‌ದ್ ನಾ ಮಲಗುವಲ್ಲಿ ಇಸಿನಿ'ಂತ ಹೇಳ್ತ್. ಇಸಿದ್ ದೂರಕ್ಕೆಲ್ಲ ಓಲೆ ಬರ್ತ್. ಹಕ್ಕಲೆಯವುಕ್ಕೆ ಎಲ್ಲ ಬಾಯಿ ಮಾತ್, ಎಲೆ ಅಡಿಕೆ ವೀಳ್ಯಕೊಟ್ಟ್ ಹೇಳಿಕೆ ಮಾಡ್ತ್. ಮತ್ತೆ ಇಂತ ದಿನಂತ ಹೇಳಿ ನಿಘಾಂಟಾತ್.

ಇವಂಗೆ ಮುಂದೆ ಒಂದು ಹೆಣ್ಣ್ ಮಾತಾಡ್ಯೊಳೊ. ಇದೇ ಅರ್ಸುಗೆ. ಅದೂ ಹೆಣ್ಣ್ ಒಳ್ಳೊದೆ. ಹೆಣ್ಣ್ ಒಳ್ಳೊದಾದರೂ ಇದರಷ್ಟ್ ಸ್ವರೂಪ ಇಲ್ಲೆ. ಅ ಹೆಣ್ಣ್‌ಗೆ ಇದರ ಮೊದ್ವೆ ಆದುಂತ ಹೇಳ್ಕನ ಹೊಟ್ಟೆ ಕಿಚ್ಚಾತ್. ಮತ್ಸರ ಆತ್. ಅದ್ ಹಿಂಗೆ ಮನ್ಸ್‌ಲೇ ಇಸಿಕಂತ್. ಮೊದ್ವೆ ಆದುಂತ ಇಂವ ಎಲ್ಲ ಡಂಗುರ ಇಸಿತ್. ಮೊದ್ವೆ ಎಲ್ಲ ತಯಾರಾತ್. ಸಿಂಗಾರ ಮಾಡಿ ಹೊರಗ ಕುದ್ದೊ. ಇದ್ ಹೇಳ್ತ್ 'ಸತ್ಯಲಿ ಹುಟ್ಟಿ ಶಾಪಲಿ ಬೆಳ್ದ ಮಗ ಆದರೆ ಮೂಡಂದ ಒಂದು ಸುಳಿಗಾಳಿ ಬರೊಕು'. ಇದರ ಚಿನ್ನ ಎಲ್ಲ ಹಾಕಿದ್ ಕುದ್ದತ್ ಇದ್. 'ಸತ್ಯಲಿ ಹುಟ್ಟಿ ಶಾಪಲಿ ಬೆಳ್ದರೆ ಈ ಕಾಲ್ದೀಪ ಒಂದು ಹೋಗಿ ಎರಡಾಕು', 'ಸತ್ಯಲಿ ಹುಟ್ಟಿ ಶಾಪಲಿ ಬೆಳ್ದ ಮಗ ಆದರೆ ಈ ಕಾಲ್ದೀಪನ ತೆಕಂಡ್ ಹೋಗಿ ಸಂದ್ರದ ನಡುವಿಲಿ ಹಾಕೊಕು'ಂತ ಹೇಳ್ತ್. ಕಾಲ್ದೀಪ ಎರಡಾತ್. ಕಾಲ್ದೀಪದ ಒಳಗೆ ಕುದ್ದತ್. ಮೂಡಂದ ಒಂದ್ ಸುಳಿಗಾಳಿ ಬಾತ್. ಸುಳಿಗಾಳಿ ಬಾಕನ ಚಪ್ಪರ ಗಿಪ್ಪರ ಒತ್ತರೆ ಹೋತ್. ಹಂಚ್ ರಟ್ಟಿತ್. ಈ ಕಾಲ್ದೀಪ ಇಡೀ ರಟ್ಟಿಹೋತ್. ಸಂದ್ರಕ್ಕೆ ಹೋಗಿ ಬೀತ್.

ಸಂದ್ರಕ್ಕೆ ಹೋಗಿ ಬಿದ್ದ್‌ದ್ ಆ ಊರ್‌ನ ಅರ್ಸನು ಆ ಊರ್‌ನ ಪ್ರಧಾನಿನು ಯಾಗೋಲು ಮೋರೆ ತೊಳಿಯಕೆ ಸಂದ್ರಕೆ ಬಾದು. ಬಾಕನ ಇದು ಪಳಪಳಂತ ಹೊಳ್ದದೆ. ಇದೆಂತದ್ ಕಥೆ ದೊಡ್ಡದೊಂದು ದೀಪದಂಗೆ ಕಂಡದೆಂತ ಹೇಳ್ತ್. ಅರ್ಸು ಹೋದಾಂಗೆ ಅದು ಹೊಂಡ ಹೊಂಡಕೆ ಹೋತ್. ಕೆಳಗೆ ಕೆಳಗೆ ಹೋತ್. ಪ್ರಧಾನಿ ಹೋತ್. ಪ್ರಧಾನಿ ಹೋಗಿ ಆಕನ ಪ್ರಧಾನಿಗೆ ಸಿಕ್ತ್. ನೀವು ಮೂರು ಮೂರು ಸಲ ಹೋಗಿನು ಸಿಕ್ಕಿತ್ಲೆ ಅಲ್ಲ ಅರಸುಗಳೆ, ನಂಗೆ ಸಿಗ್ತ್ ಇಂವ ತಕಂಡೋಗಿ ಮನೆಲಿ ಇಸಿಕನ್ತ್. ಇಸಿದಾಕನ ಇವಂಗೆ ಒಂದು ಕೊಂಡೆ ಹಾಲ್, ಮತ್ತೆ ಒಂದು ಬೆಂಡ, ಮತ್ತೆ ಒಂದು ಪಾಡ ಬಾಳೆ ಹಣ್ಣ್ ಅದರ ಅಯ್ಯೆ ಇಸುದು (ಯಾಗೋಲು,ಉಪ್ಪರಿಗೆಲಿ). ಮತ್ತೆ ಬಿಸಿ ನೀರೆಲ್ಲ ಕೂಡ್ದು. ಎಣ್ಣೆ ತೆಕಂಡ್ ಹೋಗಿ ಇಸುದು ಅವಂಗೆ ಎಲ್ಲಾ ತಂದಿಸುದದು. ಅಷ್ಟೊತ್ತಿಗೆ ಯಾಗೋಳು ಎಣ್ಣೆ ಪೂಜುದು, ಮೀಯುದು ಬೆಂಡನು ಕುಡಿಯುದು ಬಾಳೆಹಣ್ಣನು ತಿಂಬೊದು. ಇದ್ ಯಾಗೋಲು ಹಿಂಗೆ ಮಾಡ್ಕನ ಇವಂಗೆ ಇಲ್ಲಿ ಅರ್ಧ ಕೊಂಡೆ ಹಾಲೇ ಸಿಕ್ಕುದು. ಇದ್ ಕಾಲ್ದೀಪ ಒಡ್ದ್‌ದ್ ಬಂದ್ ಈ ಹಾಲ್‌ನ ಕುಡಿದು. ಬಾಳೆಹಣ್ಣ್ ಅರ್ಧ ತಿಂಬೊದು, ಬೆಂಡನು ಒಟ್ಟೆ ಮಾಡಿ ಕುಡಿದು, ಅಲ್ಲಿ ಮೀದ ಬಾದು. ಎಲ ಇದೊಂದು ದೊಡ್ಡ ಕಥೆ ಆತಲ್ಲೆ.'ಈ ಉಪ್ಪರಿಗೆಗೆ ಯಾರ್ ಬಾದು? ಕಾಲ್ದೀ ಮಾತ್ರ ನನ್ನಕ್ಕಲೆ ಉಟ್ಟು. ಮತ್ತೆ ಯಾರೂ ಬಾದ್ಲೆ'ಂತ ಹೇಳ್ತ್ ಇವಂಗೆ ಸಂಕಲ್ಪ ಆತ್. ಕಾದ ಕುದ್ದತ್ ಅಂವ. ಕಾದ್ ಕುದ್ದಾಕನ ಈ ಹೆಣ್ಣ್ ಬಾತ್. ಬಂದ ಕೂಡ್ಲೆ ಕೈಲಿ ಹಿಡ್ಕಂಡತ್.'ನಿ ಯಾರ್? ಏನ್? ಎಂತ? ಕೇಳ್ತ್'. 'ಸಂಗತಿ ಹಿಂಗೆ ಹಿಂಗೆ. ಅಪ್ಪ ನನ್ನ ಮೊದ್ವೆ ಆನೆ'ಂ ಹೇಳ್ದೊ. 'ಅದಕ್ಕೆ ನಾ ಒಂದು ಕಾಲ್ದೀಪ ಮಾಡ್ಸಿದ್ ಕೊಡೊಕು, ಚಿನ್ನ ಹಾಕೊಕು'ಂತ ಹೇಳ್ 'ಹಂಗೆ ಮಾಡಿಕೊಟ್ಟೊ'. ಮತ್ತೆ ನಾ ಹೇಳ್ದೆ 'ಸತ್ಯಲಿ ಹುಟ್ಟಿ ಪಾಪಲಿ ಬೆಳ್ದ ಮಗ ಆದ್ರೆ ಇದ ತಕಂಡೋಗಿ ಸಂದ್ರಕೆ ಹಾಕೊಕು'ಂತ.'ಅಪ್ಪಂಗೆ ಮೊದ್ವೆ ಇಲ್ಲೆ. ಮೊದ್ವೆ ಮಾತಾಡ್ದ ಹೆಣ್ಣ್ ಬೇರೆ'ಂ

ೇಳ್ತ್.'ಆತಂದರೆ, ಅವ್ವ ಇನ್ನ್ ನೀ ಎರಡ್‌ಕೊಂಡೆ ಹಾಲಿಸೊಕು. ಎರಡ್‌ಪಾಡ ಾಳೆಹಣ್ಣಿಸೊಕು. ಮತ್ತೆ ಯಾಗೋಲಿಂದ ಡಬ್ಬಲ್ ಇಸೊಕು'ಂತ ಹೇಳ್ತ್. 'ಯಾಕೆ ುಂಜ?"ನಂಗೆ ಬೇಕು'ಂತ ಆತ್. ಕುಡ್ತ್.

ಕುಡ್ದಾಕನ ಅರ್ಸುಗ ದಂಡೊಡ್ಡಿದೊ. ಅಂವ ಹೋದಂವ ಬಾತೇ ಇಲ್ಲೆ ಅಲ್ಲೆ. ಏನ್ ಕಥೆ? ಂವ ಬಂದೇ ತೀರೊಕು, ಪ್ರಧಾನಿ ಬರೊಕುಂತೇಲಿ. ಹಂಗೆ ದಂಡೊಡ್ಡಿದಾಕನ ಇಂವ ಅಲ್ಲಿಗೆ ೋಕನ ಹೇಳ್ತ್. 'ಅವ್ವ ಕಾಲ್ದಿಪನ ನರಮಾನ್ತಿ ಒಬ್ಬಂಗೆ ಕೊಡಿಕೆ ಬೊತ್ತ್. ಈ ಕಾಲ್ದೀಪನ ಲ್ಲೇ ಇಸೊಕು. ಅದೊಂದು ಲಕ್ಷಣದ ದೀಪ'ಂತ ಹೇಳಿ ಈ ಅರ್ಸುಗೆ ಮಾತಾಡ್ದ ಹೆಣ್ಣ್‌ನ ಬೇರೆ ಡೆಗೆ ಕೊಡ್ದು. ಬೇರೆ ಕಡೆಗೆ ಕೊಡಿಕೆ ಆಕನ ಈ ಹೆಣ್ಣ್ ಏನ್ ಮಾಡ್ತ್ ಇದೇ ದೀಪನ ಅಲ್ಲಿಗೆ ಕಂಡ್ ಹೋದೊ. ಇದ್ ಕೊಟ್ಟತ್. ಹೆಂಗಾರ್ ಮಾಡಿ ದೀಪಲಿ ಏನಾರ್ ಒಂದು ಉಟ್ಟುಂತ ೇಳಿ ಹಾಂಗೆ ಹಿಂಗೆಂತ ಹೇಳ್ದೊ. ಯಾರ್ .......ಮೊದ್ವೆ ಮನೆಯವು. ಅಲ್ಲಿಂದ ಈ ದೀಪನ ೊಟ್ಟೊ. ಇದ್ ಅಜ್ಜಿ ಕೊಟ್ಟದ್. ಕೊಟ್ಟ್‌ದಾಗಿದ್ ಅಲ್ಲಿ ಒಂದು ಕೊಡಪಾನ ಬೀಜದ ಎಣ್ಣೆ ೊಯ್ತ್. ದೊಡ್ಡ ದೊಂದಿ ಮಾಡಿ ದೀಪ ಎಲ್ಲ ಇಸಿದೊ. ಇಸಿ ಆಕನ ಇದ್ ಒಳ್ಳೊ ಕಾದಾಕನ ಬ್ಬ ಒಡ್ತ್. ಒಡ್ದಾಕನ ಇದರ ಕಣ್ಣ್‌ನ ತೆಗ್ತ್. ಕಣ್ಣ್‌ನ ತೆಗ್ದ್ ದಡ್ಡ್‌ನ ಮಂಡೆಗೆ ಹಾಕಿತ್. ೖಕಾಲ್‌ನ ಕಡ್ದ್ ಗೊಬ್ಬರದ ಗುಂಡಿಗೆ ಹಾಕಿತ್. ಕೈನ ಬೂದಿ ಹೊಂಡಲಿ ಇಸಿತ್. ಮತ್ತೆ ಇದರ ಲೆನ ತಕಂಡೋಗಿ ಹಟ್ಟಿಲಿ ತೂಗಿತ್. ಮತ್ತೆ ಇದರ ನಡುನ ತಕಂಡೋಗಿ ಹಳ್ಳಕೆ ಹಾಕಿತ್.

ಇದೇ ಹೆಣ್ಣಿಗೆ ಹೂ ಮಾಲೆ ಕಟ್ಟಿ ತಾವಂತ ಒಂದು ಅಜ್ಜಿ ಇತ್ತ್. ಈ ಅಜ್ಜಿ ಬಾಕನ ಚಳಚಳ ಳಚಳಂತ ಕೇಳ್ದೆ ಹಳ್ಳಂದ. ಯಾಗೋಳು ಕೇಳ್ತ ಇತ್ತ್‌ಲ್ಲೆ. ಇಂದ್ ಎಂತ ಚಳಚಳ ಕೇಳ್ದುಂತ ೋತ್. ಹೋಗಿ ನೋಡ್ಕನ ಒಂದು ನಡುತುಂಡು ಅಲ್ಲಿ ಬಂದುಟು. ಹೂನ ಮಾಲೆನ ರಸುನ ಹೆಣ್ಣಿಗೆ ತಾದಲ್ಲ. ಬಾಕನ ಇದರನೂ ತೆಕನ್ತ್. ತೆಕಂಡಾಕನ ಏನ್ ಎಂತದ್‌ಂತ ೋಡ್ಕನ ಒಂದು ಸ್ವಾಸದಂಗೆ ಉಟ್ಟದ್. ತಕಂಡೋಗಿ ಅಲ್ಲಿ ಇಸಿತ್. 'ಅಜ್ಜಿ ನೀ ನನ್ನ ಕಣ್ಣಿನ ಕಣೊಕು. ಕಣ್ಣ್ ದಡ್ಡ್‌ನ ಮಂಡೆಲಿ ಉಟ್ಟು. ಮತ್ತೆ ನನ್ನ ಕಾಲ್ ಗೊಬ್ಬರದ ಗುಂಡಿಲಿ ಉಟ್ಟು. ನ್ನ ಕೈ ಬೂದಿ ಗುಂಡಿಲಿ ಉಟ್ಟು. ಇದೆಲ್ಲದರ ನಡು ತುಂಡಿಗೆ ಸಂದ್ ಸಂದ್ ಕೂಡ್ಸಿದ್ ನೀ ನ್ನ ಜೂವ ಮಾಡೊಕಜ್ಜಿ'ಂತ ಹೇಳ್ತ್. 'ಆತ್ ಮಗ'ಂತ ಹೇಳಿ ಹಂಗೆ ಎಲ್ಲ ತಕಂಡತ್. ಬ್ಬೆಗಲೇ ನಂಗೆ ಹಂಞ ಗೊಬ್ಬರ ಬೇಕು ಹೂವುನ ದೈಗೆ ಹಾಕಿಕೆ'ಂತ. 'ತೆಕ ಅದರ ಕೇಳ್ದೆ'ಂತ ೇಳ್ತ್. ಗೊಬ್ಬರ ಒಕ್ಕಿದ್ ಆಕನ ಕಾಲ್ ಸಿಕ್ಕಿತ್. ಅದರ ತೆಗ್ದ್ ಅಡಿಗೆ ಇಸಿತ್. ಮೇಲೆ ಗೊಬ್ಬರ ಸಿತ್. ಮರ್ದಿನ ಬಾತ್ 'ನಂಗೆ ಹಂಞ ಇದು ಬೇಕಾಯ್ತ್ ಅಮ್ಮಾ, ಎಂತದ್ ಬೂದಿ ೇಕಾಯ್ತ್'. 'ತೆಕ ಅದರ ಕೆಳ್ದೆ'ಂತ. 'ನಂಗೆ ಹಂಞ ಕೋಳಿಗೆ ದಡ್ಡ್ ಬೇಕ್. 'ಅಂದರೆ ತೆಕ'. ದ್ಕೆ ಗೋಷ್ಠಿಗೆ ಅತ್ತೆಲ್ಲೆ. ಇದರ ತೆಕನ್ತ್. ಅದರ ತೆಕನ್ತ್. ಎಲ್ಲ ತೆಕನ್ತ್. ತೆಕಂಡ್ ಕಡೆಗೆ ೇಳ್ತ್. 'ಹೂವುನ ತೋಟಕೆ ಅಮ್ಮಾ, ಅಯೋ ಎಂತ ಹಕ್ಕಿಗ. ಅದ್, ಇದ್, ಎಲ್ಲಾ ಬಂದವೆ.

ಒಂದು ಪೆರ್ಚಿಗೆ ಎಂತಾದ್ ಬೇಕಲ್ಲೆ'ಂತ ಹೇಳ್ತ್. 'ಪೆರ್ಚಿ ನಾ ಎಂತ ಕೊಡ್ತು'ಂತ ಹೇಳ್ತ್. '
ಅಲ್ಲಿ ಒಂದು ನೋಡಿ ತಲೆ ನೇಲಿಕಂಡುಟು. ಅದರ ತಕಂಡೋಗಿ ನಾ ಹಟ್ಟಿ ಬಾಗಿಲ್
ಕಟ್ಟಿನೆ'ಂತ. 'ತಕೊ ಬೇಕರೆ'ಂತ ಹೇಳ್ತ್. ಇದರ ಎಲ್ಲ ಸಂದ್ ಕೂಡ್ಸಿತ್. ನೀರ್ ತಲ್ತ್. ನೀ
ತಲ್ದ್ ದರ್ಬೆ ಕಟ್ಟಿ ಆಕನ ಎದ್ದ್ ಕುದ್ದತ್. ಕುದ್ದದ್ ನಾ 'ಒಂದ್ ಹೂನ ಮಾಲೆ ಕಟ್ಟಿನೆ'ಂ
ಹೇಳ್ತ್. ಯಾರಿಗೆ? ಇದೇ ಪ್ರಧಾನಿಗೆ ಮಾತಾಡ್ದ ಗೂಡೆ ಅದ್. ಯಾರ್? ಈ ಎಲ್ಲ ಕಣ
ಕಾಲ್ ಎಲ್ಲ ತೆಗ್ದದ್ ಅಲ್ಲ. ಅತಲ್ಲೆ. ಅಂವ ಮೊದ್ವೆ ಅತ್ಲೆ ಅಲ್ಲ. ಕಾಲ್ದೀಪ ಸಿಕ್ಕಿದ ಕೂ
ದಂಡೊಡ್ಡಿತ್. ಅತ್ತಲೆ ಹೋತಲ್ಲೆ. ಅಷ್ಟೊತ್ತಿಗೆ ಎಲ್ಲ ಪೊರ್ಲುನ ಹೂನ ಮಾಲೆ ಕಟ್ಟಿತ್. ಕಟ್ಟಿದ
ಕೊಟ್ಟತ್. ಕೊಟ್ಟಾಕನ 'ಓ ಬಾರಿ ಸೋಕುಟು, ಹೂನು ಲೈಕುಟು. ಮತ್ತೆ ತಲೆಗೂ ಎಣ್ಣೆನ
ಲೈಕಾಕಲ್ಲೆ, ಲೈಕ್ ನಂಗೆ ಕಣ್ಣ್‌ನ ಕಂಡತ್. ಪೊರ್ಲು ಕಟ್ಯೊಲೆ'ಂತ ಹೇಳ್ತ್. ಇದ್ ನೀ ಕಟ್ಟಿದ್ ಅಲ್ಲ
'ಅಜ್ಜಿ ಸತ್ಯ ಹೇಳೊಕು. ನೀ ಕಟ್ಟಿದಂತ್ ಆದರೆ ನಿನ್ನ ಮನೆಗೆ ಬಂದ್‌ದ್ ನಾ ನೋಡುವ
ನೋಡಿದ್ ನಿನ್ನ ತಲೆ ಕಡಿಯದೆ ಇರಿಕಿಲ್ಲೆ'ಂತ ಹೇಳ್ತ್. 'ಅಯ್ಯೋ ಅಕ್ಕ ನಾವು ಕಟ್ಟದೆ ಮ
ಯಾರ್ ? ನಾ ಮಂಜೇಶ್ವರಕೆ ಒಂದು ಮಗಳ ಕೊಟ್ಟಿದ್ದೆ. ಅದರ್ಲಿ ಒಂದು ಪಿಳ್ಳೆ ಇತ್ತ್. ಅದ
ಕರ್ಕಂಡ್ ಬಂದೊಳೆ. ಅದು ಕಟ್ಟಿದ್ ನಾ. ಸುಳ್ಳು ಹೇಳ್ದು ಏಕೆ'ಂತ ಹೇಳ್ತ್. 'ನಿನ್ನ ಪಿಳ್ಳೆನ ಕ
ಇತ್ತ'ಂತ ಆತ್. 'ಪಿಳ್ಳೆನ ಕಲ್ಸಿಕಿಲ್ಲೆ'. ಅಷ್ಟೊತ್ತಿಗೆ ಇದ್ ಬಂದ್ ಹೇಳ್ತ್. 'ಅರ್ರುನ ಪ್ರಧಾನಿ
ಮಾತಾಡ್ದ ಹೆಣ್ಣ್ ಹೇಳಿ ಹೊನೆ ಅಜ್ಜಿ'. ಹೋತ್ ಹೂನ ಮಾಲೆ ತಕಂಡ್. ಹೌದ ಅಕ್ಕ, ಅ
ಹೇಳ್ತ್ ಗಡ ಇದ್ ಬಾರೀ ಸೋಕುನ ಹೆಣ್ಣ್. 'ಆಂ.. ಯಾರ್ ಈ ಗೂಡೆ?' ಅದಕ್ಕೆ ಹೇಳ್ತಗ
'ಇದೆ ಹೌದೊ'. 'ಗೂಡೆ ನಿನ್ನ ಮಾಲೆ ಎಲ್ಲ ಬಾರಿ ಬುಗರಿನಂಗೆ ಉಟ್ಟು ಏನ್ ?''ಅದಕ್ಕೆ ಅ
ಅದ್ ಒಳ್ಳೊದುಟ್ಟು'ಂತ ಹೇಳ್ತ್. 'ನಿನ್ನ ತಲೆ ಕೂದಲೆಲ್ಲ ಬಾರಿ ಶೋಕುಟ್ಟಲ್ಲೆ. ಗುಂಗು
ಗುಂಗಾರಾಗಿದ್ ಬಾರಿ ಉದ್ದ ಉಟ್ಟಲ್ಲೆ ?''ಓ ಅದಕ್ಕಾ. ಅದಕ್ಕೆ ಒಂದು ಉಪಾಯ ಮಾಡ
ತಲೆ ಕೂದಲಿಗೆ ಬೀಜದ ಎಣ್ಣೆ ಹಾಕೋಕು ನೋಡಿ. ಬೀಜದ ಎಣ್ಣೆಹಾಕಿ ಬಿಸಿರ್(ಬಿಸಿ ನೀರ
ಹೊಯ್ಯೊಕು. ಮತ್ತೆ ಮೊಲೆಗೆ ಹಿಟ್ಟ್‌ನ ಸಟ್ಟುಗಲಿ ಆಚೆ ಈಚೆ ಕಾಸಿ ಹಾಕಿಕನ ಅಷ್ಟ್ ಲೈಕ್
ಎದ್ದದೆ. ಹಿಂದಕೆ ಹೊಸ್ತು ಬಂದದೆ'ಂತ ಹೇಳ್ತ್. ಹಾಂಗೆ ಮಾಡಿಕಂತ್. ಹಿಟ್ಟ್‌ನ ಸಟ್ಟು
ಕಾಯಿಕೆ ಇಸಿತ್. ತಲೆಗೆ ಬೀಜದ ಎಣ್ಣೆನ್ ಹಾಕಿತ್, ತಲೆಗೆ ಬಿಸ್ನೀರ್ ಹೊಯ್ಕನ್ತ್, ಸಟ್ಟು
ಎರಡ್ ಮೊಲೆಗೆ ಇಸಿತ್. ಇದ್ ಅಲ್ಲಿಗೆ ಜೋರಾಗಿದ್ ಹುಳ ಆಗಲಿ ಇದಕ್ಕೆ. ಇದರ ಅ
ಉಳಿದೊ. ಅಷ್ಟೊತ್ತಿಗೆ ಇವಂಗೆ (ಪ್ರಧಾನಿಗೆ) ಹೆಣ್ಣ್ ಮಾತಾಡ್ದ ಗೂಡೆ ಅಲ್ಲ ಅದ್. ಅದ್ ಮಾ
ಕೆಣಿಗೆ ಇದ್ ಹಿಂಗೆ ಹೇಳ್ತ್. ಆಗಿ ಆಗಿ ಹುಳ ಪೂರ ಗಜಿಬಿಜಿಂತ ಹೇಳಿ ಆತ್. [ಕ
ನಿರೂಪಕಿ:ದೇವಕಿ ನೆಡ್ಚಿಲ್; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 0.ಬೆಳ್ಳಿಕುಮಾರನ ಕತೆ

ಒಂದ್ ಊರ್ಲಿ ಒಂದ್ ಅರ್ಸ ಮತ್ತು ಅಂವನ ಹೆಣ್ಣ್. ಅವ್ಕೆ ಮೂರ್ ಜನ ಮಗಕ್ಕ. ಈ ಯ್ಯೆ ಅಪ್ಪ ಮೂರ್ ಜನ ಮಗಕ್ಕಳೂ ಮನೆಲಿ ಕೆಲಸ ಮಾಡ್ತಾ ಇದ್ದೊ. ಬೇಸಾಯ ಕೆಲ್ಸ, ನಟ್ಟಿ ಲ್ಸ, ತೋಟದ ಕೆಲ್ಸ, ಎಲ್ಲ ಕೆಲ್ಸ, ಮಾಡ್ತಾ ಇದ್ದೊ. ಒಂದ್ ದಿನ ತಿಂಗಳ ಬೊಳ್ಪು ಇರಿಕೆ ಆಕನ ಂಗಕ್ಕಳೊಟ್ಟಿಗೆ ಅರ್ಸ ಕೇಳ್ತ್, 'ಈ ತಿಂಗಳ ಬೊಳ್ಪು ಯಾವ್ದಕ್ಕೆ ಒಳ್ಳೊದೂಂತ?'ದೊಡ್ಡ ಮಗಳ ರ್ದ್ದ್ 'ಈ ತಿಂಗಳ ಬೊಳ್ಪು ಅಡಿಕೆ ಚೊಲ್ಲಿಕೆ ಇದ್ದರೆ ಒಳ್ಳೊದ್. ನಟ್ಟಿ ಮೆಣಸಿಗೆ ಸೊಪ್ಪ್ ಇಸಿಕೆ, ಾಬ್ಬರ ಇಸಿಕೆ ಏನಾರ್ ಇದ್ದರೆ ಒಳ್ಳೊದ್' ಹಾಂಗೆಂತ ಹೇಳ್ತ್. ಮತ್ತೊಂದ್ ಮಗಳ ಕರ್ತ್, 'ಈ ಂಗಳ ಬೊಳ್ಪು ಯಾವ್ದಕ್ಕೆ ಒಳ್ಳೊದ್? ಅದ್ ಹೇಳ್ತ್ 'ತಿಂಗಳ ಬೊಳ್ಪು ಈಗ ಮೊಣ್ಣ್ ಕೆಲ್ಸ ಾಡಿಕೆ ಒಳ್ಳೊದ್'ಂತ. ಅಕೇರಿನ ಮಗಳ ಕರ್ತ್. 'ಈ ತಿಂಗಳ ಬೊಳ್ಪು ಯಾವ್ದಕ್ಕೆ ಳ್ಳೊದ್?''ಈ ತಿಂಗಳ ಬೊಳ್ಪು ದಿಬ್ಬಣ ಹೋಕೆ ಒಳ್ಳೊದ್'ಂತ ಹೇಳ್ತ್. 'ಆ ನನ್ನ ಎರಡ್ ಕ್ಕಳಿಗೂ ಅಂತ ಬುದ್ದಿ ಬಾತ್ಲೆ ನಿಂಗೆ ಮಾತ್ರ ದಿಬ್ಬಣ ಹೋಕ್ಕೆ ಗೇನ ಆದ್ದ. ಇಂದ್‌ಂದಲೇ ನನ್ನ ನೆಂದ ನೀ ಹೋಕ್ಕು. ನಿಲ್ಲಿಕೆ ಸಾಧ್ಯ ಇಲ್ಲೆ, ನಾಳೆಂದತ್ತ ದಿನಕ್ಕೆ ಒಂದ್ ಪಾವ್ ಅಕ್ಕಿ ಖರ್ಚಿಗೆ ಾಟ್ಟ್‌ದ್ ಕುದ್‌ರೆ ಲಡ್ಡಿ ಎತ್ತಿಕೆ ನಿನ್ನ ಬುಡ್ದು. ನಮ್ಮ ಮನೆಲಿ ಇರಿಕೆ ಬೊತ್ತ್'ಂತ ಹೇಳ್ದೊ. ಾರನೆ ದಿನನೆ ಅದಕ್ಕೆ ಒಂದ್ ಪಾವ್ ಅಕ್ಕಿ ಖರ್ಚಿಗೆ ಕೊಟ್ಟ್ ಕುದ್‌ರೆ ಲಡ್ಡಿ ಎತ್ತಿಕೆ ಬುಟ್ಟೊ. ತ್ತೆ ಎರಡ್ ಮಗಕ್ಕ ಒಳೊ ಅಲ್ಲ. ಎರಡ್ ಮಗಕ್ಕ, ಅಯ್ಯೆ ಅಪ್ಪ ಮನೆಲಿ ಕೆಲಸ ಮಾಡ್ತಾ ಇದ್ದೊ.

ಇದ್ದ್ ಇದ್ದ್ ಕೆಲವು ಸಮಯಕ್ಕೆ ಎರಡ್ ಮಗಕ್ಕಳಿಗೂ ಮೊದ್ವೆ ಆಗುವ ಸಂದರ್ಭ ಬಾತ್. ಈ ಮೊದ್ವೆ ಸಂದರ್ಭಂದಾಗಿ ಬಟ್ಟೆ ಬರೆ ಎಲ್ಲ ತೆಗಿಯಕ್ಕೆ ಹೋಕ್ಕೆ ಉಟ್ಟಲ್ಲ. ಬಟ್ಟೆ ಬರೆ ಎಲ್ಲ ಗಿಯಕ್ಕೆ ಹೋಕನ ಅರ್ಸ ಹೇಳ್ತ್, 'ಆ ಕುದುರೆ ಲಡ್ಡಿ ಎತ್ತ್‌ವ ಗಿರಾಕಿನೊಟ್ಟಿಗೆ ಒಮ್ಮೆ ಹೋಗಿ ಕೇಳಿ. ದ್ಕೆ ಎಂತದ್ ಬೇಕ್'ಂತ ಹೋಗಿ ಕೇಳ್ತ್. ಮಗಕ್ಕಳೊಟ್ಟಿಗೆ ಒಂದ್ ಮಗ ಹೋಗಿ ಕೇಳ್ತ್. ಾವು ಇಂದ್ ಬಟ್ಟೆ ತೆಗಿಯಕ್ಕೆ ಹೋದವೆ. ನಿಂಗೆ ಎಂತದ್ ಬೇಕ್?''ನಂಗೆ ಎಂತದೂ ಬೇಡ ಂಗೆ ಒಂದ್ ಸೌದೆ ಕೊಳ್ಳಿ ಬೇಕಾದ್ದ್'. ಆಗಲಿಂತ ಹೇಳಿ ಇವು ಗಾಡಿಲಿ ಕುದ್ದ್ ಬಟ್ಟೆ ಗಿಯಕ್ಕೆ ಹೋದೊ. ಹೋಗಿ ಬೇಕಾದ ಬಟ್ಟೆ ಬರೆ ತೆಗ್ದೊ. ಚಿನ್ನ ತೆಗ್ದೊ ಗಾಡಿಲಿ ತುಂಬ್ಸಿದೊ. ಡಿ ಹೊಡ್ದೊ. ಹೊಡ್ದರೆ ಗಾಡಿ ಹೋದೇ ಇಲ್ಲೆ. ಏನೂ ಮಾಡ್ರು ಗಾಡಿ ಹೋತ್ಲೆ. ಇದ್ ನ್ ಗಾಡಿ ಹೋದ್ಲೆಂತೆಳಿ ಬೇಕಾದಷ್ಟ್ ಪ್ರಯತ್ನ ಪಟ್ಟೊ. ಗಾಡಿ ಮತ್ತೂ ಮುಂದೆ ಹೋದ್ಲೆ. ಾಂಗೆ ಆದರೆ ಅದ್ ನಂಗೆ ಸೌದೆಕೊಳ್ಳಿ ಬೇಕ್‌ಂತ ಹೇಳುಟು. ಸೌದೆ ಕೊಳ್ಳಿ ತರೊಂಬ'ಂತೇಳಿ ಡ್ಕಿದೊ. ಹುಡ್ಕಿರೆ ಆ ಪೇಟೆಲಿ ಎಲ್ಲೂ ಸೌದೆಕೊಳ್ಳಿ ಸಿಕ್ಕಿತ್ಲೆ. ಒಂದ್ ಅರ್ಸುನ ಮನೆ ಬಾಗ್ಲಿಗೆ ೋಗಿ ಆಕನ ಒಂದ್ ತುಂಡ್ ಸೌದೆಕೊಳ್ಳಿ ಸಿಕ್ಕಿತ್. ಆ ಸೌದೆಕೊಳ್ಳಿನ ತೆಕಂಡ್ ಬಂದ್ ಈ

ಗಾಡಿಗೆ ಹಾಕಿದೆ. ಗಾಡಿಗೆ ಹಾಕಿ ಆಕನ ಗಾಡಿ ನಡ್ತ್. ಗಾಡಿ ಹೊಡ್ಕಂಡ್ ಮನೆಗೆ ಬಂದ
ಈ ಸೌದೆ ಕೊಳ್ಳಿನ ತಕಂಡ್ ಹೋಗಿದ್ ಕುದುರೆ ಲಡ್ಡಿ ಎತ್ತ್‌ವ ಗಿರಾಕಿನ ಹಕ್ಕಳೆ ಹಾಕಿದೊ.

ಇವು ಚಿನ್ನ ಬಟ್ಟೆ ಎಲ್ಲ ತೆಗ್ದ್ ಮನೆಲಿ ಇಸಿದೊ. ಮತ್ತೆ ಕೆಲವು ಸಮಯ ಕಳ್ದ್ ಮೊದ್ವೆ ಕ
ಮೊದ್ವೆ ಎಲ್ಲ ಕಳ್ತ್ ಮತ್ತೆ ಮನೆಲಿ ಅರ್ಸನೂ ಹೆಣ್ಣ್‌ನೂ ಇಬ್ಬರೇ ಇರ್ದಲ್ಲ. ಈ ಕುದುರೆ ಲಡ್ಡಿ ಎತ್
ಗ್ರಾಕಿನ ಹಕ್ಕಲೆ ಹಾಕಿದೊ. ಈ ಕುದುರೆ ಲಡ್ಡಿ ಎತ್ತ್‌ವ ಗ್ರಾಕಿ ಏನ್ ಮಾಡ್ತ್? ಈ ಒಂದ್ ಪಾ
ಅಕ್ಕಿ ಬೇಸಿಕೆ ಇದ್ಕೆ ಸೌದೆ ಇಲ್ಲೆ. ಒಂದ್ 'ಅಂದ್ ನಂಗೆ ತಂದ್‌ಕೊಟ್ಟದ್ ಸೌದೆಕೊಳ್ಳಿ ಉ
ಅದರ ನಾ ಒಡ್ದನೆ'ಂತ ಹೇಳಿ ಆ ಸೌದೆಕೊಳ್ಳಿನ ಒಡ್ತ್. ಒಡಿಯಕನ ಅದರ ಒಳಗಿಂದ ಹೇ
'ಅಡ್ಡ ಹೊಡಿಬೇಡ. ನೀಟ ಹೊಡಿ'. ಇದ್ ಏನ್ ಶಬ್ದಂತ ಕೇಳ್ತ್. ಮತ್ತೂ ಒಂದ್ ಗ
ಹಾಕಿತ್. 'ಅಡ್ಡ ಹೊಡಿಬೇಡ ನೀಟ ಹೊಡಿ'ಂತ ಹೇಳ್ತ್. ಪುನಃ ನೀಟ ಒಡ್ತ್. ನೀಟ ಒ
ನೋಡ್ರೆ ಅದರೊಳಗೆ ಪೊರ್ಲ್‌ನ ಒಂದ್ ಹೈದ ಉಟ್ಟು. ಅಂವ ಎದ್ದ್ ನಿತ್ತ್ ಮಾತಾ
ಮಾತಾಡಿ ಒಂದ್ ಗಳಿಗೆಲಿ ಮೂರ್ ಕಲ್ಲ್ ಅಲ್ಲಿ ಮಂತ್ರಿಸಿ ಹಾಕಿತ್. ಅಷ್ಟಾಕನ ಅಲ್ಲಿ ಒಂ
ದೊಡ್ಡ ಅರಮನೆ ಆಗಿ ಎದ್ದತ್. ಮಾರನೆ ದಿನ ಈ ಅರ್ಸ ಕುದ್ದ್ ನೋಡಿಕೆ ಆಕನ ಅಲ್ಲಿ ದೊ
ಅರಮನೆ ಕಂಡದೆ. ಇಷ್ಟರವರೆಗೆ ಯಾವುದು ಇತ್ಲೆ. ಕುದುರೆಗಳ ಹಟ್ಟಿ ಮತ್ತೆ ಕುದುರೆ ಲ
ಎತ್ತ್‌ವ ಗಿರಾಕಿ ಇಷ್ಟೇ ಇದ್ದದ್. ಇಂದ್ ಇಲ್ಲಿ ದೊಡ್ಡ ಅರಮನೆ ಉಟ್ಟಲ್ಲ. ಹಾಗೆಂತ ಅರ್ಸ ಸೀ
ನೋಡಿಕೆ ಬಾತ್. ನೋಡಿಕೆ ಬಂದ್ ನೋಡ್ರೆ ಮಗಳೂ ಮಗಳ ಗಂಡನೂ ಇಬ್ಬರ್ ಅಲ್ಲಿ ಒ
'ಓ! ಯಾವ ಸೌಕರ್ಯ? ಇದರ ಹಣೆಲಿ ಬರ್ದದ್ ದೇವರ್. ನಾವ್ ಎಷ್ಟ್ ಕಷ್ಟ ಬಂದ
ಇಂದ್‌ಗೆ ಅದರ ಬಾಳ್ವೆ ಹಾಂಗೆ'ಂತ ಹೇಳಿ ಅರ್ಸ ಸೀದಾ ಮನೆಗೆ ಹೋತ್.

ಹೋಗಿ ಹೆಣ್ಣ್‌ನೊಟ್ಟಿಗೆ ಹೇಳ್ತ್. 'ನೋಡ್ ನಾವು ಅಂದ್ ಒಂದ್ ಪಾವ್ ಅಕ್ಕಿ ಖಚಿ
ಕೊಟ್ಟ್ ಕುದುರೆ ಲಡ್ಡಿ ಎತ್ತಿಕೆ ಬಟ್ಟೊ. ಅದರ ಇಂದ್ ನೋಡ್. ಅದರ ಐಶ್ವರ್ಯ, ಅ
ಐಭಾಗ್ಯ. ಅದ್ ಹೆಂಗೆ ಉಟ್ಟು? ಅಂತ ಅರ್ಸ ಹೇಳ್ತ್. ಆಗಲಿ ಇರ್ಲಿಂತ ಹೆಣ್ಣ್ ಹೇಳ್ತ್. ಕೆ
ದಿನ ಕಳ್ದ್ ಈ ಕೊಟ್ಟ ಮಗಕ್ಕ ಬಂದೊ. ಮನೆಗೆ ಬಂದ್ ಕೇಳ್ದೊ. 'ಅಪ್ಪ ಅದ್ ಯಾರ ಮ
'ಅದ್ ಯಾರ ಮನೆಂತ ಹೇಳ್ದು' ಹೇಳ್. 'ಅದರೆಲ್ಲ ಇನ್ನ್ ಹೇಳಿ ಸುಖ ಇಲ್ಲೆ'. 'ಆದ
ಹೇಳಿಯಪ್ಪ ಅದ್ ಯಾರ ಮನೆ ?''ಅದ್ ನಿಮ್ಮ ತಂಗೆ ನೋಡಿ ಅಂದ್ ಕುದುರೆ ಲಡ್ಡಿ ಎ
ನಾವು ಬುಟ್ಟತ್ಲೆಯ ಅದರ ಅರಮನೆ ಅದ್. ಆ ಅರಮನೆಲಿ ಅದ್ ಅದರ ಗಂಡ್'.
ಅದರ ಮನೆಯ, ನಾವ್ ಅಲ್ಲಿಗೆ ಹೊಕ್ಕ್'. 'ಹೋಗಿ. ಹೋಗ್ಬೇಡಿಂತ ನಾ ಹೇಳ್ದುಲೆ. ಆ
ನಾವು ಇಂದ್ ಹಿಂಬೊತ್ತಿಗೆ ಹೋದವೆ'ಂತ ಹೇಳ್ದೊ. ಆದರೆ ದಿನಾಲ್ ಆ ಹೈದಂಗೆ(ಅ
ಗಂಡ) ಮಾತ್ರ ಬೊಳ್ಪಿಗೆ ಎದ್ದ್‌ದ್ ಈ ಬೆಳ್ಳಿ ಬೀಸಣಿಕೆ ತೆಗ್ದ್ ಬೀಸೊಕ್. ಕತ್ತಲೆಗೆ ಚಿನ್ನದ ಬೀಸ
ತೆಗ್ದ್ ಬೀಸೊಕ್. 'ಬೊಳ್ಪಿಗೆ ಬೆಳ್ಳಿ ಬೀಸಣಿಕೆ ತೆಗ್ದ್ ನೀ ಬಲಕ್ಕೆ ಬಿಸಿಯಾಕನ ನಾ ನನ್ನ ಮ
ಹೋಂವೆ. ಕತ್ತಲೆಗೆ ಚಿನ್ನದ ಬೀಸಣಿಕೆ ತೆಗ್ದ್ ಎಡಕ್ಕೆ ಬೀಸಿಯಾಕನ ನಾ ನನ್ನ ಮನೆಂದ ಇ

ಾಂವೆ'. ಹಾಗೆಂತ ಹೇಳಿ ಆ ಗೂಡೆನೊಟ್ಟಿಗೆ ಅಂವ ಹೇಳಿ ಕೊಟ್ಟುಟು. ಇಂವ ಕತ್ತಲೆಗೆ ೇದ್ ಚಿನ್ನದ ಬೀಸಣಿಕೆ ತೆಗ್ದ್ ಬೀಸಿದ ಕೂಡಲೇ ಹೋದೆ ಅಲ್ಲಿಗೆ. ಇಂವ ಮೀವ ಂದರ್ಭಕ್ಕೆ ಈ ಎರಡ್‌ಗೂಡೆಗೆ ಅಲ್ಲಿಗೆ ಎತ್ತಿದೊ. ಆ ಮನೆಗೆ ಎತ್ತಿದ್ 'ನಾ ಮೀಸಿನೆ ನಾ ೀಸಿನೆ. ನನ್ನ ಬಾವ, ನನ್ನ ಬಾವ. ನಾ ಇಂದ್ ಬಾವನ ಮೀಸಿನೆ. ನಾವಿಂದ್ ಸುರ್ ಂದದ್ದಲ್ಲ ತಂಗೆನ ಮನೆಗೆ ಹಾಂಗೆ'ಂತ ಹೇಳಿಕಂಡ್ ಇವ್ ಮೀಸಿಕೆ ಹೊರಟೊ ಅಲ್ಲಿಗೆ. ೋದೊ ಅಂವ ಮೀವಲ್ಲಿಗೆ. ಅಂವನ ಮೈ ಒರಸಿಕೆ ಸುರ್ ಮಾಡ್ದೊ. ಸಾಬೂನ್ ಎಲ್ಲ ಹಾಕಿ ರ್ಸಿದೊ. ಸಾಬೂನ್ ಹಾಕಿ ಒರ್ಸಿಕೆ ಆಕನ ಏನ್ ಮಾಡ್ದೊ. ಒಂದು ಸೇರ್ ಉಕ್ಕಿನ ಹುಡಿ. ಂದ್ ಸೇರ್ ಅಳವಿನ ದೂಜಿ ಹಾಕಿ ಅಂವನ ಮೈ ಒರ್ಸಿದೊ. ಅದರ ಒರ್ಸಿ ಆಕನ ಅಂವಂಗೆ ಂಕಟ ಸಂಕಟ ಸಂಕಟ ಆದ್ದೇ ಇಲ್ಲೆ. 'ಬೇಗನೇ ನೀ ಚಿನ್ನದ ಬೀಸಣಿಕೆ ತೆಗ್ದ್ ಬಿಸ್ ಬುಡ್. ಾ ಹೋಗಿ ಬುಟ್ಟನೆ. ನನ್ನ ಮನೆಗೆ'ಂತ ಅಂವನ ಹೆಣ್ಣ್ ನೊಟ್ಟಿಗೆ ಹೇಳ್ತ್. ಇದ್ ಬೇಗನೆ ಚಿನ್ನದ ೀಸ್‌ಣಿಕೆ ತೆಗ್ದ್ ಬೀಸಿತ್. ಅಂವ ರಥಲಿ ಕೂಡ್ಲೇ ಅಂವನ ಮನೆಗೆ ಹೋತ್.

ಕಡೆಗೆ ಅಲ್ಲಿ ಅಂವ ಇಲ್ಲೆ ಅಲ್ಲ. ಇವ್ ಎರಡ್ ಜನ ಈ ತಂಗೆನೊಟ್ಟಿಗೆ ಮಾತಾಡ್ದೊ. ಇವು ಇಲ್ಲೆ ಬಂದೊ. ಈ ಮೊನ್ಸ ಹೋದಂವ ಇಲ್ಲೇ ಇಲ್ಲೆ. ಮಾರನೆ ದಿನ ಬೊಳ್ಪಿಗೆ ಎದ್ದ್ ೀಸಣಿಕೆ ತೆಗ್ದ್ ಬೀಸಿತ್. ಬಾತ್ಲೆ. ಚಿನ್ನದ ಬೀಸಣಿಕೆ ತೆಗ್ದ್ ಬೀಸಿತ್. ಬಾತ್ಲೆ. ಎಷ್ಟೆಷ್ಟ್ ೀಸಿರೂ ಬಾದೇ ಇಲ್ಲೆ. ದಾರಿ ನೋಡಿ ನೋಡಿ ನೋಡಿ ಸಾಕಾತ್. ಒಂದ್ ಎರಡ್ ತಿಂಗ ಾರಿ ನೋಡ್ರೂ ಇಲ್ಲೆ. 'ಇನ್ನ್ ನಾ ಏನ್ ಮಾಡ್ದು? ನಾ ಇನ್ನ್ ಹುಡ್ಕಾಟಕ್ಕೆ ಹೊರಟನೆ ಾಂಗೆ'ಂತ ಹೇಳ್ತ್. ಸನ್ಯಾಸಿವೇಶ ಮಾಡಿದ್ ಇದ್ ಹೊರಟತ್. ಊರ್ ಮೇಲೆ ಹೋಕೆ ನಾ ೋನೆ ಎಲ್ಲಿ ಸಿಕ್ಕುದೊ? ಅಲ್ಲಿಂದ ಕರ್ಕಂಡ್ ಬನ್ನೆ. ಇಂದ್ ಬಾಂವೆ, ನಾಳೆ ಬಾಂವೆಂತ ನಾ ೇಳ್ದುಲೆ. ಯಾಗಾದರ್ ನಾ ಬಾಂವೆ. ನನ್ನ ಮನೆನ ನೀವ್ ನೋಡಿಕೊನೊಕು ಹಾಂಗೆ'ಂತ ಲಸದವರೊಟ್ಟಿಗೆ ಹೇಳಿದ್ ಹೊರಟ್ ಹೋತ್.

ಹೋಗಿ ಹೋಗಿ ಹೋಗಿ ಹೋಗಿ ಒಂದ್ ಅತ್ತೋಸ್‌ನ ಕಟ್ಟೆಗೆ ಎತ್ತ್‌ಕನ ಕತ್ತಲೆ ಆತ್. ದ್ಕೆ ಈ ಸನ್ಯಾಸಿಗೆ. ಅತ್ತೋಸ್‌ನ ಕಟ್ಟೆ ಮೇಲೆ ಕುದ್ದತ್. ಕುದ್ದ್‌ಕಂಡ್ ಇರಿಕೆ ಆಕನ ಎರಡ್ ಕ್ಕಿಗ ಬಂದ್ ಮರದ ಹಿಳ್ಳೆಲಿ ಕುದ್ದ್‌ಕಂಡೊಲೊ. ಕುದ್ದ್‌ಕಂಡ್ ಮಾತಾಡ್ವೆ 'ಇಂದ ಅದ್ ಂಡಲ್ಲ'. 'ಅದ್ ಹೆಣ್ಣ್ ಅದ್ ಗಂಡ್ ವೇಷ ಹಾಕಿ, ಸನ್ಯಾಸಿ ವೇಶಹಾಕಿ ಹೊರ್ಟದ್'ಂತ ಂಡ್‌ಹಕ್ಕಿ ಹೇಳ್ದೆ. ಆಗ ಹೆಣ್ಣ್ ಹಕ್ಕಿ ಹೇಳ್ದೆ ಅದ್ ಹೆಂಗೆ ಗೊತ್ತ್ ನಿಂಗೆ? 'ಹೌದ್. ಅದ್ ದರ ಗಂಡಂಗೆ ಉಷಾರಿಲ್ಲೆ. ಅದರ ಗಂಡಂಗೆ ಒಂದ್ ಸೇರ್ ಉಕ್ಕಿನ ಹುಡಿ ಒಂದ್ ಸೇರ್ ಳವಿನ ದೂಜಿ ಹಾಕಿ ಅದರ ಅಕ್ಕಂದರ್ ಮೀಸಿದೊ. ಅದರ ವಿಷವೇರಿ ಹೋಗುಟು. ಂವ ಈಗ ಕಾಯಿಲೆಲಿ ಉಟ್ಟು. ಜೀವ ಈಗ ಹೋದೆಯಾ ಮತ್ತೆ ಹೋದೆಯಾಂತ ಹೇಳಿ ಉಟ್ಟಲ್ಲಿ. ಎರಡ್ ಮೂರ್ ಗೇಟ್‌ಲಿ ಪಾರ ಒಳೊ. ಅವನ ಮನೆಗೆ ಅದ್ ಈಗ ಹುಡ್ಕಾಟಲಿ

ಹೊರ್ಟದ್'ಂತ ಗಂಡ್ ಹಕ್ಕಿ ಹೇಳ್ತ್. ಹೆಣ್ಣ್ ಹಕ್ಕಿ ಕೇಳ್ತ್. 'ಮೊದ್ಲ್ ನಾವು ಇಬ್ಬರೂ ರೆಕ್ಕೆರೆಕ್ಕೆ ಈ ಮರಂದ ಹಾರೊಕ್. ಹಾರಿಕೆ ಆಕನ ಇದರಿಂದ ಒಂದ್ ಹಿಳ್ಳೆ ಬಿದ್ದದೆ. ಆ ಹಿಳ್ಳೆ ಬಿದ್ದಾ ಮೂರ್ ಪುಂಡಿ ಸೊಪ್ಪು ಮೂರ್ ಪುಂಡಿ ಕೆತ್ತೆ ತಕಂಡ್ ಹೋಕ್. ಈ ಮೂರ್ ಪುಂಡಿ ಸೊಪ್ ಗುದ್ದಿದ್ ಅಂವನ ಮೈಗೆ ಲೇಪ ಹಾಕೊಕು. ಹಾಂಗೆ ಆದರೆ ಅಂವ ಉಷಾರ್ ಆ ಹಾಂಗೆ'ಂತ ಹೇಳ್ತ್ ಗಂಡ್‌ಹಕ್ಕಿ. 'ಹಾಂಗಾದರೆ ನಾವೀಗ ರೆಕ್ಕೆ ರೆಕ್ಕೆ ಕಚ್ಚಿ ಹಾರೊಮ' ಹೆಣ್ಣ್‌ಹಕ್ಕಿ ಹೇಳ್ತ್. ಆ ಸನ್ಯಾಸಿ ವೇಷದ ಈ ಗೂಡೆ ಆ ಮಾತ್‌ನ ಎಲ್ಲಾ ಕೇಳ್ತಾ ಅಲ್ಲೆ ಕುದ್ದ ಇವು ರೆಕ್ಕೆ ರೆಕ್ಕೆ ಕಚ್ಚಿ ಮರಂದ ಹಾರ್‍ದೊ. ಮರಂದ ಹಾರಿಕೆ ಆಕನ ಒಂದ್ ಹಿಳ್ಳೆ ಬೀತ್. ಅ ಬಿದ್ದಕೂಡ್ಲೆ ಮೂರ್ ಪುಂಡಿ ಕೆತ್ತೆ ಮೂರ್ ಪುಂಡಿ ಸೊಪ್ಪ್ ತೆಕನ್ತ್ ಅದ್. ತಕನ್ತ್ ಅಲ್ಲಿಂದ ಸಿ ಹೋತ್.

ಹೋಗಿ ಹೋಗಿ ಹೋಗಿ ಅರ್ಸನ ಮನೆ ಬಾಗಿಲಿಗೆ ಎತ್ತಿತ್. ಅಂವ ಅರ್ಸನ ಮನೆ ಬಾಗಿ ಎತ್ತಿ ಆಕನ ಗೇಟ್ ಗೇಟ್‌ಲಿ ಜಾನ ಪಾರ ಒಳೊ. 'ನಮ್ಮ ಅರ್ಸುಗಳ ಮಂಜಂಗೆ ಕಾಯಿಲೆ. ಬ ಜೋರ್ ಉಟ್ಟು. ಒಳಗೆ ಬಾಕ್ಕೆ ಸಾಧ್ಯ ಇಲ್ಲೆ. ವೈದ್ಯಗಾರರು ಒಳೊ ಎಷ್ಟೋ ಜನ ಜೀವ ಎ ಹೋದೆಯಾ ಮತ್ತೆ ಹೊದೆಯಂತ ಹೇಳಿ ಉಟ್ಟು. ನೀವು ಬಾಕ್ಕೆ ಸಾಧ್ಯ ಇಲ್ಲೆ. ಸನ್ಯಾಸಿ ಬಾ ಬೇಡ. ಧರ್ಮ ಏನು ಕೊಡಿಕಿಲ್ಲೆ. ಈಗ ನಮ್ಮ ಅರ್ಸುಗಳ ಮನೆಲಿ ಹಾಂಗೆ'ಂತ. 'ಅದು ಅ ಇಲ್ಲೆ. ಅರ್ಸುಗಳ ಮಂಜನ ಒಮ್ಮೆ ನಂಗೆ ನೋಡೊಕು. ಅಂದರೆ ಅಷ್ಟ್ ಜೋರ್ ಉಟ್ಟುಂತಿ ನಂಗೆ ನೋಡೇ ನೋಡೊಕು. ನಾ ಬನ್ನೆ ಹಾಂಗೆ'ಂತ ಸನ್ಯಾಸಿ ಹಟಾ ಹಿಡ್ದದೆ. 'ಹಾಂಗೆ ಆ ನಾವು ಹೋಗಿ ಅರ್ಸುಗಳೊಟ್ಟಿಗೆ ಕೇಳಿ ಬಂದವೆ. ಆ ಕೇಳಿ ಬಂದ ಮೇಲೆ ನಿಮ್ಮ ನಾವು ಕರ್‍ಕೊಂ ಹೋದವೆ'. ಆದುಂತ ಆ ಜನಗ ಮನೆಗೆ ಹೋದೊ. ಮನೆಗೆ ಹೋಗಿ ಹೇಳ್ದೊ. 'ಅಲ್ಲಿ ಒಂ ಸನ್ಯಾಸಿ ಬಂದುಟು'. 'ಆಗಲಿ ಬರಲಿ ಸನ್ಯಾಸಿ ಬಂದ್ ನೋಡಿರೆ ಏನೂ ತೊಂದರೆ ಇ ನೋಡಿಕನಲಿ ಇನ್ನ್ ನಾವ್ಗೆನೂ ಆಸೆ ಇಲ್ಲೆ. ಬಂದ್ ನೋಡಿರೆ ಏನು ತೊಂದರೆ ಇಲ್ಲೆ'ಂತ ಅ ಹೇಳ್ದೊ. ಹಾಂಗೆಂತ ಹೇಳಿ ಗೇಟ್ ಬಾಗಿಲ್ ತೆಗ್ದ್ ಒಳಗೆ ಬುಟ್ಟೊ . ಅರಮನೆಗೆ ಸನ್ಯಾ ಕರ್‍ಕಂಡ್ ಹೋದೊ. ಸನ್ಯಾಸಿ ಒಂದ್ ಕರೇಲಿ ಕುದ್ದತ್.

ಕುದ್ದ್ ನೋಡ್ರೆ ಅರಸ್‌ಗಳ ಮಂಜನ ಜೀವ ಉಳಿವ ದಾರಿಯೇ ಇಲ್ಲೆ. ಹಾಂಗೆಂತ ನಾ ಒಂದು ಮೊದ್ದ್ ಕೊಡೊಕಾಂತ ಕೇಳ್ತ್ ಸನ್ಯಾಸಿ. ಆಗ ಅರ್ಸುಗ ಹೇಳ್ದೊ 'ತೊಂದರೆ ಇ ಕೊಡಿ'. 'ನೀವು ಸನ್ಯಾಸಿಂತ ಹೇಳಿ ನಾವ್ಯಾಕೆ ಬೇಡಂತ ಹೇಳ್ದು. ಕೊಡಿ ಮೊದ್ದ್ ಹಾಗೆ ಹೇಳ್ದೊ. 'ಈ ಮೂರ್ ಪುಂಡಿ ಕೆತ್ತೆನೂ ಈ ಮೂರ್ ಪುಂಡಿ ಸೊಪ್ಪುನೂ ಕೊಟ್ಟತ್. ಈ ಅರ್ದ್ ಕುಡಿಯಕೆ ಕೊಡೊಕ್. ಸೊಪ್ಪ್‌ನ ಗುದ್ದಿ ಲೇಪ ಹಾಕೊಕ್. ಹಾಗೆಂತ ಹೇಳಿ ಕೊ ಕೂಡ್ಲೆ ಆ ಕೆತ್ತೆನ ಗುದ್ದಿ ಕುಡಿಯಕೆ ಕೊಟ್ಟೊ. ಸೊಪ್ಪುನ ಗುದ್ದಿ ಲೇಪ ಹಾಕ್ತಾ ಎರಡ್ ಮ ದಿನ ಕಳ್ತ್. ಈ ಎರಡ್ ಮೂರ್ ದಿನ ಲೇಪ ಹಾಕಿ ಆಕನ ದಿನಂದ ದಿನ ಅಂವ ಉಷಾರ್

ಾತ್.  ಅಷ್ಟರ ವರೆಗೆ ಈ ಸನ್ಯಾಸಿ ಅದೇ ಮನೆಲಿ ಉಟ್ಟು.  ಮೂರ್ ದಿನ ಕಳ್ದ್ ಸಂನ್ಯಾಸಿ ೇಳ್ತ್.  'ನನ್ನ ಮನೆಗೆ ಹೋನೆ.  ನಾ ನಿಲ್ಲುದ್ಲೆ ಹಾಂಗೆ'ಂತ.  'ನೀ ಹೋಕ್ಕೆ ಸಾಧ್ಯ ಇಲ್ಲೆ.  ಏಳ್ ಡಿ ಭೂಮಿ ಉಟ್ಟು.  ಅದರಂದ ಸಮಾ ಅರ್ಧ ಪಾಲ್ ನಿಂಗೆ ಕೊಟ್ಟವೆ.  ನಮ್ಮ ಇಂತ ಅರ್ಧ ಾಲ್ ನಿಂಗೆ ಕೊಟ್ಟವೆ. ನಮ್ಮ ಇಂತ ಜೀವನ ನೀ ಉಳಿಸ್ಯೊಳ.  ನೀ ಹೋಕೆ ಸಾಧ್ಯ ಇಲ್ಲೆ'ಂತ ೇಳ್ದೊ.  'ಅದೇನ್ ಬೇಡ ನಾ ಹೋನೆ ನಂಗೆ ಏಳಡಿ ಭೂಮಿಂದ ಪಾಲ್ ಬೇಡ.  ಆದರೆ ಅರುಸುಗಳ ಮಂಜನ ಜೀವ ಒಂದ್ ಉಳ್ತಲ್ಲ ಅಷ್ಟ್ ಸಾಕ್.  ನಾ ಹೋನೆ ನಂಗೆ ಪಾಲ್ ಬೇಡ'ಂತ ೊರ್ಪದೆ.  'ಅದ್ ಆಕ್ಕೇ ಇಲ್ಲೆ ಹೋಕೆ ಸಾಧ್ಯನೇ ಇಲ್ಲೆ'ಂತ.  'ಅದ್ ಆದ್ಲೆ, ನಾ ನನ್ನ ಮನೆಗೆ ೋನೆ.  ನೀವ್ಗೆ ಅಷ್ಟ್ ಕೊಡಿಕೆ ಮನಸ್ಸಿದ್ದರೆ ನಿಮ್ಮ ಮಂಜನ ಒಂದ್ ಮುದ್ರೆ ಉಂಗ್‌ರವೂ ಮತ್ತೆ ಿಮ್ಮ ಮಂಜನ ಒಂದ್ ಬೆಳ್ಳಿ ನಶ್ಯ ಕುಪ್ಪಿನು ಉಟ್ಟು.  ಅದರ ಎರಡರ ನಂಗೆ ಕೊಟ್ಟ್ ಬುಡಿ ಾಂಗೆ'ಂತ ಹೇಳ್ತ್ ಸನ್ಯಾಸಿ.

ಅದ್ ಮುದ್ರೆ ಉಂಗ್‌ರವೂ ಬೆಳ್ಳಿ ನಶ್ಯ ಕುಪ್ಪಿ ಎರಡರ ಮಂಜನ ಕೈಂದ ತಕನ್ತ್ ಅದ್ ೊರಟ್ ಹೋತ್.  ಹೋಗಿ ಎರಡ್ ಮೂರ್ ದಿನ ಕಳ್ದ್ ಚಿನ್ನದ ಬೀಸಣಿಕೆ ತೆಗ್ದ್ ಬಲಕ್ಕೆ ೀಸಿತ್. ಅಷ್ಟಾಕನ ಅರಸುಗಳ ಮಂಜ ಬಾತ್.  ಚಂದ್ರಾಯುದ ಹಿಡ್ಕೊಂಡ್ ಬಾತ್.  ನಿನ್ನ ನಾ ಡ್ದ್ ಕೊಲ್ಲದೆ ಬುಡಿಕಿಲ್ಲೆ.  ನಿನ್ನಂದಾಗಿ ನನ್ನ ಜೀವ ಹೊತ್ತಿತ್ತ್'ಂತ ಹೇಳಿ ಕತ್ತಿ ಎತ್ತಿಕೊಂಡೇ ಾತ್.  ಬಾಕೆ ಆಕನ ಇದ್ ಹೇಳ್ತ್.  'ಮೂರ್ ಮಾತ್ ನಾ ಮಾತಾಡಿಕೊನೆ.  ಮತ್ತೆ ಕಡ್ದ್ ೊಲ್ಲುದಿದ್ದರೂ ತೊಂದರೆ ಇಲ್ಲೆ ಹಾಗೆ'ಂತ ಹೇಳ್ತ್.  ಈ ಮುದ್ರೆ ಉಂಗ್‌ರವೂ ಈ ಬೆಳ್ಳಿ ಶ್ಯಕುಪ್ಪಿ ತೆಗ್ದ್ ಕೊಟ್ಟತ್.  'ಇದ್ ಯಾರ್ದ್ ಹೇಳಿ ಮತ್ತೆ ಹೊಡ್ದ್ ಕಡ್ದ್ ಕೊಲ್ಲುದಿದ್ದರೂ ನನ್ನಂದ ನೂ ಅಡ್ಡಿ ಇಲ್ಲೆ.  ನೀವು ಇದರ ನೋಡಿ'ಂತ.  ಅದರ ನೋಡ್ರೆ ಅಂವಂದೇ ಮುದ್ರೆ ಉಂಗುರ ಂವಂದೇ ಬೆಳ್ಳಿ ನಶ್ಯ ಕುಪ್ಪಿ.  ಏನೂ ಹೇಳಿಕೆ ಉತ್ತರ ಇಲ್ಲೆ.  'ನಿಜಕ್ಕಾದರೂ ಸನ್ಯಾಸಿ ವೇಶ ಾಕಿದ್ ನಾನೇ ಬಂದದ್ ಮೊನ್ನೆ ಹಾಂಗೆ'ಂತ ಈ ಗೂಡೆ ಹೇಳ್ತ್.  ಅಷ್ಟ್ ಹೇಳಿ ಆಕನ ಂವಂಗೆ ನಂಬಿಕೆ ಬಾತ್.  ಅವು ಇಬ್ಬರ್ ಪೊರ್ಲ್ಲಿ ಒಳೊ. ನೋಡಿ ಬೊನ್ನಿ. [ಕತಾ ರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]

## 51. ಮಾಂತ್ರದ ಕಂಬ್ಳಿ ಕತೆ

ಒಂದು ಅಪ್ಪಂಗೆ ಮೂರು ಜನ ಗಂಡ್ ಮಕ್ಕ.  ಅವು ಹಿಂಗೆ ಸಣ್ಣಂದಾಗಿ ೊಡ್ಡಿತ್ತಾದೊ.  ದೊಡ್ಡಿತಾಗಿದ್ ಅಪ್ಪ ಹೇಳ್ದೊ 'ನೀವು ಊರು ನೋಡಿಕೆ ಹೋಗಿ'ಂತ.  ಊರು ೋಡಿಕೆ ಹೋಕನ ಅವುಕ್ಕೆ ಏನಾರು ದುಡ್ಡು ಬುತ್ತಿ  ಕೊಡಕಲ್ಲೆ.  ಹಾಂಗೆ ಇರಿಕನ ಒಂದಿನ ಮಕ್ಕ ೊರಟ.  ಈ ದೊಡ್ಡಂವ ಬರೀ ಪಾಪ.  ನಡುವಣ ಸ್ವಲ್ಪ ಚುರ್ಕುಟು.  ಅಕೇರಿದಂವ ಬಾಳ ೋಕ್ರಿ.  ಈ ಸಣ್ಣಂವಂಗೆ ಒಂದು ಕಂಬ್ಳಿ ಕೊಟ್ಟೊ.  ಆ ಕಂಬ್ಳಿಲಿ ಕುದ್ದ್ ಏನ್ ಮಾಡ್ದೊ ಒಂದ್

ದುಡ್ಡ್‌ನ ಗಂಟ್ ಕೊಟ್ಟೊ. ಅದರ ಮೂರು ಜನ ತಕಂಡ್ ಊರು ನೋಡಿಕೆ ಹೋದೊ.

ಹೋಗಿ ಹೋಗಿ ಹೋಗಿ ಒಂದು ಅರ್ಸುನ ಮನೆಗೆ ಹೋದೊ. ಅಲ್ಲಿ ಪ್ರಚಾರ ಮಾಡ್ಯೋ 'ಮೂರು ದಿನ ಕವಡೆ ಆಟ ಆಡಿದ್ ಗೆದ್ದರೆ ನನ್ನ ಮಗಳ ಕೊಡ್ತು'ಂತ. ಕವಡೆಂತ ಹೇಳ್ರೆ ದುಡ ಇಸಿ ಆಡ್ದು. ಅದಕ್ಕೆ ಈ ಅಣ್ಣ ಮುಂದೆ ಆಡಿಕೆ ಹೋತ್. ಅಣ್ಣ ಹೋಗಿ ದುಡ್ಡೆಲ್ಲಾ ಅಣ್ಣಂ ಮುಗ್ತ್. ಎರಡ್ನೆ ಈ ಟೊಪ್ಪಿನಂವ ಹೋತ್. ಟೊಪ್ಪಿನವ ಇಸಿದ್ ಕವಡೆ ಆಡಿ ಆಡಿ ಆಕ ಏನ್ ಮಾಡ್ತ್ ಗೊತ್ತುಟ ಇದರಲ್ಲಿ ನಾ ಸೋತೆಂತ ಹೇಳಿ ಮಾರ್ನೆ ಅಂತಾ ಟೋಪ್ಪಿನ ಮಾಡಿ ರಾತ್ರೆ ಟೊಪ್ಪಿನ ಪೂರ್ಜೆ ಮಾಡ್ತ್. ಸೋತವೆಲ್ಲ ಅಲ್ಲಿ ಕೆಲಸಕ್ಕೆ ಗೂಡೆನ ಕೆಲಸಕ್ಕೆಂತ. ಅಕೇರಿ ಈ ಎರಡೂ ಜನನೂ ಅಲ್ಲೇ ನಿಂತದ್ ಸಣ್ಣವಂಗೆ ಗೊತ್ತಾತ್. ಕಂಬ್ಳಿಯವಂಗೆ. ಎರಡ್ನೆ ಇಂ ಕಂಬ್ಳಿ ಆಡಿಕೆ ತಕಂಡ್ ಹೋತ್. ಆಡಿಕೆ ಹೋಕನ ಏನ್ ಮಾಡ್ತ್ ಗೊತ್ತುಟಾ ಬಳೆ ತೆಕಂ ಹೋತ್. ಕೈಗೆ ಇಸುವ ಬಳೆನ ಎಲ್ಲ ಕಂಬ್ಳಿಗೆ ಕಟ್ಟಿ ಬಳೆ ಬೇಕೋ, ಬಳೆ ಬೇಕೊಂತ. ಅಕೇರಿ ಅಬ್ಬೆನ ಎಲ್ಲ ಕರ್ತ್ ಬಳೆ ಇಸಿತ್. ಬಳೆ ಇಸಿಇಸಿ ಇಸಿಕೊಂಡ್ ಇರಿಕನ ಎರಡ್ನೆ ಜಾ ಕಂಬೊಳೀಂತ ಹೇಳ್ತ್. ಅದ್ ಸೀದಾ ತಕಂಡೋಗಿ ಇಬ್ಬರ ನಡೂ ಕಾಡಿಗೆ ಹಾಕಿತ್. ಇಂ ಇಂತ ದಿಕ್ಕಿಗೆಂತ ಹೇಳ್ತ್‌ಲೆ ಅಲ್ಲ. ಆಗ ಸೋತತಲ್ಲೆ ಅರ್ಸುನ ಮಗ.

ಸೋತಾಕನ ಇಂವಂಗೆ ಮೂರು ನಾಕ್ ದಿನ ನಿದ್ದೆ ಇಲ್ಲೆ. ಹಂಞ ಹೊತ್ತಾಕನ ತಲೆಂ ಹೇನ್ ನೋಡಿಕೆ ಹೇಳ್ತ್. ಹೇನ್‌ಣ್ ನೋಡಿಕೊಂಡಿತ್ತ್ ಇವನ ತಲೆಂದ ಅದ್. ಅಕೇರಿ ಇಂವಂಗೆ ಕುದ್ದಲ್ಲಿ ಆಕನ ನಿದ್ದೆ ಬಾತ್. ನಿದ್ದೆ ಬಂದಾಕನ ವಾಪಾಸ್ ಇದ್ ಏನ್ ಮಾ ಗೊತ್ತುಟಾ ಇಂವನ ಆಚೆ ಮಲ್ಗಿಸಿ 'ಅರ್ಸು ಅರಮನೆಗೆ ಜಾವು ಕಂಬೊಳಿ'ಂತ ಹೇಳ್ತ್. ವಾಪಾ ಅರಮನೆಗೆ ಅರ್ಸುನ ಮಗ ಬಾತ್. ಅಷ್ಟೊತ್ತಾಕನ ಇವಂಗೆ ಅಲ್ಲಿ ಕುದ್ದ್ ಕುದ್ದ್ ಆಕನ 'ಅತ್ತ ಅ ಇಲ್ಲೆ, ಮೇಲೆ ಆಕಾಶ ಇಲ್ಲದಂಗೆ' ಆತ್. ಕುದ್ದಲ್ಲೆ ನೋಡ್ಕನ ಒಂದು ಹಣ್ಣ್‌ನ ಮರಕಂಡ ಅದರ್ಲಿ ಮೂರು ಕೊಂಬೆ ಉಟ್ಟು. ಆ ಕೊಂಬೆಲಿ ಒಂದು ಗೆಲ್ಲ್‌ಲಿ ಹಣ್ಣ್‌ತಿಂದರೆ ಕುರೆ ಆದ ಮತ್ತೊಂದು ಕೊಂಬೆಲಿ ಹಣ್ಣ್ ತಿಂದರೆ ನರ ಮೊನ್ಸ ಆದವೆ. ಹಿಂಗೆಲ್ಲಾ ಆಕಂಡ ಮತ್ತೊಂದು ಗೆಲ್ಲ್‌ಲಿ ಹಣ್ಣ್ ತಿಂದರೆ ಗಿಳಿಯಾದೆ. ಇಂವ ಏನ್ ಮಾಡ್. ನಾ ಮರಕ್ಕೆ ಹತ್ತಿ ಗಿಳಿ ಅಂವ ಹಣ್ಣ್‌ನ ತಿಂದನೆ. ಆಗ ನಾ ಗಿಳಿ ಆಂವೆ. ಎರಡ್ನೆ ಕುರೆ ಆಂವ ಒಂದು ಹಣ್ ತಕಂಡ್ ಸೀದಾ ಅರ್ಸು ಉಪ್ರಿಗೆಗೆ ಹೋನೆ. ಆಗ ಅಲ್ಲಿ ವಾಪಾಸ್ ಅರ್ಸುನ ಅಬ್ಬೆನ ಮ ಬಾಯಿಗೆ ಹಾಕಿದೆ ವಾಪಾಸ್ ಕುರೆ ಆದುಂತ ಹೇಳಿಕಂಡ್ ಆಲೋಚನೆ ಮಾಡ್ತ್ ಮೂರು ಹ ತಕಂಡತ್. ಅದರಂದ ಇಂವ ಗಿಳಿಯಾಂವ ಹಣ್ಣ್‌ನ ತೀನ್ನ್ ಅಲ್ಲೆ. ಕುರೆ ಆಂವ ಹಣ್ಣ್‌ನ ಕಚ್ಚಿಕಂಡತ್. ಸೀದಾ ಅರ್ಸುನ ಅರಮನೆಗೆ ಹೋತ್.

ಹೋಗಿದ್ ಅರ್ಸು ಮಗ ಒಳ್ಳೊ ಗಿಳಿಂತ ಹಿಡ್ತ್ ಅದರ. ಹಿಡ್ದ್ ಕೈಲಿ ಹಿಡ್ಕಂಡ್ ಅ ಆಡ್ಸಿಕಂಡ್ ಎಲ್ಲ ಇತ್ತ್. ಹಂಞ ಹೊತ್ತಾಕನ ಈ ಕುರೆ ಆಂವ ಹಣ್ಣ್‌ನ ಈ ಗೂಡೆನ ಬಾ

ಾಕಿತ್. ಅಷ್ಟೊತ್ತಾತಕನ ಗಿಳಿ ಹಾರಿ ಹೋತ್. ಹಾರಿ ಹೋಗಿದ್ ಎರಡ್ನೆ ಈ ನರ ಮೊನ್ಸ ಆವ ಹಣ್ಣ್‌ನನೇ ತೀನ್ತ್. ಈ ವಾಪಾಸ್ ಗಿಳಿ ಹೋಗಿ ನರ ಮೊನ್ಸ ಆತ್.

ಅಷ್ಟೊತ್ತಾತಕನ ಅರ್ಸುನ ಮನೆಲಿ ಎಲ್ಲವೂ ಗಾಬರಿ ಆದೊ. ಅಬ್ಬೆನ ಮಗ ಕಾಂಬೊದ್ದೆಂತ. ಅಲ್ಲಿ ಒಂದು ದೊಡ್ಡ ಕುರೆ ಉಟ್ಟು. ಎಲ ಕತೆನೆ. ಯಾರ್‍ಯಾರ್ ಎಂತೆಂತ ಮಾಟ ಮಂತ್ರ ಮಾಡ್ರೂ ಸರಿ ಆದ್ಲೆ. ಮತ್ತೆ ಕಡೆಗೆ ಪ್ರಚಾರ ಮಾಡ್ದೊ ಅರಸ್ಸು. ಕುರೆ ಹೋಗಿ ಮಗ ಆದರೆ ನಾ ಅವ್ಕೇ ನನ್ನ ಮಗಳ ಕೊಟ್ನೆಂತ. ಎಲ್ಲವೂ ಹೋದೊ. ಹೋಗಿ ಹೋಗಿ ಹೋಗಿದ್ ಯಾರಿಂದಲೂ ಆತ್ಲೆ. ಇಂವ ಏನ್ ಮಾಡ್ತ್ ಗೊತ್ತುಟಾ ಕುರೆ ಆಂವ ಹಣ್ಣ್‌ನ ತಕಂಡತ್. ಎರಡ್ನೆ ಅರ್ಸುಮನೆಗೆ ಹೋತ್. ಅಲ್ಲಿ ಹೇಳ್ತ್, 'ನಾ ಅದರ ಎಲ್ಲ ಸರಿಮಾಡ್ನೆ. ಮೊದ್ದು ಮಾಡ್ನೆ'ಂತ ಹೇಳ್ತ್. 'ಏನಾಕ್ಕು'ಂತ ಕೇಳ್ದೊ. ಅದಕ್ಕೆ ಏನೂ ಇಲ್ಲೆ. 'ಒಂದು ಮಡ್ಕೆ ಬಿಸ್ನೀರ್ ಕಾಸೊಕು. ಒಂದುವರೆ ಹುಣಿಸೆ ಹುಲಿ ಅಡರ್ ಬೇಕ್. ಒಂದು ಸೇರ್ ಮೆಣ್ಸ್ ಕಡ್ದ್ ಕೊಡೊಕು'ಂತ ಹೇಳ್ತ್. 'ಅಷ್ಟೆ ಅಲ್ಲ. ಎಲ್ಲಾ ಊರವ್ಕೆ ಬಾಕೆ ಹೇಳೊಕು'ಂತ ಹೇಳ್ತ್. 'ಅಂದರೆ ಮನೆಂದ ಬಿಸ್ನೀರ್ ಮೀವಲ್ಲಿಗೆ ಒಂದು ತೋರಣ ಕಟ್ಟೊಕು'ಂತ ಹೇಳ್ತ್. 'ಎರಡ್ ಪಕ್ಕ ದಳಿ ಕಟ್ಟೊಕೂ'ಂತ. ಆತ್ಂತ ಎಲ್ಲ ಅರ್ಸು ಹಾಂಗೆ ರಡೀ ಮಾಡ್ತ್. ಅಕೇರಿಗೆ ಈ ಕುರೆನ ಬಳ್ಳಿ ಹಾಕಿ ತಕಂಡೋತ್. ಇಂವ ಎಲ್ಲ ಬಿಸಿನೀರ್ ಮೀವಲ್ಲಿಗೆ ತಕಂಡೋಗಿ ಮುಂದೆ ಹಣ್ಣ್‌ನ ಕೊಟ್ಟತ್. ಗೂಡೆನ ಮಾಡ್ತ್. ಪೊರ್‍ಲು ಹುಳಿ ಮೆಣ್ಸ್ ಎಲ್ಲ ಕಣ್ಣಿಗೆ ಹಾಕಿ ಹೊಡ್ತ್. 'ನನ್ನ ಟೊಪ್ಪಿ ಕೊಡು. ಕಂಬ್ಳಿ ಕೊಡು ಎಲ್ಲ ಕೊಡು'ಂತ. 'ಸರಿ ಕೊಟ್ನೆಂತ ಒಪ್ಪಿಕೊಂಡತ್ ಅದ್'. ಎರಡ್ನೆ ಬಾಕನ ಕುರೆ ಇಲ್ಲೆ ಗೂಡೆ ಉಟ್ಟು. ಎರಡ್ನೆ ಎಲ್ಲವುಕ್ಕೆ ಸಮಾರ್ದನೆ ಮಾಡಿ ಅರ್ಸು ಮಗಳ ಅವ್ಕೆ ಮೊದ್ವೆ ಮಾಡಿಕೊಟ್ಟೊ. ಮತ್ತೆ ಅವರ ಅಲ್ಲಿಂದ ಕಳ್ಸಿ ಬುಟ್ಟೊ. [ಕತಾ ನಿರೂಪಕಿ:ತಾರಾಮಣಿ ಪಡ್ಪು ಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]

## 62.ಹುಲಿ ಹಾಲ್ ತಾಂವ ಕತೆ

ಒಬ್ಬ ಅರ್ಸು ಇತ್ತ್. ಅವಂಗೆ ಇಬ್ಬರ್ ಅಬ್ಬೆಗ ಇದ್ದೊ. ಬಿಕ್ಷೆ ಬೇಡಿಕೆ ಮನೆ ಬಾಕನ, ಬಿಕ್ಷೆ ಕೊಡಿಕನ ನಂಗೆ ಮಕ್ಕಳಿಲ್ಲೆ. ನಾ ಬಿಕ್ಷೆ ಕೊಡ್ದು ಏಕೆಂತ ಹೇಳ್ದೆ. ಬಿಕ್ಷುಕ ಹೇಳ್ದೆ, 'ಮೂರು ಕಲ್ಲ್ ತನ್ನಿ ನಾ ಮಂತ್ರಿಸಿಕೊಟ್ಟನೆ'ಂತ. ಮೂರು ಕಲ್ಲ್ ತಂದ್ ಕೊಟ್ಟವೆ. ಅದರ ಮಂತ್ರಿಸಿಕೊಟ್ಟ್ ಒಂದ್ ಹೊಳೆ ನಡುಲಿ ಮಾಯಿನ ಮರ ಉಟ್ಟು. ಅದಕ್ಕೆ ಒಂದು ಕಲ್ಲ್ ಇಟ್ಟರೆ ಹಣ್ಣ್ ಬೀಳ್ದುಲೆ. ಎರಡನೇ ಕಲ್ಲ್ ಇಟ್ಟಾಕನ ಬಿದ್ದದೆ'ಂತ ಹೇಳ್ತ್. 'ಆಗ ಮತ್ತೂ ಬೇಕ್ಂತ ಕಲ್ಲ್ ಇಡ್ಬೇಡಿ. ಅದರ ತೆಕಂಡ್ ಬಂದ್ ಎರಡ್ ಜನಕ್ಕೆ ಪಾಲ್ ಮಾಡಿಕೊಡಿನಿ'ಂತ. ಆಗ ದೊಡ್ಡದ್ ಒಬ್ಬಳೇ ತಿಂದದೆ. ಕೊರಂಟ್‌ನ ಮಡೆಗುತ್ತಿಲಿ ಇಸಿದೆ. ಸಣ್ಣದ್ ಮಡೆಗುತ್ತಿ ತೊಲಿಯಕೆ ಹೋಕನ ಅದರ ಬೆಂಡ್‌ನ ಭಾಗಮಾಡಿ ತಿಂದದೆ. ಹಂಞ ಸಮಯ ಕಳ್ದಾಕನ ಮಕ್ಕ ಹುಟ್ಟುವೆ. ಸುರುದಕ್ಕೆ ಮಕ್ಕ

ಹುಟ್ಟುವೆ. ಸುರುದಕ್ಕೆ ಹುಟ್ಟಿದ ಮಕ್ಕ ತೀರಿಹೋದೆ. ಎರಡ್ನೆದ್ ಗರ್ಭಿಣಿ ಆದೆ. ಎರಡ್ನೆದಕ್ಕೆ ಎರಡ್ ಗಂಡ್ ಮಕ್ಕ ಹುಟ್ಟುವೆ. ಆಗ ಹೆರಿಗೆ ಆಕನ ಸಣ್ಣದ್ ಕೇಳ್ದೆ, 'ಹೆಂಗೆ ಹೆರಿಗೆ ಆದ್'ಂತ. ದೊಡ್ಡದ್ ಹೇಳ್ದೆ, 'ಸೊಂಟಕೆ ಕಡ್ಕಲ್ಲ್ ಕಟ್ಟಿ ಆಚೆಂದ ಈಚೆ ಹಾರೊಕ್ಕು'ಂತ. ಆಗ ಸಣ್ಣದ್ ಒಪ್ಪಿದೆ. ಹಾಂಗೆ ಹಾರಿಕೆ ಆಕನ ಎರಡ್ ಮಕ್ಕ ಹುಟ್ಟುವೆ. ಆ ಮಕ್ಕಳ ತಕಂಡೋಗಿ ದೊಡ್ಡದ್ ಕರ್‌ಬುಡುವ ಹಸ್‌ಗಳ ಹಕ್ಕಳೆ ಒಂದು ಮೂಲೆಲಿ ಹಾಕಿದೆ. ಕರ್ ಬುಡಿಕೆ ಆಕನ ಯಾಗೋಲು ಹಾಲು ಸೂಸಿ ಆ ಮಕ್ಕಳ ಬಾಯಿಗೆ ಹೋದೆ. ತುಂಬ ದೊಡ್ಡವರಾದ ಮೇಲೆ ದೊಡ್ಡಮ್ಮ ಎರಡೂ ಮಕ್ಕಳ ಅಜ್ಜಿ ಮನೆಗೆ ಕಳ್ಸಿದೆ.

ಕಳ್ಸಿ ದೊಡ್ಡದಾದ ಮೇಲೆ ಅರ್ಸಲ್ಲಿ ಒಂದು ಸಭೆ ನಡ್ದದೆ. ಆಗ ಅಜ್ಜಿ ಮನೆಗೆ ಅಪ್ಪ ಬಂದದೆ. ಆ ಮಕ್ಕ ಎರಡೂ ಬಂದ್ ತೊಡೆಮೇಲೆ ಕುದ್ದವೆ. ಅಪ್ಪಾ ಅಪ್ಪಾಂತ ಬೊಬ್ಬೆ ಹಾಕ್ವೆ. ಆಗ ಅಜ್ಜಿ ಹೇಳ್ದೆ ]ಹಿಂಗಿಂಗೆ]ಂತ. ಎಲ್ಲ ಹೇಳಿ ಆಕನ ಮತ್ತೆ ಮನೆಗೆ ಕರ್ಕಂಡ್ ಬಂದವೆ. ಕರ್ಕಂಡ್ ಬಂದ್ ಸಭೆ ನಡ್ದ್ ಆಕನ ತುಂಬ ದಿನ ಆದೆ. ಆಗ ದೊಡ್ಡ ಹೆಣ್ಣ್‌ಗೆ ಹೊಟ್ಟೆ ಬೇನೆ ಸುರುವಾದೆ. ಆಗ ಅದ್ 'ನಂಗೆ ಹುಲಿನ ಹಾಲ್ ಬೇಕ್'ಂತ ಹೇಳ್ದೆ. ಆತ್‌ಂತ ಅರ್ಸು ಕಾಡಿಗೆ ಹೊರ್ಟದೆ. ಹುಲಿನ ಹಕ್ಕಲೆ ಹೋದೆ. ಆಗ ಮರಿಗ ಹೇಳ್ವೆ, 'ಈಗ ನಮ್ಮ ಅಮ್ಮ ಬಾಕೆ ಆತ್. ನೀವು ಹೋಗಿ ನಾವು ಹಾಲ್ ತಿಂಬಕೆ ಆಕನ ಒಂದು ಎಲೆಲಿ ಹಾಕಿಸುವೆ'ಂತ. ಆತ್‌ಂತ್ ಹೇಳಿ ಒಪ್ಪುವೆ. ಆಗ ಅವು ಹಾಲ್ ತಂದ್ ಇಸಿದೆ. ಇಂವ ಆ ಹಾಲ್‌ನ ತಂದದೆ. ಆಗ ವಾಪಸ್ ಅಬ್ಬೆ ನಂಗೆ ಅಜ್ಜಿ ಕರ್ಲೆ ಬೇಕ್‌ಂತ ಹಟ ಹಿಡ್ದದೆ. ಹಟ ಹಿಡಿಯಕೆ ಆಕನ ಆತ್‌ಂತ ಹೇಳಿ ಒಪ್ಪಿದೆ. ನಾಯಿಗಳ ಎಲ್ಲ ಕರ್ಕಂಡ್ ಹೋದೆ. ನಾಯಿಗ ಎಲ್ಲ ಹೋಗಿ ಕರ್ಲ್ ತಂದ್ ಕೊಟ್ಟವೆ. ಇದ್ ನಾಯಿನ ಕರ್ಲ್‌ಂತ ಅದ್ಕೆ ಗೊತ್ತಾದೆ. ವಾಪಾಸ್ ಅದ್ ಅಬ್ಬೆ ಕರ್ಲ್ ಬೇಕಂತ ಹೇಳ್ದೆ. ಹಾಂಗೆ ತಂದ್‌ಕೊಟ್ಟದೆ. ತಂದ್ ಕೊಡಿಕನ ಮಂಜ ಬಿದ್ದದೆ. ಆಗ ಅಯ್ಯೆನ ಕರ್ಲ್ ಹೇಳ್ದೆ. ಮಂಜ ಮಂಜ ನಿಂಗೆ ಬೇನೆ ಆತಂತ ಇಲ್ಲೆಂತ ಹೇಳಿ ಅಷ್ಟೂ ಪ್ರೀತಿ ಅವಂಗೆ. ಹಾಂಗೆ ಮತ್ತೆ ಮನೆಗೆ ಬಂದ್ ಅಬ್ಬೆಗೆ ಕೊಟ್ಟದೆ. ಅಬ್ಬೆನ ಸುದ್ದಿ ಇಲ್ಲೆ. ವಾಪಾಸ್ ಹೇಳ್ದೆ. ನಂಗೆ ಹೊಟ್ಟೆ ಬೇನೆ ಹೋತ್ಲೆ. ಆ ಎರಡ್ ಮಕ್ಕಳ ರಕ್ತ ಬೇಕುಂತೆಲಿ. ರಕ್ತ ಬೇಕುಂತ ಹೇಳಿ ಕಾಡಿಗೆ ತುಂಬ ದೂರ ಹೋಕನ ಮಂಜ ಹೇಳ್ದೆ ಅಪ್ಪನೊಟ್ಟಿ 'ನಂಗೆ ಬೇಡನೇ ಬೇಡಂತ' ಮರ್ಗವೆ. ಮರ್ಗಾಕನ ಅಪ್ಪ ಮಾತಿಗೆ ತಪ್ಪದೆ ರಕ್ತ ತಂದದೆ. ತಂದ ಕೊಟ್ಟದೆ. 'ಈಗ ಅದರ ನೀವು ನೋಡಿಕೆ ಹೋಕಡ'. [ಕಥಾ ನಿರೂಪಕಿ:ಲೀಲಾವತಿ ಪಡ್ಪು; ಸ್ಥಳ:ಮನೆ ಸಮಯ:ಬೆಳಿಗ್ಗೆ; ವರ್ಷ–1991]

## 63.ಹುಲಿ ಕೊಂದವಂಗೆ ಅರ್ಧ ರಾಜ್ಯ, ರಾಜಕುಮಾರಿ ಮೊದ್ವೆ ಕತೆ

ಒಂದ್ ಊರ್ಲಿ ಒಂದ್ ಹುಲಿ. ಅದ್ ಎಲ್ಲ ಮೊನ್ಸರ್ನು ತಿಂಬೊದು. ಶಾಲೆ ಮಕ್ಕ ಯಾರುನೂ ಅಲ್ಲಿ ಹೋಕ್ಕೆ ಬೊತ್ತ್. ಯಾಗ ನೋಡ್ರು ಹುಲಿ ತಿಂಬೊದು. ಇದರ ಅರ್ಸಂ

ೋಡಿ ತುಂಬ ಬಿಸಿ ಆತ್. ಇನ್ನೆಂತ ಮಾಡ್ದು ? 'ನಾ ನನ್ನ ಮಗಳ ಮೊದ್ವೆ ಮಾಡಿ ಕೊಟ್ನೆ. ರ್ಧರಾಜ್ಯ ಕೊಟ್ನೆ, ಬೇಟೆಗೆ ಬೆಡಿನೂ ಕೊಟ್ನೆ'ಂತ ಹೆಣ್ಣ್‌ನೊಟ್ಟುಗೆ ಹೇಳ್ತ್. ಊರೆಲ್ಲ ತಂಗುರ ಹಾಕಿತ್. ಇದರ ಒಂದ್ ಬಂಟ ಕೇಳ್ತ್. ಅಂವ ಹೆಣ್ಣ್‌ನೊಟ್ಟುಗೆ ಹೇಳ್ತ್, 'ನಾ ನಾಳೆ ಹುಲಿ ಹೊಡಿಯಕೆ ಹೋನೆ. ಅರ್ಸ ಮಗಳ ಕೊಟ್ಟ್ ಅರ್ಧ ರಾಜ್ಯ ಉಂಬಳಿ ಕೊಟ್ಟದೆ'. ಹೆಣ್ಣ್ ಹೇಳ್ತ್, 'ಬೇಡ ಹೋದು?' ಅದ್ಕೆ ಹೆರಿಕೆ ತಿಂಗ ಅದೂವೆ. ಇಂದ್ ನಾಳೆಂತ ಹೆರಿಕೆ ಆಗುಟು. ಟ್ಟುಗೆ ಅಲ್ಲಿ ಯಾರೂ ಜನ ಇಲ್ಲೆ. ಹೋದು ಬೇಡಂತ ಹೇಳ್ರೂ ಹೆಣ್ಣ್‌ನ ಮಾತ್ ಕೇಳದೆ ಇಂವ ಹೋತ್.

ಈ ಹುಲಿ ದೊಡ್ಡಾ ಪರ್ವತದಂಗೆ ಮಲ್ಗಿಟು. ಮಲ್ಗಿದ್ ಇದ್ ನಿದ್ದೆ ಮಾಡಿಕಂಡಿತ್ತ್. ಇಂವ ಹುಲಿನ ಎದ್ರ್‌ಂತ ಕರ್ತ್. 'ಹುಲಿ ಸೀಗೆದ ಗುಡ್ಡೆಗೆ ತಲೆಹಾಕಿ, ಬಾಗೆದ ಗುಡ್ಡೆಗೆ ಬೆನ್ನ್ ಹಾಕಿ ಮಲ್ಗಿಟು'. ಇಂವ 'ಎದ್ರ್ ನಾ ಗುಂಡ್ ಹೊಡ್ದನೆ'ಂತ ಹೇಳ್ತ್.
ಹುಲಿ ಎದ್ದತ್. ಇಡೀ ಅಡಿ ಆಕಾಸ ಒಂದೇ ಆಗಿ ಎದ್ದ್ ನಿಂತತ್. ದೊಡ್ಡಾ ಹುಲಿ. ಅಲ್ಲಿಂದ ನಿನ್ನ ಯುದ್ಧ ಮುಂದೆ ತೀರಲಿ'ಂತ ಹೇಳ್ತ್. ಇಂವ ಹೊಡ್ತ್. ಹಾರಿ ತಪ್ಸಿತ್. ತಪ್ಪಿಸಿ ಆಕನ ಇನ್ನ್ ನಾನೇ ಯುದ್ಧ ಮಾಡ್ನೆಂತ ಹುಲಿ ಹೇಳ್ತ್. ಇಂವನ ಹಾರಿ ನುಂಗಿತ್. ನುಂಗಿ ಇಂವ ಸತ್ತತಲ್ಲೆ. ಸತ್ತ ಮೇಲೆ ಅವಳ್ ಅದೇ ದಿನ ಹೆತ್ತತ್. ಗಂಡ್‌ಕೂಸ್‌ನ ಹೆತ್ತತ್. ಜೊತೆಲಿ ಯಾರೂ ಇಲ್ಲೆ ಒಬ್ಬೆ. ಕೂಸ್‌ನ ಮೀಸಿದ್ ಮೊದ್ದ್ ಕುಡ್ಸಿದ್ ಲಾಯಿಕ್‌ಲಿ ನೋಡಿಕಣ್ತ್. ಕೂಸ್ ದೊಡ್ಡದಾತ್. ದಿನಂದ ದಿನಕ್ಕೆ ಬೆಳ್ತ್. ಐದ್ ದಿನದ ಕೂಸ್ ಒಂದ್ ತಿಂಗಳ ಮಕ್ಕಳಂಗೆ ಬೆಳ್ತ್. ಸಾಲೆಗೆ ಹೋತ್. ಉಸಾರ್ ಕಲ್ತತ್. ಇಡೀ ಸಾಲೆಲಿ ಅಂವನೇ ಉಸಾರ್. ಮಾಷ್ಟ್ರ್‌ಗೆ ಕೂಡ ಅಂವನೊಟ್ಟುಗೆ ಬಾರೀ ಕುಸಿ. ಅಷ್ಟಾಕನ ಈ ಮಕ್ಕ ಎಲ್ಲಾ ಡೋಂಗಿ ಮಾಡ್ರೊ. ನೀ ಎಷ್ಟ್ ಉಸಾರಿದ್ದರೇನ್ ನಿನ್ನ ಅಪ್ಪನ ಹುಲಿ ತಿಂದುಟು. ಇನ್ನ್ ನಿನ್ನನೂ ತಿಂಬೊದೇ ಸರಿಂತ. ಮನೆಲಿ ಒಂದ್ ದಿನ ಕೇಳೊಕುಂತ ಗೇನ ಮಾಡ್ತ್. ಅಮ್ಮನೊಟಗೆ ಆತ್ಲೆ. ಮಾರ್ನೆದಿನ ಮರ್ರೊತ್.

ಎರಡ್ ಮೂರ್ ದಿನ ಕಳ್ದಾಕನ ಒಂದ್ ದಿನ ಕೆಬಿನ ಒಂದ್ ಚೂರ್ ಕೊಯ್ಕನ್ತ್. ಕತ್ತಲೆಗೆ ಲೆ ಮೀಸ್‌ಕನ ಎಲ್ಲ ಒರ್ಸ್‌ಕನ ಕೆಬಿ ಬೇನೆ ಆತ್. 'ಇದೇಕೆ ನೀ ಕೆಬಿ ಕೊಯ್ದದ್?''ಅದೋ ಅವ್ವ ನನ್ನ ಅಪ್ಪನ ಹುಲಿ ತಿಂದುಟ್ಟುಗಡ. ಶಾಲೆ ಮಕ್ಕ ಎಲ್ಲ ನನ್ನ ಡೋಂಗಿ ಮಾಡ್ವೆ. ನೀ ಎಷ್ಟ್ ಉಸಾರಿದ್ದರೇನ್? ನಿನ್ನ ಅಪ್ಪನ ಹುಲಿ ತಿಂದದ್'ಂತ ಹೇಳ್ವೆ, 'ಹೌದ ಅಮ್ಮಾ. ನಾ ಇಂದೇ ಹೊರಟೆ. ಹುಲಿನ ನಾನೇ ಕೊಲ್ಲೊಕು'ಂತ ಹೇಳ್ತ್. ಇಂವ ಹೋತ್ ಅರಮನೆಗೆ. ಒಂದ್ ತೋಟೆಕೋವಿ ತಕನ್ತ್, ತೋಟೆನೂ ತಕನ್ತ್. ಬಾತ್. ಬಾತ್ ಹೊಡ್ತ್. ನಿದ್ದೆಮಾಡಿಕಂಡಿದ್ದ ಹುಲಿಗೆ ಹೊಡ್ತ್. ಹುಲಿ ಅಲ್ಲೇ ಬಿದ್ದ್ ಸತ್ತತ್. ಮನೆಗೆ ಬಾತ್. ಮನೆಗೆ ಬಂದ್‌ದ್ ಊರಿನ ಎಲ್ಲ ಜನರ ಕರ್ಕಂಡ್ ಹೋತ್. ಕರ್ಕಂಡ್ ಹೋಗಿ ಆಕನ ಹೌದು ಹುಲಿ ಸತ್ತದ್. ಆ ಅರ್ಸ ಮತ್ತೆ

ಅಂವಂಗೆ ಅರ್ಧರಾಜ್ಯವೂ ಕೊಟ್ಟತ್. ಅಂವನ ಮಗಳ್ನ ಮೊದ್ವೆ ಮಾಡಿಕೊಟ್ಟತ್. 'ಈಗ ಅವು ಸುಖಲಿ ಸಂತೋಷಲಿ ಒಳೊ. ನಾವು ನೋಡಿಕಂಡ್ ಬರಕಡ. ಪೋಯ'. [ಕತಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

64. **ನಂಬಲರ್ಹ ಸ್ನೇಹಿತರ ಕತೆ**

ಒಂದ್ ರಾಜ್ಯಲಿ ಒಂದ್ ಮನೆಲಿ ಒಂದ್ ಅಯ್ಯೆ ಮಂಜ ಇಬ್ಬರೇ ಗಡ. ಈ ಮಂಜಂಗೆ ಬಾರೀ ಸ್ನೇಹಿತರೇ. ಎಲ್ಲಿ ಹೋದರೂ ಸ್ನೇಹಿತರೇ. ಮನೆಗೆ ಹೋಕನ ಮನೆ ತುಂಬ ಜನ. ಈ ಅವ್ವ ಗಂಜಿ ಮಾಡಿ ಎಷ್ಟ್ ಕೊಟ್ಟರೂ ಅವ್ಕೆ ಸಾಕಾಕಿಲ್ಲೆ. ಹಾಂಗೆ ಕೊಟ್ಟ್ ಕೊಟ್ಟ್ ಕಡೆಗೆ ಆಕನ ಅಯ್ಯೆಗೆ ಬೊಚ್ಚಿ ಹೋತ್ ಗಡ. 'ಹೌದ ಮಂಜ ನೀ ಹಿಂಗೆ ಸ್ನೇಹಿತರ ಜೋಸ್ತಿ ಮಾಡಿ ತಂದರೆ ನಾವು ಏನ್ ಆಕ್ಕ್?''ಅಯ್ಯೋ ಅವ್ವ ನಾವ್ಗೆ ಅವರಿಂದ ಎಷ್ಟ್ ಉಪಕಾರ ಉಟ್ಟು'. 'ಅವು ಏನೂ ಸಹಾಯ ಕೊಟ್ಟವೆ'ಂತ ? ಮಂಜ ಹೇಳ್ತ್. 'ನಾ ಬಿದ್ದರೆ ಎದ್ರ್‌ಸಿವೆ. ಮುಳ್ಳ್ ಕಂತಿರೆ ತೆಗ್ದವೆ. ಏನ್ ಬೇಕರೂ ಮಾಡ್ವೆ. ಎಲ್ಲಿ ಬೇಕರ್ ಹೋಗ್‌ಂತ ಹೇಳ್ರೂ ಹೋವ'. 'ಅಂದರೆ ನಿಂಗೆ ನಾ ಒಂದ್ ಕಥೆ ಹೇಳ್ನೆ. ನಾಳೆ ನಾ ಸತ್ತನೆ. ಆಗ ನೀ ಬಂದ್‌ದ್ ಒಳ್ಳೆ ಮರ್‍ದೊಕ್. ಮರ್ಬ್‌ದ್ ಕಡೆಗೆ ನಿನ್ನ ಸ್ನೇಹಿತರೆಲ್ಲ ಬಾವೊ. ಬಂದಾಕನ ನೀ ಹೇಳೊಕ್. ನನ್ನ ಅವ್ವ ಸತ್ತೋತ್‌ಂತ ಆಗ ಎಲ್ಲವೂ ಬಂದವೆ. ಬಂದಾಕನ ಇನ್ನೇನ್ ಮಾಡ್ದು. ಸೌದೆ ಮಾಡೊಮಾ ಸುಡೊಮಾ'ಂತ ಹೇಳ್ವೊ. 'ಅದ್ ಬೊತ್ತ್. ಸುಟ್ರೆ ನನ್ನ ಅವ್ವ ಕರಿ ಆದವೆ. ಮತ್ತೆ ಏನ್ ಮಾಡೊಕ್'ಂತ ಹೇಳ್ವೊ. 'ಗುಂಡಿಗೆ ಹಾಕೊಕ್‌ಂತ ಹೇಳ್ವೊ. ಗುಂಡಿಗೆ ಹಾಕಿರೆ ನನ್ನ ಅವ್ವಂಗೆ ಉಬ್ಬೆಸ ಆದು, ಬೊಚ್ಚುದು. ಅದ್ ಬೊತ್ತ್. ಇನ್ನೇನ್ ಮಾಡೊಕ್'ಂತ ಕೇಳ್ವೊ. 'ನನ್ನವ್ವನ ನಾ ತಲೆಕಡೆಂದ ತಿಂದನೆ ನೀವು ಕಾಲ್ ಕಡೆಂದ ತಿನ್ನೊಕ್‌ಂತ ಹೇಳೊಕ್'ಂತ ಹೇಳ್ತ್ ಗಡ. ಆತ್‌ಂತ ಹೇಳ್ತ್.

ಅವ್ವ ಒಂದ್ ಮುಡಿ ಅವಲಕ್ಕಿ ಬಾಳೆಹಣ್ಣ್ ಎಲ್ಲ ಕಳ್ಸಿ, ಅವ್ವನಷ್ಟೇ ಉದ್ದ ತೋರ ಮಾಡಿ ಗುಡಿಂಗೆ ಹಾಕಿ ಅವ್ವ ಅಡಂಗಿತ್. ಅದರ ಮಾರನೆ ದಿನ ಇಂವ ಒಳ್ಳೆ ಗೋಳೊಂತ ಮರ್ಬತ್. ಸ್ನೇಹಿತರೆಲ್ಲಾ ಇಂವ ಏನ್ ಬಾತ್ಲೆಂತ ಹುಡ್ಕಿಕಂಡ್ ಬಂದೊ. ಬಂದಾಕನ ನನ್ನ ಅವ್ವ ಸತ್ತೊತ್‌ಂತ ಮರ್ಬತ್. ಎಲ್ಲವೂ ಬಂದೊ. 'ಬಾಯಿಗೆ ನೀರ್ ಕೊಡೊಂಬನ', 'ಬಾಯಿಗೆ ನೀರ್ ಕೊಡಿಕೆ ಬೊತ್ತ್ ನನ್ನವ್ವನ'ಂತ ಹೇಳ್ತ್. ಕುದ್ದ್‌ಕಂಡ್ ಎಲವೂ ಮರ್‍ವೊ. ಕಡೆಗೆ ಇನ್ನ್ ಏನ್ ಮಾಡ್ದು 'ಇನ್ನ್ ಸುಡೊಮಾ, ಸೌದೆ ಮಾಡೊಮಾ. ಅಯ್ಯೋ ಸುಡಿಕೆ ಬೊತ್ತ್'. 'ಮತ್ತೇನ ಮಾಡ್ದು?''ಅಂದರೆ ಗುಂಡಿಗೆ ಹಾಕಮಾ'ಂತ ಕೊಟ್ಟು ಪಿಕ್ಕಾಸಿ ತಾಕೆ ಹೋದೊ. 'ಗುಂಡಿಗ ಹಾಕಿಕೆ ಬೊತ್ತ್. ಅವ್ವನ ಗುಂಡಿಗೆ ಹಾಕಿರೆ ಉಬ್ಬೆಸ ಆದೆ'. 'ಇನ್ನೇನ್ ಮಾಡ್ದು?''ನನ್ನ ಸ್ನೇಹಿತರ ನೀವು ಆದರೆ ನಾ ತಲೆ ಕಡೆಂದ ತಿಂದನೆ. ನೀವು ಕಾಲ್ ಕಡೆಂದ ತಿನ್ನೊಕು'ಂತ ಹೇಳ್ತ್. ಕೆಲವ ಜನ ಅವಂಗೆ ಬೊಡಿಯಕೆ ಬಂದೊ. ಎಳ್ದ್ ಹೊರಗೆ ಹಾಕಮಾಂತ ಬಂದೊ. ಎಲ್ಲಾ ಅವ

ಷ್ಟಕೆ ಬಂದೊ. ಕೆಲವ್ ಜನ 'ಅಂವ ಯಾಕೆ ಹಿಂಗೆ ಹೇಳ್ದೆ'ಂತ? ಮಾತಾಡ್ದೊ. ಒಬ್ಬ ಮಾತಾಡದೆ ಕುದ್ದತ್‌ಗಡ. 'ನಿಂಗೆ ಏನೋ ಹುಚ್ಚ್, ನಿನ್ನ ಅವ್ವ ಸತ್ತರೆ ನೀನು ಸಾಯಿ. ನಿನ್ನ ಅವ್ವನ ನಾವು ತಿಂಬಕೆ ಕುದ್ದವ್ವೆನ'ಂತ ಎಲ್ಲವು ಬೊಯ್ಕೊಂಡ್ ಹೊರ್ಪ್ ಹೋದೊ. ಒಬ್ಬ ಸುಮ್ಮನೆ ಕುದ್ದತ್. 'ಇನ್ನ್ ಏನ್ ಮಾಡ್ದು ಸ್ನೇಹಿತ'ಂತ ಆಕನ 'ನೀ ಹೇಳ್ದಂಗೆ ಕೇಳೋಕಲ್ಲೆ'ಂತ ಹೇಳ್ತ್. ಅಂವ ಕಾಲ್‌ಕಡೆಂದ ತಿಂಬಕೆ ಸುರ್‌ಮಾಡ್ತ್. ಇಂವ ತಲೆಕಡೆಂದ ತಿಂಬಕೆ ಸುರ್ ಮಾಡ್ತ್. ಇವ್ಕೆ ತಿಂದ್ ತಿಂದ್ ಬಿಡಿಯಕನ ಏನ್ ತಿಂದವೆ ನೋಡೊಮಾಂತ ಎಲ್ಲವು ಬಂದೊ. ಆಗ ಅವ್ವ ಹೊರಗೆ ಬಂದ್ ಹೇಳ್ತ್‌ಗಡ. 'ಮಂಜ ನಿನ್ನ ಸ್ನೇಹಿತರ ಬುದ್ಧಿ ಗೊತ್ತಾತ ನಿಂಗೆ'ಂತ. 'ಏನ್ ಉಪಕಾರ ಮಾಡ್ವೊ ನಿನ್ನ ಸ್ನೇಹಿತರ್ ಒಬ್ಬಂಗೆ ಒಬ್ಬೆನೇ ಸ್ನೇಹಿತ್'ಂತ ನೆನ್ಸಿಕ. ಎಲ್ಲಿಯಾರ್ ಹುಡ್ಕಿದ್ ಒಂದೇ ಹೆಣ್ಣ್‌ನ ತಂಬ. ಸಾವಿರಾರ್ ಹೆಣ್ಣ್‌ಗ ಇರುವೊ. ಒಂದೇ ಹೆಣ್ಣ್‌ನ ತಂಬ. ಸಾವಿರಾರ್ ಹೆಣ್ಣ್‌ಗ ಇರುವೊ ಒಂದೇ ಹೆಣ್ಣ್ ನಿಂಗೆ ಇರ್‌ವಂತದ್. ಹಾಂಗೇ ಸಾವಿರಾರ್ ಸ್ನೇಹಿತರ್ ನಿಂಗೆ ಬೇಡ ಮಂಜ'ಂತ ಹೇಳ್ತ್ ಗಡ. 'ಹಾಂಗೊಂದ್ ಕಥೆ'.[ಕಥಾ ನಿರೂಪಕಿ:ಹೊನ್ನಮ್ಮ ಮೂಲೆಮನೆ,ಪೆರಾಜೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 65.ಜೀವಸೂಚಿ ತೊಳ್ಸಿ ಗಿಡದ ಕತೆ

ಒಂದು ಪಾಪದ ಮೊನ್ಸ ಜೀವನ ಮಾಡಿಕಂಡಿತ್ತ್. ಅಂವ ಒಂದ್ ನೆರಿಯದ ಗೂಡೆನ ಮೊದ್ವೆ ಆತ್. ಮೊದ್ವೆ ಆಗಿ ಅವು ಹಿಂಗೆ ಕೆಲಸ ಮಾಡಿ ಊಟ ಮಾಡಿಕಂಡಿದ್ದೊ. ಹಿಂಗೆ ಇರ್ಕನ ಅಂವ ಹೇಳ್ತ್, 'ಹಿಂಗೆ ಇದ್ದರೆ ನಾವು ದೊಡ್ಡಿತಾವ ದಾರಿ ಕಾಂಬೊದ್ಲೊ. ನಾ ದೂರ ಗಟ್ಟಕೆ ಕೆಲ್ಸಕೆ ಹೋನೆ'ಂತ ಹೇಳ್ತ್. ಹಂಗೆ ಹೇಳಿ ಆಕನ ಹೆಣ್ಣ್‌ಗೆ ಬಾರಿ ಬೇಜಾರ ಆತ್. 'ನಾ ನೆರ್‌ತ್ಲೆ. ನಾ ನೆರ್ದರೆ ಏನು ಮಾಡ್ದು. ನೀವ್ಗೇನು ಗೊತ್ತು'ಂತ ಹೇಳ್ತ್. 'ಹಂಗಾರೆ ನಾ ಏನು ಮಾಡೊಕುಂತ ಅಂವ ಕೇಳ್ತ್' ಆಗ ಹೇಳ್ತ್. 'ನೀವು ಅಲ್ಲಿ ಗಟ್ಟಕೆ ಹೋಗಿ ಒಂದು ತೊಳ್ಸಿ ದೈಯಿ ನೆಡಿನಿ. ದಿನಾ ಮೋರೆ ತೊಳ್ದ್ ನೀರ್ ಹೊಯ್ಕಂಡ್ ಇರಿ. ಅದ್ ಯಾಗ ಬಾಡ್ತೊ ಆಗ ನಾ ನೆರ್ದದ್'ಂತ ಗೇನ ಮಾಡಿ ಬನ್ನಿ'ಂತ ಹೇಳ್ತ್.

ಇಂವ ಮಾರನೆ ದಿನ ಎದ್ದ್ ಗಟ್ಟಕೆ ಕೆಲ್ಸಕೆ ಹೋತ್. ಹೋಗಿ ಸುಮಾರ್ ಒಂದ್ ತಿಂಗ ದಿನಾ ಈ ತೊಳ್ಸಿ ದೈಯಿನ ಬುಡಕ್ಕೆ ನೀರ್ ಹೊಯ್ಕಂಡಿತ್ತ್. ಸುಮಾರ್ ಒಂದ್ ತಿಂಗ ಕಳ್ತ್. ಅಷ್ಟಾಕನ ಒಂದು ದಿನ ಈ ತೊಳ್ಸಿ ದೆಯಿ ಬಾಡ್ತ್. ಅಷ್ಟೊತ್ತಿಗೆ ಇಂವ ಹೇಳ್ತ್, 'ನಾ ನನ್ನ ಮನೆಗೆ ಹೋನೆ'ಂತ ಹೇಳ್ತ್. 'ಯಾಕೆ'ಂತ ರೈಟ ಕೇಳ್ತ್. 'ನನ್ನ ಗೂಡೆ ನೆರ್ದುಟು. ಅದು ಬಾಕೆ ಹೇಳಿಟು', ಅದ್ ಹೇಂಗೆ ಗೊತ್ತು ನಿಂಗೆ? 'ನಾ ಒಂದು ತೊಳ್ಸಿ ದೆಯಿ ಬಂದಾಂಗೆ ನೆಡಿಕೆ ಹೇಳುಟು, ಅದರ ನಟ್ಬೊಳೆ. ಅದ್ ಇಂದ್ ಬಾಡಿಟು. ಆ ಬಾಡಿದ ದಿನ ನೀವು ಬರೊಕು'ಂತ ಹೇಳುಟು. ಅಷ್ಟೊತ್ತಿಗೆ ಈ ರೈಟ ದುಡ್ಡೆಲ್ಲ ಕೊಟ್ಟತ್. ಇವನ ಮನೆಗೆ ಕಳ್ಸಿತ್. ಅಂವ ಬಾತ್.

ಬಂದ್‌ದ್ ಈ ಗೂಡೆನ ಕ್ರಮ ಎಲ್ಲ ಮಾಡಿ ವಾಪಾಸ್ ಗಟ್ಟಕೆ ಹೋತ್.

ಅಂವ ಹೋಗಿ ಅಲ್ಲಿ ಎತ್ತಿದ ಕೂಡ್ಲೆ ಇಂವ ಯಜಮಾನ ಏನ್ ಮಾಡ್ತ್. ನೀವು ಒಂದ್ ಹತ್ತ್ ಜನಹೋಕ್ಕು. ಹೋಗಿ ಆ ಗೂಡೆನ ಏನಾರು ಮಾಡಿ ನೀವು ತೆಕಂಡ್ ಬರೊಕುಂತೇಲಿ ಅವ್ಕೆ ದುಡ್ಡೆಲ್ಲ ಕೊಟ್ಟ್‌ದ ಹತ್ತ್ ಜನರ ಕತ್ತಲೆ ಆಕನ ಕಳ್ಸಿತ್. ಸೀದಾ ಇವನ ಮನೆಗೆ ಬಂದೊ. ಬಂದ್‌ದ್ ಕತ್ತಲೆ ಆಕನ 'ನಾವ್ಗೆ ಮಲ್ಗಿಕೆ ಹನಿಸ್ ಜಾಗೆ ಕೊಡೊಕಂತ ಅವು ಕೇಳ್ದೊ'. ಅಷ್ಟೊತ್ತಾಕನ ಅದ್ ಹೇಳ್ತ್, 'ಒಂದು ಮೊಂದ್ರಿ ಒಳದ್. ಒಂದು ಕೂಸು ನನ್ನೊಟ್ಟಿಗೆ ಪಾರಕೆ ಬಂದದ್ ಉಟ್ಟು. ಅದರ ಮೊಂದ್ರಿಲಿ ಮಲ್ಗಿಸೋಕು. ನೀವ್ಗೆ ಆ ಮೊಂದ್ರಿ ಕೊಟ್ಟನೆ. ಮತ್ತೆ ಬೇರೆ ಮೊಂದ್ರಿ ಇಲ್ಲೆ'ಂತ ಹೇಳ್ತ್‌ಗಡ. ಆಗ 'ಈ ಕೂಸುನ ನಿಮ್ಮ ನಡುಲಿ ಮಲಗಿಸಿಕೊನಿ. ನಾ ನೆಲಲಿ ಬಟ್ಟೆ ಹಾಸಿ ಮಲಗಿನೆ'ಂತ ಹೇಳಿ ಆಚೆ ಒಳಗೆ ಅದ್ ಮಲಗಿತ್ ಗಡ. ಇವರ ನಡುಲಿ ಈ ಕೂಸ್‌ನ ಮೊಂದ್ರಿ ಹಾಕಿ ಮಲಗಿಸಿತ್. ಇವು ದೂರಂದ ಬಂದವಲ್ಲ. ಒಳ್ಳೊ ನಿದ್ದೆ ಆತ್. ಸುಮಾರ್ ರಾತ್ರೆ ಹನ್ನೆರಡ್ ಗಂಟೆ ಆಕನ ಇದ್ ಒಳಗಿಂತ ಬಂದ್ ಕೂಸುನ ಇದ್ ಮಲಗಿಸಿದಲ್ಲಿ ಮಲಗಿಸಿತ್. ಇವರ ಹಕ್ಕಲೆ ಬಂದ್ ಇದ್ ಮಲಗಿತ್. ಇದ್ ಇವರ ಕೆನಿ, ನನ್ನ ತಕಂಡೋಕೆ ಬಂದದ್‌ಂತ ಗೊತ್ತಾಗುಟು. ಸ್ವಲ್ಪ ಹೊತ್ತಾತಕನ ಇವ್ಕೆ ಎಚ್ಚರಿಕೆ ಆತ್. ಎಚ್ಚರಿಕೆ ಆಗಿ ಎದ್ದೊ. ಒಳಗೆಹೋಗಿ ಈ ಕೂಸನ ಬಾಚಿಕಟ್ಟಿಕಂಡೊ ತೆಕಂಡೊ ಹೋದೊ. ಹೋಗಿದ್ ಗಟ್ಟಕೆ ಅವರ ಮನೆಗೆ ಹೋಗಿ ಎತ್ತಿದ್ ಬಿಚ್ಚಿ ನೋಡ್ಕೆ ಆಕನ ಕೂಸು ಒಳದ್. ಇವನ ಹೆಣ್ಣ್ ಇಲ್ಲೆ. ಆಗ ಇವರ ಮನಸ್ಸಿಗೆ ಆತ್. ಈ ಕತೆ ಗುಟ್ಟು ರಟ್ಟಾತ್. 'ಗಟ್ಟಂದ ಹತ್ತ್ ನಾಯಿಗಳ ಕೊಟ್ಟು ಕಳ್ಸಿ ಹಣ್ಣ್‌ನ ಬುಟ್ಟ್ ಕಾಯಿನ ತಿನ್ನಲು ಕಾರಣವೇನು? ಅಂತ ಹೇಳಿ ಗುಟ್ಟು ಗೊತ್ತಾತ್'. [ಕತಾ ನಿರೂಪಕಿ:ಕುಸುಮಾಧರ ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಬೆಳಿಗ್ಗೆ 9ಗಂಟೆ; ವರ್ಷ–1991]

## 66.ದೀಪ ಒಡ್ಸಿದ ಒಗಟ್ ಕತೆ

"ಕತೆಯೆಂಬುದ್ ಎಥೆಯಾತ್, ಎಥೆಯೊಂದ್ ಕತೆಯಾತ್, ಬದ್ಕೆಂಬುದ್ ಪಾಲಾತ್. ಮೊಲನ ಕೊಂದ್ ಆರ್ ತಿಂಗಾತ್, ಎದೆ ಮೇಲೆ ಮಿಂಡ ಮೊಗ್ಲ ಅಡಿಲಿ ಗಂಡ, ಇದೊಂದ್ ಕತೆನ ಒಡ್ಸಿಕೊಡದಿದ್ದರೆ, ನಾಳೆ ಎಂಟ್ ಗಂಟೆಗೆ ತಲೆಕುಟ್ಟುದು"ಂತ.

'ಒಂದ್ ಹೆಂಗ್ಸ್‌ನ ಗಂಡನ ಕಣ್ಣ್ ಹೊಡ್ಡ್ ಹೋದರೆ ಆರ್ ಕಾಲ್‌ನ ಪ್ರಾಣಿನ ದೇವಸ್ಥಾನಕ್ಕೆ ಒಪ್ಪಿಸ್ನೆ'ಂತ ಹೇಳಿ ಒಬ್ಬ ಯಾಗೋಲು ದೇವಸ್ಥಾನಕ್ಕೆ ಹೋಗಿ ಪ್ರಾರ್ಥನೆ ಮಾಡ್ದು. ಒಂದ್ ದಿನ ಗಂಡಂಗೆ ಅದ್ ಗೊತ್ತಾತ್. ಇಂವ ದೇವಸ್ಥಾನದ ಹಿಂದೆ ನಿಂತ್ 'ನೀ ಒಳ್ಳೊ ಮೊಟ್ಟೆ ಇಸುವ ಹೆಂಟೆನ ಕೊಂದ್ ರೊಟ್ಟಿ ಮಾಡಿ ಯಾಗೋಲು ನಿನ್ನ ಗಂಡಂಗೆ ಕೊಡೊಕು. ಆದರೆ ನಿನ ಗಂಡನ ಕಣ್ಣ್ ಹೊಡ್ಡ್ ಹೋದೆ'ಂತ ಹೇಳ್ತ್. ಇದ್ ಹಾಂಗೆ ಸತ್ಯ ನಂಬಿತ್ ಬಾತ್. ಬಾತ ಕಾಪುಲಿದ್ದ ಹೇಂಟೆನ ಕೊಂದತ್. ರೊಟ್ಟಿ ಮಾಡ್ತ್. ಗೈಪು ಮಾಡ್ತ್. ಗಂಡಂಗೆ ಕೊಟ್ಟತ್

ೂಟ್ಟಾಕನ 'ಇಂದ್ ನಂಗೆ ಏನೂ ಕಣ್ಣ್‌ಕಾಂಬೊದ್ಲೆ'ಂತ ಹೇಳ್ತ್. ಇದ್ ಮಾತಾಡ್ತ್‌ಲೆ. ಮಾರನೆದಿನ ಇನ್ನೊಂದ್ ಹೆಂಟೆನ ಕೊಂದತ್. ಇದರ ಗೈಪು ಮಾಡ್ತ್. ಗಂಡಂಗೆ ಕೊಟ್ಟತ್. ನಂಗೆ ಇಂದ್ ಮತ್ತಷ್ಟು ಕಣ್ಣ್ ಕಾಂಬೊದ್ಲೆ ಅಲ್ಲ'ಂತ ಹೇಳ್ತ್. ದಿನಾ ಹಾಂಗೇ ಮಾಡಿಕೆ ಶುರುಮಾಡ್ತ್. ಇಂವಂಗೆ ಮತ್ತೆಮತ್ತೆ ಕಣ್ಣ್ ಕಾಂಬೊದೇ ಇಲ್ಲೆಂತ ಹೇಳಿಕೆ ಶುರುಮಾಡ್ತ್. ಕತ್ತಲೆ ಕತ್ತಲೆ ಕಬ್ಬುನ ಹಿತ್ಲಿಗೆ ಮಾಡ್‌ಕೋಲ್‌ಲಿ ಇಂವನ ಮಲ್ಗುಸುದು. 'ನನ್ನ ಕೈಲಿ ಹಿಡ್ಕೊಂಡೇ ಹೋಕಷ್ಟೆ. ನಂಗೆ ನಡಿಯಕೇ ಬೊತ್ತ್'ಂತ ಹೇಳಿಕೆ ಶುರುಮಾಡ್ತ್ ಅಂವ. ಕತ್ತಲೆ ಆಕ್ಕೆ ಮುಂದೆ ಬೇಗ ರೊಟ್ಟಿ ಕೋಳಿಗೈಪು ಎಲ್ಲಮಾಡ್ದು ಕೊಡ್ದು. ತೆಕಂಬೊದು ಹೋಗಿ ಮಾಡ್‌ಕೋಲ್‌ಲಿ ಮಲ್ಗುಸುದು. ಇದ್ಕೆ ಬೇರೆ ಜನ ಜೋಸ್ತಿಗ ಒಳೊ. ಯಾರ್ಗೆ? ಈ ಹೆಣ್ಣ್‌ಗೆ.

ಒಂದ್ ದಿನ ಅಂವ ಮನೆಗೆ ಬಾದರ ಇಂವ ನೋಡಿ ಹೋತ್. ಹಟ್ಟಿಂದ ದನಂಗಳ ಎಲ್ಲ ಬುಟ್ಟತ್. ದನಂಗ ಎಲ್ಲ ಕಬ್ಬಿನ ಹಿತ್ಲಿಗೆ ಹೋದೊ. ಅಲ್ಲಿಂದ ಮಾಡ್‌ಕೋಲ್‌ಂದ ಇಂವ ಬೊಬ್ಬೆ ಹೊಡ್ತ್. ದನಂಗ ಎಲ್ಲ ಕಬ್ಬಿನ ಹಿತ್ಲಿಗೆ ಬಂದೊ. ನಂಗೆ ಕಣ್ಣ್ ಕಾಂಬೊದ್ಲೆಂತ ಹೇಳ್ತ್. ಇದ್ ದನಂಗಳ ಕೂಡಿಕೆಂತ ಹೇಳಿ ಹೊಡಿಯಕೆ ಹೋತ್. ಆಗ ಆ ಸಮಯಲಿ ಇದ್ ತಿಂಡಿಕಾಸಿಕೆಂತ ಹೇಳಿ ಒಲೆ ಮೇಲೆ ಎಣ್ಣೆ ಇಸಿಕೊಂಡುಟು. ಇಂವನೂ ಅಲ್ಲೆ ಮಲ್ಕ್ಯೊನುಟ್ಟು. ಯಾರ್? ಬೇರೆಂವ ಮಿಂಡ. ಇದ್ ದನ ಹೊಡ್ಕಂಡ್ ಹೋಕನ ಗಂಡ ಸೀದಾ ಮನೆಗೆ ಬಾತ್. ಮನೆಗೆ ಬಂದ್ ನೋಡಿಕೆ ಆಕನ ಪಾತ್ರೆಲಿಎಣ್ಣೆ ಕೊದ್ದ್‌ಕಂಡುಟು. ಆ ಎಣ್ಣೆನ ತೆಗ್ದ್ ಅಂವನ ಬಾಯಿಗೆ ಹೊಯ್ತ್. ಒಂದ್ ಹಿಟ್ಟ್‌ನ ತುಂಡ್ ಅಂವನ ಬಾಯಿಗೆ ಕಚ್ಚಿಸಿತ್. ಇಂವ ಹೋಗಿ ಮಾಡ್‌ಕೋಲ್‌ಲಿ ಮಲ್ಕ್ಯೊನ್ತ್. ಇದ್ ದನ ಕೂಡಿಬಂದ್ ಮನೆಲಿ ನೋಡ್ಕನ ಇಂವನ ಬಾಯ್ಲಿ ಅರ್ಧ ಹಿಟ್ಟ್ ಉಟ್ಟಲ್ಲ. ಇಷ್ಟ್ ನಿದ್ದೆ ಬರುವ ಹೊತ್ತಿಗೆ ಯಾಕೆ ತಿನೊಕಿತ್ತ್? ನಾ ಮತ್ತೆ ಕೊಡಿಕೆ ಇತ್ತೆಯಾಂತ ಕೇಳ್ತ್. ಅಂವ ಮಾತಾಡ್ತೇ ಇಲ್ಲೆ. ಇದ್ಕೆ ತಿಂಡಿ ಎಲ್ಲ ಆಗಿ ಅಂವನ ಕರ್ದರೆ ಅಂವ ಸತ್ತೇ ಹೋಗುಟು.

ಇನ್ನ್ ಎಂತರ ಮಾಡ್ದುಂತ ಹೋಗಿ ಗಂಡನೊಟ್ಟಿಗೆ ಹೇಳ್ತ್. 'ಹಿಂಗಿಂಗೆ ಕಾಗಡೆಮನೆ ಬಾವ ಬಂದೊಳೊ. ಅವು ಹಿಂಗಿಂಗೆ ಮನೆಲಿ ಸತ್ತೋಗೊಳ'ಂತ ಹೇಳ್ತ್. 'ಅದರ ಇನ್ನ್ ಎಂತ ಮಾಡ್ದು. ನಂಗೆ ಕಣ್ಣ್ ಕಾಂಬೊದ್ಲೆ. ನೀ ಆಚೆ ಮನೆಯವರ ಕಬ್ಬ್ ತೋಟಕೆ ತಕಂಡೋಗಿ ಕಟ್ಟ್'ಂತ ಹೇಳ್ತ್. ಹಾಂಗೆ ಇದ್ ನೇಚಿಕಂಡ್ ಹೋಗಿ ಕಾಗಡೆಮನೆಯವರ ಕಬ್ಬ್‌ನ ತೋಟಕ್ಕೆ ಕಟ್ಟಿತ್. ಒಂದ್ ಎರಡ್ ಕಬ್ಬ್ ಮುರ್ದ್ ಕೈಲಿ ಕೊಟ್ಟತ್ ಬಾತ್. ಅವು ಯಾರೋ ಕಬ್ಬ್‌ಕಳ್ಳರ್'ಂತ ಹೇಳ್ದೊ. ದೊಣ್ಣೆ ತೆಕಂಡ್ ಬಂದ್ ಬೊಡ್ದೊ. ಬೊಡಿಯಕೆ ಆಕನ ಇಂವ ಸತ್ತ್ ಹೋಗುಟು. ಇನ್ನೆಂತ ಇಂವ ಸತ್ತೋತ್‌ಂತ ಕುತ್ತಿಗೆಗೆ ಬೊಳ್ಳಿಹಾಕಿ ತೂಗಿದೊ. ತೂಗಿ ಸುಮಾರ್ ಒಂದ್ ಆರ್ ತಿಂಗ ಕಳಿಯಕೆ ಆಕನ ಅದರ ಅಡಿಲಿ ತುಂಬ ಹುಲ್ಲು ಹುಟ್ಟುತಾ ಉಟ್ಟು. ಅ ಹುಲ್ಲು

ಹುಟ್ಟಿದರ ತಿಂಬಕೆ ಒಂದ್ ಮೊಲ ಬಂದದೆ. ಮೊಲ ಮೇದ್ ಕೊಂಡಿರಿಕನ ಈ ಹೆಣ ಬೊಳ್ಳಿ ತುಂಡಾಗಿ ಬೀತ್. ಮೊಲ ಸತ್ತೋತ್. ಆ ಮೊಲನ ಇದ್ ತಕಂಡ್ ಮನೆಗೆ ಬಾತ್. ಹೆಣಂದ ಒಂದು ತುಂಡು ತಕನ್ತ್. ಅದರ ಮೊಡ್ಕೆಲಿ ಹಾಕಿತ್. ಮೊಲನ ಗೈಪು ಮಾಡ್ತ್. ಗಂಡಂಗೆ ಇಕ್ಕಿ ಕೊಟ್ಟತ್. ಗಂಡಂಗೆ ಇಕ್ಕಿಕೊಟ್ಟ್ ಊಟಕೆ ಕುದ್ರಿಕನ ಈ ಕತೆ ಹೇಳ್ತ್.
ಇಂವ ಊಟನ ಅಲ್ಲೆ ಬುಟ್ಟ್ ತುಂಬ ಬೇಜಾರ್ಲಿ ಕುದ್ದತ್. ಏನ್ ಮಾಡ್ದು ಇನ್ನುಂತ ಹೇಳಿ ತುಂಬ ಆಲೋಚನೆ ಮಡಿ ಹೊರ್ಪ್ ಹೋಕನ ದೀಪಗ ಎಲ್ಲ ಒಂದ್ ಅರಳಿಕಟ್ಟೆಗೆ ಹೋಗಿ ಸೇರ್ವೆ. ಆಗ ನಿನ್ನ ಮನೆಲಿ ಏನ್ ವಿಶೇಷ? ನಿನ್ನೆ ಬಾಕನ ಏನ್ ಹೊತ್ತ್? ಹಿಂಗೆಲ್ಲಾ ಅರಳಿಕಟ್ಟೆನ ದೀಪಂಗ ಎಲ್ಲ ಕೇಳ್ತಾ ಒಳೊ. ಇಂವನ ತಂಗೆ ತೌರಿಗೆ ಬಾವಂವಳ್ ಅರಳಿಕಟ್ಟೆಗೆ ಎತ್ತ್‌ಕನ ರಾತ್ರೆ ಆತ್. ಈ ಅರಳಿಕಟ್ಟೆ ಮೇಲೆ ಅಂವನ ತಂಗೆ ಮಲಗ್ಯುಟ್ಟು. ಅಷ್ಟಾಕನ ಈ ದೀಪಗ ಎಲ್ಲ ಮಾತಾಡ್ವೆ ಇದ್ಕೆ ಕೇಳ್ದೆ. 'ನಮ್ಮ ಮನೆಲಿ ಕತೆ ಹಿಂಗಿಗೆ ನಡ್ದುಟುಂತ ಈ ಅಣ್ಣನ ಮನೆ ದೀಪ ಹೇಳ್ತ್'. ಅದರ ಈ ತಂಗೆ ಮಲ್ಗಿದಲ್ಲಿಂದ ಕೇಳ್ತ್. ಆಗ್ಲೆ ತಂಗೆ ಬಾತ್. ತಂಗೆ ಬಂದ್ ಅಣ್ಣನೊಟ್ಟುಗೆ ಈ ಕತೆ ಹೇಳ್ತ್. ಹೇಳ್ದ ಕೂಡ್ಲೆ ಮಾರನೆದಿನ ಬೊಳ್ಳಿಗೆ ಹೆಣ್ಣ್‌ನ ತಲೆಕುಟ್ಟಿತ್. ಆತ್ ಕತೆ. [ಕತಾ ನಿರೂಪಕಿ:ದೇವಕಿ ಅಮ್ಮೂರು; ಸ್ಥಳ:ಮನೆ; ಸಮಯ:ಸಾಯಂಕಾಲ 7ಗಂಟೆ; ವರ್ಷ–1991]

## 67.ಸ್ನೇಹ ಮತ್ತ್ ಗುಟ್ಟ್‌ನ ಕತೆ

**ಪೋಲೀಸ್‌ನವರ ಸ್ನೇಹ ಮಾಡ್ಬೇಡ, ಹೆಂಗ್ಸರೊಟ್ಟಿಗೆ ಗುಟ್ಟು ಹೇಳ್ಬೇಡ.**

ಒಂದು ಊರ್ಲಿ ಒಂದು ಅರ್ಸು. ಅಂವಂಗೊಬ್ಬ ಮಂಜ. ಅವಂಗೆ ಪ್ರಾಯ ಹೋಗುಟ್ಟು ಪ್ರಾಯ ಹೋದರೂ ಸುಮಾರು ಸಮಯ ಕಳ್ದಾಕನ ಮಂಜನೊಟ್ಟಿಗೆ ಕರ್ದ್ ಹೇಳುಟು. ಏನ್? 'ಮಂಜ ಇಲ್ಲಿ ಬಾ'. 'ಬಾತ್ ಕುದ್ದತ್'. ಯಾಕೆ? ನೋಡ್ ಪೋಲೀಸ್‌ನವರ ಸ್ನೇಹ ಮಾಡ್ಬೇಡ ಹೆಂಗ್ಸರೊಟ್ಟಿಗೆ ಗುಟ್ಟು ಹೇಳ್ಬೇಡ'ಂತ ಹೇಳ್ತ್. ಇಂವ ಸುಮ್ಮನಾಕನ್ತ್ ಹೌದುಂತ ಹೇಳ್ತ್‌ಲೆ. ಅಲ್ಲಾಂತೂ ಹೇಳ್ತ್‌ಲೆ. ಹಿಂಗೆ ಇದ್ದ್ ಆಗ ಅವನಲ್ಲಿ ಸುರೂ ಮಳೆಬಾಕನ ಆ ಗುಳ್ಳೆ ನಿಂತದೆ ನೋಡಿ. ಚೂರಿಹಾಕಿ ಕೊಂದತ್. ಮೈತುಂಬ ರಕ್ತ ಮೆತ್ತಿಕನ್ತ್ ಬಾತ್. ಹೆಂಗ್ಸ್‌ನೊಟ್ಟಿಗೆ ಹೇಳ್ತ್. 'ನಾ ಒಬ್ಬನ ಕಲಾಸ್ ಮಾಡ್ಯೊಳೆ ಹೇಳ್ಬೇಡಾ'ಂತ. ಅಲ್ಲಿಗೆ ಬುಟ್ಟತ ಅದರ. ಪೋಲೀಸನೊಬ್ಬನ ಸ್ನೇಹ ಮಾಡ್ತ್. ಕಂಡಲ್ಲಿ ಕಂಡಲ್ಲಿ ಅವಂಗೆ ಚಾಯ ಕುಡ್ಸುದು ಶರಾಬು ಕುಡ್ಸುದು, ಗಮ್ಮತ್. ಇದ್ ಹಿಂಗೆ ಇದ್ದ್ ಯಾರೊಟ್ಟಿಗೂ ಹೆಂಗ್ಸ್ ಹೇಳ್‌ತ್ಲೆ.

ಎರಡ್ನೇ ವರ್ಷದ ಸಮಯಕೆ ಅವಳ ತಾಯಿ ಬಾತ್. ಬಾಕನ ಈ ಮಳೆ ಬೀತ್. ಈ ಗುಳ್ಳೆನ ಕಾಂಬಕನ ಇದ್ಕೆ ನೆಗೆ ಬಾತ್. ಆಗ ಅಯ್ಯೆ ಕೇಳ್ತ್ 'ಯಾಕೆ ಮಗಳೇ ನಗಾಡ್ದುಂತ?''ಸುಮ್ಮಂಗೆ ಅವ್ವ'. 'ಅಂತೂ ಹೇಳಪ್ಪ'. 'ಇಲ್ಲೆ ಸುಮ್ಮಂಗೆ'. 'ಹೇಳದಿದ್ದರೆ ನನ್ನ ಜೀವನ ನಾ ಇಲ್ಲಿ ತಕನೆ'ಂತ. 'ಉಪಾಯ ಉಟ್ಟಾ'. ಅಯ್ಯೆ ಸತ್ತವೆಂತ ಹೇಳ್ತ್ 'ನೋಡು ಇದೇ

ಸಮಯಲಿ ಕಳ್ಳೊರ್ಷ ನನ್ನ ಗಂಡ ಒಬ್ಬನ ಕಷಾಯ ಮಾಡ್ಯೊಳೊ'ಂತ ಹೇಳಿ ಹೋತ್ ಇದ್. ಅಲ್ಲಿಯೇ ನಿಂತತ್ ಅಲ್ಲಿಂದ ಮನೆಗೆ ಹೋತ್. ಅಲ್ಲಿ ಈ ಅಜ್ಜಿ ಇದರ ಬಿಚ್ಚಿತ್. 'ನನ್ನ ಅಳಿಯ ಒಬ್ಬನ ಕೊಂದೊಟು'ಂತ ಪ್ರಚಾರಕೆ ಬಾತ್. ಪ್ರಚಾರಕ್ಕೆ ಬಂದ್ ಇದೇ ಪೋಲೀಸಿನವ ಬಾತ್. ಇವನಲ್ಲಿಗೆ ಬಾತ್ ಇವನ ಏರೆಸ್ಟ್ ಮಾಡ್ತ್ ಸ್ಟೇಷನ್‌ಗೆ ಕರ್ಕಂಡೋತ್. ಸಮಾ ಕೊಟ್ಟತ್. ಕೊಡ್‌ಕನ ಹೇಳ್ತ್, 'ನಾ ಅಂತದೇನ್ ಮಾಡ್ದಂವ ಅಲ್ಲ. ನಾ ಒಂದು ಆಡ್‌ನ ಕೊಂದೊಳೆ. ಗುಂಡಿಗೆ ಹಾಕೊಳೆ'. 'ಹೌದ ?''ಹೌದು ಪೋಯಿ'ಂತ ಕರ್ಕಂಡೋತ್. ನೋಡ್ರೆ ಹೌದು ಆಡ್. ಕೇಸ್ ಬುಟ್ಟೋತ್.

ಆಗ ಮತ್ತೆ ಕೇಳ್ತ್ ಇಂವ ನೋಡಿ 'ನಾನ್ ನೀವು ಅಷ್ಟ್ ಸ್ನೇಹಿತರ್ಲಿ ಇದ್ದ್. ನೀವು ನಂಗೆ ಅಂಥ ಪೆಟ್ಟ್ ಹೊಡ್ದರಲ್ಲೆ'ಂತ. 'ಮಾರಾಯ ಅದ್ ಏನ್ ಗೊತ್ತುಟಾ? ನಾವ್ಗೆ ನೋಡ್ ತಲೆಗೆ ಒಂದು ಟೊಪ್ಪಿ ಇಸಿದ ಮೇಲೆ ನಾವ್ಗೆ ಗುರ್ತು ಸಿಕ್ಕುದುಂತ ಇಲ್ಲೆ'. 'ಆಗಲಿಂತ ಸುಮ್ಮನೆ ಆಕನ್ತ್'. ಒಂದು ಎರಡ್‌ದಿನ ಮುಂದೆ ಹೋಗಿ ಆಕನ ಇದೇ ರೀತಿ ಅಂಗಡ್ಲಿ ಕಾಂಬಕೆ ಸಿಕ್ಕಿತ್. ಕರ್ತ್ ಚಾಯ ಹೇಳ್ತ್. ಚಾಯ ಹೇಳಿ ಹಿಂಗೆ ಕುದ್ದು ಕುಡಿಯಕ್ಕಾಕನ ಅವ್ಕೆ ಟೊಪ್ಪಿ ತೆಗಿಯದೆ ಕುಡಿದು ಅಲ್ಲ. ಆ ಟೊಪ್ಪಿನ ತಗ್ದ್ ಈ ಪೋಲೀಸ್ನವ ಅಡಿಲಿ ಇಸಿತ್. ಅಡಿಲಿಸಿಕನ ಇಂವ ಏನ್ ಮಾಡ್ತ್ ಈ ಟೊಪ್ಪಿನ ತೆಗ್ದ್ ಇವನ ತಲೆಮೇಲೆ ಇಸಿತ್ ನಾಕ್ ಕೊಟ್ಟತ್ ಪೊರ್ಲುಲಿ. 'ಏನ್ ಮಾರಾಯ'. 'ಹಾಂ ಹಾಂ ನೀವು ಮೊನ್ನೆ ಹೇಳಿದ್ದೇನ್. ಟೊಪ್ಪಿ ಇಸಿಕನ ಗುರ್ತ ಸಿಕ್ಕುದ್ಲೆಂತಲ್ಲ'. 'ನಂಗೂ ಗುರ್ತ್ ಸಿಕ್ಕಿತ್ಲೆ'ಂತ ಹೇಳ್ತ್. ಆಗ ಅಲ್ಲಿಗೆ ಅವು ಅರ್ಸು ಆಗೊಳೊ. ಆ ಕೇಸೂ ಹೋತ್.[ಕತಾ ನಿರೂಪಕ:ರಾಮಯ್ಯಗೌಡ ಕಕ್ಕೆಬೆಟ್ಟು; ಸ್ಥಳ:ಮನೆ; ಸಮಯ:ಸಾಯಂಕಾಲ 7ಗಂಟೆ; ವರ್ಷ–1991]

## 68.ಮಡಿವಾಳನ ಜಾಣತನದ ಕತೆ

ಒಂದು ಊರ್ಲಿ ಒಂದು ಕುಂಬಾರನು ಒಂದು ಮಡ್ಯೋಲನೂ ಇದ್ದೊ. ಆ ಕುಂಬಾರನು ಮಡ್ಯೋಲನು ಬಾರಿ ಜೋಸ್ತಿಗ. ಅವುಕ್ಕೆ ಅತ್ತ ಇತ್ತ ಹೋಕನ ಬಾಕನ್ ಎಲ್ಲ ಒಟ್ಟಿಗೆ ಹೋದು, ಬಾದು ಹಿಂಗೆ ಇದ್ದೊ. ಈ ಕುಂಬಾರ ಹನಿಸ್ ಸೋಂಬೆರಿ. ಈ ಮಡ್ಯೋಲ ಹನಿಸ್ ಕೆಲ್ಸದಂವ. ಈ ಮಾಡ್ಯೊಲ ಏನ್ ಮಾಡ್ತ್. ದುಡ್ದು ಮಾಡಿ ಮನೆ ಎಲ್ಲ ಮಾಡಿ ಆಕನ ಕುಂಬಾರನ ಜೋಸ್ತಿ ಎಲ್ಲ ಹಂಞ ಬುಟ್ಟತ್. ನಮ್ಮದರಲ್ಲಿ ಉಟ್ಟಲ್ಲೆ ಕೋಡ್ ಗೀಡೆಲ್ಲ. ಅದರ ನೋಡಿ ಹಂಞ ದೂರದೂರ ಮಾಡ್ತ್. ದೂರ ಮಾಡಿ ಇವಂಗೆ ಏನಾರ್ ಒಂದು ಮೊದ್ದ್ ಅರಿಯೊಕ್ಕುಂತ ಮನಸ್‌ಲಿ ಕುಂಬಾರ ಗ್ರೇಸಿಕಂಡಿತ್ತ್. ಒಂದು ದಿನ ಆ ಊರ್‌ನ ಅರ್ಸ ಅಲ್ಲಿಗೆ ಬಂದದೆ. ಆನೆ ಮೇಲೆ ಕುದ್ದುಕಂಡ್ ಬಾಕ್ಕೆ ಆಕನ ಕುಂಬಾರ ಓಡಿಕಂಡ್ ಬಾತ್. ಓಡಿಕಂಡ್ ಬಾತ್. 'ಓ ಅರ್ಸರೆ. ನೀವು ಈ ಕಪ್ಪು ಆನೆಲಿ ಬಾದ'ಂತ ಹೇಳ್ತ್. 'ನಮ್ಮ ಊರ್ನ ಅರ್ಸ ಆಗಿದ್ದ್ ಕಪ್ಪು ಆನೆಲಿ ಅಲ್ಲದೆ ಮತ್ತೆ ಯಾವ ಆನೆಲಿ ಬಾಕೆ ಆದೆ?''ಕಪ್ಪು ಆನೆನ ಬಿಳಿ ಆನೆ ಮಾಡಿಕೆ

ಆದ್ಲೆನಾ'ಂತ್ ಹೇಳ್ತ್. 'ಅದು ಹೇಂಗೆ ಬಿಳಿ ಆನೆ ಮಾಡ್ದು?''ಓ... ನಮ್ಮ ಮಡ್ಯೋಲ ಉಟ್ಟಲ್ಲ ಅಂವ ಬಿಳಿ ಆನೆ ಮಾಡ್ದೆ. ಅಂವ ಎಷ್ಟ್ ಆನೆಗಳ ಬಿಳಿ ಮಾಡಿ ಕೊಟ್ಟುಟು'ಂತ ಹೇಳ್ತ್. 'ಅಂದರೆ ಹಾಂಗೆ ಅಲ್ಲ'ಂತ ಹೇಳ್ತ್. ಇಂವ ಅರ್ಸ ಹೋತ್ ಸೇವಕರೊಟ್ಟಿಗೆ ಜನ ಕಳ್ಸಿತ್. 'ಮಡ್ಯೋಲನ ಬಾಕೆ ಹೇಳೊಕು'ಂತ ಮಡ್ಯೋಲ ಹೋತ್.

ಹೋಗಿ ಆಕನ ಹೇಳ್ತ್, 'ಇದ್ ನನ್ನ ಕಪ್ಪು ಆನೆ. ನಂಗೆ ಹೋಕೆ ಬಿಳಿ ಆನೆ ಆಕ್ಕು'ಂತ. 'ನನ್ನ ಆನೆನ ಬಿಳಿ ಮಾಡಿ ಕೊಡೊಕು'ಂತ. 'ಇಂವ ದಮ್ಮಯ ಹಾಕಿತ್'. 'ನಾ ಹೇಂಗೆ ಬಿಳಿ ಆನೆ ಮಾಡ್ದು?''ನನ್ನಂದ ಆಕ್ಕೆ ಇಲ್ಲೆ'ಂತ. 'ಯಾರ್ ಹೇಳ್ದ್? ನೀ ಮಾಡಿಯಗಡ ನೀ ನಂಗೆ ಅರ್ಸಂಗೆ ಮಾಡಿಕೆ ಬೊತ್ತ್‌ಂತ ಸುಳ್ಳು ಹೇಳಿಯ. ನಿನ್ನ ತಲೆ ನಾ ಕಡ್ಸುವೆ'ಂತ ಜೋರು ಮಾಡ್ತ್. ಜೋರು ಮಾಡಿಕನ ಇವಂಗೆ ಉಪಾಯ ಉಟ್ಟ. ಹಾಂಗೆ ಒಪ್ಪಿಕಂಡತ್. ಒಪ್ಪಿಕಂಡ್ ಇಂವಂಗೆ ಗುತ್ತು ಗೊತ್ತಾತ್. 'ಇದ್ ಈ ಕುಂಬಾರನ ಕೆಲಸ ಅಲ್ಲದೆ ಬೇರೆ ಯಾರ್ದಲ್ಲ'ಂತ. ಇಂವ ಸೇವಕರೊಟ್ಟಿಗೆ ಆನೆನ ಹೊಡ್ಸಿಕಂಡ್ ಬಾತ್. ಮನೆಲಿ ಎರಡ್ ದಿನ ಕಟ್ಟಿ ಹಾಕಿತ್. ಅದ್ಕೆ ಒಂದು ನಾಕ್ ಜನನೂ ಕಳ್ಸಿತ್. ಹಿಂಗೆ ಆಲೋಚನೆ ಮಾಡಿ ಕುದ್ದತ್. ಆಗ ಇಂವ ಕುಂಬಾರಂಗೆ ಒಂದು ಮೊದ್ದರಿಯದೆ ಬುಡಿಕಿಲ್ಲೆಂತ ಹೇಳ್ತ್. 'ಈಗ ಅಷ್ಟ್ ಬೇಗ ಆನೆನ ಬಿಳಿಮಾಡಿಕೆ ಆದ್ಲೆ. ಒಂದು ಹಂಞ ದಿನ ಬೇಕ್'ಂತ. ಹಾಂಗೆ ಒಂದು ಹದಿನೈದು ದಿನ ಕಳ್ದ್ ಅರ್ಸನಕ್ಕಳೆ ಹೋತ್. 'ನಿಮ್ಮ ಆನೆನ ಎಲ್ಲ ಬಿಳಿಮಾಡಿ ಆಗುಟು. ಇನ್ನ್ ಅದರ ಒಮ್ಮೆ ನೀರ್ಲಿ. ಮುಳುಗಿಸಿಕೆ ಉಟ್ಟು. ಆ ನೀರ್ಲಿ ಮುಳುಗಿಸಿಕೆ ಈಗ ಪಾತ್ರ ಇಲ್ಲೆ ಅಲ್ಲ'ಂತ ಹೇಳ್ತ್. ಆಗ ಅರ್ಸ 'ಆನೆನ ಮುಳುಗಿಸಿಕೆ ಒಂದು ಪಾತ್ರ ಮಾಡಿ ಕೊಡೊಕ'ಂತ ಕುಂಬಾರಂಗೆ ಹೇಳ್ತ್. 'ಆನೆ ಮುಳುಗಿಸಿಕೆ ಪಾತ್ರ ಇಲ್ಲೆ ಅಲ್ಲ'. 'ನಂಗೆ ಈಗ ಬೇಕ್'ಂತ ಹೇಳ್ತ್. 'ನನ್ನಂದ ಆಕಿಲ್ಲೆ'ಂತ ಕುಂಬಾರ ಹೇಳ್ತ್‌ಗಡ. 'ಹಂಗಾರೆ ನಿನ್ನ ತಲೆ ತಗ್ಸ್‌ವೆಂತ ಅರ್ಸ ಹೇಳ್ತ್'. ಹಾಂಗೆ ಹೇಳಿ ಇಂವ ಮಾಡಿದ ತಪ್ಪಿಗೆ ಮಡ್ಯೋಲನಲ್ಲಿಗೆ ಬಂದ್ ತಪ್ಪೊಪ್ಪಿಕಂಡ್ ಕಾಲ್ ಹಿಡ್ದ್ ಕ್ಷಮೆ ಕೇಳ್ತ್. [ಕತಾ ನಿರೂಪಕ:ಜಗದೀಶ ಬಿ.ಎಲ್.ಬಂಗಾರಕೋಡಿ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 69.ಅರ್ಸುಕುಮಾರ ಮತ್ತ್ ಗಾಣಿಗ್ತಿ ಮೊದ್ವೆ ಕತೆ

ಒಂದು ಅರ್ಸು. ಆರ್ಸು ಮಂಜ ಗದ್ದೆ ಹಕ್ಕಳೆ ಹೋತ್. ಗದ್ದೆ ಹಕ್ಕಳೆ ಹೋಕನ ಒಂದು ಗೂಡೆ ಕುಮೇರ್ ಕಡ್ದ್‌ದ್ ಎಳ್ಳ್ ಬಿತ್ತಿ ಕೊಂಡಿದ್ದೆದೆ. ಆಗ ಅಂವಂಗೆ ಅದರೊಟ್ಟಿಗೆ ಮಾತಾಡೊಕುಂತ ಮನಸ್ಸಾತ್. ಇನ್ನ್ ಹೆಂಗೆ ಮಾತಾಡ್ದುಂತ ಗೇನ ಮಾಡ್ತ್. ಆಗ ಹೇಳ್ತ್ 'ಹೌದೊ ಗೂಡೆ ಈ ಎಳ್ಳಿಗೆ ಏಳು ಸೊಪ್ಪಾಕನ ಎಣ್ಣೆ ಎಲ್ಲಿ ಇತ್ತ್‌ಂತ ಕೇಳ್ತ್?' ಆಗ 'ನಿನ್ನ್ ಅಪ್ಪ ನೆರಿಯಕನ ನೀ ಎಲ್ಲಿದ್ದಾ'ಂತ ಕೇಳ್ತ್. 'ನಾ ಬಲದ ಕಾಲುಂಗುಷ್ಟಲಿದ್ದೆ'ಂತ ಹೇಳ್ತ್. ಆಗ ಆ ಗೂಡೆ ಹೇಳ್ತ್, 'ಅದಕ್ಕೆ ಏಳ್ ಸೊಪ್ಪಾಕನ ಅದರ ಬೇರ್ಲಿ ಎಣ್ಣೆ ಇತ್ತ್'ಂತ ಹೇಳ್ತ್. ಆಗ 'ನೀ ಇಷ್ಟ್ ಸಬಾಸ್‌ದ

ಗೂಡೆನಾ'ಂತ ಅಂವ ಕೇಳ್ತ್. ಆಗ ಅಂವ ವಾಪಾಸ್ ಮನೆಗೆ ಹೋತ್. ಮನೆಗೆ ಹೋಕನ 'ಏನಾಗಿ ಬಂದಾ'ಂತ ಅಯ್ಯೆ ಕೇಳ್ತ್. 'ನಾ ಹಿಂಗಿಂಗೆ ಅಯ್ಯೆ ನಂಗೆ ಅದೇ ಗೂಡೆನ ತರೊಕು. ಒಂದು ದಿನಕ್ಕಾದರೂ'ಂತ ಹೇಳ್ತ್. ಹೇಳಿದಾಕನ ಹೇಳ್ತ್. 'ನಾವು ಅರ್‍ಸುಗ. ಅವು ಗಾಣಿಗರ್ ಬೇಡ ಮಂಜ'ಂತ ಹೇಳ್ತ್. 'ಅದ್ ಆಕ್ಕೇ ಇಲ್ಲೆ'ಂತ ಹೇಳ್ತ್. ಆಗ ಹೇಳ್ತ್ ಆ ಗೂಡೆ ಒಟ್ಟಿಗೆ ವಾಪಾಸ್ 'ನಿನ್ನ ಒಂದು ದಿನಕ್ಕಾರು ನನ್ನ ಒಲೆ ಬೂದಿ ಎತ್ತಿಸುವೆ'ಂತ. 'ನಾ ಗಂಡಂಗೆ ಹೋಗದೆ, ಮಿಂಡರ ಹಿಡಿಯದೆ, ನಿಂಗೆ ಹುಟ್ಟಿದ ಮಂಜನೊಟ್ಟಿಗೆ ನಾ ನಿನ್ನ ಮಂಚಮದ ಕಾಲಿಗೆ ಕಟ್ಟಿಸಿ ಚೆಪ್ಪುನ ಬಳ್ಳಿಲಿ ಹೊಡ್ಸುವೆ'ಂತ ಹೇಳ್ತದ್.

ಅಷ್ಟೊತ್ತಾಕನ ವಾಪಾಸ್ ಅದರ ಅಪ್ಪಂಗೆ ಹೆಣ್ಣ್ ಮಾತಾಡಿಕೆ ಕಳ್ಸಿತ್. ಆಗ ಹೇಳ್ದೆ ಆಯ್ಯೋ ಅರ್‍ಸುಗ ನೀವು ಅರ್‍ಸು, ನಾ ಪ್ರಧಾನಿ ಗಾಣಿಗ'. ಅದ್ ಅತೇ ಇಲ್ಲೆ ಕೊಡೊಕುಂತ. ಹಾಂಗೆ ದಿನ ಮಿನಿ ಕೇಳ್ಲೊ. ದಿಬ್ಬಣೊ ಹೋದೊ. ದಾರೆ ಆಗಿ ಬಂದೊ. ದಾರೆ ಆಗಿದ್ ಅಂವ ಬುಟ್ಟ್‌ದ್ ಸೂಳೆಗಳ ಇಷ್ಟ ಹಿಡಿಯಕೆ ಹೋತ್. ಗೂಡೆ ಒಟ್ಟಿಗೆ ಮಾತಾಡ್ತ್‌ಲೆ. ಈ ಗೂಡೆ ಇಲ್ಲೇ ಇತ್ತ್. ಇದ್ದ್ ಇದ್ದ್ ಆಕನ ಯಾಗೊಲು ಒಂದು ಅಜ್ಜಿ. ಆ ಅಜ್ಜಿ ಯಾಗೋಲು ಒಂದು ಹೂವುನ ಮಾಲೆ ತಂದ್‌ಕೊಡ್ದು. ಹೂವುನ ಮಾಲೆ ಕೊಟ್ಟ್ ಯಾಗೊಲು ಅಲ್ಲೇ ಇತ್ತ್. ಕತ್ತಲೆಗೆ ಬಾದು. 'ನೀ ಮಾತಾಡ್ದ ಮಂಜ'ಂತ ಕೇಳ್ತ್. 'ಇಲ್ಲೆ ಅತ್ತೆ ನನ್ನೊಟ್ಟಿಗೆ ಮಾತಾಡ್ತ್‌ಲೆ'ಂತ ಹೇಳ್ತ್. ಆಗ 'ನಾಳೆ ನೀ ಒಂದು ಸೇರು ಕಲ್ಲುನು, ಒಂದು ಸೇರು ಅಕ್ಕಿನೂ ಹಾಕಿ ಗಂಜಿ ಮಾಡಿಸೊಕು. ಆ ಗಂಜಿನ ಇಕ್ಕಿ ಕೊಡ್. ಆಗ ನಿನ್ನ ಸಾವುನ ಗಂಜಿಯಾ'ಂತ ಕೇಳ್ದಲ್ಲೆಂತ ಹೇಳ್ತ್. ಹಾಂಗೆ ಹೇಳಿ ಮಾರನೆ ದಿನ ಕೇಳ್ತ್ 'ಇಲ್ಲೆ ಅದ್ಲೆ ಅದರ ಅತ್ತಂದ ಮಗ್ಚಿದೆ ಇತ್ತಂದ ಮಗ್ಚಿದೆ ಎದ್ದ್ ಹೋದೆ'ಂತ ಹೇಳ್ತ್. ಆಗ ನಾಳೆ ಬಾಕನ 'ಒಂದು ಸೇರ್ ಮೆಣಸುನೂ, ಒಂದು ಹುಳಿನೂ ಒಂದು ಕಲ್ಲ್ ಉಪ್ಪುನೂ ಹಾಕಿದ್ ಕಡ್ದ್ ಇಸ್'ಂತ ಹೇಳ್ತ್. 'ಅದರ ಇಕ್ಕಿ ಕೊಡ್'ಂತ. ಅಂದೂ ಕೇಳ್ತ್‌ಲೆ ಇಂವ ಅದರ ಮಗ್ಚಿತ್, ಹಿಡ್ತ್ ಹೋತ್. ಮತ್ತೆ ಮಾರನೆ ದಿನ ಮಾತಾಡ್ತಂತ ಅತ್ತೆ ಕೇಳ್ತ್. ಇಲ್ಲೆ ಅತ್ತೆಂತ ಹೇಳ್ತ್. 'ನೀ ಮಾರನೆ ದಿನ ಏನ್ ಮಾಡೊಕು ಗೊತ್ತುಟ ಇಕ್ಕಿದ್ ಒಂದು ಚೊಂಬು ನೀರಿಸದೆ ಬಾಗಿಲ್‌ಲಿ ನಿಲ್ಲೊಕೂ'ಂತ ಹೇಳ್ತ್. ಬಾಗಿಲ್‌ಲಿ ನಿಲ್ಲೊಕುಂತ ಹೇಳ್ಕನ ಇದ್ ಹಾಂಗೆ ಮಾಡ್ತ್. ಒಂದು ಚೊಂಬು ನೀರ್ ತಂದಿಸ್ಸಿತ್ಲೆ. ಎಂತ ಇಲ್ಲೆ. ಬಾಗಿಲ್‌ಲಿ ದಾರಿಂದ ಅಡ್ಡ ಹಿಡ್ದ್ ನಿಂತತ್. ಇವಳ ನೂಕಿ ಹಾಕಿದ್ ಹೋಗಿಯೇ ಬುಟ್ಟತ್ ಅಂವ. ಅದರಂದ ಮೇಲೆ ಅಂವ ಬಾತ್ಲೆ. ಒಂದು ಸೂಳೆನ ಇಷ್ಟ ಹಿಡ್ಕಂಡಿತ್ತ್. ಇಷ್ಟ್ ಹಿಡ್ಕಂಡ್ ಇದ್ದ್‌ದ್ ಆಕನ ಈ ಅಜ್ಜಿ ಯಾಗೊಲು ಒಂದೊಂದು ತುಂಡು ಹೂ ತಂದ್ ಇದ್ಕೆ ಕೊಡ್ದು. ಇದರ ತಂದ್‌ಕೊಟ್ಟ್‌ದಾಕನ ಯಾಗೊಲು ಈ ಸೂಳೆಗೆನೂ ತಕಂಡೋಗಿ ಕೊಡ್ದು ಅದ್ ಅಜ್ಜಿ. ಆಗ ಸೂಳೆನೊಟ್ಟಿಗೆ ಏನ್ ಹೇಳ್ತ್. 'ಇಂದ ಅರ್‍ಸುನ ಹೆಣ್ಣು ಉಟ್ಟು ಲಾಯ್ಕುಟು. ಅಂವಂಗೆ ಮೊದ್ವೆ

ಆಗುಟು'ಂತ ಹೇಳ್ತ್. ಆಗ ಕೇಳೊಕು ಹೆಂಗೆ ಗೊತ್ತುಟ 'ನಿನ್ನ ಮೊದ್ವೆ ಆಗಿದ್ ಸೂಳೆಗಳ ಇಷ್ಟಕೆ ಹೋಗೊಳ ಅಲ್ಲ, ನಿನ್ನ ಕೊಂದರೆ ಯಾರ್ ಜನ ಅದಕ್ಕಂತ ಕೇಳೊಕು'ಂತ ಹೇಳ್ತ್. ಯಾರ್? ಮಾರನೆದಿನ ಅಜ್ಜಿ ಸೂಳೆನೊಟ್ಟಿಗೆ ಹೇಳ್ತ್. ಹೂವುನ ಮಾಲೆ ತಕಂಡ್ ಬಾತ್. 'ನಾ ತಲೆಬಾಚಿ ಕಟ್ಟಿನೆ. ಬರ್ಲಿ ಅದ್'ಂತ ಹೇಳ್ತ್. 'ನಾ ಬಾದೆ ಇಲ್ಲೆ'. 'ಅದ್ ಏನಾದರೂ ಕೊಸರಕೊಲ್ಲಿ ಮಾಡಿಕಂಡ್ ಬಂದಿರ್ದು. ನಾ ಬಾದೇ ಇಲ್ಲ'ಂತ ಹೇಳ್ತ್. ಮತ್ತೆ ಅತ್ತೆನೂ ಮಾವನೂ ಹೇಳ್ದೊ. 'ಬಾಪ್ಪ ನಿನ್ನಾಂಗೆ ಅಜ್ಜಿ ಎಲ್ಲಾ ಬರ್ಲಿ'ಂತ ಹೇಳ್ತ್. ಇದ್ ಹೂ ಮಾಲೆ ಕಟ್ಟಿತ್. ಅಜ್ಜಿ ಮುಡ್ಸಿತ್ ಇದ್ಕೆ. ಮುಡ್ಸಿದ್ ಕೇಳ್ತ್. ಹೌದೊ ಮಗ ನಿನ್ನ ಈಗ ಮೊದ್ವೆ ಆಗಿದ್ ಹೋಗುಟ'ಂವ. 'ಮೊದ್ವೆ ಆಗಿದ್ ಹೋಗಿದ್ ಆಕನ ನಿನ್ನ ಯಾರಾರ್ ಕೊಂದರೆ ಎಂತರ ಮಾಡ್ದು'ಂತ ಹೇಳ್ತ್. ಹೇಳ್ಕನ 'ಅಯ್ಯೋ ಅಜ್ಜಿ ನನ್ನ ಯಾರ್ ಕೊಲ್ಲವು ಇಲ್ಲೆ. ನನ್ನ ಜೀವದ ಕಲೆ ಒಳದ್ ನನ್ನ ಮನೆಲಿ ಅಲ್ಲ. ಒಂದು ದೊಡ್ಡಕೆರೆ ಉಟ್ಟು ಆ ಕೆರೆಲಿ ನೀರ್ ಆರ್ಸ್ಕನ ನಂಗೆ ಏನೂ ಬೊತ್ತದೆ. ಆದರ್ಲಿ ಒಂದು ಗಿಳಿ ಉಟ್ಟು. ಆ ಗಿಳಿನ ಹಿಡಿಯಕನ ನನ್ನ ಅರ್ಧಜೀವ ಹೋದು. ಅದರ ತೆಗ್ದ್‌ದ್ ಅದರ ಕೈ ಗಂಟ್‌ಲಿ ಒಂದು ವಜ್ರದ ಮಾಲೆ ಉಟ್ಟು. ಅದರ ತೆಗ್ದರೆ ನನ್ನ ಜೀವ ಹೋದಜ್ಜಿ'ಂತ ಹೇಳ್ತ್. ಇದ್ ಹಾಂಗೆ ಹೋಗಿ ಹೇಳ್ತ್.

ಈ ಸೂಳೆನಲ್ಲಿಗೆ ಮಾರನೆ ದಿನ ಹೋತ್ ಹೋಗಿ ಹೇಳ್ತ್. ಆಗ ಇಂವ 'ಹೊಟ್ಟೆಬೇನೆ ನಂಗೆ ಹೊಟ್ಟೆಬೇನೆ ನಂಗೆ ಪಂಚಾಂಗ ಕೇಳೊಕು ಹೊಟ್ಟೆ ಬೇನೆ'ಂತ ಮರ್ಲ್ತ್. ಹೋಗಿ ಮುಂದೆ ಹೇಳಿಟು ಇದ್ ಅಂವನೊಟ್ಟಿಗೆ. ಪಂಚಾಂಗದವ ಮಾವನನೊಟ್ಟಿಗೆ ಕೇಳ್ಕನ ಏನ್ ಮಾಡ್ತ್ ಹೋತ್. 'ಓ ನಿಮ್ಮ ಮಾವನ ಮನೆಲಿ ಒಂದು ಕೆರೆ ಉಟ್ಟು ಗಡ. ಅದರ್ಲಿ ತುಂಬ ನೀರುಟು. ಆ ನೀರ್ ಆರ್ಸಿಕನ ಅದರ್ಲಿ ಒಂದು ಮೊಸಳೆ ಉಟ್ಟು. ಮೊಸಲೆನ ಬಾರ್ಸಿದ್ ಅದರ ಹೊಟ್ಟೆಲಿ ಒಂದು ಗಿಳಿ ಉಟ್ಟು. ಗಿಳಿನ ಗಂಟ್ಲ್‌ಲಿ ಒಂದು ವಜ್ರದ ಮಾಲೆ ಉಟ್ಟು. ಅದರ ತಂದ್‌ದ್ ಸೂಳೆನ ಗಂಟ್ಲ್‌ಗೆ ಹಾಕಿರೆ ಅದರ ಪ್ರಾಣ ಉಳೀದು. ಇಲ್ಲಾರೆ ಉಳಿಯಕ್ಕಿಲ್ಲೆ'ಂತ ಹೇಳ್ತ್. ಹಾಂಗೆ ಇಂವ ಹೇಳಿಕೊಟ್ಟತಲ್ಲೆ. ಹಾಂಗೆ ಹೋತ್ ಹೋಗಿ ಕೇಳ್ಕನ 'ಹಿಂಗಿಂಗೆ'ಂತ ಹೇಳ್ತ್. ಆಗ ಇಂವ ಹೋತ್ ಸೀದ. ಹೋಗಿ ಆಕನ ಓ ನನ್ನ ಮನೆಗೆ ಬಂದ್ ಬುಟ್ಟತ್ ಅಂವ ಇಂದ್. ಮದುವೆ ಆಗಿದ್ ಎಷ್ಟೋ ಸಮಯ ಬಾತ್ಲೆ. ಅಂವಂಗೆ ಕೋಳಿ ಎಲ್ಲ ಕೊಲ್ಲಿಕೆ ಹೋದೊ. ನಂಗೆ ಕೋಳಿ ಎಂತದ್ ಬೇಡ. ನಂಗೆ ನಿಮ್ಮ ಕೆರೆಲಿ ಮೀನುಟು. ಅದರ ನಂಗೆ ಗೈಪು ಮಾಡಿಕೊಡೊಕುಂತ ಹೇಳ್ತ್ ಇಂವ. ಹಾಂಗೆ ಹೇಳ್ಕನ ಕೆರೆ ನೀರ್ ಆರ್ಸಿ ಹೋದೊ. ಹೋಕನ ಇದ್ಕೆ ಸಂಕಟ ಸಂಕಟ ಆತ್. ಈಗ ಅರ್ರುಗೆ ಮೀನ್ ಹಿಡ್ದ್ ಹಿಡ್ದ್ ಬಾಕನ ಇಂವ ಬಾತ್. ಪೊಯಿಂತ ಹೇಳ್ದೊ. ಮೊಸಳೆ ಒಂದು ಪೊಯ್ಯೆಲಿ ಬಂದ್ ಅದ್ ಮಲ್ಗುಟು. ಇಂವ ಆ ಮೊಸಳೆನ ಕಲ್ಲ್ ಹೊತ್ತಾಕಿ ಅದರ ಕೊಂದತ್. ಅಷ್ಟೊತ್ತಾಕನ ಇದ್ ಹೇಳ್ತ್. 'ಆಂ ನನ್ನ ಕೊಂದ್

ಬುಟ್ಟತ್'. 'ಅಜ್ಜಿ ನೀವು ನಾ ಸತ್ತೆಂತ ಹೇಳಿ ನನ್ನ ಸುಡಿಕೆ ಬೊತ್ತ್. ಒಂದು ದೇವದಾರೆ ಪೆಟ್ಟಿಗೆ ತಂದ್‌ದ್ ಅದರ್ಲಿ ತುಂಬಿಸಿ ದೊಡ್ಡ ಒಂದು ಕಾಡ್ಲಿ ತಕಂಡೋಗಿ ಇಸೊಕು ನೀವು'ಂತ ಅತ್ತೆ ಮಾವನೊಟ್ಟಿಗೆ ಹೇಳ್ತ್.

ಹಾಂಗೆ ಸತ್ತು ಹೋತ್. ಗಿಳಿನ ಒಂದು ಮಾಲೆ ತೆಗ್‌ದ್ದ್ ಆಕನ. ಅದರ ತಂದ್ ಸೂಳೆನ ಕೈಲಿಕೊಟ್ಟತ್. ಅದ್ ಗಂಟ್ಲ್‌ಲಿ ಹಾಕನ್ತ್ ಆತಲ್ಲ. ಅಲ್ಲೆ ಇದ್ದೊ. ಇದ್ದ್ ಇದ್ದ್‌ದ್ ಆಕನ ಇಂವ ಯಾಗೊಲು ಬೇಟೆಗೆ ಹೋದು. ಬೇಟೆಗೆ ಹೋಕನ ಅಲ್ಲಿ ಒಂದು ದೊಡ್ಡ ಪೆಟ್ಟಿಗೆ ಉಟ್ಟು. ಪೆಟ್ಟಿಗೆ ಹಕ್ಕಲೆ ಒಂದು ಕೊಂಡೆ ಹಾಲ್, ಐದ್ ಬಾಳೆ ಹಣ್ಣ್, ಒಂದು ಕವುಳೆ ಎಲೆ ಎರಡ್ ಅಡಿಕೆ ಎಲ್ಲ ಇಸಿಕಂಡ್ ಉಟ್ಟು. ಇಂವ ಏನ್ ಮಾಡ್ತ್? 'ಇಷ್ಟ ಸಮಯ ಇಲ್ಲದ್ ಇಂದ್ ಏನ್ ಮಾಡ್ತ್'ಂತ ಹೇಳ್ತ್. ಅಂವನ ಅಲ್ಲೆ ಆಲೆಸಿತ್. ಆಲೆಸಿದ್ ಏನ್ ಮಾಡ್ತ ? ಇಂವ ಎರಡುವರೆ ಹಣ್ಣ್ ತೀನ್ತ್, ಅರ್ಧ ಕೊಂಡೆ ಹಾಲ್‌ಕುಡ್ತ್. ಈ ಹತ್ತ್ ಎಲೆಲಿ ಐದ್ ಎಲೆ ತೀನ್ತ್ ಒಂದು ಅಡಿಕೆನೂ ತೀನ್ತ್. ಬಾಯಿತುಂಬಾ ತೀನ್ತ್. ಆ ಪೆಟ್ಟಿಗೆಗೆ ತುಂಬಾ ಮಡೆ ಉಗ್‌ದ್ದ್ ಇಂವ ಬಾತ್. ಹಾಂಗೆ ಇತ್ತಲ್ಲೆ. ಹಾಂಗೆ ಇದ್‌ದಾಕನ ಅದ್ಕೆ ಇಲ್ಲಿಗೆ ಜನ. ಅದ್ ಇರ್ಲ್ ತೆಗ್ದ್ ನೆರ್ಲ್‌ಲಿ ಹಾಕಿಸಿದೆ ವಜ್ರದ ಮಾಲೆನ ಸೂಳೆ. ಆಗ ಇದ್ ಜೀವ ಆದೆ. ಜೀವ ಆಗಿ ಆಕನ ಮಾರನೆ ದಿನ ಗೊತ್ತಾತ್ ಇದ್ಕೆ. ಗೊತ್ತಾಗಿದ್ ಎರಡ್ ಕವುಲೆ ಎಲೆನೂ ನಾಕ್ ಅಡಿಕೆನೂ ಎರಡ್ ಕೊಂಡೆ ಹಾಲ್ ಹತ್ತ್ ಬಾಲೆ ಹಣ್ಣ್ ಇಸಿತ್. ಇದ್ಕೆ ಬೇಕಷ್ಟ ಜನ ಒಳೊ ಅಲ್ಲಿ ಹಗಲಿಗೆ ಮಾತ್ರ ಇಲ್ಲದ್. ಇಂವ ಮಾರನೆ ದಿನನೂ ಉಟ್ಟು. 'ಇಷ್ಟ ತುಂಬ ಇಸಿಕಂಡುಟ್ಟಲ್ಲೆ'ಂತ ಹೇಳ್ತ್. ಒಂದು ಕೊಂಡೆ ಹಾಲ್ ಕುಡ್ತ್. ಐದ್ ಬಾಳೆಣ್ಣ್ ತೀನ್ತ್. ಆಗಲೂ ಬಾಯಿ ತುಂಬ ತೀನ್ತ್. ಆ ಪೆಟ್ಟಿಗೆ ತಲೆಂದ ಕಾಲ್‌ವರೆಗೂ ಪೂರ ಉಗ್‌ದ್ದ್ ಬಾತ್. ಇಂವ ಮಾರನೆ ದಿನ ಅದರಂದಲೂ ಬೇಗ ಹೋತ್. ಮಾರನೆ ದಿನ ಹೋಕನನೂ ಉಟ್ಟು. ಮಾರನೆದಿನ ಹೋಕನ ಇದ್ಕೆ ಗಬ್ಬ ನಿತತ್ತ್. ಗಬ್ಬ ನಿತ್ತ್‌ದ್ ಹಾಂಗೆ ಒಂದು ಎರ್ಡ್ ದಿನ ಹಾಂಗೇ ಮಾಡ್ತ್. ಐದ್ ದಿನ ಹೋಗಿದ್ ಆಕನ ಒಂದು ಗಂಡುಕೂಸುನ ಅದ್ ಹೆರ್ತ್. ಹೆತ್ತ್‌ದ್ ಕೂಸು ಅಮೆ ನೆತ್ತರ್ಲಿ ಉಟ್ಟು. ಪೆಟ್ಟಿಗೆ ಕರೆಲಿ ಉಟ್ಟದ್. ಪೆಟ್ಟಿಗೆ ಕರೆಲಿ ಇರಿಕನ ಇದ್ಕೆ ಗೊತ್ತಾತ್. ಇಂವ ಆ ಕೂಸುನನೇ ನೋಡ್ತ್. ನೋಡಿ ಆಕನ ಅದ್ ಅಲ್ಲೇ ಇಲ್ಲೆ ಹುಡ್ಕಿಕಂಡ್ ಉಟ್ಟ್. ಇಂವ ಅಂದ್‌ನೂ ಹಾಂಗೆ ಮಾಡ್ತ್. ಒಂದು ಕೊಂಡೆ ಹಾಲ್ ಕುಡ್ತ್ ಐದ್ ಬಾಳೆಹಣ್ಣ್ ಎಲೆ ಅಡಿಕೆ ತಿನ್ತ್ ಈ ಮಡೆ ಉಗ್‌ದ್ದ್ ಇಂವ ಸೀದ ಬಾತ್. ಮಾರನೆ ದಿನ ಈ ಕೂಸ್‌ನೊಟ್ಟಿಗೆ ಕೇಳ್ತ್. 'ಯಾರ್ ಬಂದವೆ ಇಲ್ಲಿಗೆ'ಂತ ಕೇಳ್ತ್. 'ಒಬ್ಬ ಬಂದವೆ ಅವ್ವ, ನನ್ನ ಹಿಡ್ದವೆ, ಮುತ್ತಿವೆ, ಆಡ್ಸಿವೆ ಎಲ್ಲ ಮಾಡ್ವೆ. ಮತ್ತೆ ಒಡ್ಕದೆ ಹೋಕನ ಈ ಬಾಳೆಹಣ್ಣ್ ಹಾಲ್ ಎಲ್ಲ ಕುಡ್ದ್‌ದ್ ಹೋದವೆ'ಂತ ಹೇಳ್ತ್. ಹಾಂಗೆನ ಮಂಜ. 'ಅಂದರೆ ನಾಳೆ ಬಾಕನ ಏನ್ ಮಾಡೊಕ್ ಗೊತ್ತುಟ್ಟೊ ನಾನೂ ಬನ್ನೆ'ಂತ ಹೇಳಿ ಮರ್ರೊಡುಕು. ಬರ್ಬೇಡಪ್ಪಾ ಬರ್ಬೇಡಪ್ಪಾ'ಂತ ಹೇಳ್ವೊ. 'ಅದ್ ಆಕ್ಕೇ ಇಲ್ಲೆ ನಾ ಬಾವೆ'ಂತ ನೀ ಒಳ್ಳೊ ಮರ್ರೊಡುಕು.

ನಾ ಈ ಮೇಲೆ ದಾರಂದಲಿ ಒಂದು ಓಡು ಹೊದ್ಲು ಹೊರ್ದಿಸಿನೆ. ಅವು ಹೋಕನ ನೀ ಒಳ್ಳೊ ಮರ್ಡೊಕು. ನೀ ಅಲ್ಲಿ ಹೋಕನ ಸೂಳೆ ನಿನ್ನ ಮತ್ತೆ ಒಳ್ಳೊ ಬೊಯ್ಯುದು. ಮೀಯಕೆ ಅಪ್ಪನೊಟ್ಟಿಗೆ ಮೀಯೊಕು. ಮತ್ತೆ ಅದ್ ಮೀಸಿರೆ ನಿಂಗೆ ಇಸದ ಎಣ್ಣೆ ಪೂಜಿ ಮೀಸುದು. ನೀ ಅಪ್ಪನೊಟ್ಟಿಗೆ ಮಿಯೊಕು. ನಿನ್ನ ಅಪ್ಪನೇ ಅದ್'ಂತ ಹೇಳಿಕೊಟ್ಟತ್. 'ಉಂಬಕನೂ ಹಾಂಗೆ. ನಿಂಗೆ ಬೇರೆ ಕೊಡ್ದು ಅದು. ಬೇರೆ ಕೊಟ್ಟರೂ ನೀ ಕೇಳಿಕೆ ಬೊತ್ತ್. ನೀ ಅಪ್ಪನೊಟ್ಟಿಗೆ ಉಣೊಕು. ಮರ್ಡೊಕು ಅಪ್ಪನೊಟ್ಟಿಗೇ ಉಂಡನೆ'ಂತ. 'ನಾ ಅವರೊಟ್ಟಿಗೆ ಉಂಡನೆಂತ ಹೇಳಿ ಮರ್ಡೊಕು'.

ಹಾಂಗೆ ಹೇಳಿದ್ ಆಕನ ಹಾಂಗೆ ಆಕ್. ಚೆನ್ನೆ ಚೆದುರೆಂಗೆಂತ ಆಡುವೊ. ಆಗ ಆಡಿಕನ ತುಪ್ಪನ ಸೆಡೆ ತಂದ್ ಕೊಡುವೊ. ಅದರ ಹೆರ್ಕಿ ಇಸ್. 'ನೀ ಈ ಮಾಲೆನ ನೋಡಿ ನೀ ಒಳ್ಳೊ ಮರ್ಡೊಕು ಮಂಜ'ಂತ ಹೇಳ್ತ್. ಹಾಂಗೆ ಹೇಳಿ ಆ ಮಾಲೆ ಸಿಕ್ಕಿದ್ ಆಕನ ಈ ಹೊದ್ಲ್ ಹರಂಡಿದ ದಾರಿಲಿ ನೀ ಸೀದ ಓಡಿಕೊಂಡ್ ಬಂದ್‌ದ್ ಆ ಮಾಲೆನ ನನ್ನ ಗಂಟ್ಲ್‌ಗೆ ಹಾಕೊಕು ಮಂಜ'ಂತ ಹೇಳಿಕೊಟ್ಟತ್. ಅಕ್ಕ್‌ಂತ ಹೇಳ್ತ್ ಮಾರನೆ ದಿನ ಇಂವ ಹೋತ್. ಮಾರನೆ ದಿನ ಹೋಕನ ಅದ್ ತೀನ್ತ್. ಈ ಕೂಸ್‌ನೊಟ್ಟಿಗೆ ಆಡಿಕಂಡಿತ್ತ್. ಬೇಟೆಗೆ ಹೋತ್ಲೆ ಎಂತದೂ ಇಲ್ಲೆ. ಹೋಕನ ನಾ ಹೋನೆಂತ ಹೇಳ್ತ್. ನಾ ಬನ್ನೆಂತ ಹೇಳ್ತ್. 'ಹೈದ ನೀ ಬರ್ಬಡ. ಇಂದ ನಿಂಗೆ ಬೊಯ್ವೊ ಹಾಂಗೆ'ಂತ ಹೇಳ್ತ್. 'ನಾ ಬನ್ನೆ ಬೊಯ್ದರೆ ಬೊಯ್ಯಲಿ ಬನ್ನೆ'ಂತ ಹೇಳ್ತ್. ಆಗ 'ನೀ ಮೆಟ್ಟ್ ಕಲ್ಲ್‌ಲೇ ನಿಂತ್‌ಕನೊಕು ಆತ'ಂತ ಹೇಳ್ತ್. ಈ ಕೂಸು ಏನ್ ಮಾಡ್ತ್ ಮೆಟ್ಟ್ ಕಲ್ಲ್‌ಲಿ ನಿಂತ್ ಒಳ್ಳೊ ಮರ್ಬತ್. 'ನಾನುನೂ ಬನ್ನೆ ಬನ್ನೆ'ಂತ ಹೇಳ್ಕನ ಮೆಟ್ಟ್ ಕಲ್ಲ್‌ಂದ ಹೆಗಲ್‌ಲಿ ಇಸಿಕನ್ತ್. ಹೆಗಲ್‌ಲಿ ಇಸಿಕನ ಒಂದು ಪುಂಡಿ ಹೊದ್ರಿ ತಕಂಡ್ ಅದರ ಜೋಬ್ಲಿ ಹಾಕನ್ತ್. ಕೂಸು ಈ ಹೋದದಾರಿ ಹರಂಡಿಕಂಡ್ ಹೋತ್. ಹರಂಡಿಕಂಡ್ ಹೋಗಿದ್ ಅಲ್ಲಿ ಮೀಯಕೆ ಹೋದೊ. ಎಣ್ಣೆ ಪೂಜಿ ಮುಂದೆ ಹೋತ್. ಎಣ್ಣೆ ಪೂಜಿ ಮೀತ್. ಆಗ ಹೇಳ್ತ್ ಸೂಳೆ 'ನಾ ಮೀಸಿನೆ'. 'ನೀ ಮೀಸ್‌ಬೇಡ'. 'ಯಾರ್ಯಾರ ಮಕ್ಕಳ ಎಲ್ಲ ಹೊತ್ತ್‌ಕಂಡ್ ಬಾದು ಇಲ್ಲಿಗೆ'ಂತ ಹೇಳ್ತ್. 'ಅಯ್ಯೋ ಬೊಯ್ಬೇಡಪ್ಪಾ ಅದ್ ಪಟೇಲ್ರ ಮಂಜ. ನೀಂಗೇನು ಗೊತ್ತು'ಂತ ಇಂವ ಹೇಳ್ತ್. 'ನಿಮ್ಮ ಪಟೇಲ್ರ ಮಂಜ ಯಾರೊ'ಂತ ಹೇಳ್ತ್. ಒಟ್ಟಿಗೆ ಮೀಯಕೆ ಇಳ್ತ್ ಮೀಯಕೆ ಇಳ್ದ್‌ದ್ ಮಿಂದ್ ಆತ್ ಉಂಬಕೆ ಹೋತ್. ಬೇರೆ ಕೊಟ್ಟತ್ ಅದ್. ಬೇರೆ ಕೊಡ್‌ಕನ 'ನಂಗೆ ಬೇಡ್ವೇ ಬೇಡ'ಂತ ಹೇಳ್ತ್. ಅಪ್ಪನೊಟ್ಟಿಗೆ ಉಂಡತ್. ಅವು ಉಂಡ್ ಚೆನ್ನೆ ಚೆದುರಂಗೆ ಆಡಿಕೆ ಕುದ್ದೊ. ಕುದ್ದ್‌ದ್ ಆಕನ ಕೂಸು ಒಳ್ಳೊ ಮರ್ಬತ್. ಆಗ ಅಂವ ಏನ್ ಹೇಳ್ತ್. ಇಂವ ಪೆಟ್ಟಿಗೆಲಿದ್ದ 'ತೆಡ್ಬನ ಕಾಯಿ' ತಂದ್ ಕೊಡಿಯ. ಅದರ ತಂದ್‌ಕೊಟ್ಟತ್. ತಂದ್ ಕೊಡ್‌ಕನ ಅದ್ ಹೆರ್ಕಿ ಇಟ್ಟತ್. ಒಳ್ಳೊ

ಮರ್ಬತ್. ವಾಪಾಸ್ ಮರ್ಬ್ದ್ ಈ ಮಾಲೆಗೆ ಮರ್ಬತ್. 'ನಿನ್ನ ಮಾಲೆ ಒಮ್ಮೆ ಕೊಡೀಗ. ಅಂವ ಹಿಡ್ಕನಲಿ ಎಲ್ಲಿಗೆ ಹೋದೆ ಅಂವ ಆಡಿಕೊಂಡೇ ಇರ್ದಲ್ಲ ಇಲ್ಲಿ'ಂತ ಹೇಳ್ತ್. ಆಗ 'ಅದರ ಕೊಟ್ರೆ ಹಾಳ್ ಮಾಡ್ದೂ'ಂತ ಹೇಳ್ತ್. 'ಹಾಳ್ ಮಾಡಿಕಿಲ್ಲೆಪ್ಪ'ಂತ ಹೇಳ್ತ್. ಅದರ ಹೆರ್ಕಿ ಇಟ್ಟತ್. ಆ ಮಾಲೆನ ಹೆರ್ಕಿ ಇಸ್‌ಕನ ಇದ್ ಆಡಿಕಂಡ್ ಆಡಿಕಂಡ್ ಹೋತ್. ಅದರ ಹೆರ್ಕಿಕಂಡ್ ಬಾತ್. ದಾರ್‍ಲಿ ಓಡಿಯೇ ಓಡಿ ಬಾತ್. ಓಡಿಬಾಕನ ಇವ್ಕೆ ಇಲ್ಲೆ ಅಲ್ಲ. ಇದ್ ಸುಮಾರ್ ಬೊಯಿತ್ ಇಂವಂಗೆ. ಇಂವ ಮಾರನೆದಿನ ಬಾತ್. ಮಾರನೆ ದಿನ ಬಾಕನ ಇದ್ ಹೆಣನೆ. ಹಗಲ್ ಈ ಕೂಸು ಆಡಿಕಂಡುಟು. ಆಡಿಕಂಡಿರಿಕನ ಮಂಚಮಲಿ ಕುದ್ರಿಕನ ಮಂಚಮದ ಕಾಲ್‌ಲಿ ಕಟ್ಟಿ ಚೆಪ್ಪಿನ ಬಳ್ಳಿಲಿ ಎರಡ್ ಕೊಟ್ಟತ್. ಆಗ ಅಷ್ಟ್ ಹೊತ್ತಾತಕನ ಅದ್ ಮಾಲೆ ಹಾಕಿಕಂಡು ಬಾತ್. 'ಹೇಳ್ದ ಮಾತು ಉಟ್ಟೋ ಇಲ್ಲೆನಾ'ಂತ ಕೇಳ್ತ್. ಮತ್ತೆ ಅವ್ವೇ ಗಂಡ ಹೆಣ್ಣ್ ಮಕ್ಕ ಆದೊ. ಇಂವ ಸೂಳೆನ ಬುಟ್ಟತ್. [ಕತಾ ನಿರೂಪಕ:ಬಾಬುಗೌಡ ಪಡ್ಪುಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]

## 70.ಜಡೆದಾರಿ ದೆವ್ವದ ಕತೆ

ಒಂದಾನೊಂದು ಕಾಲಲಿ ನಮ್ಮ ತುಳುನಾಡ್‌ನ ಯಾವುದೇ ಒಂದು ಮೂಲೆಲಿ ಒಂದು ಮನೆತನ ಇತ್ತ್. ಆ ಮನೆತನಕ್ಕೆ ಒಂದ್ ತುಂಡು ಅರ್ಸುಂತ ಹೇಳುವವ ಜೀವನ ಮಾಡಿಕಂಡಿತ್ತ್. ಅವಂಗೆ ಸಾವಿರಾರು ಮುಡಿಗದ್ದೆ ಬೇಸಾಯಕ್ಕಿತ್ತ್. ಈ ಸಾವಿರಾರು ಮುಡಿಗದ್ದೆ ಬೇಸಾಯ ಮಾಡಿಕೆ ಆಕನ ಅಂವ ನೂರಾರು ಒಕ್ಕಲುಗಳ ಅಲ್ಲಿ ಇಸಿಕಂಡಿತ್ತ್. ಅವಂಗೆ ಒಂದೇ ಒಂದು ತೊಂದರೆ. ಅಂದರೆ ಅವನ ಮನೆ ಒಂದು ಕಡೆಯಾದರೆ, ಮತ್ತೊಂದು ಕಡೆ ಭೂಮಿ. ಇದರ ಮಧ್ಯಲಿ ಒಂದು ದೊಡ್ಡಾ ಹಳ್ಳ ಅಲ್ಲಿ ಹರ್ದ್ ಹೋಗ್ತಿತ್ತ್. ಈ ಹಳ್ಳನ ಮಾಮೂಲಾಗಿ ದಾಟಿಕೆನೂ ಕಷ್ಟ. ಅದರ್‍ಲಿ ಮೊಸಳೆ ಇನ್ನೇನೋ ಮೃಗಗಳಿಗೆ ಸಂಬಂಧಪಟ್ಟ ಕ್ರೂರವಾದ ಕೆಲವು ಜಂತುಗ. ಇದರಿಂದಾಗಿ ಮಳೆಗಾಲಕ್ಕೆ ದಾಟಿಕೆ ಬಾರೀ ತೊಂದರೆ ಆದೆ. ಈ ಒಕ್ಕಲುಗಳಿಗೂ ಇವನ ಹಕ್ಕಲೆವಕ್ಕೂ ಇದರಂದಾಗಿ ಭಾರೀ ತೊಂದರೆ ಆಗ್ತಿತ್ತ್. ಒಂದು ದಿನ ಇವನ ಚಾವಡಿಲಿ ಬಂದ್ ಇವೆಲ್ಲವೂ ಅವನೊಟ್ಟಿಗೆ ಬಂದ್‌ದ್, ಮೊರೆ ಹೊಕ್ಕೊ. 'ಏನ್‌ಂತ ಹೇಳ್ರೆ? ನೀವು ದೊಡ್ಡ ಊರ್‍ನ ಅರ್ಸನಂಗೇ ಇದ್ದವು ಆಗಿದ್ದ್. ನಾವ್ಗೆ ಇನ್ನೊಂದು ಏನಾರ್ ವ್ಯವಸ್ಥೆ ಮಾಡೊಕ್'ಂತ. ಇದರ ಕೇಳಿ ಇವ್ಕೆ ಏನು ಹೇಳೊಕುಂತ ಇಂವಗೆ ಗೊತ್ತಾತ್ಲೆ. ನಾ ಇನ್ನೊಂದು ದಿನ ತೀರ್ಮಾನಾ ಮಾಡಿ ಉತ್ತರ ಕಳ್ಸಿನೆಂತ ಹೇಳಿ ಅಲ್ಲಿಂದ ಅವರ ಕಳ್ಸಿದೆ.

ಯೋಚನೆ ಮಾಡಿ ಒಂದು ದೋಣಿ ಮಾಡ್ರೆ ಆದೋ. ಅಥವಾ ಪಾಲದ ವ್ಯವಸ್ಥೆನೊ ಹಿಂಗೆ ಯೋಚನೆ ಮಾಡಿಕಂಡಿತ್ತ್. ಪಾಲಂತೂ ತುಂಬಾ ಕಷ್ಟಕರದ್ದ್. ದೋಣಿಲೇ ನಾವು ಆಚೀಚೆ ಹೋವಂತ ವ್ಯವಸ್ಥೆ ಮಾಡೊಮಂತ ಮನೆಯವು ತೀರ್ಮಾನ ಮಾಡಿ ನೆರೆಕರೆಯವ್ಕೆ ಹೇಳ್ದೊ.

ಹಿಂಗೆ ಹೇಳ್ದ ಮೇಲೆ ಒಂದು ದಿನ ದೋಣಿಗೆ ಬೇಕಾದ ಮರನ ನಾವು ಎಲ್ಲಿಂದ ತಯಾರ್ಸುದೂಂತ ವಿಚಾರಣೆ ಆತ್. ಈ ವಿಚಾರಣೆ ಮಂದುವರ್ದ್ ಇವನ ಒಕ್ಕಲುಗಳೇ ಆಗುದ್ದವು, ಮತ್ತೆ ಇವನ ನೆರೆಕರೆಯವು ಸೇರಿ ನಾಲ್ಕು ಗುಂಪಾಗಿ ಮನೆಂದ ಹೊರ್ಟವೆ. ಮನೆಂದ ಹೊರಟ್ ಒಂದು ಗುಂಪು ಮೂಡಕ್ಕೆ ಹೋದರೆ, ಇನ್ನೊಂದು ಗುಂಪು ಪಡ್ಡಕ್ಕೆ, ಮತ್ತೊಂದು ತೆಂಕಕ್ಕೆ ಹೋದರೆ ಇನ್ನೊಂದು ಬಡಗಕ್ಕೆ. ನಾಲ್ಕ್ ಗುಂಪಾಗಿ ಮುಂದೆ ಹೋದವೆ. ಇವು ಹೋಕನ ಇವ್ಕೆ ದಾರಿ ಖರ್ಚಿಗೆ ಬುತ್ತಿ, ದಿನ ಖರ್ಚಿಗೆ ಅಕ್ಕಿ ಸಾಮಾನುಗಳ ಹೊತ್ತುಕಂಡ್ ಹೋದವೆ. ಈ ದಾರಿ ಖರ್ಚಿಗೆ ಕೊಟ್ಟಂತ ಬುತ್ತಿನ ನೀರ್ ಕಂಡಲ್ಲಿ ಊಟ ಮಾಡ್ವೆ. ದಿನ ಖರ್ಚಿಗೆ ಕೊಟ್ಟಂತ ಸಾಮಾನ್‌ನ ರಾತ್ರಿ ಅಡಿಗೆ ಮಾಡಿ ಊಟ ಮಾಡ್ವೆ. ಹಿಂಗೆ ಕಳ್ದ್ ಕೆಲವು ದಿನಗ ಇವು ಹಿಂಗೆ ನಡ್ದ್ ಹೋಕ್ಕಾದೆ. ಎಲ್ಲಿ ನೋಡ್ರು ಕೂಡ ಇವ್ಕೆ ಒಂದು ಸರಿಯಾದ ಮರ ಸಿಕ್ಕುದ್ಲೆ. ಈ ಮರನ ಹುಡ್ಕೊಕುಂತ ಮತ್ತೂ ಕೆಲವು ದಿನ ಹುಡ್ಕಿದೊ. ಹುಡ್ಕಿರು ಕೂಡಾ ಇವ್ಕೆ ಸಿಕ್ಕುದ್ಲೆ. ಬಾರೀ ಬೇಜಾರಂದ ಮುಂದೆ ಮುಂದೆ ಹೋಗ್ತಾ ಒಳೊ. ಹೊಗ್ತಾ ಇರ್ಕ್ನ ಒಂದಲ್ಲ ಒಂದು ದಿನ ಸಾಧಾರಾಣ ಹಿಂಬೊತ್ತುನ ಹೊತ್ತಿಗೆ, ಇವು ಎಲ್ಲೊ ಒಂದು ದೊಡ್ಡ ಗೊಂಡಾರಣ್ಯಕೆ ಬಂದ್ ತಲುಪ್ಯೊಳ.

ಹಿಂಗೆ ಅಲ್ಲಿ ಕುದ್ದಾಕನ ಅವು ಇನ್ನ್ ಮುಂದೆ ಹೋದೊ. ಅಥವಾ ಹಿಂದೆ ಹೋದೊ. ಹಾಂಗೆ ಆಗಿರಿಕನ ಇವರ ಕೈಲಿ ತಂದ ಸಾಮಾನುಗಳೂ ಮುಗಿತಾ ಬಂದದೆ. ಈ ಗುಂಪು ಹಿಂಗೇಇರ್ಕನ ಅಲ್ಲೇ ಮತ್ತೊಂದು ಗುಂಪು ಅಲ್ಲಿಗೆ ಬಂದವೆ. ಈ ಎರಡ್ ಗುಂಪು ಎದ್‌ರ್ ಬದ್‌ರಾಗಿ ಮಾತಾಡ್ಕನ ಮತ್ತಿರುವ ಎರಡ್ ಗುಂಪುಗಳು ಅಲ್ಲಿ ಬಂದವೆ. ಆ ಜಾಗ ಬಾರೀ ವಿಶೇಷವಾದ ಜಾಗಂತ ನೋಡಿಕೆ ಆಕನನೇ ಇವ್ಕೆ ಗೊತ್ತಾದೆ. ಅದೊಂದು ದೊಡ್ಡ ಗುಡ್ಡೆ ಆ ಗುಡ್ಡೆ ಸುತ್ತಲೂ ವಿಶೇಷವಾದ ಕಾಡ್ ಇದ್ದದೆ. ಹೂವು, ಬೊಳ್ಳಿಂತ ನಂದನ ವನದ ಹಾಂಗೆ ಇತ್ತ್. ಕಾಡ್ ಪ್ರಾಣಿಗ, ಹಕ್ಕಿಗ ಎಲ್ಲಾ ಒಳೊ. ಇದರೆಲ್ಲ ನೋಡ್ಕನ ಅವ್ಕೆ ಒಂದು ಕಡೆಂದ ಹೆದ್ರಿಕೆನೂ ಆದೆ. ಒಂದು ಕಡೆಂದ ಅಲ್ಲೇ ನಿತ್ತ್ ನೋಡೊಕುಂತಲೂ ಆದೆ. ಹಿಂಗೆ ಅಂದ್ ರಾತ್ರೆಂತೂ ಈ ನಾಲ್ಕ್ ಗುಂಪು ಅಲ್ಲೇ ಕಳ್ದವೆ. ಮತ್ತೆ ಅವ್ಕೆ ಊರಿಗೆ ಹೋಕೆ ಬಾರೀ ಕಷ್ಟ ಆದೆ. ಆ ಗುಡ್ಡೆ ಪಕ್ಕಲಿ ಒಂದು ಕೆರೆನೂ ಉಟ್ಟು. ಅಲ್ಲದೇ ಅಲ್ಲಿ ಒಂದು ಅರ್ಲಿ ಮರನೂ ಉಟ್ಟು. ಈ ಮರನ ನೋಡ್ಕನ ಅದ್ ದೇವರ ಅಥವಾ ದೆವ್ವದ ಮಹಿಮೆ ಇದ್ದದ್‌ಂತ್ ಹೇಳೊಕಾಗಿ ಬಂದದೆ. ಅಂದ್ ಅವು ಅಲ್ಲೇ ಉಳ್ದವೆ.

ಮಾರ್ನೆ ದಿನ ಇವು ಯಾರೂ ಎದ್ರುದಿಲ್ಲೆ. ಕಡೆಗೆ ಅದರ್ಲಿ ಒಬ್ಬ ಊರ್ನ ಗೌಡನೆ ಆಗಿರೊಕು ಅಂವ ಎಚ್ಚೆತ್ತು ಹೇಳ್ದೆ. ಯಾಕೆ ನೀವೆಲ್ಲ ಮಲಗ್ಯೊಲರಿ. ಹೊತ್ತು ಮೇಲೆ ಬಂದುಟು ಒಬ್ಬೊಬ್ಬ ಆಗಿ ಎದ್ದವೆ. ಎದ್ದಾಕನ ವಿಶೇಷ ಕಂಡದೆ. ಅವು ಮಲಗಿದಲ್ಲಿಂದ ಸ್ವಲ್ಪ ದೂರಲ್ ದೊಡ್ಡಾ ಒಂದು ಮರ ಕಂಡದೆ. ಈ ನಾಲ್ಕೂ ಗುಂಪು ಈ ಮರನೇ ನೋಡ್ವೆ 'ಇದ್ ನವ

ಅರ್ಸು ಹೇಳಿ ಕಳ್ಸಿದ ಮರ ಅಥವಾ ಅರ್ಸು ನೋಡದೆನೇ ಬೆಳ್ದ ಮರ. ಇದ್ ನಾವು ನಡ್ಸಿಕಂಡ್ ಬಂದಂತಹ ನಮ್ಮ ಕುಲದೇವರೆ'ಂತ ಹೇಳ್ವೆ. ಇಲ್ಲಿಂದ ನಾವು ಮುಂದೆ ಹೋದುಂತ ನಿರ್ಣಯ ಮಾಡ್ವೆ. ನಿರ್ಣಯ ಮಾಡಿ ಅಲ್ಲಿಂದ ಮನೆ ಕಡೆ ದಾರಿ ಹಿಡ್ದೊ. ಬಾಕೆ ಆಕನ ಎಲ್ಲವು 'ನೀವ್ಗೆ ಮರ ಸಿಕ್ಕಿತಾ ಹೋದ ಕಾರ್ಯ ಏನಾತ್ ? ತುಂಬಾ ದಿನ ಆತ್. ನಿಮ್ಮ ಹುಡುಕಿಕಂಡ್ ಬರೋಕುಂತ ನಾವು ಗ್ರಹಿಸಿಕೊಂಡಿದ್ದೊ. ಆದರೆ ಇಂದ್ ನಾಳೆಂತ ಆಕನ ನೀವು ಬಂದ್ ಎತ್ತಿದರಿ. ತುಂಬಾ ಸಂತೋಷ. ಇದರ ಬಗ್ಗೆ ನಮ್ಮ ಕುಲದೇವರಿಗೆ ವಂದನೆ'ಂತ ಹೇಳಿ ಪ್ರಾರ್ಥನೆ ಕೂಡಾ ಸಲ್ಲಿಸಿದೊ. ಅರ್ಸು ಕೇಳ್ಕನ ಊರ್ನ ಗೌಡಾ ಹೇಳ್ದೆ. 'ನಾವು ಹೋದ ಕಾರ್ಯ ಆತ್. ನಾವ್ಗೆ ಒಳ್ಳೊ ಮರನೇ ಕಾಂಬಕೆ ಸಿಕ್ಕಿತ್. ಆದರೆ ತುಂಬಾ ದೂರ ಉಟ್ಟು. ತಾವಂತ ಏರ್ಪಾಡ್ ಮಾಡ್ದು ಬಾರಿ ಕಷ್ಟ'ಂತ ಹೇಳ್ದೆ. 'ಇದ್ಕೆ ನೀವು ಬೇಜಾರ ಮಾಡೊಕು'ಂತ ಇಲ್ಲೆ. 'ಇದ್ ನೀವ್ನ ನಾವ್ಗ ಎರಡ್ ಕಡೆಗೂ ಆವಂತ ಉಪಕಾರ. 'ನೀವು ಹಿಂಗೆ ಗುಡ್ಡೆ ಸುತ್ತಿದ ಕಷ್ಟನೇ ವಿಶೇಷ. ಬೇಕಾದ ಖರ್ಚೆ ಎಲ್ಲ ನಾ ಮಾಡ್ನೆ. ನಂದಲ್ಲ ನಮ್ಮ ಹಿರಿಯವರ್ದ್'ಂತ ಹೇಳಿ ನಾ ಇದರ ಮುಂದರ್ಸಿಕಂಡ್ ಹೋನೆ'ಂತ ಹೇಳ್ದೆ. ಇವು ಅದೇ ರೀತಿ ಅಲ್ಲಿಂದ ಒಂದು ಒಳ್ಳೊ ಮೂಹೂರ್ತ ನೋಡಿ ಮರಕಡಿವ ದಿನವ ನಿಶ್ಚಯ ಮಾಡಿಕಂಡೊ.

ಮರಕಡಿವಲ್ಲಿಗೆ ಬೇಕಾದ ಸಾಮಾನ್'ನ ಗಾಡಿಲಿ ತಕಂಡೋವ ಏರ್ಪಾಡಾದೆ. ಊರವು, ಭಟ್ರ್ ಎಲ್ಲ ಹೋದವೆ. ಒಂದು ಒಳ್ಳೊ ಗಳಿಗ್ಗೆ ನೋಡಿ, ದೇವರಿಗೆ ಅಕ್ಕಿ ಕಾಯಿ ಇಸಿದ್ ಮರಕಡಿವ ಏರ್ಪಾಡ್ ಮಾಡ್ವೆ. ಮರ ಕಡಿಯಕನ ಮರಲಿ ಸೊನೆ ಬಾದು ಬುಟ್ಟು ರಕ್ತ ಬಂದದೆ. ಕಡಿವಂವ ಮೂರ್ಚೆ ತೊಪ್ಪಿ ಬಿದ್ದದೆ. ಇದರ ನೋಡಿ ಊರಿನವ್ಕೂ ಈ ದನಿಕರಿಗೂ ಬಾರಿ ಬೇಜಾರ ಆದೆ. ಆಗಲೇ ಯಾವ್ದೋ ಒಂದು ಕಡೆಂದ ಒಂದು ವಿಶೇಷ ಸ್ವರನೂ ಬಂದದೆ. ಆ ಸ್ವರ ಹೇಳ್ದೆ. 'ಇದ್ ನನ್ದ್. ಇದರ ನೀ ಮುಟ್ಟುಬೇಡಾ......, ಇದ್ ನನ್ದ್ ಇದರ ನೀ ಮುಟ್ಟು ಬೇಡಾ......, ಇದ್ ನನ್ದ್ ಇದರ ನೀ ಮುಟ್ಟುಬೇಡಾ'ಂತ...... ಮೂರ್ ಮೂರು ಸಲ ಹೇಳ್ದೆ. ಈ ಸ್ವರನ ಕೇಳಿ ಇವ್ಕೆ ಬಾರಿ ಆಶ್ಚರ್ಯ ಆದೆ. ಇದೆಂತಂತ ಅವು ಊರ್ನ ಹಾರಂವರ ಕರ್ದ್ ಪ್ರಶ್ನೆ ನೋಡ್ವೆ. ಪ್ರಶ್ನೆಲಿ ಹಾರಂವ ಹೇಳ್ದೆ, 'ಅದ್ ಒಂದು ದೆವ್ವ ಕುದ್ರುವ ಮರ. ಆ ದೆವ್ವ ಜಡೆದಾರಿ'ಂತ. 'ಇದ್ ತುಳುನಾಡ್‌ಲಿ ವಿಶೇಷವಾಗಿ ಉಟ್ಟು. ಇದ್ ಮೊದ್ಲ್ ಊರ್ಲೆ ಇತ್ತ್. ಅದ್ಕೆ ಸರಿಯಾದ ಆಸ್ರಯ ಸಿಕ್ಕದೆ ಕಾಡ್ಗೆ ಹೋಗಿ ಅಲ್ಲಿ ನೆಲೆ ಮಾಡಿಕಂತ್'ಂತ ಬ್ರಾಹ್ಮಣರ್ ಹೇಳ್ವೆ. ಈ ಮಾತ್'ನ ಕೇಳಿ ಈ ದನಿಕರಿಗೆ ವಿಶೇಷ ಆದೆ. ನಮ್ಮ ಊರ್ಲಿ ಇದ್ದ ದೆವ್ವನ ನಾವ್ಯಾಕೆ ಕಾಡ್‌ಲಿ ಬುಡೊಕ್'ಂತ ಹೇಳಿ ಇಂವ ಅಲ್ಲಿ ಒಂದ್ ಈಡ್ ಕಟ್ಟಿದೆ. 'ನೀ ಊರ್ಲಿ ಇದ್ದಂವ. ಆದರೆ ನಿಂಗೆ ಊರ್ಲಿ ಸ್ಥಾನ, ಮಾನ, ದಿಕ್ಕ್, ನೆಲೆ ನಾವು ಮಾಡಿಕೊಟ್ಟವೆ. ಈ ಮರನ ಬುಟ್ಟು ಬುಡು'ಂತ ಹೇಳ್ವೆ. ಅದೇ ರೀತಿ ಇವು ಪ್ರಾರ್ಥನೆ ಮಾಡಿ ಮರ ಕಡಿಯಕೆ ಮುಂದೆ ಹೋದವೆ.

ಮರ ಕಡಿಯಕನ ಈಗ ಮೊದಲ್ನಾಂಗೆ ರಕ್ತ ಬಾದ್ಲೆ. ಸೊನೆ ಬಂದದೆ. ಮರ ಕಡ್ದ್ ಬಾರಿ ಬೇಗ ಬೀಳ್ಸಿನೂ ಆದೆ. ಮೂರು ತಿಂಗಳೊಳಗೆ ದೋಣಿನೂ ಕೆತ್ತಿ ಆದೆ. ಹಲವ್ ಜನಂದ ಮಾಡ್ದ ಕೆಲಸ ನಾಜೂಕು ಆದೆ. ಅಲ್ಲಿಂದ ದೋಣಿನ ಸಾಗ್ಸುವ ಕೆಲ್ಸನೂ ಸುಲಾಭಾಂತ ಆದೆ. ದೋಣಿನ ತಂದ್ ನೀರ್ಲಿ ಇಸುವೆ. ನೀರ್ಲಿ ಇಸಿರೆ ಇವ್ಕೆ ಏನೋ ಒಂದು ನೆನಪಿಗೇ ಬರದ ಹಂಗೆ ಆದೆ. ಹೇಳಿಕಂಡ ಹರ್ಕೆ, ಕಟ್ಟಿದ ಈಡ್ ಇದ್ ಯಾವುದೂ ನೆನ್ಪಿಗೆ ಬಾದ್ಲೆ. ಮತ್ತೆ ದೋಣಿನ ನೀರ್ಲಿ ತೇಲಿಸಿ ಬುಡಕನ ಏನಾರು ದೋಣಿ ತೇಲುದ್ಲೆ. ಅಲ್ಲದೆ ಹಳ್ಳದ ಆ ಕರೆಂದ ಸ್ವರನೂ ಕೇಳ್ದೆ. 'ನಾ ನಿನ್ನ ಇಷ್ಟರ ವರೆಗೆ ಕಾದ್ ನೋಡ್ದೆ'ಂತ ಹೇಳ್ದೆ. 'ಇನ್ನಿದ್ ನನ್ನದೆ. ಇನ್ನಿದ್ ನನ್ನದೆ'ಂತ ಹೇಳ್ದೆ. ದನಿಕರಿಗೆ ಬೇಜಾರ ಆದೆ. ಇದರ ಕೇಳಿ ಮನೆಲಿ ಯಾರೊಟ್ಟಿಗೆನೂ ಮಾತಾಡದೆ ಕುದ್ದದೆ. ಇಂವ ಬೇಜಾರಲಿ ಕುದ್ದಾಕನ ನೆರೆಕರೆಯವು 'ಬಂದ್ ಹಿಂಗೆ ಕುದ್ದರೆ ಆಕಿಲ್ಲೆ. ಇದರ ಕೇಳಿ ಹಿಂದಕ್ಕೆ ಪ್ರಶ್ನೆ ನೋಡ್ಸುವೆ. ಇದ್ಕೆ ಏನಾರು ದಾರಿಕಂಡ್ ಹಿಡಿಯೊಕ್'ಂತ ಹೇಳ್ವೆ. ಮತ್ತೆ ಹಾರಂವನ ಪ್ರಶ್ನೆ ಕೇಳ್ಕನ 'ಅದ್ಕೆ ಬಲಿ ಬೇಕ್. ಅರ್ಸನ ರಕ್ತ ಬೇಕ್'ಂತ ಹೇಳ್ದೆ. ಊರಿಗೆ ಒಬ್ಬ ಅರ್ಸ ಆಗಿದ್ದಂವ ಈ ದೋಣಿಗಾಗಿ ಬಲಿಯಾದೆ. ನಮ್ಮ ಗತಿಯೇನ'ಂತ ಹೇಳಿ ಊರ್ನವು ಬಾರಿ ಬೇಜಾರಲಿ ಹೇಳ್ವೆ. 'ನೀವು ಇಂತ ಕೆಲ್ಸಕ್ಕೆ ಮುಂದೆ ಹೋಕೆ ಬೊತ್ತ್'ಂತ. ಆದರೂ ಆ ಅರ್ಸ ಹೇಳ್ದೆ, 'ನಾ ಹೋದರೂ ತೊಂದ್ರೆ ಇಲ್ಲೆ. ನಮ್ಮ ಊರು ಒಳ್ಳೊದಾಕು. ಆಚೆ ಈಚೆ ಹೋಕೆ ಅನುಕೂಲ ಆಕ್ಕುಂ'ತ. ಆಗ ಅವು 'ನೀವು ಹೋಕೆ ಬೊತ್ತ್, ದೇವರ ಹಂಗೆ ಇದ್ದ ನೀವು ಬೇಕು'ಂತಾ. ಆಗ ಅಂವ ಒಂದು ಉಪಾಯ ಮಾಡ್ದೆ. ನನ್ನ ರಕ್ತನೇ ಕೇಳ್ತ್. ಅವಂಗೆ ಏಳು ಜನ ಮಕ್ಕ ಇದ್ದವೆ. ಈ ಏಳು ಜನಲಿ ಅಂವ ಒಬ್ಬ ಮಂಜನ ಊರ್‌ಗಾಗಿ ಬಲಿಕೊಡಿಕೆ ಮುಂದಾದೆ. 'ಆದ್ರೂ ಹೆಣ್ಣ್‌ನೊಟ್ಟಿಗೆ ಒಂದ್ ಮಾತ್ ಕೇಳೊಕ್'ಂತ ಊರ್ನವರೊಟ್ಟಿಗೆ ಹೇಳ್ದೆ.

ಆಮೇಲೆ ಅಂವ ಬಂದ್ ಹೆಣ್ಣ್‌ನೊಟ್ಟಿಗೆ ಕೇಳ್ದೆ, 'ನಾವು ಒಂದ್ ಉಪಾಯ ಮಾಡಕ್. ನಾವ್ಗೆ ಏಳ್ ಜನ ಮಕ್ಕ ಒಳೊ. ಅದರ ದೇವ್ರು ಕೊಟ್ಟದ್. ಅದರ್ಲಿ ಒಬ್ಬನ ಕಳ್ಸೊನಾ'ಂತ ಅಂವ ಹೇಳ್ದೆ. ಆಗ ತುಂಬಾ ಸಿಟ್ಟಾಗಿ 'ನೀವ್ಗೆ ಊರವು ಬೇಕು, ನೆಂಟ್ರ ಬೇಕ್, ಮನೆಯವು ಬೇಡಾಲ್ಲಾ'ಂತ. ಈ ಊರು, ಈ ಮನೆ, ಆಸ್ತಿ ಎಲ್ಲ ನಿಮ್ಮದೆ. ನೀವ್ಗನೆ ಇರ್ಲಿ. ನಾ ಮತ್ತ್ ನನ್ನ ಮಕ್ಕ ಅಪ್ಪನ ಮನೆಗೆ ಹೋವೊ'ಂತ ಹೇಳಿ ಹೆಣ್ಣ್ ಹೋದೆ. ತೌರು ಮನೆಲಿ ಹೋಗಿ ನಡ್ದಂತ ಎಲ್ಲಾ ವಿಷಯನ ಅಪ್ಪಂಗೆ ಹೇಳ್ದೆ. ಆಗ ಅಪ್ಪ ಬೇಜಾರಲಿ 'ಒಂದು ಕಡೆಂದ ಅಳಿಯಂಗೆ ಕಷ್ಟನೂ ಬಂದದೆ, ಇನ್ನೊಂದು ಕಡೆಂದ ತನ್ನ ಸ್ವಂತ ರಕ್ತನೇ ಬಲಿ ಕೊಡಿಕೆ ಹೊರ್ಟತ್ ಅಂವ. ನಿಜವಾಗಿ ಮೂರ್ಕನೆ'ಂತ ಅಳಿಯಂಗೆ ಬೊಯ್ದದೆ. ಊರ್‌ಗಾಗಿ ಕೊಡೆಕ್'ಂತ ಹೇಳ್ದ ನೆನ್ಪು ಬಾದ್ಲೆ. ಎಷ್ಟೊ ಸಮಯ ಹಿಂಗೆ ಕಳ್ದದೆ.

ಅಂವ ತಂಗೆನ ದೂರದ ಊರಿಗೆ ಕೊಟ್ಟಿದ್ದವೆ. ಅದ್ಕೆ ಈ ವಿಷಯ ಗೊತ್ತಾದೆ. ಅಣ್ಣಂಗೆ ಏನೋ ಒಂದು ಆಪತ್ತು ಬಂದುಟು. ಎಂತದ್ ಏನ್'ಂತ್ ತಿಳ್ದ್ ಬನ್ನೆಂತ ಹೊರ್ಟದೆ. 'ಎಂತಕ್ಕೆ

ಅಣ್ಣ ನೀ ಮಾತಾಡ್ದುಲ್ಲೆ ? ಯಾಕಣ್ಣ ನಿಂಗೆ ಬೇಜಾರ ವಿಷಯ ? ಹೇಳ್'ಂತ ತಂಗೆ ತುಂಬಾ ಒತ್ತಾಯ ಮಾಡ್ದೆ. ಎರಡ್ ಮೂರು ದಿನ ಕಳ್ದದೆ. 'ನೋಡ್ ತಂಗೆ ನಾ ಊರ್‌ಗಾಗಿ ಇಂತ ಕೆಲ್ಸ ಮಾಡ್ದೆ. ಕೆಲ್ಸ ಮಾಡೆಕ್'ಂತ ಪ್ರಯತ್ನ ಪಟ್ಟೆ. ನಾ ಏನ್ ಗ್ರೇಸಿದೆನೋ ಅದರ ಪೂರೈಸಿಕೆ ನಂಗೆ ಆತ್ಲೆ. ಅದರಂದಾಗಿ ನಾ ಇನ್ನ್ ಇಲ್ಲಿ ಬದ್ಕುದಿಲ್ಲೆ. ಈ ಆಸ್ತಿ, ಮನೆ, ಮಠ ಎಲ್ಲ ನಿಂಗೆ ಆತ್. ಇಲ್ಲದಿದ್ದರೆ ನನ್ನ ಹೆಣ್ಣ್‌ನ ಪೈಕಿಲಿ ನೀವ್ಗೆ ಯಾರಿಗೆ ಬೇಕ್ ಹಿಂಗೆ ಮನಸ್ಸುಟು ಹಾಂಗೆ ನೀವು ಇದ್ದ್‌ಕನಿ. ನಾ ಎಲ್ಲಾರ್ ಸತ್ತನೆ. ಇಲ್ಲರೆ ದೇಶಾಂತರ ಹೋನೆ'ಂತ ಹೇಳಿ ಹೊರ್‌ಟದೆ. ಆಗ ಇವನ ತಂಗೆ ಹೇಳ್ದೆ, 'ಅಣ್ಣಾ ನೀ ಯಾಕೆ ಇದಕ್ಕೆ ಬೇಜಾರ ಮಾಡ್ಯ? ಇದೀಗ ದೇವ್ರು ಕೇಳಿದ ರಕ್ತ. ನಿನ್ನ ರಕ್ತನ. ನೋಡು ನಿನ್ನ ರಕ್ತ ನನ್ನ ರಕ್ತಕೆ ಸಮಾನ ಉಟ್ಟು. ನಿನ್ನ ರಕ್ತನೂ ನನ್ನ ಮಂಜನ ರಕ್ತನೂ ಒಂದೆ. ದೇವ್ರಿಗೆ ಬೇಕೂಂತ ಆದರೆ ನನ್ನ ಮಂಜನ ನಾ ಬಲಿ ಕೊಟ್ನೆ. ಊರ್‌ಗಾಗಿ ನೀ ಒಳ್ಳೊ ಕೆಲಸ ಮಾಡುದರ ನೀ ನಿಲ್ಸಿಕೆ ಬೊತ್ತ್. ನೀ ದೇಶಾಂತರ ಹೋಕೆ ಬೊತ್ತು'ಂತ ಅದ್ ಕೇಳಿಕಂಡದೆ. ಆಗ 'ನೋಡು ತಂಗೆ ನಿಂಗೆ ಒಂದೇ ಮಂಜ ಒಳದ್, ನಂಗೆ ಏಳ್ ಮಕ್ಕಳಿದ್ದ್ ಅವರ ಬಲಿ ಕೊಡದೆ, ನಿಂಗೆ ಇರುವ ಒಂದು ಮಂಜನ ಬಲಿಕೊಟ್ಟರೆ, ನಿನ್ನ ಗಂಡ ಏನ್ ಹೇಳ್ದು? ನಿನ್ನ ಊರ್‌ನವು ಏನ್ ಹೇಳ್ವೊ? ಆಗ ನಾ ತುಂಬ ಕೆಟ್ಟಂವಂತ ನಿನ್ನ ಊರ್‌ನವು ತಿಳ್ಕೊಂಬೊ. ನಿನ್ನ ಅತ್ತೆ ಮಾವ ನನ್ನ ಅಳಿಯಂತ ಹೇಳಿ ಕರಿಯಕೆನೂ ಬೇಜಾರ ಮಾಡಿಕೊಂಬೊ. ಅದರಂದಾಗಿ ನಿನ್ನ ಮಂಜನ ನೀ ಬಲಿಕೊಡ್ದು ಬೇಡಾ'ಂತ ಹೇಳ್ದೆ. ಈ ಮಂಜ ನನ್ನ್. ನಾ ಹೋಕೆ ಮುಂದೆ ಅತ್ತೆ ಮಾವಂಗೆ ಈ ಮಂಜ ಇತ್ಲೆ. ಅದರಂದಾಗಿ ಈ ಮಂಜನ ನಾ ಊರ್‌ಗಾಗಿ ಬಲಿ ಕೊಡಿಕೆ ತಯಾರೊಳೆಂತ ಹೇಳಿ ನಾ ಆಣೆ ಭಾಷೆಕಟ್ಟನೆ. ಇದಕ್ಕೆ ನೀವು ಒಪ್ಪದಿದ್ದರೆ ನಮ್ಮ ಕುಲದೇವರ ಆಣೆ ಉಟ್ಟು'ಂತ ಹೇಳಿ ಇದ್ ಮುಂದೆ ನಡ್ದದೆ.

ಇವಂಗೆ 'ಅತ್ತ ದರಿ ಇತ್ತ ಹುಲಿ'ಂತ ಹೇಳಿ ಆದೆ. ಹೇಳ್ದ ಮಾತ್ಗೆ ಒಪ್ಪಿಕಂಡ್ 'ತಂಗೆ ನಿನ್ನ ಮಾತಿಗೆ ನಾ ಒಪ್ಪಿದೆ. ನಿಂಗೆ ಮನಸ್ಸಿದ್ದರೆ ನಾ ಬಲಿಕೊಡಿಕೆ ತಯಾರೊಳೆ'ಂತ ಹೇಳ್ದೆ. ಊರ, ಪರವೂರ ಜನ ಎಲ್ಲ ಸೇರ್‌ಸಿಕಂಡ್ ಒಂದು ದಿನ ಗೊತ್ತು ಮಾಡ್ವೆ. ದಿನ ಗೊತ್ತು ಮಾಡ್ದಂದ್ ಇವು ಹಳ್ಳಕೆ ತಕಂಡ್ ಹೋದವೆ. ಆ ಹಳ್ಳಲಿ ದೋಣಿನ ಮುಂದೆ ಇಸಿದ್, ಕೇಳಿದಂತ ಬಲಿಗೆ ಒಂದ್ ಕಟುಕನ ತಂದ್ ತಲೆಕಡಿಯಕೆ ತಯಾರ್ ಮಾಡ್ವೆ. ತಯಾರ್ ಮಾಡಿ ಇವಂಗೆ ಬೇಕಾದಂತ ಊಟ, ಅನ್ನ ವಸ್ತ್ರ ಎಲ್ಲ ಕೊಟ್ಟ್ ಇವನ ಬಲಿಕೊಡ್ದುಂತ ನಿಗಧಿಯಾದೆ. ಅಲ್ಲಿ ಒಂದು ಜಾತ್ರೆನಷ್ಟೇ ಜನನು ಸೇರ್‌ದ್ವೊ. ಸಾವುನ ಕೈಲೇ ಕೊಡುವ ಕಾಲ ಬಂದುಟುಂತ ಅವ್ಕೆ ಬಾರಿ ಬೇಜಾರನೂ ಆದೆ. ಹೇಳ್ದಂಗೆ ಎಲ್ಲವೂ ಒಂದೆ ಮನಸ್ಸಿಂದ ಆ ತಲೆ ಕಡಿವವಂಗೆ ಬೇಜಾರನೂ ಆದೆ. ಒಂದು ಕೂಸ್‌ನ ಕೊಲ್ಲೊಕಲ್ಲಾಂತ ಆದೆ. ಆದರೆ ಊರ್‌ಗಾಗಿ ಒಂದು ಒಳ್ಳೊ ಕೆಲ್ಸ ಮಾಡ್ದುಂತ ಕೊಲೆಗಟುಕಂಗೆ ಧೈರ್ಯ ಬಂದದೆ. ಅಂವ ತಲೆಕಡಿಯಕೆ ಮುಂದಾದೆ. ತಲೆಕಡಿಯಕೆ ಗಳಿಗೆ ಮುಹೂರ್ತ ಎಲ್ಲ ಬಾತ್. ಏನ್ ತುಂಬ ಹೊತ್ತುಂತ ಕತ್ತಿ ನೇಚಿದೆ.

ನೇಚಿದ ಕತ್ತಿ ಕೆಳಕ್ಕೆ ಬೀಳೊಕುಂತಾದರೆ 'ನಂಗೆ ಬಲಿ ಸಿಕ್ತ್'ಂತ ದೇವ್ರೆ ಬಂದ್ ಇಂವನ ಕತ್ತಿ ತಡ್ದದೆ. ಜನಗಳಿಗೆಲ್ಲ ವಿಶೇಷ ಆದೆ. ಯಾವುದೋ ಒಂದು ರೂಪು ಬಂದ್ ಕತ್ತಿ ಕೆಳಗೆ ಬೀಳದಂಗೆ ನಿಲ್ಸಿದೆ. ಇದ್ ಎಂತಹ ಶಕ್ತಿಂತ ಅದರ ಎಲ್ಲವೂ ಕೊಂಡಾಡ್ವೆ. ಇದರಂದಾಗಿ ಆ ಅರ್ಸರಿಗೂ ಬಾರಿ ಸಂತೋಷ ಆದೆ. ನನ್ನ ಇರುವಂತ ಅಳಿಯನೊಬ್ಬ ಶಾಶ್ವತವಾಗಿ ನಾವ್ಗೆ ಸಿಕ್ಕಿದೆ. ಊರ್ನವ್ಕೂ ತುಂಬ ಉಪಕಾರನೂ ಆದೆಂತ ಹೇಳಿ ಬಾರಿ ಖುಶಿನೂ ಆದೆ. ಅಂದ್‌ಂದ ಆಚೆಕರೆ ಈಚೆಕೆರೆ ಒಂದಾದೆ. ನೆಡುಲಿರುವ ಹಳ್ಳನೂ ಲೆಕ್ಕಕೆ ಇಲ್ಲದಂಗಾದೆ ಅಂದ್‌ಂದ ಇಂದ್ ವರೆಗೆ ಆ ಹಳ್ಳಲಿ ಯಾವುದೇ ಒಂದ್ ತೊಂದರೆ ಆಗಲಿ, ದೋಣಿ ಮೊಗ್ಚಿದಾಗಲಿ ಏನೂ ಬಾತ್ಲೆ. ಇವು ನೆನ್ಸಿದಾಂಗೆ ಆ ಕಾಡ್ಲಿ ಇದ್ದ ದೆವ್ವಕೆ ಊರ್ಲಿ ಒಂದು ನೆಲೆ ಮಾಡ್ಯೊಳ. ಆಲ್ಲಿ ವರ್ಷಕ್ಕೊಮ್ಮೆ ಬಾರಿ ಜಾತ್ರೆ ಆದೆಗಡ. ಬಾರಿ ವಿಶೇಷಂತ ಅಲ್ಲಿ ಜನಗಳೂ ಸೇರ್ವೆ ಗಡ. ಆ ಊರಿಗೆ ನಾವೂ ಪೋಯ.(ಅಳಿಯ ಸಂತಾನದ ಭೂತಾಲ ಪಾಂಡ್ಯನ ಕಥೆಯನ್ನು ಹೋಲುತ್ತದೆ) [ಕತಾ ನಿರೂಪಕ:ಪುರುಷೋತ್ತಮ ಕೆ.ಎಸ್.ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 71. ಅರುಂದತಿ ಕತೆ

ಒಂದು ರಾಜ್ಯಲಿ ಒಂದು ಅರ್ಸ. ಆ ಅರ್ಸ ಎಷ್ಟ್ ದಾನ ಧರ್ಮ ಮಾಡ್ರು ಒಂದೂ ಮಕ್ಕ ಇಲ್ಲೆ. 'ಇನ್ನ್ ನಂಗೆ ಮಕ್ಕ ಇಲ್ಲೆ, ಮಕ್ಕ ಇಲ್ಲೆ'ಂತ ಹೇಳ್ತಾ ಇತ್ತ್. ಅಷ್ಟೊತ್ತಿಗೆ ಒಬ್ಬ ಪಂಡಿತ ಬಾತ್. ಅಂವ ಬಂದ್ ಕೇಳ್ತ್. ನೀವು ಯಾಕೆ ಹೀಂಗೆ ಕುದ್ದರಿ? ಮೂಡನ ಬಾಗಿಲ್ ಅಡ್ಡಮಾಡಿ ಯಾಕೆ ಕುದ್ದರಿ? ದಾನಧರ್ಮ ಬುಟ್ಟರಿ ಯಾಕೆ'ಂತ ಕೇಳ್ತ್. 'ನಾವು ಎಷ್ಟ್ ದಾನ ಧರ್ಮ ಮಾಡ್ರೂ ಯಾವ ಪೂಜೆ ಮಾಡ್ರೂ ನಾವ್ಗೆ ಮಕ್ಕ ಇಲ್ಲೆ. ಪುತ್ರ ಪುಣ್ಯ ಸಿಗದ ಮೇಲೆ ನಾವ್ಗೆ ದಾನ ಧರ್ಮಬೇಡ'ಂತ ಹೇಳ್ತ್. ಇಲ್ಲೆ ನೀವ್ಗೆ ಪುತ್ರ ಸಂತತಿ ಉಟ್ಟು ನಂಗೆ ದಾನ ಧರ್ಮನ ಕೊಡಿ'ಂತ. ಹಾಂಗೆ ಮತ್ತೆ ಅವಂಗೆ ಹಾಲ್ ಕೊಟ್ಟೊ, ಬೆಂಡ ಬಾಳೆಹಣ್ಣ್ ಎಲ್ಲ ಕೊಟ್ಟೊ. ಕೊಟ್ಟ ನಂತರ ಅಂವ ಒಂದು ಮಂತ್ರಾಕ್ಷಿ ಕೊಟ್ಟತ್. ಇದರ್ಲಿ ನೀವ್ಗೆ ಪುತ್ರ ಸಂತತಿ ಆದೆ. ಅದಲ್ಲಿ ಅವ್ಕೆ ಒಂದ್ ಗಂಡ್‌ಕೂಸು ಹುಟ್ಟಿತ್. ಆ ಗಂಡ್ ಕೂಸುಗೆ ಕೆಲವು ಸಮಯ ಕಳ್ದಾಕನ ಅಂವ ಜಾತಕ ಎಲ್ಲ ಮಾಡಿ ನೋಡಿ ಹೇಳ್ತ್. 'ಈ ಕೂಸು ಯಾವ ರೂಪದಲಾದರೂ ಕಳ್ಳಂತ ಆದೆ'ಂತ 'ಆತಲ್ಲ ನಾವ್ಗೆ ಒಂದು ಸಂತೋಷ ಇದ್ದರೂ ಒಂದು ಕಳ್ಳಂತ ಹೆಸರಾತ್ ಆಗಲಿ'ಂತ ಇದ್ದೊ.

ಮಂಜ ದೊಡ್ಡಿತಾತ್. ಮೊದ್ವೆ ಆವ ಪ್ರಾಯ ಬಾತ್. ಎಲ್ಲಿ ಹೋಗಿ ಅವಂಗೆ ಹೆಣ್ಣು ಹುಡ್ಕಿರೂ ಹೆಣ್ಣು ಒಂದೋ ಅವಂಗೆ ಒಪ್ಪುದ್ಲೆ. ಇಲ್ಲರೆ ಅದ್ಕೆ ಒಪ್ಪಿಗೆ ಇಲ್ಲೆ. ಒಟ್ಪಾರೆ ಯಾವ ಹೆಣ್ಣ ಆದ್ಲೆ ಅವಂಗೆ. ಹಿಂಗೆ ಆಗಿ ಕೆಲವು ಸಮಯ ಕಳ್ತ್. ಅಷ್ಟಾಕನ ಅದೇ ಜ್ಯೋತಿಷಿ ಬಾತ್ ಬಂದ್ ಹೇಳ್ತ್ 'ಯಾಕೆ ಮೊದ್ವೆ ಮಾಡ್ತ್‌ಲೆ'ಂತ? 'ಅವಂಗೆ ಎಲ್ಲಿ ಹುಡುಕಿಯೂ ಗೂಡೆ ಆದ್ಲೆ

ಯಾವ ಗೂಡೆನೂ ಅಂವನ ಒಪ್ಪುದ್ಲೆ. ಅಲ್ಲದೆ ನಾವ್ಗೂ ಒಪ್ಪಿಗೆ ಆದ್ಲೆ. ಯಾವ ರೂಪಲೂ ಲಗ್ನ ಆತ್ಲೆ'.

ಇನ್ನೊಂದು ರಾಜ್ಯಲಿ ಒಂದು ಅರ್ಸಂಗೆ ಒಂದು ಹೆಣ್ಣ್ ಕೂಸು ಹುಟ್ಟಿತ್. ಅದ್ಕೆ ಅರುಂದತಿಂತ ಹೆಸ್ರ್ ಇಸ್ಯೊಳೊ. ಆ ಕೂಸುನ ಜಾತಕ ನೋಡ್ರೆ ಯಾವ ರೂಪಲಾದ್ರು ಅದರ ಗಂಡ ಕಳ್ಳ. ಹಾಂಗೆ ಅವುಕ್ಕೂ ಒಂದು ಮಗು ಹುಟ್ಟಿದ್ 'ನನ್ನ ಅಳಿಯ ಕಳ್ಳ'ಂತಾಂದೆ. 'ನನ್ನ ಮಗಳ ಗಂಡ ಕಳ್ಳಂತ ಆದೆ'ಂತ ಬೇಸರಲಿದ್ದೊ. ಆ ಬೇಸರ ಬೇಡ ನೀವ್ಗೆ. ನೀವು ಸುಖಲಿ ಇರಿ. ಕಡೆಗೆ ಜೋತಿಷಿ ಹೇಳ್ದೊ, 'ಇಂತಲ್ಲಿ ಒಂದು ಹೆಣ್ಣು ಕೂಸು ಉಟ್ಟು. ಅದರ ಹೋಗಿ ನೋಡಿ'. ಅದರ ನೋಡ್ಕನ ಅವಂಗೂ ಆದುಂತ ಆತ್. ನೆಂಟ್ರ್ ಎಲ್ಲವ್ಕೂ ಒಪ್ಪಿಗೆ ಆತ್. ಮೊದ್ವೆ ಆತ್. ನೆಂಟ್ರ್ ಎಲ್ಲ ಬಂದೊ. ಒಂದು ದಿನ ಇಂವ ಬಾತ್, ಬಂದ್ ಇದರೊಟ್ಟಿಗೆ ಒಂದು ಪುಸ್ತಕ ಕೊಟ್ಟತ್. ಅದರ ಅಪ್ಪನ ಮನೆಲಿ ಕೊಟ್ಟದ್ ಅಂವ ಹೋಗಿ ಹೇಳ್ತ್. ಇದ್ ನೋಡ್ತ್. ಸೀದ ಗಂಡನ ಮನೆಗೆ ಬಾತ್ ಅಲ್ಲಿ ಮಾವನೊಟ್ಟಿಗೆ ಹೇಳ್ತ್. 'ಮಾವ ನಾವ್ಗೆ ಒಂದ್ ಚೆಂಬು, ಒಂದ್ ಕೊಡ್ಪಾನ, ಒಂದ್ ಹಸ್‌ಕರ, ಒಂದ್ ಜನ ಬೇಕು'ಂತ ಹೇಳ್ತ್. ಅದರೆಲ್ಲ ಕೊಟ್ಟೊ, ಕೊಟ್ಟಾತ್. ಜನ ಹಸ್‌ನ ಕರ್‌ನ ಹೊಡ್ಕಂಡ್ ಹೋದೊ. ಹೋದೊ ಹಿಂಗೆ ಬಾರೀ ದೊಡ್ಡ ಒಂದ್ ಕಾಡಿಗೆ ಹೋದೊ. ಕತ್ತಲೆ ಆತ್. 'ನೀ ಇನ್ನ್ ಮನೆಗೆ ಹೋಗ್'ಂತ ಹೇಳಿ ಅವನ ಕಳ್ಸಿದೊ. ಇವು ಮುಂದೆ ಹೋಗಿ ಕತ್ತಲೆ ಆಕನ ಹಸ್‌ನ ಕಟ್ಟಿದೊ. ಕರ್‌ಬುಟ್ಟ್ ಹಾಲ್ ಕರ್ದೊ. ಸೊಪ್ಪುನ ಬಿಡಾರ ಮಾಡಿ ಮಲ್ಗಿದೊ.

ಮಾರನೆ ದಿನ ಬೊಳ್ಪಿಗೆ ಎದ್ದತ್. ಇದ್ ಈ ಕತೆ ಓದಿಕೆ ಸುರುಮಾಡ್ತ್. ಅಂವ ಎದ್ದ್ ಹೋತ್. ಇಂವ ಕತ್ತಾಲೆ ಮುಟ್ಟ ಕಾಡ್‌ಲಿ ಎಲ್ಲ ಹೋತ್. ಕತ್ತಲೆ ಆಕನ ಬಾತ್. ಬಾಕನ ಇದ್ ಕರ್‌ಬುಟ್ಟ್ ಹಾಲ್ ಇಸಿಕನ್ತ್. ಅವಂಗೂ ಕೊಟ್ಟತ್. ಇದೂ ಕುಡ್ತ್ ಮಲಗಿದೊ. ಮಲಗಿ ಆಕನ ಈ ಬೊಳ್ಪಿಂದ ಕತ್ತಲೆ ವರೆಗೆ ಓದಿದ ಕತೆನ ಎಲ್ಲಾ ಹೇಳ್ತ್ ಇದ್. 'ಇನ್ನ್ ಸಾಕ್ ಇಂದ್ ನಿದ್ದೆ ಬಂದದೆ, ಇನ್ನ್ ಮಲಗೊಣ'ಂತ ಆತ್. ನಿದ್ದೆ ಮಾಡ್ದೊ. ಅದೇ ರೀತಿ ಒಂದು ವರ್ಷ ದುಡ್ದೊ. ದಿನಂಪ್ರತಿ ಇದ್ ಓದುದು. ಕತ್ತಲೆ ಆಕನ ಕತೆ ಹೇಳ್ದು. ಒಂದು ವರ್ಷ ಆತ್. ಅಂದಿನ ದಿನಲಿ ಇಂವ ಕದಿಯೊಕು. ಆ ದಿನ ಅಂವ ಕದಿಯದೆ ಬುಡಿಕೆ ಇಲ್ಲೆ. ಅಂದ್‌ಗೆ ಕತೆನೂ ಮುಗ್ತ್. ಕತೆ ಮುಗ್ಸಿದ್ ಮಲಗಿದೊ. ಇದ್ಕೆ ಒಳ್ಳೊ ನಿದ್ದೆ ಆಕನ ಇಂವ ಎದ್ದ್ ಹೋತ್. ಬಾರಿ ದೊಡ್ಡ ಒಂದು ಅರ್ಸನ ಮನೆಗೆ ಕದಿಯಕೆ ಹೋತ್. ಹೋಕನ ಆನೆಗಳ ಬಿಚ್ಚಿತ್. ಕಥೆ ಹೇಳ್ದರಲ್ಲಿ ದೋಷ ಉಟ್ಟು, ಈ ದೋಷ ನೆನಪಾತ್ ಕುದುರೆ ಬಿಚ್ಚಿತ್ ಬಾತ್, ಸರ್ವ ಸ್ವತ್ತುಗಳನ್ನೂ ಬಿಚ್ಚಿತ್. ಬಿಚ್ಚಿ ಆಕನ ಇದ್ ನೆನಪಾತ್. ಇದರೆಲ್ಲ ಅಲ್ಲೆ ಬುಟ್ಟ್ ಹೋತ್. ಮನೆಗೆ ಹೋತ್. 'ಮೆಟ್ಟ್‌ಕಲ್ಲ್' ಎಲ್ಕಿಸಿತ್. ಮನೆ 'ಕುಬಾಲ್' ಕಡ್ತ್. 'ಗಳ' ತೆಗ್ತ್. ಪೆಟ್ಟಿಗೆಂದ ಚಿನ್ನಾಭರಣ ತೆಗ್ತ್. ಒಲೆಂದ ಒಲೆಕಲ್ಲ್ ತೆಗ್ತ್. ತನ್ಯಾನ ಮಡ್ಕೆ, ಗಂಜಿ ಮಡ್ಕೆ, ಕೂಸುನ ತೊಟ್ಟಿಲ್, ಕೂಸು ಎಲ್ಲಾ

ತೆಗ್ತ್, ಯಾವುದೂ ತೆಗ್ದರು ಇದರ್ಲಿ ದೋಷ ಇಲ್ಲದ ಸೊತ್ತು ಇಲ್ಲೆ. ಎಲ್ಲ ಆಗಿ ಆಗಿ ಕೋಳಿ ಕೂಂಗಿತ್. ಇನ್ನ್ ಎಂತಾದರೂ ಅವಂಗೆ ಮನಸ್ಸು ಬಾದ್ಲೆ. ಒಂದು ತಕಂಡ್ ಹೋಗದೆ ಮನಸ್ಸು ಬಾದ್ಲೆ. ಅಂವಗೆ ಮುಟ್ಟುವ ಈ ದೋಷದ ನೆನಪು ಒಟ್ಟಿಗೆ ಆದೆ. ಇನ್ನ್ ಏನು ಮಾಡ್ದುಂತ ತಿರ್ಗಿ ತಿರ್ಗಿ ನೋಡಿ ಆಕನ ಕೋಳಿ ಕೂಂಗಿತ್. ಕೋಳಿ ಕೂಂಗಿಕನ ಒಂದು ದಿನಕ್ಕೆ ಮುಂದೆ ಬತ್ತ ಹೊಡ್ಕಿದ್, ಯಾಕೂ ಬೇಡದ ದಡ್ಡ್‌ಂತ ತುಂಬ್ಸಿ ಇಸಿಯೊಳ. ಅದರ ತಕಂಡೋಕೆ ಹೋಗಿ ಇದರ ನೋಡ್ತ್. ಇದರ ನೋಡ್ರೆ ಎಲ್ಲಾ ದೋಷ ಉಟ್ಟು. ಇದೊಂದು ದೋಷ ಉಟ್ಟು. ಇದೊಂದು ದೋಷ ಹೇಳ್ತಿಲ್ಲೆ. ಅದರ ತೆಗ್ದ್ ಬೆನ್ನಿಗೆ ಹಾಕನ್ತ್. ಸೀದ ಹೋತ್.

ಅಪ್ಪೊತ್ತಿಗೆ ಇಲ್ಲೆಲ್ಲ ಎದ್ದೊ. ಸೀದ ಹೋತ್. ಹೋಗಿ ಈ ಮೂಟೆನ ಅತ್ತ ಹೆರ್ಕಿ ಇಟ್ಟುತ್ ಅಂವ ಅಲ್ಲಿ ನಿಲ್ಗಿತ್. ಇದ್ ಬಟ್ಟೆ ಗೋಣಿಲಿ ಅಲ್ಲಿವರೆಗೂ ಹರಂಡಿಕಂಡ್ ಹೋಗುಟು. ಎಲ್ಲ ಎದ್ದ್ ನೋಡ್ರೆ ಒಲೆ ಕಿಚ್ಚಿ ಮಾಡಿಕೆ ಬೊತ್ತ್ ಯಾವೊಂದು ಮಾಡಿಕೆ ಬೊತ್ತ್. ಎಲ್ಲ ಅಡಂಗಿ ಇಸಿಕಂಡುಟು. ಮನೆ ಕಡ್ದೊಳೊ ಬಾರೀ ದೊಡ್ಡ ಕಳ್ಳರ್. ಎಂತದ್ ತಕಂಡೋಗೊಳೊ ಅರ್ಸಂದ ನೋಡಿಂತ ಆತ್. ಯಾವುದೂ ತಕಂಡ್ ಹೋತ್ಲೆ. ಅವು ಮುಟ್ಟದ ಸ್ವತ್ತು ಒಂದೂ ಇಲ್ಲೆ. ಎಲ್ಲಾ ಮುಟ್ಪ್ಯೋಳ ಎಲ್ಲಾ ಬಿಚ್ಪ್ಯೋಳ. ಎಲ್ಲಾ ಮಾಡ್ಯೋಳ. ಪ್ರಾಣಿಗಳ ಪೂರ ಬುಟ್ಟು ಹಾಕೋಳ. ಅಂದ್ರೆ ಅವು ಎತ್ತಣವು? ಏನ್? ಎಂತಂತ ನೋಡೋಕು. ಅವು ನಾವು ಬೇಡದ ದಡ್ಡ್ ಹೊಡ್ಕಿ ಇಸಿದ್ದೊ. ಅದರ ತಕಂಡೋಗಿ ಇಲ್ಲಿ ಹರಂಡಿಸಿಯೊಳ. ಅಂದರೆ ಹೋಗಿಂತ ಹೋದೊ. ಬಾರಿ ದೂರ ಕಾಡ್, ಅಂವ ತಕಂಡೋಕನ ಅಲ್ಲಿಗೆ ಮುಟ್ಟ ಇದ್ ಹರಂಡಿಕಂಡ್ ಹೋಗುಟು. ಅದೇ ದಾರಿಲಿ ಹೋಕುನ ಇದ್ ಎದ್ದ್ ಕುದ್ದುಟು. ಅಂವ ಮಲ್ಗಿ ನಿಲ್ಗಿಟು. ಇತ್ತನ ಕತೆಯೇ ಇಲ್ಲೆ.

ಅಪ್ಪೊತ್ತಿಗೆ ಇದರ ಜೋರು ಮಾಡ್ದೊ. 'ಇಲ್ಲೆಪ್ಪ ನಮ್ಮ ಜೋರು ಮಾಡ್ಬೇಡಿ'ಂತ್ ಹೇಳ್ತ್. ಬಂದ್ ಅರ್ಸನೊಟ್ಟಿಗೆ ಹೇಳ್ದೊ. 'ಅಲ್ಲಿ ಕಳ್ಳರ್ ಮನೆ ಮಾಡ್ಯೊಳ ಹೆಂಗ್ಸ್‌ನೂ ಉಟ್ಟು'ಂತ್. 'ಅಂವ ಮಾತ್ರ ಹೋಗಿ ಬಿದ್ದ್ ನಿಲ್ಗಿಟು ತಕಂಡೋದ ಮೂಟೆನ ಹೆರ್ಕಿ ಇಟ್ಟುಟು. ಅಂದರೆ ಹೋಗಿ ಬಾಕೆ ಹೇಳ್ಕನ ಅವನ ಎದ್ರಿಸಿತ್. ಇದ್ ಒಟ್ಟಿಗೆ ಎದ್ದ್‌ಕಂಡ್ ಬಾತ್. ಬಂದಾಕನ ಯಾರ್ ? ಏನ್ ? ವಿಚಾರ ಮಾಡಿಕೆ, ಜೋರು ಮಾಡಿಕೆ ಸಾಧ್ಯ ಇಲ್ಲೆ. ಇವರ ನೋಡ್ಕನ ಇವು ಕಳ್ಳರಲ್ಲ. 'ನೀವು ಅರ್ಸರ ಮಕ್ಕ. ನೀವು ಯಾಕೆ ಬಂದದ್? ನೀವ್ಗೆ ಏನ್ ಆಕ್ಕು?' ಅಂತ ವಿಚಾರ್ಸಿತ್. ವಿಚಾರ್ಸಿದಾಕನ ಈ ಅರ್ಸನ ಅಜ್ಜನಅಜ್ಜನ ಕಾಲದ ನೆಂಟ್ರ್ ಇವು. ಈ ಗೂಡೆ ಅವನ ಹೆಣ್ಣ್‌ನ ಅಜ್ಜನಅಜ್ಜನ ಕಾಲದ್. ಇವನ ಕಡೆ ನೆಂಟ್ರ್‌ಂತ ಮತ್ತೆ ಅವಕೆ ಸಮ್ರಾಜನ ಮಾಡ್ದೊ. ಮಾಡಿಸಿಕಂಡ್ ಬಂದ್ ಊಟ ಮಾಡಿ 'ನಾವ್ಗೆ ಯಾವುದೂ ಬೇಡ. ನಾವು ಹಾಲ್ ಕುಡ್ದ್ ಒಂದು ವರ್ಷಂದ ಒಳೊ. ನಾವು ಇಂದ್ ಮಾತ್ರ ಹೋದವೆ. ಮನೆಗೆ ಹೋದವೆ'ಂತ ಹೇಳ್ದೊ. ಹಾಂಗರೆ ನಿನ್ನ ಹೆಸ್ರಂಗೆ? ನನ್ನ ಹೆಸ್ರ್ ಅರುಂದತಿಂತ (ಅದರ ಅಪ್ಪ ಅವ್ವನ ಹೆಸರ

ಮರ್ರೊಗುಟು ನಂಗೆ)ಹೇಳ್ತ್. ಬೇಕಾದಷ್ಟು ದ್ರವ್ಯ, ಬಟ್ಟೆ ಬರೆ ತಂದೊ. 'ಅದು ಒಂದೂ ಬೇಡನಾವ್ಗೆ. ಇದ್ ಒಂದು ಮಾತ್‌ನ ತೀರ್ಸಿಕಾಗಿ ನಾವು ಬಂದದ್'ಂತ ಹೇಳ್ತ್. ಈ ದೊಡ್ಡ ಹಳೆ ವೃತಂತ ಹೇಳಿ ಅವ್ಕೆ ಒಂದೊಂದು ರತ್ನದ ಉಂಗುರ ಕೊಟ್ಟೊ. ಮನೆಗೆ ಜನ ಕಳ್ಸಿ ಅದರ ಕರ್ಕಂಡೋಗಿ ಅಲ್ಲಿ ಮಾಡಿದ್ ಬಂದೊ ಗಡ.[ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]

## 72.ಪುನರ್ಜನ್ಮದ ಕತೆ

ಒಂದು ತುಂಬಾ ಕಲ್ತ ಜೋತಿಷ್ಯ. ಯಾರೇ ಪಂಚಾಂಗ ನೋಡಲಿ ಏನೇ ಮಾಡಲಿ ಬಾರಿ ಜೋತಿಷ್ಯ. ಅಂವಂದೆ ಅಂವಂಗೆ ಗೊತ್ತುಟು. ಎದ್ದ್‌ಕಂಡ್ ಬೇಕಾದಷ್ಟ್ ಪಂಚಾಂಗ ನೋಡ್ಸಿತ್‌ಗಡ. ಬೇಕಾದಷ್ಟು ಎಷ್ಟೆಷ್ಟೋ ಬಂದವ್ಕೆ ಎಲ್ಲವ್ಕೂ ಒಳ್ಳೊದೆ ಹೇಳ್ದು ಗಡ. ಲಾಸ್ಟಿಗೆ ಆಕನ ಇವಂದ್ ಏನಾಗುಟುಂತ ಹೇಳ್ರೆ ಅಂವ ಸಾಯುವ ದಿನ ಅವಂಗೆ ಗೊತ್ತಾತ್. ಆಗ 'ಮಂಜ ಇಂತಾ ದಿನನಾ ಸತ್ತನೇ. ಆ ಸತ್ತ್‌ದ ಇಂತಿಷ್ಟನೆ ದಿನ ನಾ ಹಂದಿಯಾಗಿ ಬನ್ನೆ. ನನ್ನ ಗುಂಡ್ ಹೊಡ್ಡ್ ಕೊಲ್ಲೊಕು'. 'ಹೌದ?' ಹೌದು... ಆತ್ ಇಂವ ಸತ್ತತ್.

ಆ ಮೇಲೆ ಸ್ವಲ್ಪ ಸಮಯ ಕಳಿಯಕನ ಇದ್ ಬಾತ್. ಹಂದಿನ ಮರಿಗಳ ಕರ್ಕಂಡ್. ಅಂದರೆ ಹೆಣ್ಣ್ ಹಂದಿಯಾಗಿ. ಮರಿಗಳ ಕರ್ಕಂಡ್ ಬಾತ್. ಮಾತುಟ್ಟಲ್ಲೆ ಬೆಡಿ ತಕಂಡ್ ಹೋತ್ ಗುಂಡು ಹೊಡಿಯಕೆ. ಮೊರಿಗಳ ಕರ್ಕಂಡ್ ಬಾಕನ ಅಪ್ಪ ಹೇಳ್ತ್. ಹೋಕನ ಹಂದಿ ಏನ್ ಮಾಡ್ತ್. 'ಛೆ! ಇಂದ್ ಹೊಡಿಬೇಡ'. 'ಯಾಕೆ?!' ನೀವು ಹೇಳ್ದ್ ಅಂದ್ ಹೇಳ್ದಂತೆ. 'ಇಂದಿಗೆ ಇದೇ ಸುಖ. ಅಂದಿಗೆ ಅದೇ ಸುಖ. ಗುಂಡು ಹೊಡಿಬೇಡ'. ಮಂಜ ಬೆಡಿ ತಕಂಡೋಗಿ ಒಳಗೆ ಇಸಿತ್. ಇಲ್ಲಿಗೆ ಮುಗ್ತ್. [ಕತಾ ನಿರೂಪಕ:ಲೋಕಯ್ಯಗೌಡ, ನೆಡ್ಚಿಲ್; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 73.ಬೊಳ್ಳಿಲ್ಲದೆ ಮಾಲೆ ಮಾಡ್ದ ಕತೆ

ಇದ್ ಮುಂದೆ ಆದ ಕಥೆ. ಮೊದ್ವೆಗೆ ನಿಶ್ಚಯ ಆತ್. ಮೊದ್ವೆ ಆತ್. ವೊದ್ವೆ ಆಕ್ಕೆ ಆಕನ ಡಿಬ್ಬಣ ಹೊರ್‍ರೊ. ಡಿಬ್ಬಣ ಹೊರ್ಟ್ ಎಲ್ಲ ಪ್ಯಾಂಟ್, ವೇಷ್ಟಿ, ಎಂಟ್ ಮೊಳದ ಕಚ್ಚೆ ಎಲ್ಲ ಹಾಕಿ ಹೊರ್‍ಟೊ. ಆಗ ಒಂದು ಬರೆ ಅಜ್ಜಂಗೆ ಅಂತೂ ಮೊದ್ವೆಗೆ ಹೋಕುಂತ ತುಂಬ ಆಶೆ ಇತ್ತ್. ಇವು ಹೋಕೆ ಬುಡ್ದುಲೆ. ಇವರ ದಿಬ್ಬಣವೂ ಹೊರ್ಟ್‌ಕಂಡ್ ಹಿಂದೆಂದ ಹೋತ್. ಅಲ್ಲಿಂದ ಅವು ಅಜ್ಜಂಗೆ ಬರ್ಬೇಡಿ ಬರ್ಬೇಡಿಂತ ಕಲ್ಲು ಹೊಡಿದು. 'ಏ ಬನ್ನೆ ಮಾರಾಯ ಗಂಜಿ ಅವರ್ದಲ್ಲ. ನೀ ಹಂಞ ಮುಂದೆ ಹತ್ತ್. ನಾ ಹಿಂದೆಂದಲೇ ಬನ್ನೆ'ಂತ. 'ಉಮ್ಮ ಅದರ ಸುಡಲಿ'. ಅವು ಸೀದಾ ಹೋದೊ. ಹೋಗಿ ಅಲ್ಲಿಗೆ ಎತ್ತಿದೊ. ಮೊಂದ್ರಿ ಹಾಕಿದೊ. ಕುಡಿಯಕೆಲ್ಲ ಕೊಟ್ಟೊ.

ಅಜ್ಜ ಒಂದು ಕರೆಲಿ ಉಟ್ಟು. ಅಜ್ಜಂಗೆ ಒಟ್ಟಿಗೆ ಕುಡಿಯಕೆ ಕೊಡದೆ ಆದೆನಾ? ಅದ್ ಬೇಡವರ ಅಜ್ಜನಾಂಗೆ ಇತ್ತ್. ಕೊಟ್ಟಾದ ಮೇಲೆ ನೂರು ಕುಂಬಳ ಕಾಯಿ, ಒಂದು ಚೀಲ ಉಪ್ಪು ತಂದಿಸಿದೆ. ಇವು ನೂರಂದ ಹೆಚ್ಚ್ ಜನ ಹೋಗೊಲೊ. ಇದರ ತಿನೊಕುಂತ. ಇದ್ದೇನಾಕು. 'ಇದರ ತಿಂಬಕೆ ಎಂತದ್ ಹನ್ಯನಿಯೇ ತಿನ್ನಿ ಮಕ್ಕಳೆ ಬೊಳ್ಳುಮುಟ್ಟ. ಇದೊಂದು ಅಜ್ಜ ಹನಿಯೇ ತಿಂದ್. ಉಪ್ಪುಗೆ ನೀರ್ ಹೊಯ್ದೊ. ಒಂದು ಅಂಡೆ ತನ್ನಿ. ತಂದೊ ಕುಂಬಳ ಕಾಯಿನೆಲ್ಲ ಹೆರ್ಮನೆ ತಂದ್ ಹೆರ್ದಾಕಿದೊ. ಉಪ್ಪು ಅದ್ಕೆ ಸೊರ್ಗಿದೊ. ಉಪ್ಪು ಇಡೀ ಆತಲ್ಲೆ. ಹನಿಹನಿಯ್ಯೇ ಕುಡಿನಿ ಮಕ್ಕಳೆಂತ ಹೇಳ್ದೊ. ಇದ್ ಕುಡ್ದುಕುಡ್ದ್ ಇದ್ ಮುಗ್ತ್. ಲಾಯ್ಕಾತ್ ಅಜ್ಜನ ಕೆನಿ ಹಿಡ್ಸಿತಲ್ಲೆ.

ಏನ್ ಮಾಡ್ದುಂತೇಲಿ ಬೊಳ್ಳಾಕನ ದಾರೆಗೆ ಆಕನ ಇವು ಹೇಳ್ದೊ. ಛೆ! ನಂಗೆ ಉಮಿನ ಇಷ್ಟೇ ತಂದ್ ಕೊಟ್ಟೊ. 'ಉಮಿನ ಬೊಳ್ಳಿಲ್ಲದೆ ಮಾಲೆ ಮಾಡೊಕು'ಂತ. ಬೊಳ್ಳಿಲ್ಲದೆ ಮಾಲೆ ಮಾಡಿಕೆ ಸಾಧ್ಯ ಉಟ್ಟ. ಇದ್ಕೆ ಬೊಳ್ಳಿಲ್ಲದೆ ಮಾಲೆ ಮಾಡ್ದು ಹೇಂಗೆ? ನಿಲ್ಲಿ ಮಕ್ಕಳೆ ಬೊಳ್ಳಾಗಳಿ ಆಗ ಬಳೆಂಗರ ಬಳೆ ಕಟ್ಟಿದೆ. ನೋಡಿ ಉಮಿತಕನಿ ಮಕ್ಕಳೆ ಎಲ್ಲ ತಕಂಡೋಗಿ. ಎಲ್ಲಾ ಮಕ್ಕ ಒಂದೊಂದು ಪುಂಡಿ ಎಲ್ಲ ಬಲೆಗೆ ಹೊಡಿನಿ. ಬಲೆ ಕಟ್ಟಿದ್ದೊ ಹಾರ್ದೊ ಎಲ್ಲಾ ಒಬ್ಬೊಬ್ಬ ಎಲ್ಲಾ ಮಾಲೆ ಮಾಡಿಕಂಡ್ ಬಂದೊ. ಮಾಡ್ಯತಾಲ್ಲೆ. ಸೋತೊ ಅಲ್ಲೆಂತ ಹೇಳ್ತ್. ನಾವ್ಗೆ ಎಂತಾದರು ಕೈಕಾಲ್ ತೊಳ್ದ್ ಕುಡಿಯಕೆ ಬೇಕ್. ನಾವ್ಗೆ ಬಣಲೆಲಿ ನೀರ್ ಹೊಯ್ದ್ ತಂದ್ ಕೊಡೊ್ಂತ. ಇವ್ಕೆ ಬಣಲೆಲಿ ನೀರ್ ತಾಕ್ಕೆ ಆದೆಂತ ಇಲ್ಲೆ. ಇವು ನೀರ್ ತೆಗಿದು. ಹಕ್ಕಲೆ ಬಾಕನ ನೀರ್ ಹೋದು. 'ನಾ ಸೋತೆಂತ ಹೇಳಿ ದಮ್ಮಯ ಹಾಕಿನಿ. ಸೋತಂತ ತಪ್ಪು ಕೊಡೊಕು'. ತಪ್ಪು ಕೊಟ್ಟೊ. ಮತ್ತೆ ಮೊದ್ವೆ ಮಾಡಿ ಹೆಣ್ಣ್‌ನ ಕೊಟ್ಟೊ. [ಕತಾ ನಿರೂಪಕ:ಜಗದೀಶ ಬಿ.ಎಲ್.ಬಂಗಾರಕೋಡಿ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 74.ಮೃಗ ಪಕ್ಷಿಗಳ ಬಾಸೆ ಬಲ್ಲಂವನ ಕತೆ

ಇಂದೆನಿ ಇನ್ನೊಂದು ಕಥೆ ಹೇಳ್ನೆ. ಎಂತ ಗೊತ್ತುಟ್ಟಾ ಒಂದಾನೊಂದು ಊರ್ಲಿ ಒಬ್ಬ ಬಾರೀ ಬುದ್ಧಿವಂತ ಅಂದ್ರೆ ಮೇಧಾವಿ. ಜ್ಞಾನವಂತಂತ ಹೇಳೊಕು. ಅವಂಗೆ ಈ ಮೃಗ ಪಕ್ಷಿಗ ಮಾತಾಡುವಂತ ಭಾಷೆ ಗೊತ್ತುಟು. ಅಂವಗೆ ಒಬ್ಬಂಗೆ ಮಾತ್ರ. ಅಂವಂಗೆ ಹೆಂಗೆ ಅದ್ ಸಿದ್ಧಿ ಆತೊ ಗದ್ದೆ ಗಿದ್ದೆ ತೋಟ ಎಲ್ಲ ಉಟ್ಟು. ಆಳ್ ಕಾಳ್‌ಗ ಒಳೊ. ಹಿಂಗೆ ಒಂದು ದಿನ ಅವನಲ್ಲಿ ಎತ್ತು ಉಟ್ಟು, ಕತ್ತೆ ಉಟ್ಟು, ಕೋಳಿ ಉಟ್ಟು, ನಾಯಿ ಉಟ್ಟುಂತ ಹೇಳ್ದಂಗೆ ಪೂರ ಸಕಲ ಸೌಭಾಗ್ಯ ಅವನಲ್ಲಿ ಉಟ್ಟು. ಇದ್ದ ಒಂದು ಕಾಲಲಿ ಯಾಗಲೂ ಬೇಸಾಯದ ಸಮಯಲಿ ಈ ಆಳ್‌ಗ ಎತ್ತ್ ಹೊಡ್ಕಂಡ್ ಗಡ್ಡೆ ಹೂಡ್ವ ಸಂಪ್ರದಾಯ. ಒಂದು ಕತ್ತೆ ಉಟ್ಟು ಅವನಕ್ಕಲೆ. ಅದ್ ಯಾಗಾರ್ ವಾರಕ್ಕೊಮ್ಮೆ ಸಂತೆಗೆ ಹೋಗಿ ಸಾಮಾನ್ ತಾಕೆ ಇದ್ದದ್. ಆ ಕತ್ತೆ. ಆ ಕತ್ತೆ ಮಾತ್ರ ಒಳ್ಳೊ

ತಿಂದ್ ಸೊಕ್ಕಿಟು. ಅದರ ಕಟ್ಟಿ ಹಾಕುದು ಈ ಹಟ್ಟಿಲಿ ಈ ದನಗಳ ಹಟ್ಟಿಲಿ. ಒಂದು ದಿನ ಈ ಕತ್ತೆ ಏನ್ ಮಾಡ್ತ್. ಅದ್ಕೆ ಈ ಎತ್ತ್‌ಗಳಷ್ಟ್ ಕಷ್ಟ ಬಂದ್ ಗೊತ್ತುಟ. ಅದ್ ಈ ಎತ್ತ್‌ಗಳೊಟ್ಟಿಗೆ ಹೇಳ್ತ್ 'ನೀವ್ಗೆ ಭಾಷೆ ಇಲ್ಲೆ, ಯಾಗ ನೋಡ್ರೂ ಅವು ಹಾಕಕ್ಕಾರೆ ನೀವು ತಿಂಬೊದು. ಇನ್ನ್ ಕುಡಿಯಕೆ ಕೊಡೊಕಾರೆ ಕುಡಿಯೊದು. ನಿಮ್ಮ ಈ ಅಲ್ಪರ ನೋಡಿ ನಿಮ್ಮ ಇಷ್ಟ ಗೆಯ್ಸುದು. ನಾಳೆ ನೀ ಏನ್ ಮಾಡೊಕುಂತ ಹೇಳ್ರೆ ಈ ದನಿನ ಆಳ್‌ಗ ಹುಲ್ಲು ಹಾಕಿರೆ ತಿಂಬಕೆ ಆಗದ್. ನೀರ್ ಕೊಟ್ಟರೆ ಕುಡಿಯಕೆ ಆಗದ್. ಇಷ್ಟ ಮಾಡಿಯಾಕನ ನಿಮ್ಮ ಹೂಡಿಕೆ ಹೊಡ್ಕಂಡ್ ಹೋಕಲ್ಲೆ. ಆಗ ಮತ್ತೆ ನನ್ನಾಂಗೆ ಬಾರಿ ಆರಾಮಲಿ ಇರೊಕು'ಂತ ಈ ಕತ್ತೆ ಹೇಳ್ತ್.

ಅದು ಯಾಗೋಲು ಹೇಳ್ತಾ ಉಟ್ಟುಂತ ಕಂಡದೆ. ಅಂದಿನ ದಿನ ಈ ಕತ್ತೆ ಹೇಳ್ಕನ ಈ ದನಿ ಹಟ್ಟಿಯ ಹಕ್ಕಳೆ ಇತ್ತ್. ಅಂವ ಇದರ ಆಲ್ಸಿ ಕೊಂಡುಟು. 'ಓಹೋ ನಾಳೆ ಬಹುಶ ಒಂದು ಎತ್ತಿಗೆ ಜ್ವರಬಾದು. ಜ್ವರಬಂದರೆ ಕತ್ತೆಗೆ ಒದೆ ಹಾಕುದು ಕಂಡಿತ'ಂತ ಹೇಳಿ ತಿಳ್ಕಂಡ್ ಸುಮ್ಮಂಗೆ ಆಕನ್ತ್. ಮಾರನೆ ದಿನ ಬೆಳಿಗ್ಗೆ ಹೋಗಿ ಕೆಲಸದವು ಹುಲ್ಲು ಹಾಕಿರೆ ಒಂದು ಎತ್ತು ಹುಲ್ಲು ತಿಂಬೊದ್ಲೆ. ಅವು ಬಂದ್ ಹೇಳ್ದೊ. 'ದನಿಗಳೆ ಎತ್ತ್ ಇಂದ್ ಹುಲ್ಲು ತಿಂಬೊದ್ಲೆ. ಹೂಡದೆ ಉಪಾಯ ಇಲ್ಲೆ'ಂತ ಕೆಲಸದವು ಹೇಳ್ದೊ. ಇಂವ ಹೇಳ್ತ್ ಒಂದು ಎತ್ತಲ್ಲ ಹುಲ್ಲು ತಿನದ್ದ್. 'ಹಂಗಾರೆ ಇಂದ್‌ನ ಒಂದು ದಿನದ ಮಟ್ಟಿಗೆ ಆ ಕತೆನ ತೆಕಂಡೋಗಿ. ಕತೆನೂ ಎತ್ತ್‌ನೂ ಕೂಡ್ಸಿ ಕಟ್ಟಿ'ಂತ ಹೇಳ್ತ್. ಹಂಗೆ ಹೇಳ್ಕನ ಇವು ಸೀದಾ ಬಂದೊ. ಆ ಹುಲ್ಲು ತಿಂಬೊ ಎತ್ತ್‌ನೂ ಆ ಕತ್ತೆನೂ ಸೀದಾ ಹೊಡ್ಕಂಡ್ ಹೋದೊ ಗದ್ದೆಗೆ. ಕತ್ತೆನ ಅಪ್ಪ ಗದ್ದೆ ಪುಣಿಲಾದರೂ ಹೋಗುಟು? ಗೊತ್ಲೆ. ಯಾರಿಗೆ ಗೊತ್ತು ? ಅಂತೂ ಗದ್ದೆಗೆ ಎಳ್ದ್ ಇಳ್ಸಿದೊ. ಇಳ್ಸಿ ನೊಗ ಇಸಿದೊ. ಕತ್ತೆ ಒಂದು ಜಾತಿ ಗುಡ್ಡೆಗೆ ಹತ್ತುದು. ಎತ್ತ್ ಸರಿ ದಾರ್‍ಲಿ ಹೋದರೂ ಕತ್ತೆ ಬುಟ್ಟದೆಯ. ಅಂತೂ ಕತ್ತೆಗ ಬೆನ್ನ್ ಮುರಿವಷ್ಟು ಬೊಡ್ದೊ. ಬೊಡ್ದ್ ಎಲ್ಲ ಆಗಿ ಆಕನ ಅಂತೂ ಹೂಡಿ ಎತ್ತು ಬುಡುವ ಹೊತ್ತಾತ್. ಕತ್ತೆನ ಮೈ ಎಲ್ಲ ತೊಳ್ದೊ. ಮೈ ತೊಳಿಯಕ್ಕೂ ಇವರ ನೊಗಂದ ತಪ್ಪಿಸಿ ಕಂಡದ್ದೆ. ಅದ್ ಒಂದು ಗೇನ್ ಮಣ್ಣ್ ಮೈಲಿ ಮೆತ್ತಿಕಂಡ್ ಓಡಿ ಬಂದ್ ಕತ್ತೆ ಹಟ್ಟಿಲಿ ಮಲ್ಕೊನ್ತ್. 'ಇಂಥಾ ಒಂದು ಅವಸ್ಥೆ ನಂಗೆ ಬಂದು ಬುಡ್ತಲ್ಲೆ'ಂತ.

ಇಷ್ಟಾಕನ ಅಂತೂ ಅಂದ್ ಏನು ಮಾಡ್ದೊ ಗೊತ್ಲೆ. ಈ ಒಂದು ಎತ್ತಿನ ಪಗರಕ್ಕೆ ಕತ್ತೆಗೆ ಇಷ್ಟೆಲ್ಲ ಅವಾಂತರ ಆತ್. ಇಂದ್ ಹಿಂಬೊತ್ತಿಗೆ ಎಂತದ್ ಮಾತಾಡ್ದೆ ಈ ಕತ್ತೆಂತ ಹೇಳಿ ಈ ದನಿ ಹಟ್ಟಿಯ ಹಕ್ಕಲೆ ಹೋತ್. ಹೋಕನ್ ಇಂವನ ಹೆಣ್ಣುನೂ ಹಟ್ಟಿಲಿ ಒಟ್ಟಿಗೆ ಉಟ್ಟು. ಗಂಡನೂ ಹೆಣ್ಣುನು ಹಟ್ಟಿಯ ಹಕ್ಕಳೆ ಇರ್ಕನ ಈ ಕತ್ತೆ ಒಂದು ಉಪಾಯ ಹುಡ್ಕಿಟು. ನಾಳೆಯೂ ಈ ಎತ್ತ್ ಹಂಗೆ ಮಾಡ್ರೆ ಇನ್ನ್ ಎರಡ್ನೆ ದಿನಕ್ಕೆ ಆಕನ ನಾ ಉಳಿಯಕ್ಕಿಲ್ಲೆಂತ ಹೇಳಿ ಈ ಕತ್ತೆ ಎತ್ತ್‌ನೊಟ್ಟಿಗೆ ಮಾರಾಯ ನಿನ್ನೆ ನಾ ಹೇಳ್ದಾಂಗೆ ಇಂದ್ ನೀ ಮಾಡ್ದ. ಅಂತೂ ನನ್ನ ಹೊಡ್ಕಂಡ್ ಹೋಗಿ ನನ್ನ ಹೂಡ್ದೊಪ್ಪ'. ಇದರ ಕೊರತೆನ ಇದ್ ಹೇಳಿಕೆ ತಯಾರಿಲ್ಲೆ. ಅಲ್ಲಿ ಗದ್ದೆಲಿ ಇದೇನ್

ಮಾತಾಡಿಕನ್ತ್ ಗೊತ್ತುಟ. 'ನಾಳೆಯೂ ಈ ಎತ್ತ್ ಹಿಂಗೆ ಆತ್'ಂತ ಆದರೆ ಅದರ ಯಾರಿಗಾದರೂ ದಿಕ್ಕಂಗಳಿಗೆ ಕೊಡ್ದು ಒಳ್ಳೊದ್. ಇಲ್ಲಾರೆ ಓ ಅತ್ತನ ಕಾಸರ್‌ಕೋಡಿನ ಬ್ಯಾರಿಗ ಬಂದವೆ ಅವ್ಕೆ ಕೊಡ್ದು ಒಳ್ಳೊದು. ಲಾಚಾರಾಗಿ ಹಾಳಾವಲ್ಲಿಂದ ಮಾಂಸಾದರ್ ಮಾಡ್ವೆ ಅಲ್ಲ ಅವು'ಂತ ಮಾತಾಡ್ತಿದ್ದೊ. 'ಹಾಂಗಾಗಿ ಇರಿಕನ ನೀ ನಾಳೆ ಹುಲ್ಲು ತಿನೊಕು. ನೀರ್ ಕುಡಿಯೊಕು, ಹೂಡಿಕೆ ಹೊಕ್ಕು'ಂತ ಕತ್ತೆ ವಾಪಾಸ್ ಇದ್ಕೆ ಬಿಸಿ ಮಾಡ್ತ್. ಇಷ್ಟಾಕನ ಈ ಎತ್ತಿಗೆ ಆಗಲೇ ನಡುಗಿಕೆ ಸುರುವಾತ್. 'ನಾಳೆ ನಾ ಹೋಗದಿದ್ದರೆ ನನ್ನ ಕೊಂದವೆ'ಂತ ಈ ಮಾತ್‌ನ ಈ ದನಿ ಆಳ್ಸಿಕನ್ತ್. ಓಹೋ ಇಷ್ಟ್ ಉಪಾಯ ಕತ್ತೆ ಹಕ್ಕಲೆ ಉಟ್ಟೊಂತ ಅಂವ ಆಲೋಚನೆ ಮಾಡಿ ಪ್ರಾಣಿಗಳಲ್ಲೂ ಇಂಥ ಮೋಸಗಾರಿಕೆ ಉಟ್ಟಲ್ಲಂತ ಹೇಳಿ ಅಂವಂಗೆ ಕಡ್ಕ್ ನೆಗೆ ಬಾತ್. ನೆಗಡ್ಕನ ಅಂವನ ಹೆಣ್ಣ್ ಹಕ್ಕಳೆ ಇದ್ದದಲ್ಲ. 'ಓಯಿ ಎಂತಕೆಯ ನಗಾಡ್ದ್'ಂತ ಕೇಳ್ತ್. 'ಸುಮ್ಮಂಗಪ್ಪ ನೆಗೆ ಬಂದ್ ಬುಡ್ತ್'. 'ಅದಲ್ಲ ಹೇಳೊಕು'ಂತ ಹೇಳ್ತ್. ಹೇಳ್ದಂತರ ನಗಾಡಿಕೆ ಆಗದ ಏನೋ ನನ್ನ ಮನಸ್ಸಿಗೆ ಬಾತ್ ನಾ ನಗಾಡಿಬುಟ್ಟೆ'. ಅದಾತ್ಲೆ ಯಾಕೆ ನಗಾಡ್ದ್ಂತ ಹೇಳೊಕು. ಆಗ ಇಂವ ಹೇಳ್ತ್. 'ನಾ ನಗಾಡ್ದರ ಹೇಳಿಕಿಲ್ಲೆ. ಹೇಳಿರೆ ನಾ ಒಳಿಯಕಿಲ್ಲೆ. ಇಂತ ನಂಗೆ ಒಂದು ವರ ಉಟ್ಟು. ನಾ ಏನೋ ನನ್ನ ಮನಸ್ಸ್‌ಲಿ ಒಂದು ತಿಳ್ದ್ ನಗಾಡಿ ಬುಟ್ಟೆ. ಅದರ ನೀ ಒತ್ತಾಯ ಮಾಡ್ಬೇಡ. ಹೇಳ್ರೆ ನಾ ಒಳಿಯಕ್ಕಿಲ್ಲೆ. ನಿಂಗೆ ಗಂಡ ಬೇಕುಂತಿದ್ದರೆ ನಿ ಒತ್ತಾಯ ಮಾಡ್ಬೇಡ'ಂತ ಆತ್. 'ಅಯ್ಯೋ ದೇವ್ರೆ ನೀವು ಸತ್ತರೂ ಚಿಂತೆ ಇಲ್ಲೆ. ನಗಾಡ್ದ ಯಾಕೆಂತ ಹೇಳೊಕು'ಂತ ಹೇಳುವ ಒತ್ತಾಯ ಇದರ್ದ್ ಜೋರಾತ್. ಅಂತೂ ಹೆಣ್ಮಕ್ಕಳ ಹಟನೋಡಿ ಹಂಗೂ ಹಿಂಗೂ ಇಂವಂಗೆ ಹೇಳದೆ ಉಪಾಯ ಇಲ್ಲೆ. ಹೇಳದೆ ನಿಮೂರ್ತಿ ಇಲ್ಲೆಂತ ಹೇಳ್ವಂತ ಪಿಕ್ಲಾಟಿಕೆ ಬೀತ್ ಇಂವಂಗೆ. ಬಿದ್ದಾಗಿ ಆಕನ ಇಂವ ಹೆಣ್ಣ್‌ನೊಟ್ಟಿಗೆ ಏನ್ ಹೇಳ್ತ್'ಂತ ಹೇಳ್ರೆ 'ಅದ್ ಅಷ್ಟು ಸುಲಭ ಅಲ್ಲ ಹೇಳ್ದು. ಹೇಳ್ದು ಇದ್ದರೆ ನಾಳೆ ಹನ್ನೆರಡು ಗಂಟೆಗೆ. ಯಾಕೆಂತ ಹೇಳ್ರೆ ನಿಂಗೆ ನಾ ನಗಾಡ್ದ ವಿಷಯನ ಹೇಳ್ದಾಗ ನಾ ಸತ್ತನೆ. ನಾ ಸಾಯುವಂತ ಕಾಲಲಿ ನಮ್ಮವೆಲ್ಲಾ ಬೇಡ? ನಿಮ್ಮ ಮನೆಯವೂ ಬೇಕ್. ಹಿಂಗಿರಿಕನ ಅದ್ ಅಷ್ಟ್ ಸುಲಭಲಿ ಹೇಳಿಕೆ ಆದ್ಲೆ. ನನ್ನ ಕುಟುಂಬದವರ, ನನ್ನ ಆಸುಪಾಸಿನವರ ನಾ ಸೇರ್ಸಿಕೊನೆ. ನಿನ್ನ ತವರು ಮನೆಗೆ ಹೇಳಿದ್ ಅಲ್ಲಿಂದಲೂ ಎಲ್ಲ ಬರ್ಲಿ'ಂತ ಹೇಳಿ ಇಂವ ನಿಘಂಟ್ ಮಾಡ್ತ್. ಆದುಂತ ಹೇಳ್ತ್. ಆದ್ರೂ ಗಂಡನಿಂದ ಆ ಮಾತ್‌ನ ಹೇಳ್ಸಿ ಕೊನಕುಂತ ಹೇಳಿ ಮನ್ಸ್ ಇದ್ಕೆ.

ಹಿಂಗೆ ಇದೊ. ದ ಅಂದ್ ಅವು ಅಲ್ಲಿಗೆಲ್ಲ ಸುದ್ದಿ ಕೊಟ್ಟೊ. ಸುದ್ದಿಕೊಟ್ಟ್ ಮಾರನೆ ದಿನ ಎಲ್ಲವೂ ಬಂದೊ. ಎಲ್ಲವೂ ಬಂದ್ ಸೇರಿಕೆ ಆಕನ ಅಂವನ ಮನೆಲಿ ಒಂದು ನಾಯಿ. ಮತ್ತೆ ಕೋಳಿ ಹುಂಜ ಇತ್ತ್. ಒಂದ್ ಎರಡ್ ಮೂರ್ ಹೆಂಟೆಗ ಒಂದು ಹತ್ತಾರ್ ಪಿಳ್ಳೆಗ ಹಿಂಗೆಲ್ಲ ಇದ್ದೊ. ಈ ನಾಯಿಗೆ ಈ ವಿಷಯ ಗೊತ್ತಾತ್. 'ದನಿ ಇಂದ್ ಸತ್ತು ಬುಟ್ರೆ ನಾವ್ಗೆ ಇನ್ನ್ ತೆಲಿಗೆ ಗತಿ ಇಲ್ಲೆ. ಇವ್ನು ಹೊಯ್ದರ್ ಹೊಯ್ತ್ ಇಲ್ಲರೆ ಇಲ್ಲೆ. ಹಾಂಗೆ ಆಗಿರಿಕನ ಬಾರಿ ತಾಪತ್ರೆ ಬಿದ್

ಹೋದೆ ಅಲ್ಲ'ಂತ ಹೇಳಿ ನಾಯಿ ಯಾಗೋಲು ಮೊನ್ಸಂಗೆ ಕಚ್ಚಿಕೆ ಹೋವ ನಾಯಿ ಅಂದ್ ಯಾರು ಹೋದರೂ ತಲೆ ಎತ್ತಿ ಬೊಗ್ಳಟ ಇಲ್ಲೆ. ಮುರ್ಲಾಟ ಕೂಡ ಮುಂದೇ ಇಲ್ಲೆ. ಆ ನಾಯಿಯ ಲಕ್ಷಣಲಿ ಬಾರಿ ಚಿಂತೆ ಕಾಂಬತಿತ್ತ್. ಈ ಕೋಳಿ ಹುಂಜ ಎರಡ್ ಮೂರು ಹೆಂಟೆಗಳ ಬೆರ್ಸುದು. ಅವ್ಕೆ ಮೆಟ್ಟುದು, ಅವ್ಕೆ ಗಳಿಗ್ಗೆಗೊಮ್ಮೆ ಬೆನ್ನು ಮೆಟ್ಟುದು. ಇದರ ಅಟ್ಟಹಾಸೇ ಅಟ್ಟ ಹಾಸ್. ಇಷ್ಟ ನೋಡಿ ಆಕನ ನಾಯಿಗೆ ಮನಸ್ ಕಂಡತ್ ಕೋಳಿಯೊಟ್ಟಿಗೆ ಹೇಳ್ತ್. 'ನೀ ಒಂದು ಮೂರ್ಖ. ಏನು ಗೊತ್ತೊ ಈಗ ಇಷ್ಟೆಲ್ಲ ಜನ ಬಂದದ್ ಯಾಕೆಂತ ನಿಂಗೊ ಗೊತ್ತಾತ್ಲೆ. ನಂಗೂ ಗೊತ್ತಾತ್ಲೆ. ಇಂದ್ ಈಗ ದನಿಗ ನಾವು ಪ್ರಾಣಿಗ ಮಾತಾಡುವಂತ ಮಾತ್‌ನ ಅವ್ಕೆ ತಿಳುವಳಿಕೆ ಆಗಿ, ಅದರ ಹೆಣ್ಣ್‌ನೊಟ್ಟಿಗೆ ಹೇಳಿಕಾಗಿ ಈ ನಿರ್ಣಯ ಮಾಡಿಕಂಡೊಳೊ. ಈ ಪ್ರಕಾರ ಅವು ಹೆಣ್ಣ್‌ನೊಟ್ಟಿಗೆ ಹೇಳಿ ಬುಟ್ಟರೆ ಅವು ಸತ್ತವೆ. ನಮ್ಮ ದನಿ ಸತ್ತದೆಂತ ಹೇಳುವ ಎತೆ ನಿಂಗೆ ಇಲ್ಲೆ. ಒಳ್ಳೊ ಮೊನ್ಸರಾಗಿದ್ದೊ'. ಆಗ ಕೋಳಿ ಹೇಳ್ತ್. 'ಈಗ ಕೆಲವು ಜನರಲ್ಲಿ ಸ್ವಭಾವ ಹೇಳ್ದಾಂಗೆ ಕೇಳ್ವವು ಒಳೊ. ಕೆಲವು ಜನಕ್ಕೆ ಹೆಣ್ಣ್ ಹೇಳ್ದರ ಕೇಳಿಕೆ ಹೋದೊ ಇಲ್ಲೆ ಗಂಡಂದಿರ್. ಆದರೆ ಹೆಣ್ಮಕ್ಕಳಿಗೆ ಏನ್ ಬೇಕಾದ್ದ್ ಗೊತ್ತುಟ 'ಕೊಂಕಣಿ ಎರ್ಮೆಗ್ ಕೊದಂಟಿ ಮರ್ದ್ದಂತ' ತುಳುಳಿ ಒಂದು ಗಾದೆ ಉಟ್ಟು. ಹೆಣ್ಮಕ್ಕ ಬಾರಿ ಹಟ ಮಾಡ್ರೆ ಅವರ ಬೆನ್ನಿಗೆ ನಾಲ್ಕ್ ಅಡ್ಕಿರೆ ಉಟ್ಟಲೆ ಮತ್ತೆ ಅವು ಏಳಿಕ್ಕಿಲ್ಲೆ. ಇಲ್ಲದಿದ್ದರೆ ನಾ ಇಷ್ಟ್ ಪಿಳ್ಳೆಗೆ ನಾ ಒಬ್ಬ ಇರ್ದು. ಇವು ಹನೀಸ್ ಗಲಾಟೆ ಮಾಡ್ರೆ ಆಗಲೆ ಕಚ್ಚಿ ಮೆಟ್ಟುದು. ನನ್ನ ಅಭ್ಯಾಸ ಅದ್. ಹಾಂಗೆ ಈ ಗಂಡ ಉಟ್ಟಲ್ಲೆ ಇಂವಂಗೆ ಹೆಣ್ಣ್ ಕೇಳ್ದರೆ ಹೇಳಿಯೋ ಬುಟ್ಟನೆ ಹೇಳುವ ಮನಸ್ಸ್. ಕಂಡಿತ ಇವಂಗೆ ಇವನ ಪ್ರಾಣ ತೆಕನಿಕೆ ಇಂವ ತಯಾರ್ ಉಟ್ಟು. ನನ್ನಾಂಗೆ ಅಂವಂಗೂ ಬುದ್ದಿ ಬರ್ಲಿ. ಏನಿಲ್ಲೆ ಬುದ್ದಿ ಏನೂ ಬೇಡ. ಅವಳ ಒಂದು ಕೋಣೆಗೆ ಹಾಕಿ, ಉಪ್ಪನಕಾಯಿ ರಸ ಕಣ್ಣಿಗೆ ಹಾಕಿ ಹುಣಿಸೆ ಅಡರ್ಲಿ ನಾಕ್ ಬುಟ್ರೆ ಅವಳ ಅಪ್ಪ ಕೇಳ್ಲೊ. ಅಂವಂಗೆ ಭಾಷೆ ಇಲ್ಲೆ. ಅದ್ಕೆ ನಾ ಏನು ಮಾಡ್ದು'ಂತ ನಾಯಿಯೊಟ್ಟಿಗೆ ಕೋಳಿ ಹೇಳ್ತ್.

ಅದ್ ಇಂವಂಗೆ ಅರ್ಥ ಆದೆಲ್ಲ. 'ಹೋ ಇದೊಂದು ಉಪಾಯ ಉಟ್ಟಲ್ಲ'ಂತ. 'ನಾ ಬದ್ಕೊಕುಂತ ಇದ್ದರೆ ಇಷ್ಟ್ ಮಾಡ್ರೆ ಸಾಕ್‌ಂತ ಇಂವ ತಿಳ್ಕನ್ತ್'. ಎಲ್ಲ ನೆಂಟರ್ ಇಷ್ಟರ್ ಬಂದ್ ಕುದ್ದೊಳೊ. ಕುದ್ದ್ ಆಗಿ ಆಕನ ಇಂವ ಸೀದಾ ಒಂದು ಕತ್ತಿ ತಕಂಡ್ ಹೊರಗೆ ಹೊರ್ಟ್ ಹೋತ್. ಹೊರಗೆ ಹೋಗಿ ಒಳ್ಳೊ ಒಂದು ಕೊಂಕಣಿ ದಂಟ್‌ನ ಕಡ್ಕಂಡ್ ಬಾತ್. ಕಡ್ಕಂಡ್ ಬಂದ್ ಒಂದ್ ಕೋಣೆಲಿ ತಂದಿಸಿತ್. ಇಸಿತ್ ಒಳಗೆಂದ ಹೋತ್. ಒಂದು ಚಿಪ್ಪಿಲಿ ಹನಿಸ್ ಉಪ್ಪನಕಾಯಿ ಹಾಕಿಕಂಡ್ ಬಾತ್. ಎಂತದಕಂತ ಗ್ರೇಸಿದೊ. ಅಂವನ ಹೆಣ್ಣು ನೋಡಿರ್ದು ಅವಳಿಗಾರು ಏನು ಗೊತ್ತು. ಇಷ್ಟಾಕನ ಅದರ್ನೂ ತಕಂಡೋಗಿ ಕೋಣೆಲಿ ಇಸಿತ್. ಹೆಣ್ಣ್‌ನ ಕರ್ತ್ 'ಓಯಿ ಇಲ್ಲಿ ಬಾ'ಂತ. ಇಲ್ಲಿ ಬಾಂತ ಹೇಳ್ದ ಕೂಡ್ಲೆ ಇವ್ಳು ಹೋತ್. 'ಹೆಂಗೆ ಹೊತ್ತಾತಲ್ಲ'. 'ಹೊತ್ತೆಲ್ಲ ಆತ್'. 'ಆದರೆ ನಮ್ಮೊಳಗೆ ಒಂದು ಹನಿಸ್ ವಿಚಾರ ಉಟ್ಟು ಮಾತಾಡಿಕೆ'ಂತ ಹೇಳ್ತ್.

ಎಂತದ್'ಂತ ಹೇಳ್ದಕೂಡ್ಲೆ ಪೊರ್ಲು ಬಾಗಿಲ್ ಹಾಕಿಕನ್ತ್. ಅತ್ತಂದ ಚೀಪು ಹಾಕಿಕನ್ತ್. ಇಲ್ಲರೆ ಇವ್ರು ಓಡಿ ಬುಡ್ದಲ್ಲೆ. ಚೀಪು ಹಾಕಿತ್. ಈ ಉಪ್ಪನಾಕಾಯಿ ರಸನ ಅದರ ಕಣ್ಣಿಗೆ ಹಾಕಿತ್ ಹೋತ್ ಸಮಾ ಕೊಟ್ಟತ್. ಹೇಳೊಕ ನಾ ನಗಾಡ್ದ ವಿಷಯನ ಹೇಳೊಕಾಂತ. 'ಅಯ್ಯಯ್ಯೋ ದಮ್ಮಯ ಹೇಳ್ಬೇಡಿ. ನನ್ನ ಕೊಲ್ಬೆಡಿ'ಂತ ಹೇಳ್ತ್. ಅಲ್ಲಿಗೆ ಈ ಕತೆಯ ಅಂತ್ಯ. ಹಾಂಗೆ ಹೆಣ್ಮಕ್ಕ ಹೇಳ್ದಂತ ಎಲ್ಲ ವಿಷಯನ ಯಾವ ಗಂಡಂದಿರೂ ಕೇಳಿಕ್ಕಾಗದೂಂತ ನೀತಿ ಇದರಂದ ಹುಟ್ಟಿದೆಂತ ನನ್ನ ಅಭಿಪ್ರಾಯ. [ಕತಾ ನಿರೂಪಕ:ಲಿಂಗಪ್ಪ ಗೌಡ, ಉರುಂಡೆ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ–1991]

## 75.ರುಸಿ ಮತ್ತ್ ಪತಿವ್ರತೆ ಕತೆ

ಒಂದ್ ಮಗ ಉಟ್ಟ್. ಈ ಮಗಳಿಗೆ ಒಂದ್ ಋಷಿ ಮಾತಾಡಿಕೆ ಬಾತ್. ಋಷಿನ ಹೆಸರ್ ಉಷ್ಯ ಮುನಿ. ಅಂವ ಬಂದಾಕನ ಅರಸಂಗೆ ಬಾರಿ ಖುಷಿಯಾತ್. 'ಏನ್ ಬಂದರಿ ಸ್ವಾಮಿ. ನೀವ್ಗೆ ಏನ್ ಬೇಕ್'ಂತ ಹೇಳ್ತ್. ಕುಡಿಯಕೆ ಕೊಟ್ಟತ್. ಬಾಳೆಹಣ್ಣ್ ಬೆಂಡ ಬೇಕಾದ ಸೌಕರ್ಯ ಕೊಟ್ಟತ್. ಕೊಟ್ಟ್ ಏನ್ ಬಂದರಿ ? ಏನಾತ್ ನೀವ್ಗೆ'ಂತ ಕೇಳ್ತ್. ಆಗ ಇಂವ ಹೇಳ್ತ್. 'ನಾ ಕಾಡ್‌ಲಿ ಜಪ–ತಪವೆಲ್ಲ ಮಾಡ್ದೆ. ನಂಗೆ ಇನ್ನ್ ಮೊದ್ವೆ ಆಕ್ಕುಂತ ಒಂದು ಮನಸ್ಸಾಗುಟು. ನಂಗೆ ಒಂದು ಗೂಡೆನ ಕೊಡಕ'ಂತ ಕೇಳ್ತ್. ಅಷ್ಟೊತ್ತಿಗೆ ಅರ್ಸಂಗೆ ಸಿಟ್ಟ್ ಬಾತ್. 'ನಿನ್ನ ಕಾಲ್ ಕೈ ಬೊಳ್ಳಿನಂಗೆ ಆಗುಟು, ನಿನ್ನ ಶರೀರಲಿ ಒಂದು ಚೂರು ನೆತ್ತರ್ ಇಲ್ಲೆ. ಮಾಸ ಇಲ್ಲೆ. ನಿನ್ನ ಎಲು ಸೌದೆ ಕೊಲ್ಲಿಯಾಗುಟು. ಇನ್ನೀಗ ನಿಂಗೆ ಮೊದ್ವೆನ ? ನಿಂಗೆ ಸೌದೆ ಕೊಲ್ಲಿ'ಂತ ಹೇಳ್ಕಂಡ್ ಬೊಯ್ತ್. ಎಷ್ಟ್ ಬೊಯ್ದರ್ ಇಂವ ಕೇಳ್ದುಲೆ. 'ನಂಗೆ ಮೊದ್ವೆ ಆಕು'ಂತ ಒಂದೇ ಮಾತ್. ಅಷ್ಟೊತ್ತಿಗೆ ಮಗಬಾತ್. ಮಾಳಿಗೆಂದ ಬಂದ್ 'ಅಪ್ಪಾ ಋಷಿಗಳಿಗೆ ಅಂತ ಮಾತೆಲ್ಲ ಹೇಳಿಕೆ ಬೊತ್ತ್. ಅಂತದೆಲ್ಲ ಹೇಳ್ಬೇಡಿ ಅಪ್ಪಾ'ಂತ ಹೇಳ್ತ್. 'ನಾಡ್ ಬುಟ್ಟ್ ಕಾಡ್ ಸೇರ್ದ ಮೇಲೆ ಕಾಡ್‌ಲಿ ಅವು ಜಪತಪ ಮಾಡಿಕಂಡಿರುವಂತ ಋಷಿಗಳಿಗೆ ಆ ತರಹದ ಮಾತ್ ಇದ್ಕೆ ಸಾಯಕ್ಕೆ ಪ್ರಾಯಬಾತ್, 'ಕಾಡ್ ಬಾಂತ ಹೇಳ್ದೆ. ಊರು ಹೋಗ್'ಂತ ಹೇಳ್ದೆ'. ಈ ಪ್ರಾಯದವಂಗೆ ನಿನ್ನ ಕೊಡ್ದೊ?

'ಅಪ್ಪಾ ಒಂದ್ ಋಷಿ. ಒಂದ್ ಅರಸನಲ್ಲಿ 50 ಮಂದಿ ಗೂಡೆಗೆ ಇದ್ದೊ ಗಡ ಅಪ್ಪಾ. ಅಂವ ಹೋಗಿ ನೀರ್ಲಿ ಜಪ ಮಾಡ್ಕನ ಒಂದ್ ಮಂಡ್ಜಿಮೀನ್ ಅದರ ಮೊರಿಗಳ ತಂದ್ ಆಟ ಆಡ್ದು ಕಾಂಬಕ್ಕನ ಅವನ ತಪಸ್ಸ್‌ನ ಗೇನ ಹೋಗಿ ಮಕ್ಕಳ ಗೇನ ಹೋಗಿ ಮಕ್ಕಳ ಗೇನ ಬಾತ್ ಗಡ ಅಪ್ಪಾ. ಸಂಸಾರದ ಗೇನ. ಅಲ್ಲಿಂದ ಅಂವ ಹೋಗಿ ಈ ಐವತ್ತು ಮಂದಿ ಮಕ್ಕಳ ಅಪ್ಪನೊಟ್ಟಿಗೆ ನಂಗೆ ಒಂದು ಗೂಡೆನ ಕೊಡೆಕು. ನಂಗೆ ಸಂಸಾರ ಆಕ್ಕುಂತ ಕೇಳ್ತ್‌ಗಡ. ಇದೇ ರೀತಿ ಆ ಅರ್ಸ ಬೊಯ್ದ್ ಅವಂಗೆ ಬೊಡಿಯಕ್ಕೆಲ್ಲ ಹೋಗಿ ಕಡೆಗೆ ಹೇಳ್ತ್ ಗಡ ಹೋಗು ನಂಗೆ

ಐವತ್ತು ಮಂದಿ ಮಕ್ಕ ಒಳೊ. ಯಾರ್ ಒಪ್ಪಿದ್ರೊ ಅವರ ನಿಂಗೆ ಧರ್ಮದಾರೆ ಹೊಯ್ದ್ ಕೊಟ್ನೆಂತ ಅರ್ಸ ಮಾತ್ ಹೇಳಿ ಹೋತ್ ಗಡ ಅಪ್ಪ. ಆಗ ಈ ಋಷಿ ಆ ಗೂಡೆಗ ಇದ್ದ ಕಡೆ ಹೋತ್ ಗಡ. ಅಲ್ಲಿ ಹೋಗಿ ನಿಮ್ಮೊಂದಿಗೆ ನಂಗೆ ಮೊದ್ವೆ ಆಕ್ಕುಂತ ನಾ ಬಂದದ್. ನಂಗೆ ಮೊದ್ವೆ ಬೇಕ್‌ಂತ ಬಂದೆಂತ ಇಷ್ಟೇ ಮಾತ್ ಹೇಳ್ತ್ ಗಡ. ಅಷ್ಟೊತ್ತಿಗೆ ಸೂರುನ ಗೂಡೆ ನಂಗೆ ನೀವೇ ಗಂಡಂತ ಬಾತ್‌ಗಡ ಒಟ್ಟಿಗೆ. ಐವತ್ತ್ ಜನನೂ ಅವನ ಒಟ್ಟಿಗೆ ಹಿಂದೇ ಬಂದ್ ಅಪ್ಪನ ಕಾಲಿಗೆ ಶರಣಾದೊ ಗಡ ಅಪ್ಪ. ನಾವು ಇವರೊಟ್ಟಿಗೆನೇ ಹೋದವೆ ಇವೇ ಗಂಡ್, ನಾವೇ ಹೆಣ್ಣ್‌ಂತ ಹೇಳ್ದೊಗಡ. ಈಗ ಅರ್ಸ ಮೂರ್ಚೆ ಆಗಿ ಬಿದ್ದೋತ್ ಗಡ. ಐವತ್ತು ಮಂದಿ ಗೂಡೆಗೆ ಈ ಋಷಿ ಅಜ್ಜನೊಟ್ಟಿಗೆ ಹೋಕರೆ ಆಗ್ ಏನ್ ಆಶ್ಚರ್ಯ ಹೇಳಿ. ಅಂವ ಮೂರ್ಚೆ ಆಗಿ ಬಿದ್ದ್ ಬುಟ್ಟತ್ ಗಡ. ಆಮೇಲೆ ಇದೇ ಋಷಿ ಅಪ್ಪನ ಎದ್ರ್‌ಸಿ ಅಪ್ಪನ ಮನಸ್ಸ್‌ನ ಸರಿಮಾಡಿ ಐವತ್ತು ಮಂದಿ ಗೂಡೆಗಳ ಕರ್ಕಂಡ್ ವಾಪಾಸ್ ಕಾಡಿಗೆ ಹೋಗಿ ಬುಡ್ತ್ ಗಡಾ ಅಪ್ಪ. ಆ ತರಹದ ಋಷಿಗ ಎಲ್ಲ ಇದ್ದವೆ. ನೀವು ಹೇಳಿಕೆ ಬೊತ್ತ್'ಂತ್ ಹೇಳ್ತ್.

'ಅಯ್ಯೋ ಮಗಳೆ ನಿನ್ನ ಕೊಟ್ಟರೆ ಕಂಡವು ನಂಗೆ ಏನ್ ಹೇಳಿಕ್ಕಿಲ್ಲೆ ? ಏನ್ ಕೇಳಿಕ್ಕಿಲ್ಲೆ ? ನಾ ಹೇಂಗೆ ಕೊಡ್ದು?' ಗೋಳೋಂತ ಮರ್ಚತ್ ಗಡ. ಆಗ ಇನ್ನೊಂದು ಕಡೆಲಿ 'ಅಪ್ಪ ನಾರಾಯಣ-ಶಂಕರಂತ ಎರಡ್ ರಾಕ್ಷಸರ್ ಗಡ. ಅವು ದಾರಿ ಹೋವವರ ಕರ್ದ್‌ದ್ ಅವ್ಕೆ ಊಟ ಕೊಡ್ದು ಗಡ. ಒಬ್ಬನ ಕಡ್ದ್‌ದ್ ಗೈಪು ಮಾಡ್ದು. ಗೈಪು ಮಾಡಿ ಬಂದವ್ಕೆ ಲಾಯ್ಕ್‌ನ ಊಟಮಾಡಿ ಕೊಟ್ಟ್‌ದ್, ಅವು ಊಟ ಮಾಡಿ ಕೈ ತೊಳೆಯಕ್ಕೆ ಹೋಕನ ನಾರಾಯಣಾಂತ ಕರೀದು ಗ್ಡ. ಆಗ ಉಂಡವರ ಹೊಟ್ಟೆ ಭಾಗ ಆಗಿ ಅವು ಸತ್ತವೆ. ಇಂವ ಜೀವ ಆಗಿ ಬಂದರೆ ಆಮೇಲೆ ಅಣ್ಣನು ತಮ್ಮನು ಸುಖವಾಗಿ ಅವರ ಗೈಪು ಮಾಡಿಕೊಂಡಿರ್‍ದು ಗಡ. ಆ ತರಹದ ರಾಕ್ಷಸರ್ ಗಡ. ಅದರ ಕೇಳಿದ್, ಒಂದು ಋಷಿ ಅಲ್ಲಿಗೆ ಹೋಗಿ ಅಲ್ಲಿ ಊಟಕ್ಕೆ ಕುದ್ದತ್ ಗಡ. ಅಂದ್ ಶಂಕರನ ಕಡ್ದ್ ಗೈಪು ಮಾಡ್ತ್. ಋಷಿಗೆ ನಾರಾಯಣ ಇಕ್ಕಿತ್. ಈ ಋಷಿ ಊಟಕ್ಕೆ ಕುದ್ರ್‌ಕನ ಅವನ ಹೊಕ್ಲು ಸುತ್ತ ಅಂಗ್ಯೆನ ಸುತ್ತಿಕೊಂಡ್ ತಿಂದತ್ ಗಡ. ಮತ್ತೆ ಒಂದು ಕೈಬೆರಳ್ ಇದ್ದ ಉಗುರಿದ್ದಾಂಗೆ ಆ ಉಗುರುನ ಕಾಲ್ ಉಂಗುಷ್ಟಲಿ (ಅದರ ತೀನ್ತ್‌ಲೆ ಅಂವ) ಮೆಟ್ಟಿದ್ ಬೇರೆ ಇದ್ದದರೆಲ್ಲ ಅಂವ ಉಂಡತ್ತ್ ಗಡ. ಕೈಲಿ ಹೊಟ್ಟೆನ ಚೆಂರ್ಬಿಕೊಂಡೇ ಊಟ ಮಾಡ್ತ್. ಇಂವ ಊಟ ಮಾಡ್ದಾಂಗೆ ತಿಂದ ಮಾಂಸ ಎಲ್ಲಾ ಅಲ್ಲಿ ಅರಗಿ ಹೋತ್ ಗಡ ಅಪ್ಪಾ. ಅಂವ ಊಟ ಮಾಡಿ ಎದ್ರ್‌ಕನ ಇಂವ ಶಂಕರಾ ಶಂಕರಾಂತ ಕರ್ದರೆ ಶಂಕರನೂ ಇಲ್ಲೆ ನಾರಾಯಣನೂ ಇಲ್ಲೆ. ಕಡೆಗೆ ಇಂವಂಗೂ ಒಂದು ಶಾಪಕೊಟ್ಟ್ ಹೋತ್‌ಗಡ ಋಷಿ. ಅಲ್ಲಂತಾದರೆ ಆ ದಾರಿಲಿ ಯಾರನ್ನೂ ಹೋದರೂ ಅವು ಬುಡಟ ಇಲ್ಲೆಗಡ ಅಪ್ಪ. ಆ ರೀತಿನ ಋಷಿ ಎಲ್ಲ ಕಾಡ್ಲಿ ಇದ್ದವೆ. ನೀವು ಏನೂ ಬೇಜಾರ ಮಾಡಿಕೆ ಬೊತ್ತಪ್ಪ. ನನ್ನ ಅವಂಗೆ ದಾರೆ ಮಾಡಿ ಕೊಟ್ಟ್ ಬುಡಿಂತ ಹೇಳ್ತ್‌ಗಡ.

ಹಾಂಗೆ ಇನ್ನ್ ಏನ್ ಮಾಡ್ದುಂತ ಹೇಳಿ ಅಪ್ಪ ಅವ್ವ ಎಲ್ಲ ಮೊದ್ವೆಗೆ ಒಪ್ಪಿಕೊಂಡಿದ್ದೊ. ಮೊದ್ವೆಗೆ ಜೋಡ್ಸಿಡೊ. ಆಡಂಬರದ ಮೊದ್ವೆ ಮಾಡ್ದೊ. ಒಂದೇ ಮಗ ಇರ್ದು, ಭಾರೀ ಸಭೆ ಸೇರ್ತ್. ಭಾರೀ ಗೌಜಿಲಿ ಮೊದ್ವೆ ಆತ್. ಈ ಮೊದ್ವೆಗೆ ಬಂದವೂ ಪೂರಾ ಕೆಲವು ಅವ್ಕೆ ಬೊಯ್ದು, ಕೆಲವು ಅಪ್ಪಂಗೆ ಬೊಯ್ದು, ಕೆಲವು ಋಷಿಗೆ ಬೊಯ್ದೊ. ಹಿಂಗೆ ಕೆಲವು ಏನೋ ಅದರ ಹಣೆಬರಹ ಆಗಿರ್ದು, ನಾವು ಯಾಕೆ ಅದರ ಬೊಯ್ಯುದುಂತ ಹಂಗೆ ಮಾಡಿ ಮೊದ್ವೆ ಮಾಡಿದ್ ಅಂವ ಹೊರ್ಡುಹೋಕನ ಈ ಅಪ್ಪ ಅವ್ವ ಕೊಟ್ಟ ಬಟ್ಟೆ ಬರೆ, ಚಿನ್ನ ಪೂರ ಬಿಚ್ಚಿದ್ ಒಂದು ಮರಲಿ ಕಟ್ಟಿ ಅಂವ ತಂದ ಒಂದು ನಾರ್‌ಬಟ್ಟೆ ಅದರ ಉಟ್ಟ್‌ದ್, ಎಲ್ಲವ್ಕೂ ಕೈ ಮುಗ್ದ್ ಹೋಗಿ ಬುಡ್ತ್‌ಗಡ. ಅಲ್ಲಿ ಹೋಗಿದ್ ಆಕನ ಋಷಿ ಇನ್ನ್ ಇದರ ಪರೀಕ್ಷೆ ಮಾಡೊಕಲ್ಲ. ರಾತ್ರೆ ಬೊಳ್ಪಾಕೆ ಮುಂದೆ ನಾಲ್ಕ್ ಗಂಟೆ ರಾತ್ರೆಗೆ 'ನಂಗೆ ಈಗ ಮೀಯೊಕು, ನಂಗೆ ಗಂಗೆ ಬೇಕ್'ಂತ ಕೇಳ್ತ್. 'ಈ ನಡುಕಾಡ್ಲಿ ಎಲ್ಲಿಟು ಗಂಗೆ? ಏನು ಮಾಡ್ದು'ಂತ ಹೇಳ್ತ್. ಇದ್ ಒಂದು ಗಿಂಡಿ ಚೊಂಬು ತಕಂಡುಟು. ಇನ್ನೊಂದು ಕೊಡಪಾನ ತಕಂಡುಟು. ಅಲ್ಲಿಂದ ಈ ಕೊಡಪಾನಲಿ ನೀರ್ ತಾತ್. ಋಷಿನ ಪಾದಸೇವೆ ಮಾಡ್ತ್. ಸೇವೆ ಮಾಡಿ ಆಕನ ಇದ್ಕೆ ಒಂದು ಚೊಂಬು ನೀರ್ ಸಿಕ್ಕ್‌ತ್. ಆ ನೀರ್ನ ತಂದ್ ಅಲ್ಲಿ ಹಾಕಿತ್. 'ಹೋಗಿದ್ ಇಲ್ಲಿ ಗಂಗಾನದಿ ಆಗ್. ನಾ ಪತಿವೃತಾ ಶಿರೋಮಣಿ ಆದರೆ ಗಂಗಾನದಿಯಾಗಿ ಇಲ್ಲಿ ಹರ್ದ್ ಬರೋಕು'ಂತ ಹೇಳಿ ಈ ತೀರ್ಥನ ಹಾಕಿತ್. ದೊಡ್ಡ ಶಬ್ದಲಿ ನೀರ್ ಹರ್ದ್ ಬಾತ್.

ಬಂದ್ ಕರ್ತ್ ಗಂಡ. ಋಷಿಗಳೇ ಎದ್ರಿ. ಸ್ನಾನ ಮಾಡಿ. ಹೋಗಿ ಸ್ನಾನ ಮಾಡ್ತ್ ಅಂವ. ಸ್ನಾನ ಮಾಡಿ ಹೋಗಿ ಅವನ ಋಷಿ ಸ್ಥಾನಕ್ಕೆ ಕುದ್ದತ್. ಹಿಂಗೆ ಇನ್ನೂ ಕೆಲವು ಸಮಯ ಕಳ್ದಾಕನ ನಾರದರು ಬಂದೊ. ನಾರದರ್ ಬಂದ್ ಒಂದು ಕುಂಬಾದ ಮಾಯಿನ ಗೆಲ್ಲ್‌ನ ತಕಂಡೋಗಿ ಲಕ್ಷ್ಮಿ, ಪಾರ್ವತಿ, ಸರಸ್ವತಿಯರಲ್ಲಿ ಕೊಟ್ಟಗಡ. 'ನಂಗೆ ಇದರ ಈಗ ಚಿಗುರಿಸೊಕು. ನಂಗೆ ಮಾಯಿನಕಾಯಿ ಹಿಡ್ಸೊಕು. ನಂಗೆ ತಿಂಬಕೆ ಕೊಡೆಕು'. ಅವು ಅವಂಗೆ ಜೋರು ಮಾಡ್ದೊ ಗಡ. ನಾರದ ನೀ ಮೇಲ್ ಲೋಕಕ್ಕೆ ಹೋಗ್. 'ನಿಂಗೆ ಪಿತ್ತ ಕೆದರಿಟ್ಟು. ತಲೆಗೆ ಮೊದ್ದು ಹಾಕಿ ನೀರ್ ಹೊಯ್ಯಲಿ ಈ ಕುಂಬುಗೆಲ್ಲ್‌ನ ನಿಂಗೆ ಚಿಗುರ್ಸುದು, ಹೂವಾದು, ಮಿಡಿಯಾದು, ಹಣ್ಣಾದು. ನಿಂಗೆ ಏನೊ ಹುಚ್ಚು ಹಿಡ್ದುಟ'ಂತ ಅವನ ಜೋರು ಬೊಯ್ದೊಗಡ. ಅದೇ ಗೆಲ್ಲ್‌ನ ತಕಂಡ್ ಬಂದ್ ಈ ಅರುಂದತಿಂತ ಹೇಳುವ ಗೂಡೆನ ಕೈಲಿ ಕೊಟ್ಟತ್ ಗಡ. ಅದ್ ತಕಂಡೋಗಿದ್ ಈ ಬೆಳ್ಳಿ ಗಿಂಡಿಯಲ್ಲಿ ನೀರ್ ತಂದ್, ಈ ಋಷಿನ ಪಾದಸೇವೆ ಮಾಡಿ 'ಇಲ್ಲಿ ನಾ ಪತಿವ್ರತೆ ಶಿರೋಮಣಿ ಆದರೆ ನಾ ನೆನ್ಸಿದ ಕಾರ್ಯ ಆಕ್ಕು'ಂತ ಹೇಳಿ ಈ ಗೆಲ್ಲಿಗೆ ತೀರ್ಥ ಹಾಕಿತ್‌ಗಡ. ಅದ್ ಚಿಗುರಿ ಆತ್. ಚಿಗುರಿ ಹೂವು, ನೆನೆ, ಮಿಡಿ, ಹಣ್ಣಾತ್. ತಂದ್ 'ಇಂದನಿ ನಾರದರೆ'ಂತ ಕೊಟ್ಟತ್ ಗಡ. ಪತಿವೃತಾ ಶಿರೋಮಣಿಂತ ಹೇಳ್‌ಡ್ರೆ ನೀನೇ ಮಗಳೆಂತ ನಾರದರ್ ತಕಂಡ್ ಒಂದು ಹಣ್ಣ್‌ನ ಕೊಯ್ದ್ ತಂದ್, ಆ ರುಚಿನ ನೋಡಿ ತಕಂಡೋಗಿ ಇದೇ

ಲಕ್ಷ್ಮಿ, ಪಾರ್ವತಿ, ಸರಸ್ವತಿಯರಿಗೆ ತೋರ್ಸಿದೊ. ತೋರ್ಸಿದ ಕೂಡ್ಲೆ ಇವು ತಕಂಡ್ ಮುಚ್ಚಿಬುಟ್ರೊ. ಇವು ಮುಚ್ಚಿ ಆಕನ ಹಂಗೇ ಆಗಿ ಹೋತ್. ಆಗ ಹೆಣ್ಣ್ ಜಾತಿಗೆ ಒಳ್ಳೆದು ಮಾಡಿಕೆ ಸಾಧ್ಯ ಬಾತ್ಲೆನೂ ಹಾಳ್ ಮಾಡಿಕೆ ಪಕ್ಕನೆ ಸಾಧ್ಯವಾದೆಂತೆ ಒಂದು ಶಾಪನೂ ಕೊಟ್ಟೆವೆ ಗಡ ನಾರದರ್. ಇನ್ನೂ ಒಂದು ವಿಚಾರ ಲೋಕಕ್ಕೆಲ್ಲ ಬಾತ್.

ಅಷ್ಟಾಕನ ಒಂದ್ ಹೆಂಗ್ಸಿಗೆ ಮಕ್ಕ ಇಲ್ಲೆ. ಮಕ್ಕ ಇಲ್ಲೆಂತ ಆಕನ ನೋಡಿ ನಾ ಹೋಗಿ ಅದರೊಟ್ಟಿಗೆ ಮಾತಾಡ್ನೆ, ನಂಗೆ ಮಕ್ಕಳ ಫಲ ಕೊಟ್ಟದೆಂತ ಕೇಳಿನೆಂತ ಹೇಳಿ ಬಾತ್‌ಗಡ. ಬಂದಾಕನ ಇದ್ ಉಟ್ಟು. ಇದರೆಲ್ಲ ಮಾತಾಡ್ತ್. ಆಗ 'ಏನ್ ಬಂದರಿ?''ನಂಗೆ ಮಕ್ಕ ಇಲ್ಲೆ. ಮಕ್ಕಳ ಫಲ ಕೇಳೊಕುಂತ ಬಂದೆ'ಂತ ಹೇಳ್ತ್. ಹಾಂಗೆ ಹೋಗಿ ತೀರ್ಥ ತಕಂಡ್ ಬಾತ್. ತಕಂಡ್ ಬಂದ್ ಇದ್ಕೆ ತೀರ್ಥ ಕೊಟ್ಟತ್ ಅಲ್ಲಿಂದ ಹೋತ್. 'ನೀವ್ಗೆ ಪುತ್ರ ಸಂತತಿ ಆಗಲಿ. ನೀವು ಸಂತೋಷಲಿ ಇರಿ'ಂತ. ಇದ್ಕೆ ಕುಡಿಯಕ್ಕೆ ಹಾಲ್ ಎಲ್ಲ ಕೊಟ್ಟತ್. ಕೊಟ್ಟ್‌ದ್ ಇದ್ಕೆ ಒಂದು ಗಿಂಡಿಕೆದಂತ ಕೊಡ್ಪನ ಕಂಡದೆ. ಇದ್ಕೆ ಬೇಜಾರ ಆಗಿ ಹೋತ್. ಬೇಜಾರಂದ ಇದರ ಮೈಲಿದ್ದ ಕೆಲವು ಚಿನ್ನ ತೆಗ್ದ್ ಕೊಟ್ಟತ್. ಆಗ 'ಅಯ್ಯೋ ನಂಗೆ ಇದ್ ಯಾಕೆ? ನೋಡಿ ನನ್ನ ಸಂಸಾರ ಕೊಟ್ಟದ್. ಇದ್ ಅಲ್ಲಿ ಬಿಚ್ಚಿದ್ ಪೂರ ಒಂದು ಹೊಂಗರೆ ಮರಕ್ಕೆ ಕಟ್ಟಿ ಬಂದುಟು. ನಾ ಬಟ್ಟೆ ಉಟ್ಟ್, ನಾ ಈ ಋಷಿಗಳೊಟ್ಟಿಗೆ ಬಾಕನ ನಂಗೆ ಎಂತದ್ ಬೇಕ್. ಬಿಚ್ಚಿ ನೋಡ್ರೆ ಅದರ ಕೈಗೆ ಇಸುವ ಒಂದು ಉಂಗುರಕ್ಕೆ ಇದರ ಇಡೀ ಶರೀರಕ್ಕೆ ಹಾಕಿದ ಚಿನ್ನ ಬಾಕಿಲ್ಲೆ. ನಾಚಿಕೆ ಆಗಿ ಹೋತ್ ಮತ್ತೆ. ಅದ್ ಬಾತ್‌ಗಡ. ಅದ್ ಬಂದ ಮತ್ತೆ ಪುತ್ರ ಸಂತತಿ ಎಲ್ಲ ಆದೊ. ಹಾಂಗೆ ಪತಿವೃತಾ ಶಿರೋಮನಿಂತ ಒಂದು ಅನುಸೂಯಂತ ಹೇಳುವಂತದ್ ಕಾಡ್‌ಲಿ ಒಳೊಂತ ಇಡೀ ಸಾಧಾರಣ ಎಲ್ಲ ಹಬ್ಬಿತ್.

ಅಷ್ಟಾಕನ ಬ್ರಹ್ಮ, ವಿಷ್ಣು, ಮಹೇಶ್ವರ ಇದರ ಪತಿವೃತಾ ನೋಡೆಕುಂತ ಹೇಳಿ ಬಂದೊ. 'ಬಂದ್ ಅಮ್ಮಾ ನಾವ್ಗೆ ಹೊಟ್ಟೆ ಇಸಿದ್ ತಡಿಯಕೆ ಬೊತ್ತ್. ನಾವು ಊಟ ಮಾಡದೆ ದಿನ ಮೂರಾಗಿ ಹೋತ್. ಅಮ್ಮ ನಾವ್ಗೆ ಬೇಗ ಊಟ ಕೊಡೆಕ್. ಊಟ ಕೊಡ್‌ಕನ ಇದ್ ಹೋತ್. ಕೆಲವು ಸ್ವಸ್ತ್‌ಗಳ ಎಲ್ಲ ನೆನ್ಸಿತ್ ಕಲ್ಲ್‌ಹೆರ್ಕಿ ರಾಶಿಹಾಕಿತ್. ಋಷಿನ ಪಾದಸೇವೆ ಮಾಡ್ತ್. ಎಷ್ಟ್ ಕಲ್ಲ್ ಹೆರ್ಕಿ ಹಾಕಿತೋ ಅಷ್ಟ್ ತರಹದ ತಿಂಡಿ, ಹಣ್ಣ್ ಹಂಪಲು ಆದು. 'ಸ್ವಾಮಿಗಳೇ ಹೋಗಿ ಮೀಯನಿ ಸ್ನಾನ ಮಾಡ್ಲೊ. ಇನ್ನ್ ಏನ್ ಬೇಕ್ ಅದರ ಮಾಡಿ ಊಟಕ್ಕೆ ತಯರಾತ್'ಂತ ಹೇಳ್ದೊ. ಆಗ ಅವು ಹೇಳ್ದೊ 'ನೀ ಹುಟ್ಟ್‌ಕನ ಹೆಂಗಿದ್ದೊ ಅದೇ ರೂಪಲಿ ನಾವ್ಗೆ ಇಕ್ಕೊಕ್. ಮೈ ಮೇಲೆ ನೂಲುಬಟ್ಟೆ ಆಗಲಿ, ನಾರು ಬಟ್ಟೆ ಆಗಲಿ ಮುಚ್ಚಿಕಂಡ್ ಇರಿಕೆ ಬೊತ್ತ್‌ಂತ'. ಆದುಂತ ಹೇಳ್ತ್. ನೀವು ಇಷ್ಟಕ್ಕೆ ಬಂದವೊಂತ ಹೇಳ್ತ್. ಆಗಲೂ ಹಾಂಗೆ ಋಷಿ ಸೇವೆ ಮಾಡ್ತ್. 'ಪತಿವೃತಾ ಶಿರೋಮಣಿ ನಾ ಹೌದುಂತ ಆದರೆ ನಾ ನೆನ್ಸಿದಂಗೆ ಆಕ್ಕು'ಂತ ಹೇಳ್ತ್. ತೀರ್ಥ ತಂದ್ ಹಾಕಿಹೋತ್. ಎಲ್ಲ ಮೂರು ಮೂರ್ ತಿಂಗಳ ಮಕ್ಕ ಆಗಿ ಮಕ್ಕ ಆಚೆ ಈಚೆ

ಮರ್ಪವೆ. ಮರ್ಪಾಕನ ನಾರ್ ಸೀರೆಗಳ ಬಿಚ್ಚಿದ್ ಅಟ್ಟದ ಅಡಿಗೆ ತೊಟ್ಗಿಲ್‌ಲಿ ಕಟ್ಟಿ ಒಚ್ಚಿದ್ ಈ ಕಾಲ್ ಬೆರ್ಳುಗಳ ಎಲ್ಲ ಮಕ್ಕಳ ಬಾಯಿಗೆ ಕೊಟ್ಟ್ ಒಚ್ಚಿ ಬುಟ್ಟತ್ ಗಡ. ಈ ಮೂರು ಮಕ್ಕ ಒಚ್ಚಿಕಂಡ್ ಆಡಿಕಂಡ್ ಒಳೊ.

ಅಷ್ಟಾಕನ ಅವರ ಗಂಡಂದಿರು ಇಲ್ಲೆ. ಎಲ್ಲಿ ಹೋದೊ? ಎತ್ತ ಹೋದೊಂತ ಹುಡ್ಕಾಟ ಪೂರಾ ಆತ್. ಕಡೆಗೆ ನಾರದರ್ ಹುಡ್ಕಿದೊ. ನಾರದ ಹೇಳ್ತ್ 'ಇಂತ ಇಂತಲ್ಲಿ ನಿಮ್ಮಂತಹ ಹೆಣ್ಣ್ ಉಟ್ಟು. ಅದರ ಹೋಗಿ ನೋಡಿ ಅದರ ನೋಡಿದ್ ಅದರ ಪಾದಸೇವೆ ಮಾಡಿಬನ್ನಿ. ನೀವು 'ನಾವು ದೊಡ್ಡ ಶ್ರೀಮಂತರ್, ದೊಡ್ಡ ಪತಿವೃತೆಗ ನಮ್ಮ ಗಂಡಂದರ್ ಅಂತದ್ ಇಂತದ್'ಂತ ದೊಡ್ಡ ಕೊಂಬು ಎಳ್ದರಿಯ. ಹೋಗಿ', ನಾರದರ ಮಾತುಟ್ಟಲ್ಲ ಹಾಂಗೆ ಹೇಳಿ ಹಂಗಿಸಿದೊ. ಹಾಂಗೆ ಬಾಕನ ಈ ಮಕ್ಕ ಬೆರ್ಳೆಲ್ಲ ಚುಂಬಿಕಂಡ್ ಮಲ್ಕೊಂಡೊಳೊ. ಅಲ್ಲಿಂದ ಬಂದ್ ಎಲ್ಲ ಇದರ ಕಾಲಿಗೆ ಅಡ್ಡ ಬಿದ್ದ್‌ಕಂಡು ಆಕನಾ, 'ನಂಗೆ ಅಡ್ಡ ಬೀಳ್ಬೆಡಿ. ಅಲ್ಲಿ ಅಡ್ಡ ಬೀಳಿ'ಂತ ಹೇಳ್ತ್‌ಗಡ. ಅತ್ತ ಋಷಿನ ಕಡೆ ಮೋರೆ ಹಾಕಿ ಎಲ್ಲ ಅಡ್ಡಬಿದ್ದೊ. 'ಮತ್ತೆ ನೀವ್ಗೆ ಏನಾಕು'ಂತ ಕೇಳ್ತ್. ನೀವ್ಗೆ ಏನಾಕು? ನೀವು ಯಾಕೆ ಬಂದದ್? ಎಲ್ಲ ಕೇಳ್ತ್. ಆಗ ಇವು ಹೇಳ್ದೊ 'ಮತ್ತೆ ಅವು ಎಲ್ಲ ನಮ್ಮ ಗಂಡಂದಿರ್. ನಮ್ಮ ಪತಿಯವು. ಆಗಲಿ. ನಿಮ್ಮ ಪತಿಯವು ಆದರೆ ಅತ್ತ ಕರ್ಕಂಡ್ ಹೋಗ್ಬೇಡಿ. 'ಬಾಕನ ಹೆಂಗೆ ಇದ್ದೊ ಹಾಂಗೆ ಆಗಿ'ಂತ ತೀರ್ಥ ಹಾಕಿತ್‌ಗಡ. ಹಾಕಿಯಾಕನ ಎಲ್ಲ ಗಂಡ್‌ಗ ಆದೊ. ಅವು ಬಾಕನ ಹೆಂಗೆ ಇದ್ದೊ ಹಾಂಗೆ ಆದೊ. ಆಮೇಲೆ ಅವರ ಎಲ್ಲರ ಸೇವೆ ಮಾಡ್ದೊ. ಹಾಂಗಾಗಿ 'ಈ ಲೋಕಲಿ ಪತಿವೃತಾ ಶಿರೋಮಣಿ ಅಂದರೆ ನೀನೇ. ನಿನ್ನಂದ ದೊಡ್ಡ ಪತಿವೃತೆಗ ಇಲ್ಲೆಂತ ನಾವು ನೆನ್ಸಿದೊ. ನಿನ್ನ ಪರಿವೃತಾ ಧರ್ಮ'ಂತ ಹೇಳುವ ನಾರದರ ಮಾತು ಕೇಳಿ ನಾವು ನೋಡೇ ಕುಂತ್ ಬಂದದ್. ಎಲ್ಲ ಗೊತ್ತಾತಮ್ಮ'ಂತ ಹೇಳಿ ಎಲ್ಲವು ಹೊರಟ್ ಹೋದೊ ಗಡ. [ಕತಾ ನಿರೂಪಕಿ:ಬೊಮ್ಮಕ್ಕ ಕುಂದಲ್ಪಾಡಿ ಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 76.ತಂಗಿನ ಶಿಕ್ಷಿಸಿದ್ದಕ್ಕೆ ಅಣ್ಣನ ಅಪ್ಪ ಕೊಂದ ಕತೆ

ಒಂದ್ ಊರ್‌ಲಿ ಒಬ್ಬ ಗಂಡ್, ಹೆಣ್ಣ್ ಮತ್ತ್ ಎರಡ್ ಮಕ್ಕ ಇದ್ದೊ. ಒಂದ್ ಹೆಣ್ಣ್ ಮತ್ತೊಂದ್ ಗಂಡ್. ಅವ್ ಹಿಂಗೆ ಇರಿಕನ ಕೃಷಿ ಮಾಡ್ದೊ. ಹೈದಾ ಯಾಗೋಳು ಗದ್ದೆ ಹೂಡ್ದು. ಗೂಡೆ ಯಾಗೋಳು ಹೈದಂಗೆ ಬುತ್ತಿ ತಂದ್ ಕೊಡ್ದು. ಒಂದ್ ದಿನ ಹೈದ ಗದ್ದೆ ಹೂಡಿಕೆ ಹೋತ್. ಅಂದ್ ಗೂಡೆ ಬುತ್ತಿ ತಕಂಡ್ ಹೋಕನ ಹೊತ್ತ್ ಆತ್. ಹೈದಂಗೆ ಸಿಟ್ಟ್ ಬಾತ್. ಗೂಡೆ ಬಾಕನ 'ಏನ್ ಇಷ್ಟ್ ಹೊತ್ತ್'ಂತ ಕಲ್ಲ್‌ಲಿ ಗುದ್ದಿತ್. ಮುಳ್ಳ್‌ಲಿ ಪರಂಕಿತ್. ಗೂಡೆ ಮರ್ಪ್‌ಕಂಡ್ ಸಿದಾ ಮನೆಗೆ ಬಾತ್. ಆಗ ಅವ್ವ ಅಪ್ಪ ಕೇಳ್ದೊ 'ಎಂತ ಆತ್ ಮಗಳೆ? ಆಗ ಗೂಡೆ 'ನಂಗೆ ಅಣ್ಣ ಕಲ್ಲ್‌ಲಿ ಗುದ್ದಿತ್ ಮುಳ್ಳ್‌ಲಿ ಪರಂಕಿತ್'ಂತ ಹೇಳ್ತ್. ಹಿಂಬೊತ್ತ್‌ಲಿ ಹೈದ

ದನಂಗಳ ಕೂಡಿಕೆ ಹೊಡಕಂಡ್ ಬಾತ್. ಗೂಡೆನ ಹೊಡ್ಡ ಸಿಟ್ಟ್‌ಲಿ ಹಟ್ಟಿನ ಬಾಗಿಲ್‌ಲಿ ಅಪ್ಪ ಒಂದ್ ನಾಗರ ಹಾವ್‌ನ ಇಸಿತ್. ಹೈದ ದನ ಹೊಡ್ಕಂಡ್ ಬಂದ್ ಹಟ್ಟಿಗೆ ಕೂಡ್ಕನ ಹಾವು ಅಂವನ ಕಚ್ಚಿ ಕೊಂದತ್. ಅಂವ ಅಲ್ಲೆ ಸತ್ತತ್. ಅಂವನ ಅಲ್ಲೆ ಗುಂಡಿಗೆ ಹಾಕಿದೊ. ಅಲ್ಲೆ ಒಂದ್ ಒಳ್ಳೊ ಕೆಂಡ ಸಂಪಿಗೆ ಮರ ಆತ್. ಹೂವು ಆತ್.

ಒಂದ್ ದಿನ ಗೂಡೆನ ಮಾತಾಡಿಕೆ ನಂಟ್ರ್ ಬಂದೊ. ಆಗ ಗೂಡೆ ಲಾಯಿಕ್ ಸೀರೆ ಉಟ್ಟ್ ಜಡೆಹಾಕಿ ಹೂವು ಕೊಯ್ಯಕೆ ಸಂಪಿಗೆ ಮರದ ಹಕ್ಕಲೆ ಬಾತ್. 'ಅಣ್ಣಾ ಅಣ್ಣಾ ನಂಗೊಂದ್ ಸಂಪಿಗೆ ಕೊಡ್'ಂತ್ ಹೇಳ್ತ್. ಸಂಪಿಗೆ ಮರ ಹಿಂಗೆ ಹೇಳ್ತ್ 'ಕಲ್ಲ್‌ಲಿ ಗುದ್ದಿತ್ ಮುಳ್ಳ್‌ಲಿ ಪರಂಕಿ ಈಗ ಸಂಪಿಗೆ ಬೇಕಾ ಮುಂಡೆ'ಂತ ಹೇಳಿ ಮರ ಕೆಳಗೆ ಬಾಗಿ ಬಾತ್. ಅವ್ಕೆ ರಾಜಿ ಆತ್. ಗೂಡೆ ಸಿದಾ ಮನೆಗೆ ಹೋತ್. ಮರ ಮತ್ತೆ ಬೆಳ್ದ್ ನಿಂತತ್. ಮತ್ತೆ ಹೋಗಿ ಗಳೆ ತಕಂಡ್ ಕೊಯ್ಯಕೆ ಹೋತ್. ಮರ ಎತ್ತರಕ್ಕೆ ಹೋಗಿ 'ಕಲ್ಲ್‌ಲಿ ಗುದ್ದಿ ಮುಳ್ಳ್‌ಲಿ ಪರಂಕಿತ್ ಈಗ ಸಂಪಿಗೆ ಬೇಕಾ ಮುಂಡೆ'ಂತ ಹಂಗ್ಸಿತ್. ಅಕೇರಿಗೆ ಅಪ್ಪ ಬಾತ್. ಮಂಜ ಮಂಜ ನಂಗೆ ಒಂದ್ ಸಂಪಿಗೆ ಕೊಡ್'ಂತ ಕೇಳ್ತ್. ಆಗ 'ಕಲ್ಲ್‌ಲಿ ಗುದ್ದಿತ್ ಮುಳ್ಳ್‌ಲಿ ಪರಂಕಿತ್, ಮಗ ಚಾಡಿ ಹೇಳ್ಕನ ಹಾವು ತಂದ್ ಹಟ್ಟಿಲಿ ಇಸಿದ್ ನನ್ನ ಕೊಂದ ಬೇವರ್ಸಿ. ಈಗ ಸಂಪಿಗೆ ಬೇಕಾ'ಂತ. ಆಗ ಅಪ್ಪ ಸಿಟ್ಟ್‌ಲಿ ಆ ಸಂಪಿಗೆ ಮರನ ಕಡ್ದ್ ಹಾಕಿತ್. ಆ ಕಡ್ದ ಗುತ್ತಿ ಕರ್ದ್ ಕರ್ದ್ ಹೇಳ್ದೆ ಅದರ ನಾವ್ ನೋಡಿಕಂಡ್ ಬರಕಡ. [ಕತಾ ನಿರೂಪಕ:ಸಣ್ಣಮನೆ ಕೃಷ್ಣಪ್ಪಗೌಡ; ಸ್ಥಳ:ಮನೆ; ಸಮಯ:ಹಗಲು; ವರ್ಷ– 991]

## 77. ತೊಪ್ಪು ಇಲ್ದೆ ಹೊಡಿಕಿಲ್ಲೆ ಕತೆ

ಒಂದು ಅರ್ಸುಗೆ ಒಬ್ಬ ಪ್ರಧಾನಿ. ಈ ಅರಸ್‌ನ ಒಕ್ಲೆ. ಪ್ರಧಾನಿ ಒಬ್ಬ ಮಂಜ. ಅರ್ಸಗೊಂದು ಮಗ. ಬೇಕಾದ ವಿದ್ಯೆ ಬುದ್ಧಿ ಎಲ್ಲ ಕಲ್ಸಿದೊ. ಇಬ್ಬರಿಗೂ ಮಾತಾಗಿ ಅವರೊಳಗೆ ಲಗ್ನವೂ ಆತ್ ಪ್ರಧಾನಿ ಮಂಜಂಗೆ. ಹೋದೊ ಕುದುರೆ ಮೇಲೆ ಕುಡ್ದ್‌ಕಂಡ್. ಒಂದು ದಿಕ್ಕಿಲಿ ಹೋಕನ ಒಂದು ಹೆಂಗ್ಸಿಗೆ ಒಂದ್ ಗಂಡನೇ ಹಾಕ್ಕೊಂಡು ಹೊಡೀದು. 'ತೊಪ್ಪು ಮಾಡದೆ ಹೊಡಿಯಕಿಲ್ಲೆ'ಂತ ಗೂಡೆ ಹೇಳ್ತ್. 'ಅದ್ ಏನಾರು ತಪ್ಪುಮಾಡಿರ್ದು'. ಇದರ ಇಂವ ಕೆಬಿಗೆ ಕೇಳದೆ ಬುಟ್ಟತ್. 'ನೀ ಎಂದಿಗೆ ಬಲದ ಕಿನ್ಕನಡೆಲಿ ಗಂಡ್ ಕೂಸುನೂ, ದಾರೆ ಬಟ್ಲ್‌ಲಿ ಆರತಿನೂ ತೆಕಂಡ್ ಬಂದಿಯೊ ಅಂದಿಗೆ ನಾ ನಿನ್ನ ಒಡನಾಡುವೆ'ಂತ ಹೇಳಿ ಇಂವ ಹೊರ್ಟ್ ಹೋಗಿ ಬುಡ್ತ್.

ಯಾವುದೋ ಒಂದು ಊರಿಗೆ ಹೋತ್. ಹೋಗಿ ಅಲ್ಲಿ ವ್ಯಾಪಾರ ಮಾಡಿಕಂಡಿತ್ತ್. ದೊಡ್ಡ ಸಾವುಕಾರನೂ ಆತ್. ಇದ್ ಹಿಂಗೆ ಆಲೋಚನೆ ಮಾಡ್ತಾ ಇದ್ದ್ ಇದ್ದ್ 'ಏನ್ ಮಾಡ್ದು? ನಂಗೆ ಸಂಸಾರ ಇಲ್ಲೆ, ಸಾಗರ ಇಲ್ಲೆ ಯಾವುದೂ ಇಲ್ಲೆ'ಂತ ಆಗೋತಲ್ಲ. ಇನ್ನ್ ವಾಂಗಲ್ಲ'ಂತ ಹೇಳ್ತ್. ನನ್ನಾಂಗೆ ಇದ್ದ ಒಂದು ಪಾಪದ ಅಜ್ಜನ ಕೂಡ್ಸಿಕಂಡತ್. ಊರು

ಮೇಲೆ ಹೋಕೆ ಹೋದೊ. ಹೋಗಿ ಹೋಗಿ ಹೋಗಿ ಇವನಲ್ಲಿಗೆ ಹೋಗಿ ಮುಟ್ಟಿದೊ, ಊರು ತಿರ್ಗಿಕಂಡ್ ಹೋಗಿ ಆಕನ ಅಲ್ಲಿ ಅವಂಗೆ ಏನಾತ್. ಇದರ ನೋಡಿ ಮೊರ್ಲಾತ್. ಈ ಅಜ್ಜನೊಟ್ಟಿಗೆ ಕೇಳ್ತ್ 'ಅವಳ ಇಂದ್ ರಾತ್ರೆಗೆ ನನ್ನ ಸ್ವಾಧೀನಕ್ಕೆ ಬುಡೊಕು'. ಆಗ ಅಜ್ಜ ಎಂತರ ಹೇಳ್ದು ? ಅಜ್ಜ ಬಾತ್ ಇದರೊಟ್ಟಿಗೆ ಹೇಳ್ತ್. ಅಕ್ಕಾ 'ಅರ್ಸು ಹಿಂಗೆ'ಂತ ಹೇಳ್ದೆ. ಗಂಡಂತ ಇದ್ಕೆ ಗೊತ್ತಾಗುಟು. ಅಂವಂಗೆ ನನ್ನ ಹೆಣ್ಣ್ಂತ ಗೊತ್ತಾತ್ಲೆ. ಬುಟ್ಟತ್. ಆದರೆ ಬುಟ್ಟರು ಏನ್ ಮಾಡ್ತ್ ಇದ್ 'ಏಲ್ಲ ಸರಿ ನಿಮ್ಮ ಕೈಲಿ ಆ ಮುದ್ರೆನ ಉಂಗುರ ಉಟ್ಟಲ್ಲ ಅದರ ಕೊಡೊಕು. ಹಾಂಗಾರೆ ಒಪ್ಪಿವೆ ಅಲ್ಲಾಂತಿದ್ದರೆ ಆಕಿಲ್ಲೆ. ಉಪಾಯ ಉಟ್ಟ ಮುದ್ರೆನ ಉಂಗುರನ ಕೊಟ್ಟತ್. ಇವು ಒಡನಾಟ ಆಡ್ದೊ. ಅಲ್ಲಿ ಎರಡ್ ಮೂರು ದಿನ ಇದ್ದೊ. ಅಲ್ಲಿಂದ ಇವು ಹೊರ್ಟೊ. ಇದ್ ಹೇಳ್ತ್ ಅಜ್ಜನೊಟ್ಟಿಗೆ 'ನಾವು ಊರಿಗೆ ಪೋಯಿ'ಂತ ಬಾತ್. ಹಿಂಗೆ ಇದ್ದ್‌ದ್ ಆಕಾನ ಇದ್ ಇಲ್ಲಿ ಅದೇ ಒಡನಾಟಲಿ ಗರ್ಭಿಣಿ ಆತ್. ಗರ್ಭಿಣಿ ಆತ್ ಗಂಡ್‌ಕೂಸ್‌ನ ಹೆತ್ತತ್. ಇವಂಗಲ್ಲಿ ಏನ್ ನೆನಪು ಹುಟ್ಟಿತ್‌ಂತ ಹೇಳ್ರೆ 'ಚ್ಛೆ ಅಂತಾ ಬೇಡಿಕಂಡ್ ಬಂದ ಹೆಂಗ್ಸಿಗೆ ನನ್ನ ಮುದ್ರೆನ ಉಂಗುರನ ಕೊಟ್ಟುಬುಟ್ಟೆ. ನನ್ನ ಹೆಣ್ಣ್ ಮನೆಲಿ ಉಟ್ಟು. ಅದ್ ಅಷ್ಟ್ ಸುಂದರಿ ಅಕ್ಕಂಡಿರ್ದುಂತ ಹೋನೆ. ನೋಡಿ ಬುಟ್ನೆಂತ ಹೇಳ್ತ್ ಹೊರ್ಟ್ ಬಾತ್.

ಬಾಕನ ದೂರಕೆ ಕಂಡದೆ. ಇವನೆ ಬಾದುಂತ ಹೇಳ್ತ್. ಬಟ್ಲ್‌ಲಿ ಆರತಿ ಮಾಡಿಕನ್ತ್, ಕೂಸುನ ತಟ್ಟಿಕನ್ತ್ ನೀರ್ ಕೊಡಿಕೆ ಹೋತ್. ಆಗ ಅಲ್ಲಿ ನಿತ್ತ್ ಅಂವ ಕೇಳ್ತ್. 'ಎಲ್ಲ ನಿನ್ನ ಬುದ್ಧಿವಂತಿಗೆನ ನಾ ಒಪ್ಪಿದೆ. ಈ ಕೂಸು ಹೆಂಗೆ ಆತ್. ತಪ್ಪು ಇಲ್ಲದೆ ಹೊಡಿಯಕಿಲ್ಲೆ'ಂತ ಹೇಳ್ತ್. ಆಗ ಮುದ್ರೆದ ಉಂಗಿಲನ ತೆಗ್ದ್ ಕೊಟ್ಟತ್. ಇದ್ ಯಾರ್ದ್ ನೋಡಿ? ಇದರ್ಲಿ ಅವನ ಎಡ್ರಾಸ್ ಊಟ್ಟಲ್ಲ. ಯಾರ್ದ್? ಹೌದು ಇವಂದೆ ಹ್ನಾಂ ಆತ್. ನೀ ಗಟ್ಟಿಗೆತಿಂತ ಹೇಳಿದ್ ಅಲ್ಲಿಂದ ಇವು ರಾಜಿಯೂ ಆಕ್ಕಂಡೊ. ಇದರ ಕರ್ಕಂಡ್ ಅಲ್ಲಿಗೆ ಅಂಗ್ಡಿಗೇ ಹೋತ್. [ಕತಾ ನಿರೂಪಕ:ರಾಮಯ್ಯಗೌಡ,ಕಕ್ಕೆಬೆಟ್ಟು; ಸ್ಥಳ:ಮನೆ; ಸಮಯ : ಸಾಯಂಕಾಲ 7ಗಂಟೆ; ವರ್ಷ-1991]

## 78.ನಂದದೇವ – ನಿಂಬೆರಾಯ ಅಣ್ಣ ತಮ್ಮಂದೆರ ಕತೆ

ಒಂದು ಊರ್ಲಿ ಎರಡ್ ಅಣ್ಣ ತಮ್ಮ. ಅಣ್ಣನ ಹೆಸರ್ ನಂದದೇವ. ತಮ್ಮನ ಹೆಸರ್ ನಿಂಬೆರಾಯ. ಆಗ ಅವ್ಕೆ ಬೇಸಾಯ ಉಟ್ಟು. ಇವು ಅಣ್ಣನೂ ತಮ್ಮನೂ ಇಬ್ಬರೂ ಎತ್ತ್‌ಗಳ ಕೊಟ್ಟಿಗೆಂದ ಬುಟ್ಕಂಡೊ (ಅವರ ಮಜಲ್ ಭೂಮಿಗೆ ಹೆಸರ್-ಸಣ್ಣಕ್ಕಿ ಬೈಲ್‌ಂತ) ಅಲ್ಲಿಗೆ ಹೋದೊ. ಅಲ್ಲಿ ಎತ್ತ್ ಕಟ್ಟಿ ಹೂಟೆ ಹೂಡಿಕೆ ಆಕನ ಊರ್‌ಗೌಡನ ನೋಡ್ತ್. (ನಾವು ಊರುಗೌಡ ಅಂದರೆ ಪಟೇಲಂತ ಹೇಳ್ವೆ) ಈ ನಂದದೇವ. ಎತ್ತ್‌ಗಳ ನಿಲ್ಸಿತ್. ಕೈ ಮುಗ್ದ್ ಕೇಳ್ತ್ 'ಊರುಗೌಡರೆ ಯಾವ ಕಡೆಂದ ಪಯಣ ? ಎಲ್ಲಿಗೆ ಹೊಕ್ಕು ?' ಆಗ ಕಿಸೆಂದ (ಓಲೆ

ಕಾಗದ ತೆಗ್ದ್ ಕೊಟ್ಟತ್. ಇದರ ಓದಿ ನೋಡಿಕೆ ಆಕನ ದಂಡಿಗೆ ಹೋಕ್ಕು ಇಂವ. ಉಪಾಯ ಉಟ್ಟ ತಮ್ಮನೊಟ್ಟಿಗೆ ಹೇಳ್ತ್. ನಿಂಬೆರಾಯ ನೀ ಎತ್ತ್ ಬುಡ್, ಮನೆಗೆ ಹೋಗು ಸಡನ್ನೆ ಅನ್ನ ಅಡಿಗೆ ಹಾಕ್, ನಂಗೆ ದಂಡಿಗೆ ಹೋಕ್ಕೆ ಓಲೆ ಬಂದುಟು. ಅಂವ ಎತ್ತ್ ಬುಟ್ಟತ್ ಸಿದಾ ಹೋತ್, ಅತ್ತಿಗೆನ ಕರ್ತ್. ಅನ್ನಡಿಗೆ ಕೂಡ್ಲೆ ಹಾಕಿತ್. ಅಣ್ಣಂಗೆ ದಂಡಿಗೆ ಹೋಕ್ಕೆ ಓಲೆ ಬಂದುಟು. ಆತ್‌ಂತ ಅನ್ನಡಿಗೆ ಎಲ್ಲ ಮಾಡ್ತ್ ಹೆಂಗ್ಸ್. ಆ ಅನ್ನಡಿಗೆ ಬೇಯುವ ಸಮಯಕ್ಕೆ ಇವನೂ ಎತ್ತ್ ಬುಟ್ಟ್‌ಕಂಡ್ ಬಾತ್. ಬಚ್ಚಲ್ ಕೊಟ್ಟಿಗೆಗೆ ಹೋತ್. ಸ್ನಾನ ಮಾಡ್ತ್ ಬಾತ್. ಊಟ ಉಪಚಾರ್ ಆತ್. ಅಲ್ಲಿಂದ ಹೆಣ್ಣ್‌ನ ಕರ್ದ್ ಹೇಳ್ತ್, 'ಇಂದ ಇಂವ ನನ್ನ ತಮ್ಮ. ನಿನ್ನ ಒಡಹುಟ್ಟಿದಂವಂತ ನೀ ಗೇನ ಮಾಡಿಕೊ. ನಿನ್ನ ತಮ್ಮಂತೇ ಗೇನ ಮಾಡೊಕು. ಮಗಂತ ಗೇನ ಮಾಡೊಕು. ಬೇರೆ ಗೇನ ಮಾಡಿಕೆ ಬೊತ್ತ್'. ಒಪ್ಪಿತ್. ಇವನೊಟ್ಟಿಗೆ ಹೇಳ್ತ್, 'ಇಂದ ಅತ್ತಿಗೆಂತ ನೀ ಗೇನ ಮಾಡ್ಬೇಡ. ನಿನ್ನ ಹೆತ್ತ ಅವ್ವಂತ ಗೇನ ಮಾಡೊಕು, ಅಕ್ಕ ತಂಗೆಂತ ಗೇನ ಮಾಡೊಕು'. ಆತ್‌ಂತ ಇಬ್ಬರ್ ಒಪ್ಪಿಕಂಡೊ. ಇಂವ ಕುದುರೆ ಸಿಂಗಾರ ಮಾಡ್ತ್. ಚಂದ್ರಾಯುಧ ತಕನ್ತ್. ಕುದುರೆ ಹತ್ತಿ ಆಕನ ತಮ್ಮ ಕೇಳ್ತ್ 'ಅಣ್ಣಾ ನೀ ಹೋದರೆ ನಂಗೆ ಹಂಞ ಹೆದ್ರಿಕೆ ಆದೆ'. 'ಯಾಕೆ ? ನಿಂಗೇನ್ ಹೆದ್ರಿಕೆ ಬೇಡ. ನೀ ಹಟ್ಟಲಿ ದನಂಗಳ ನೋಡ್. ನೂರೊಂದು ನಡೆ ದನಂಗ ಒಳೊ. ಅವರ ಬುಟ್ಟ್‌ಕೊ. ಹೋಗು ನೀ ಕಾಡಿಗೆ ಹೆದ್ರ್‌ಬೇಡಾ'ಂತ ಹೇಳ್ತ್. ಒಪ್ಪಿಕನ್ತ್. ಇಂವ ಹೋತ್. ಅಂವ ದಂಡಿಗೆ ಹೋತ್. ಇಂವ ಇವನ ಕೆಲ್ಸ ಮಾಡಿಕಂಬೊತ್ತಿತ್ತ್.

ಈ ದನಂಗಳ ಮೇಸುದು ಹಿಂಗೆ. ಅಂದ್ ಹೋದ ದಿನ ಕತ್ತಲೆಗೆಲ್ಲ ಮಾರನೆ ದಿನ ಕತ್ತಲೆಗೆ ಅತ್ತಿಗೆನೊಟ್ಟಿಗೆ 'ನಂಗೆ ಹೊಟ್ಟೆ ಇಸಿದೆ'ಂತ ಹೇಳ್ತ್. ಅದ್ ಏನ್ ಹೇಳ್ತ್, 'ಬಾ ಅಣ್ಣ ಉಂಬ ಬಟ್ಲ್ ಉಟ್ಟು. ಅದರ್ಲಿ ಬಳ್ಸಿ ಕೊಟ್ನೆ. ಅದರ್ಲಿ ನೀ ಊಟ ಮಾಡಕ್'. ಆಗ ಹೇಳ್ತ್ 'ಅಣ್ಣ ಹೇಳ್ದಂತದ್? ನೀವು ಈಗ ಹೇಳುವಂತದ್ದೇನ್?' ಬೇರೆ ಪಾತ್ರಕೆ ಹಾಕಿಕೊಟ್ಟತ್. ತೀನ್ತ್ ಅತ್ತ. ಅಲ್ಲಿಂದ ಇನ್ನ್ ಮಲ್ಗೊಕ್ಕಲ್ಲ, 'ಅತ್ತಿಗೆ ನನ್ನ ಮೊಂದ್ರಿ ಎಲ್ಲಿಟ್ಟು?''ಅಣ್ಣ ಮಲ್ಗುವ ಹಾಸಿಗೆ ಉಟ್ಟಲ್ಲ ಅದರ್ಲಿ ಮಲ್ಗ್'. 'ಅದೂ ಆಕಿಲ್ಲೆ, ಅಣ್ಣ ಹೇಳ್ದ ಮಾತಿಗೆ ನಾ ತಪ್ಪುವ ಹಾಂಗಿಲ್ಲೆ ನಂಗೆ ನನ್ನ ಚಲ್ಲ್ ಮೊಂದ್ರಿ ಸಾಕ್. ನಾ ಅಲ್ಲಿ ಮಲ್ಗೊನೆ'. ಇಂವ ಹಾಂಗೆ ಮಲ್ಗಿತ್. ಮಾರನೆ ದಿನ ಎದ್ದ್ ಇವಂಗೆ ದನ ಬುಡೊಕಲ್ಲ. ಊಟ ಮಾಡಿಕೆ 'ಅತ್ತಿಗೆ ನಂಗೆ ಇಷ್ಟ್ ಅನ್ನ ಕೊಡಿ. ನಾ ದನ ಬುಟ್ಟ್‌ಕಂಡ್ ಹೋನೆ'. 'ಮಿಗ್ದ ಅಕ್ಕಿ ಇಲ್ಲೆ'ಂತ ಹೇಳ್ತ್. ಹೋತ್ ಬೊತ್ತ ತಕಂಡೋತ್. ಭತ್ತ ಮಿಗ್ದತ್, ಅಕ್ಕಿ ಮಾಡಿ ಕೊಟ್ಟತ್. 'ಅಕ್ಕಿ ಮಾಡಿ ಇಸ್ಯೊಲೆ'. 'ಬೇಯಿಸೊಕಾರೆ ಮಡಿಕೆ ಇಲ್ಲೆ'. ಬಂದದ್ ಓಡ್ತ್ ಪೇಟೆಗೆ ಮಡಿಕೆ ತಕಂಬಕೆ. ಬಂದ್ ನೀರಿಲ್ಲೆಂತ ಆತ್. ಹೋತ್ ಕೊಡಪಾನ ತಕಂಡೋಗಿ ನೀರ್ ಹೊತ್ತ್‌ಕಂಡ್ ತಂದ್ ಕೊಟ್ಟತ್. ಇಷ್ಟೆಲ್ಲಾ ಆಗಿ ಆಕನ ಸೌದೆ ಇಲ್ಲೆಂತ ಹೇಳ್ತ್. ಇನ್ನೇನ್ ಮಾಡ್ದು. ಗುಡ್ಡೆಗೆ ಹೋಗದೆ ಉಪಾಯ ಉಟ್ಟ. ಹೋತ್.

'ಅಣ್ಣ ದಂಡಿಗೆ ಹೋಕ್ಕಾಗಿತ್ತ್. ನಂಗೆ ಇಂತ ಕಷ್ಟ ಸಿಕ್ಕೊಕ್ಕಾಗಿತ್ತ್'ಂತ ನೆನ್ಸಿಕೊಂಡ್ ಹೋತ್. ಕಡ್ದ್ ಬೊಡ್ದ್ ರಾಶಿ ಹಾಕಿಸಿತ್. ಕಟ್ಟಿಕೆ ಬೊಳ್ಳಿ ಉಟ್ಟ ಇಲ್ಲೆ. ಕಣ್ಣೀರ್ ಹಾಕ್ಕಂಡ್ ನಿಂತತ್. ಆಗ ಒಂದ್ ಸರ್ಪ ಬಾತ್ ಎದ್'ರಾಗೆ. ಬಂದ್ ಹೇಳ್ತ್, 'ಯಾಕೆ ಮರ್ಲ್ತಿಯಾ?''ಅಣ್ಣ ಹೇಳ್ದ ಬುದ್ಧಿವಂತಿಗೆನೂ ಇಂವ ಮಾಡ್ದ ಕೆಲ್ಸನೂ' ಇಂವ ಹೇಳ್ತ್. ಆಗ ಹೇಳ್ತ್ 'ನನ್ನ ಅಡ್ಡ ಹಾಕ್. ಹಾಕಿ ನನ್ನ ಮೇಲೆ ಸೌದೆ ಇಸ್. ಕಟ್ಟ್ ಹೊತ್ತುಕಂಡ್ ಹೋಗ್. ನೀ ಹಾಕಿದಲ್ಲಿ ಕೂಡ್ಲೆ ನನ್ನ ಬಿಚ್ಚಿ ಬುಟ್ಟ್ ಬುಡು'ಂತ ಹೇಳ್ತ್. ಒಪ್ಪಿಕನ್ತ್ ಇದರ ಬೊಳ್ಳಿ ಹಾಕಿದಾಂಗೆ ಹಾಕಿತ್ ಸೌದೆ ಇಸಿತ್. ಹೊರೆಕಟ್ಟಿ ಹೊತ್ತ್ಕಂಡ್ ಬಾತ್. ಒಂದು ಮನೆ ಹಿಂದೆ ಸೌದೆನ ಒರಗಿಸಿ ಇವಂಗೆ ಬಿಚ್ಚಿ ಬುಡಿಕೆ ಮರ್ತೊತ್. ಇದ್ ಕಿಡಿಕೆ ಕಂಡಿಲಿ ನೋಡ್ಕನ ಕಂಡದೆ ಸರ್ಪ. ಇದೊಂದು ಸಮಯ ಹೌದುಂತ ಹೇಳ್ತ್. ಒಂದು ಕತ್ತಿ ತಕಂಡ್ ಬಾತ್. ಕಡೆ ಕೊಡಿ ಕಡ್ತ್. ಒಂದು ತುಂಡು ತಕಂಡೋತ್. ಇದರ ಗೈಪು ಮಾಡ್ತ್. ಈ ಅನ್ನ ಇಕ್ಕಿ ಕೊಟ್ಟತ್. ಇವಂಗೆ ಆಗ ಏನಾತ್. ಒಂದು ಕಾಗೆ ಬಾತ್ ಬಂದ್ ಎದ್'ರೆ ಕುದ್ದತ್. 'ತಿನ್ಬೇಡ ತಿಂದರೆ ನೀ ಸತ್ತಿಯ!'. ಅಷ್ಟೊತ್ತಿಗೆ ಈ ಕಾಗೆ ಹಿಂಗೆ ಹೇಳೊಕಾರೆ ಏನೋ ಇರೊಕುಂತ ಒಂದು ಪುಂಡಿ ಬಾಚಿ ಹಾಕಿತ್ ಅತ್ತ. ತೀನ್ತ್ ಅದ್. ತೂಗಿ ತೂಗಿ ಸತ್ತತ್. ಅನ್ನನ ಬುಟ್ಟತ್ ದನಗಳ ಕೊಟ್ಟಿಗೆಗೆ ಹೋತ್. ದನಗಳ ಬುಟ್ಟ್ಕನ್ತ್. ನಾಯಿಗಳ ಕರ್ಕನ್ತ್ ಹೋತ್. ಗುಡ್ಡೆಗೆ.ಹೋಕನ ಇದ್ಕೆ ಇಂವ ಸಿಕ್ಕಿತ್ಲೆ ಅಲ್ಲ. ಅಲ್ಲಿಂದ ಅಣ್ಣಂದಿರಿಗೆ ಕಾಗದ ಬರ್ತ್. 'ಗಂಡ ದಂಡಿಗೆ ಹೋಗೋಳೊ. ತಮ್ಮ ಇಂತ ಕುಚೇಷ್ಟೆ ಮಾಡ್ತ್'. ಅಲ್ಲಿಂದ ಅಣ್ಣ ಬಾತ್. ಬಾಕನ ಇಂವ ಉಟ್ಟಾ. ಇಲ್ಲೆ ? 'ಹಿಂಗಿಂಗೆ ಸಂಗತಿ, ಅವು ಹಿಂಗೆ ಹೇಳಿ ಹೋಗೋಳ, ನನ್ನ ಚೇಷ್ಟೆಗೆ ಬಾತ್, ಅದ್ ಈಗ ಅನ್ನಕೊಟ್ಟದರ ಉಣಾದೆ ಕಾಡಿಗೆ ದನ ಹೊಡ್ಕಂಡ್ ಹೋಗುಟು'.'ಏನ್ ಮಾಡೊಕು?''ಹೆಂಗಾರು ನಾಳೆ ಅಂವನ ಕಡಿಯೊಕು. ಹಾಂಗೆ ಒಂದು ಬುತ್ತಿ ಕಟ್ಟಿತ್. ಇಂವ ಹೋತ್.

ಇಂವ ಹೋಕನ ಒಂದು ದೊಡ್ಡ ಮೈದಾನ ತಟ್ಟ್‌ಲಿ ದನಗ ಒಂದು ಕರೆಲಿ ಮೇದವೆ, ನಾಯಿಗ ಒಂದು ದಿಕ್ಕ್‌ಲಿ ಒಳೊ. ಇಂವ ಒಂದು ದಿಕ್ಕಿಲಿ ಕುದ್ದ್ಕಂಡ ಉಟ್ಟು. 'ಓ! ಬಾವಯ್ಯ ನಮಸ್ಕಾರ', 'ನಮಸ್ಕಾರ'. 'ನೀವು ಏನ್ ಅಕ್ಕನ ಮೇಲೆ ಸಿಟ್ಟ್‌ಲಿ ಊಟಮಾಡದೆ ಬಂದೊಳರಿ ಗಡ. ಅದ್ಕಾಗಿ ನಾ ನೀವ್ಗೆ ಅನ್ನ ಬುತ್ತಿ ತಕಂಡ್ ಬಂದೊಳೆ'ಂತ ಹೇಳ್ತ್. ಆತ್ ನೋಡೊಣಾಂತ ಹೇಳಿದ್ ಪಾರೆಮೇಲೆ ಕುದ್ದತ್. ಹೋಗಿದ್ ಬುತ್ತಿನ ಬಿಚ್ಚಿತ್. ಬಿಚ್ಚಿಕನ ಅದರ್‍ಲಿ ಕೂದಲ್ ಸಿಕ್ಕಿತ್. 'ಬಾವ ಇದೇನು ಅಪಶಕುನ. ಕೂದಲ್ ಸಿಕ್ಕಿತಲ್ಲಾ ನಂಗೆ, ನಂಗೆ ಇದ್ ಬೇಡ'. ಇಷ್ಟ್ ಹೇಳಿ ಬಾಯಿ ಮುಚ್ಚೊಕಾರೆ ಕುತ್ತಿಗೆ ತುಂಡು ಮಾಡಿ ಆಗುಟು. ಏನ್ ಮಾಡ್ದು? ಯಾರ್ ಒಳೊ? ಅಲ್ಲಿ ಅಂವನ ಹಾಕಿತ್ ಬಾತ್.

ಈ ದನಗಳೂ ಈ ನಾಯಿಗಳೂ ಬಂದ್ ಇಂವನ ನೆಕ್ಕುದು ಮರ್ದುದು. ಮತ್ತೆ ಯಾರ್ ಇಲ್ಲ ಅಲ್ಲ. ಹಿಂಗೆ ಇರ್ಕನ ಈಶ್ವರ ಪಾರ್ವತಿಯವು ಊರು ನೋಡಿಕೆ ಹೊರಟೊಳೊ. ದೂರಂದ

ಬಾಕನ ಈ ಬೊಬ್ಬೆ ಕೇಳ್ದೆ. ಗೋವುಗಳ್ದ್ ಮತ್ತ್ ನಾಯಿಗಳ್ತ್. ಪಾರ್ವತಿ ಹೇಳ್ತ್ 'ಎಂತದದ್ ಹೋಗಿ ನೋಡೊಕ'ಂತ. 'ನಾವು ಬಾಕನ ನೋಡಮ'. 'ಇಲ್ಲೆ ಈಗ ನೋಡಿಯೇ ತೀರೊಕು'. ಹೋದೊ. ಹೋಕನ ಇಂವನ ತಲೆ ಒಂದು ಕಡೆ ದೇಹ ಒಂದು ಕಡೆ. ಏನು ಮಾಡ್ದು? ನಾಯಿಗಳ ಬೊಬ್ಬೆ. ಅಲ್ಲಿಂದ ಪಾರ್ವತಿ ಹೇಳ್ತ್ 'ಇವನ ಈಗ ಜೀವ ಮಾಡೊಕು'ಂತ. ಉಪಾಯ ಉಟ್ಟ. ಈ ತಲೆನ ಇದ್ಕೆ ಜಯಿಂಟ್ ಮಾಡ್ತ್. ಇವನ ಜೀವ ಮಾಡ್ದೊ. ಇವು ಹೋದೊ. ಇಂವ ಮತ್ತೆ ಆ ದನಂಗಳ ಎಲ್ಲ ಕೂಡ್ಸಿಕಂಡ್ ಹೊಡ್ಕಂಡ್ ಮನೆಗೆ ಬಾತ್.

ಬಂದ್ ಆಕನ ಈ ಅಣ್ಣ ದಂಡ್‌ಗೆ ಹೋದಂವ ಬಾತ್. ಹೋಗಿ ಆಕನ ದೊಡ್ಡ ಸಂತೋಷ ಇಲ್ಲೆ ಇವಂಗೆ. ತಮ್ಮಂಗೆ ಒಂದು ಏನ್ಂತ ಕೇಳ್ರೆ ಮಾತಾಡ್ದುಲೆ. 'ಯಾಕೆ? ಏನಾತ್? ನಾ ಇಂತದರ್ಲಿ ಹಿಂಗೆ ಸೋತು ಬಿದ್ದೆ. ನನ್ನ ಪ್ರಾಣ ಹಾರಿ ಹೋಗಿ, ನನ್ನ ಕುತ್ತಿಗೆ ತುಂಡುಮಾಡಿ ಈಶ್ವರನೂ ಪಾರ್ವತಿಯೂ ಊರು ಮೇಲೆ ಹೋದವು. ಪಾರ್ವತಿಗೆ ಕಂಡ್ ಏನೋ ಮನ್ಸ್ ಸೋತ್ ನನ್ನ ಜೀವ ಮಾಡಿ ಬುಟ್ತೊಳೊ. ಅಂತ ಬೆಟ್ಟಂದ ಇಲ್ಲಿಗೆ ನಾ ಬಂದೊಳೆ'. ಹಾಂಗೆ ಹೇಳ್ಕನ ತಮ್ಮನ ಮೇಲೆ ಅಣ್ಣ ದೊಡ್ಡ ಕರುಣೆ ಹುಟ್ಟಿತ್. ಹೆಂಗ್ಸ್‌ನ ಕರ್ತ್. ಅದರ ಅಣ್ಣನ ಬಾಕೆ ಮಾಡ್ತ್. ಅವರ ಇಬ್ಬರ ಒಂದು ದಿಕ್ಕಿಲಿ ಸೇರಿಸಿ ಇಬ್ಬರ್‍ನೂ ತಲೆ ರಟ್ಟಿಸಿತ್. ಇವು ಅಣ್ಣನೂ ತಮ್ಮನೂ ಆಮೇಲೆ ಸುಖಲಿ ಒಳೊ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 79.ಹೊನ್ನಮ್ಮ ಕೆರೆಗೆ ಹಾರ್‍ವಾದ ಕತೆ

ಒಂದು ಊರ್ಲಿ ಒಬ್ಬಂಗೆ ಕುಡಿಯಕೆ ನೀರಿತ್ಲೆ. ಒಂದು ಕೆರೆ ತೆಗ್ಸಿದೊ. ಮೊಣ್ಣು ಒಡ್ಡ ಉಟ್ಟಲ್ಲ. ಅಂತ ಒಂದು ಜಾತಿ ಉಟ್ಟು. ಅಂವನ ಕರ್ಕಂಡೋದೊ. ಆಗ ಈ ಸೊಸೆಗೆ ಅತ್ತೆ ನೊಟ್ಟಿಗೆ ಕೊಕ್ಕೆ. ಇದರ ಗಂಡ ದಂಡಿಗೆ ಹೋಗುಟ್ಟು ಇದರ ಇನ್ನ್ ಹೇಂಗೆ ನಾ ತೆಗಿದುಂತ ಒಡ್ಡನೊಟ್ಟಿಗೆ ಹೇಳಿಕನ್ತ್. 'ನೀ ಶಿಲ್ಪಿ ಕೆಲ್ಸನೇ ಮಾಡೊಕು'. ಆತ್ ಕೆರೆ ತೆಗ್ದ್ ತೆಗ್ದ್ ಒಂದು ಏಳೆಂಟು ಕೋಲು ಎತ್ತಿರೂ ನೀರಿಲ್ಲೆ. ಆಗ ಹೊನ್ನಮ್ಮಂತ ಅದರ ಹೆಸರ್. ಅದರ ಕರ್ದ್ ಅತ್ತೆ ಏನೇಳ್ತ್, 'ನೀ ಕೆಳಗೆ ಇಳಿಯೊಕು. ಅದರೊಳಗೆ ಸಟ್ಟುಗ ಬಿದ್ದೋಗುಟು'ಂತ. ಆಗ ಒಡ್ಡನೂ ಒಂದು ಮೆಟ್ಟಿಲ್ ಇಲ್ತ್. ನೀರಿಲ್ಲೆ ಕಾಂಬೊದ್ಲೆಂತ. ಅಲ್ಲಿಂದ ಮತ್ತೊಂದು ಮೆಟ್ಲು ಇಳಿಯೋಕುಂತ ಆತ್. ಅದ್ ಇಲ್ಕಂಡ್ ಹೋದಾಂಗೆ ನೀರ್ ಮೇಲೆ ಬರ್ತಾ ಉಟ್ಟು. ಆರ್ ಮೆಟ್ಲ್ ಇಳ್ತ್. ಆಗ ನೀರ್ ಕುತ್ತಿಗೆಗೆ ಬಾತ್. ಅತ್ತೆ ಅಲ್ಲೇ ನಿತ್ತ್‌ಕಂಡುಟು ಕೆರೆ ಕರೆಲಿ. ಅಲ್ಲಿ ಕೆಳಗೆ ಎತ್ತ್‌ಕನ ಹೇಳ್ತ್, 'ಕುತ್ತಿಗೆಗೆ ನೀರ್ ಬಾತ್ ಅತ್ತೆ ಮುಂಡೆ. ಸಟ್ಟುಗ ಇಲ್ಲಿ ಕಾಂಬೊದ್ಲೆ'ಂತ ಹೇಳ್ತ್. ಸೊಸೆನ ಅತ್ತೆ ದೂಡಿ ಹಾಕಿ ಬುಡ್ತ್.

ಆಗ ಇದರ ಕೂಸು ತೊಟ್ಟಿಲ್‌ಲಿ ಉಟ್ಟು. ಇದೆಲ್ಲ ಬಾಗಿಲ್ ಹಾಕಿ ಹೋದ್ದ್. ನೀರಿ ಎರ್ಕಿತ್.

ದಂಡಿಗೆ ಹೋದ ಗಂಡ ಬಾತ್. ಬಂದ್ ನೋಡ್ರೆ ಇದ್ ಬಾಗಿಲ್ ಹಾಕುಟು. ಕೂಸ್‌ನ ತೊಟ್ಟಿಲ್‌ಲಿ ಒಚ್ಚಿ ಬುಟ್ಟುಟು. ಆಗ ಒಂದು ವರಕೊಟ್ಟುಟು ಆದ್. 'ಯಾರ್ ದೂಡ್ರು ದೂಡಿ ಹೋಗ್ಬೇಡ ಬಾಗಿಲ್. ನನ್ನ ಗಂಡ ಬಂದ್ ಕಿನ್ನಿಬೆರ್‍ಳ್ಲಿ ನೂಕಿದ್ ನೂಕಿ ಹೋಕ್'. 'ಕೂಸ್‌ನ ತೊಟ್ಟಿಲ್‌ಲಿ ಒಚ್ಚುದುಂತಾರೆ ಒಚ್ಚಿ ಕೊಂಡೇ ಇರ್ದು. ಕೊಟ್ಟ ಬಾಳೆ ಹಣ್ಣ್ ಬಾಯಿಗೆ ಕೊಟ್ಟುಟು ಆದ್. ಅದ್ ಬಾಯಿಲಿ ತಿಂದುಕೊಂಡೇ ಇರೊಕ್, ಹಾಲ್ ಕುಡ್ದ್‌ದ್ ಹರ್ಕಂಡೇ ಇರೊಕು. ಆಗ ಕುಡ್ಸಿದ್‌ಂತ ಆಕ್ಕು'ಂತ ಹೇಳಿ ವರಕೊಟ್ಟದ್ ಹೋಗಿ ಕೆರೆಗೆ ಬಿದ್ದದೆ. ಗಂಡ ಇಲ್ಲಿ ಬಂದ್ ನೋಡ್ರೆ ಹೆಣ್ಣಿಲ್ಲೆ. ಆಗ ಅವನ ತಂಗೆ ಉಟ್ಟು ದೇವಮ್ಮಂತ. ಅದರೊಟ್ಟಿಗೆ ಕರ್ದ್ ಕೇಳ್ತ್, 'ತಂಗೆ ನಿನ್ನ ಅತ್ತಿಗೆ ಎಲ್ಲಿ ಹೋತ್'? 'ನನ್ನ ಅತ್ತಿಗೆ ಕೆರೆ ದಂಡೆಗೆ ಆಹುತಿ ಆಗೊಲೊ. ಕೂಸ್ ಒಳಗೆ ಉಟ್ಟು. ಬಾಗಿಲ್ ಹಾಕಿದ್ ನಾವು ಯಾರ್ ದೂಡಿರೂ ದೂಡಿ ಹೋದ್ಲೆ. ಇಂವ ಹೋತ್ ದೂಡ್ತ್. ಬಾಗಿಲ್ ಬುಟ್ಟತ್. ತೊಟ್ಟಿಲ್ ನೋಡ್ರೆ ಕೂಸು ಒಚ್ಚುತ್ತಾ ಉಟ್ಟು. ಅದರ ತಕನ್ತ್ ಕೂಸುನ. ಕೆರೆದಂಡೆಗೆ ಹೋತ್. ಹೋಗಿದ್ 'ಕೂಸುನ ಕಿನ್ನಿಬೆರ್‍ಳ್‌ನ ತಕಂತ ಹೇಳಿ ಬೆರ್‍ಳ್ ಕಂತಿಸಿತ್'. ಅದರ ಎಳ್ಕನ್ತ್ ಅಂವ. ಕೂಡ ಏನ್ ಮಾಡ್ತ್. 'ಇಂವ ನಿನ್ನ ಗಂಡನಾ ಹೌದುಂತ ಆದರೆ ಎಳ್ಕೊಂತ ಅಂವ ಹೋತ್. ಆಗ ಅಪ್ಪ ಹಿಂಗಾತ್. ಅಲ್ಲಿಂದ ಅಂವ ಎದ್ದ್ ಬಂದದೆ ಕೆರೆಂದ ಹತ್ತಿ. ಬಂದ್‌ದ್ ಈ ಅಯ್ಯೆನ ಅಪ್ಪನ ಬಾಗಿಲ್ ಒಳಗೆ ಹಾಕಿ ಬಾಗಿಲ್‌ಗೆ ಮುಳ್ಳು ಬೊಡ್ದ್ ಮನೆಗೆ ಕಿಚ್ಚಿ ಕೊಟ್ಟದೆ. ತಂಗೆನ ಒಳ್ಸಿಕನ್ತ್ ಇವನೂ ಒಳ್ತ್. ಅಣ್ಣನೂ ತಂಗೆನೂ ಒಟ್ಟಿಗೆ ಹೋದೊ. ವಾಪಾಸ್ ಆ ಕೆರೆಗೆ ಬಿದ್ದೊ. ಅವು ಕೆರೆ ಒಳಗೆ. ಇವು ಇಲ್ಲಿ ಬಸ್ಮ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 80.ಬ್ರಹ್ಮಗಂಟ್‌ನ ಕತೆ

ಒಂದಾನೊಂದು ಊರ್ಲಿ ಹಾರಂವ ಇತ್ತ್. ಅಂವ ಬೆಳಿಗ್ಗೆ ಎದ್ದ್ ಹಿಂಗೆ ತಿರ್‍ಗಾಡಿಕಂಡ್ ಹೋತ್. ತಿರ್‍ಗಾಡಿಕಂಡ್ ಹೋಕ್ಕೆ ಆಕನ ಒಬ್ಬ ಹೊಳೆ ಬದಿಲಿ ಕುದ್ದ್‌ಕಂಡ್ ಒಂದು ನೂಲ್‌ನ ಎಲ್ಲ ಗಂಟ್ ಹಾಕಿದೆ. ಗಂಟ್ ಹಾಕಿ ಆಕನ ಇದ್ ಎಂತದ್‌ಂತ ಕೇಳ್ತ್. ಅಷ್ಟಾಕನ ಅಂವ ಹೇಳ್ತ್. 'ಬ್ರಹ್ಮ ಗಂಟ್‌ಂತ್ ಹೇಳ್ರೆ ಇದುವೆ. ಗಂಡ್ ಹೆಣ್ಣ್ ಆದೆ ಅಲ್ಲೆ. ಅದ್ಕೆ ಬ್ರಹ್ಮ ಗಂಟ್‌ಂತ ಹೇಳ್ದು ಇದ್ಕೆ. ನಂಗೆ ಅದೇ ಕೆಲಸ'ಂತ ಹೇಳ್ದೆ. ಅಷ್ಟಾಕನ 'ನಂಗೆ ಮೊದ್ವೆ ಆತ್ಲೆ. ನಂಗೆ ಎಲ್ಯಾರು ಒಂದು ಗೂಡೆ ಸಿಕ್ಕುದ ನಿನ್ನ ಪ್ರಕಾರ'ಂತ ಹೇಳ್ದೆ. ಅಂವ ಹೇಳ್ತ್ 'ಅಂದರೆ ನಿಮ್ಮ ಮನೆಲಿ ಒಂದು ದಿಕ್ಕಾಲ್ತಿ ಕೆಲಸಕೆ ಉಟ್ಟು. ಅದ್ ಈಗ ಗರ್ಭಿಣಿ. ಅದರ ಹೊಟ್ಟೆಲಿ ಬರುವ ಕೂಸ್ ನಿಂಗೆ ಹೆಣ್ಣಾಗಿ ಬಂದದೆ'. ಆಗ ಇವಂಗೆ ಸ್ವಲ್ಪ ಬಿಸಿಯಾತ್. ಇಂವ ಸೀದಾ ಬೇಜಾರ್ಲಿ ಮನೆಗೆ ಹೋತ್. ಮನೆಲಿ ಹೋಗಿ ಯಾರೊಟ್ಟಿಗೂ ಹೇಳದೆ. ಸುದ್ದಿ ಇಲ್ಲದೆ ಕುದ್ದತ್. ಅದಕ್ಕೆ ಹೆರಿಗೆಗೆ ಸಮಯಾತ್. ಆ ಸಮಯ ಆಗಿ ಹೆರಿಗೆ ಆಕನ ಹೆಣ್ಣ್‌ಕೂಸ್ ಹುಟ್ಟಿತ್. ಆ ಹೆಣ್ಣ್ ಕೂಸ್‌ನ

ಹೆಂಗಾರು ಮಾಡಿ ಜಾರ್ಸಿದ್ ಈ ಬೆದ್ರ್‌ನ ಕುಕ್ಕೆ ಮಾಡಿದ್ ಅದರ್ಲಿ ಹಾಕಿದ್ ಹಳ್ಳಲಿ ಬುಟ್ಟತ್. ಅದ್ ಹಿಂಗೆ ತೇಲಿಕಂಡ್ ತೇಲಿಕಂಡ್ ಹೋತ್. ಹೋಗಿ ಆಕ್ಕೆ ಆಕನ ಬೇರೆ ಕಡೆಲಿ ಒಬ್ಬ ಹಾರಂವ ಹಳ್ಳದ ಕರೆಲಿ ಪ್ರಾರ್ಥನೆ ಮಾಡಿಕೆ ಬಂದುಟು. ಅವಂಗೆ ಮಕ್ಕ ಇತ್ಲೆ. ಅವಂಗೆ ಇದ್ ಈ ಕುಕ್ಕೆನ ನೋಡಿದ್ ಕೂಸುನ ನೋಡಿದ್ ಕುಸಿಯಾತ್. ದೇವ್ರೆ ನಂಗೆ ಇದರ ಕಳ್ಸಿದ್. ಕೂಸ್ ಮಕ್ಕ ಇಲ್ಲದ್ದಕ್ಕೆ ಮತ್ತೆ ಆ ಕೂಸ್‌ನ ಮನೆಗೆ ತಕಂಡೋಗಿ ಬಾರೀ ಪೊರ್ಲುಲಿ ಸಾಂಕಿತ್. ಸಾಂಕಿದ್ ದೊಡ್ಡದಾತ್. ಪ್ರಾಯಕೆ ಬಾತ್.

ಅಕೇರಿಗೆ ಇನ್ನೊಂದು ಹೈದ ಆಕ್ಕಲ್ಲೆ ಇದ್ಕೆ. ಇನ್ನ್ ಮೊದ್ವೆ ಮಾಡೊಕಲ್ಲೆಂತ ಹೇಳಿಕಂಡ್ ಅವರ ನೆಂಟ್ರ್‌ಗಳೊಟ್ಟಿಗೆಲ್ಲ ತಿಳ್ಸಿತ್. 'ನಾವ್ಗೆ ನಮ್ಮ ಗೂಡೆಗೆ ಒಬ್ಬ ಹೈದ ಆಕು'ಂತ. ಅಷ್ಟಾಕನ ಅವು ಏನ್ ಮಾಡ್ದೊ ಒಬ್ಬ ಹೈದನ ಹುಡ್ಕಿದೊ. ನಮ್ಮ ಕಡೆಲಿ ಒಬ್ಬ ಹೈದ ಉಟ್ಟು. ಅಂವನ ವಿಚಾರ್ಸೊಂಮಂತ ವಿಚಾರ್ಸಿದೊ. ವಿಚಾರ್ಸಿಕನ ಅವಂಗೂ ಮೊದ್ವೆ ಆತ್ಲೆ. ಆದು ಮೊದ್ವೆ ಆದುಂತ ಹೇಳಿ ಒಂದು ದಿನ ನಿಘಂಟ್ ಬಾತ್. ನಿಗಂಟ್ ಮಾಡಿದ್ ಮೊದ್ವೆ ನಿಶ್ಚಯ ಎಲ್ಲ ಆತ್. ಹಾಗೆಂತ ದಿಬ್ಬಣ ಬಂದೊ. ದಿಬ್ಬಣ ಬಂದದ್ ಅವರ ಕ್ರಮ ವಿಧಿಗಳೆಲ್ಲ ಮಾಡಿಕೆಂತ ಎಲ್ಲ ತಯಾರ್ ಮಾಡ್ದೊ. ತಯಾರ್ ಮಾಡಿಕೆ ಆಕನ ಈ ಮನೆಯ ದಂಪತಿಗ ಏನ್ ಮಾಡ್ದೊ ಅದರ ಪೂಜಿಸಿದೊ. ಯಾವುದರ ? ಆ ಕುಕ್ಕೆನ. ಅಷ್ಟಾಕನ ಇಂವ ಕೇಳ್ತ್ 'ಆ ಕುಕ್ಕೆನ ಏಕೆ ಪೂಜಿಸುದು'ಂತ. ಇವಂಗೆ ಸ್ವಲ್ಪ ಅಂದಾಜಿ ಆತ್. 'ಇದ್ ನಾನೆ ಬುಟ್ಟ ಕುಕ್ಕೆ'ಂತ ಹೇಳಿಕಂಡ್. ಅಷ್ಟಾಕನ ಅದರ ಪೂಜಿಸುದು ಯಾಕೆಂತ ಕೇಳ್ಕನ, 'ಅದ್ ನಾವ್ಗೆ ಮಕ್ಕ ಇತ್ಲೆ ಹಾಂಗೆ ಆ ಕೂಸ್ ಇದರ್ಲಿ ನಾವ್ಗೆ ಸಿಕ್ಕಿದ್. ಹಾಂಗಾಗಿ ಪೂಜಿಸುದು'. ಎಲ್ಲಾ ವಿಧಿ ಮಾಡ್ದು ಮತ್ತೆ. ಅಷ್ಟಾಕನ ಇಂವಂಗೆ ಬಿಸಿಯಾತ್. ಅಂದರೆ ಬ್ರಹ್ಮ ಹೇಳಿದ ಮಾತ್ ಸತ್ಯ ಆಗಿರೊಕುಂತ ಹೇಳ್ತ್. ಇಂವ ಯಾರಿಗೂ ಸುದ್ದಿ ಇಲ್ಲದೆ ಅಲ್ಲಿ ಚಪ್ಪರಂದ ರಟ್ಟಿತ್. ಹೋಗಿದ್ ಸ್ವಲ್ಪ ಬೇಜಾರ್ಲಿ 'ಇದೆಂತ ಅವಸ್ಥೆ ನಂಗೆ ಹಿಂಗೆ ಆತಲ್ಲೆ'ಂತ ಹೇಳಿ ಎಲ್ಲ ದೇವಸ್ಥಾನಗಳಿಗೆ ಯಾತ್ರಾ ಸ್ಥಳಕ್ಕೆಲ್ಲ ಹೋತ್. ಹೋಗಿ ಹೋಗಿ ಸುಮಾರ್ ಸಮಯ ಹಿಂಗೆ ಕೆಲವು ಜನರ ಪರಿಚಯಾತ್. ಪರಿಚಯಾಕನ ಅವು ಹೇಳ್ದೊ 'ನಿಂಗೆ ಮೊದ್ವೆ ಆಗುಟಾ'ಂತ. 'ನಂಗೆ ಮೊದ್ವೆ ಆತ್ಲೆ. ಎಲ್ಲಾರ್ ಗೂಡೆ ಇದ್ದರೆ ನಂಗೆ ಹೇಳೊಕು'ಂತ. ಅಷ್ಟಾಕನ ಅವು ಹೇಳ್ದೊ, 'ಅಂದರೆ ಗೂಡೆ ಮಾಡೊಮ'ಂತ ಹೇಳ್ದೊ. ಅಷ್ಟಾಕನ ಗೂಡೆ ಮಾಡೊಮಂತ ವಿಚಾರಣೆ ಮಾಡ್ಕನ ಈ ಹುಡ್ಗಿ ಹಿಂದೆಂದಲೇ ಉಟ್ಟು. ಆಗ ಅದ್ ಹೇಳ್ತ್, 'ನಂಗೆ ಅಲ್ಲಿ ಅವು ಮೊದ್ವೆಗೆಂತ ದಿಬ್ಬಣ ಬಂದ್‌ದ್ ನನ್ನ ಅಲ್ಲಿಂದ ತೊಪ್ಪಿಸಿ ಓಡಿ ಬಂದೋಳ. ಹಾಂಗೆ ಆಕನ ನಾ ಬುಡುಕಿಲ್ಲೆ. ಯಾಗ ನಂಗೆ ಒಮ್ಮೆ ಅವರ್ನ ನಿಘಂಟಾದ ಮೇಲೆ ನಾ ಅವರ್ನೆ ಮೊದ್ವೆ ಆದು'ಂತ ಹೇಳ್ತ್. ಆಗ ವಿಷಯ ಎಲ್ಲ ಎಂತದ್‌ಂತ ವಿಚಾರ್ನೆ ಮಾಡ್ದೊ. ಅವೆಲ್ಲಾ ವಿಚಾರ್ನೆ ಮಾಡಿ ಆಕನ ಅವ್ಕೆ ಅದ್ ಸತ್ಯಂತ ಕಂಡತ್. ಅಕೇರಿಗೆ ಇನ್ನೆಂತ ಮಾಡ್ದುಂತ ಇವನ ಸಮಾಧಾನ ಮಾಡಿದೊ. ಅವಂಗೆ ಆ ಗೂಡೆನ ದೇವಸ್ಥಾನಲಿ ಮೊದ್ವೆ ಮಾಡ್ದೊ. ಮಾಡಿ

ಹಂಗೆ ಅವು ಸೌಖ್ಯಲಿ ಇದ್ದೊ. ಹಾಂಗ ಈ ಬ್ರಹ್ಮ ಗಂಟ್‌ಂತ ಹೇಳ್ದು ಯಾರಿಂದಲೂ ತೊಪ್ಪಿಸಿಕೆ ಬೊತ್ತ್. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ-1991]

## 81. ಗುಳಿಂಜನ ಪೆಟ್ಟ್‌ನ ಕತೆ

ಒಂದು ಬೈಲ್. ಆ ಬೈಲ್‌ಲಿ ಒಂದು ಗುಳಿಂಜನ ಕಲ್ಲಿಗೆ ಯಾಗೋಳು ಒಬ್ಬ (ಹಿಂದು ಅಲ್ಲದಂವ) ಬಂದ್ ಉರ್ಬಿ ಹಾಕುದು. ಈ ಕಲ್ಲ್‌ಲಿ ಉರ್ಬಿ ಆಕನ ಅದ್‌ಪೂರ ಹೇಸಿಗೆ ಆದೆ ಅಲ್ಲ. ಅಪ್ಪೊತ್ತಿಗೆ ಈ ಗುಳಿಂಜಂಗೆ ಇವನ ಹೆಂಗೆ ಹೊಡ್ದಾಕುದುಂತ ಬಾರೀ ತಲೆ ಖರ್ಚು ಮಾಡ್ತಿತ್ತ್. ಅಪ್ಪೊತ್ತಿಗೆ ಆಕನ ಈ ಎಲ್ಲಾ ಕಾಡ್ ಮೃಗಗಳ, ಹಕ್ಕಿಗಳ ಪೂರ ಬಾಕ್ಕೆ ಮಾಡಿದ್ ಒಂದು ಮೀಟಿಂಗ್ ಮಾಡ್ತ್ ಗುಳಿಂಜ. ಅಪ್ಪೊತ್ತಿಗೆ ಆಕನ ಈ ಬಲ್ಲೆಕ್ಕಿ ಬಂದ್ ಗುಳಿಂಜನೊಟ್ಟಿಗೆ ಹೇಳ್ತ್. 'ನೀ ಅದ್ಕೆ ಏಕೆ ಮಾರಾಯ ಹೆದರ್ದು ? ಅಂವನ ನಾ ಹೊಡ್ದಾಕಿನೆ. ಅಂವನ ನಾ ಸೋಲ್ಸಿನೆ. ನಿನ್ನ ಸಹಾಯ ಮಾತ್ರ ಬೇಕ್'ಂತ ಹೇಳ್ತ್. ಆಗ ಆತ್, 'ಅಂದರೆ ನಿಂಗೆ ಬೇಕಾರೆ ಸಹಾಯ ಕೊಡಕ್'ಂತ ಗುಳಿಂಜ ಒಪ್ಪಿತ್.

ಹಾಂಗೆ ಮಾರ್ನೆದಿನ ಕೂಡ ಇಂವ ಬಂದ್ ಈ ಗುಳಿಂಜನ ಕಲ್ಲ್‌ಲಿ ಬಂದ್ ಉರ್ಬಿತ್. ಈ ಬಲ್ಲೆಕ್ಕಿ ಒಂದು ಬಲ್ಲೆಲಿ ಅಡಂಗಿಕಂಡಿತ್ತ್. ಇಂವ ಕುದ್ರಿಯಾಕನ ಈ ಹಕ್ಕಿ ಬುರ್ರಾಂತ ಹಾರ್ತ್. ಹಾರಿ ಆಕನ ಇವಂಗೆ ಮೈ ಸ್ವಲ್ಪ ಹೆದರಿ ಹೋತ್. ಅಪ್ಪೊತ್ತಿಗೆ ಗುಳಿಂಜ ಅಂವಂಗೊಂದು ಪೆಟ್ಟ್ ಹಾಕಿತ್. ಪೆಟ್ಟ್ ಹಾಕಿ ಆಕನ ಅಂವ ಅಲ್ಲೆ ಸ್ವಯ ಇಲ್ಲದೆ ಮೂರ್ಚೆ ತೊಪ್ಪಿದವನ ಹಂಗೆ ಆತ್. ಹಾಂಗೆ ಇಂವ ಹೋಗಿ ಮನೆಗೆ ಮಲಗಿದಂವ ಮತ್ತೆ ಎದತ್ತೇ ಇಲ್ಲೆ. [ಕತಾ ನಿರೂಪಕ:ಸಣ್ಣಮನೆ ಕೃಷ್ಣಪ್ಪ ಗೌಡ; ಸ್ಥಳ:ಮನೆ; ಸಮಯ:ಹಗಲು; ವರ್ಷ 1991]

## 82. ಸರಣಿ ಸಾವುನ ಕತೆ

ಒಂದು ಊರ್ಲಿ ಗಂಡ್ ಹೆಣ್ಣ್ ಇಬ್ಬರಿದ್ದೊ. ಇದ್ದಾಕನ ಅವನ ಹೆಣ್ಣ್‌ಗೆ ಒಂದು ಮಿಂಡ ಬಾದು. ಯಾಗೋಲು ನೋಡಿ ಇಂವ ಹೆಣ್ಣಿಗೆ ಹೊಡ್ತ್. ಹೆಣ್ಣ್‌ಗೆ ಹೊಡ್ದಾಕನ ನಾ ಇನ್ನ್ ಬೊದ್ಕುದ್ಲೆಂತ ಹೇಳ್ತ್. ದಾರಿ ಕರೆಲಿ ಒಂದು ಮರಕ್ಕೆ ಬೊಳ್ಳಿ ಹಾಕಿತ್. ಬೊಳ್ಳಿ ಹಾಕಂಡ್ ಸತ್ತತ್. ಇಂವ ನೋಡ್ತ್ ಅದರ. ಇಂವ ನೋಡಿ ಹೋಗಿ ನನ್ನ ಹೆಣ್ಣ್ ಸತ್ತತಲ್ಲೆಂತ ಗಂಡನೂ ಬೊಳ್ಳಿ ಹಾಕನ್ತ್. ಇವು ಹೆಣ್ಣ್‌ಗಂಡ ಇಬ್ಬರೂ ಸತ್ತೊಂತ ಹೇಳಿ ಅಲ್ಲಿಗೆ ಮಿಂಡ ಹೋಗಿ ನೋಡ್ತ್. 'ಅವು ಇಬ್ಬರೂ ಸತ್ತೋಗಿ ಬುಟ್ಟ ಅಲ್ಲ. ಇನ್ನ್ ನಾ ಬೊದ್ಕಿ ಫಲ ಏನ್'ಂತ ಹೇಳ್ತ್. ಅವನೂ ಅದೇ ಮರಕ್ಕೆ ಬೊಳ್ಳಿ ಹಾಕಿ ಸತ್ತತ್.

ಅಂವ ಸತ್ತ್ ಆಗಿ ಆಕನ ಅಲ್ಲಿ ಒಂದು ಕುಂಬಾರ್ ಮಡಿಕೆ ಹೊತ್ತುಕಂಡ್ ಹೋದೆ. ಇದ್ ಏನ್ ಇವು ಎರಡ್ ಮೂರು ಜನ ಬೊಳ್ಳಿ ಹಾಕಿ ಸತ್ತದಲ್ಲೆ. ಅಂದರೆ ಈ ದಾರ್ಲಿ ಹೋವವೆಲ್ಲ ಹಿಂಗೆಂತ

ಹೇಳ್ತ್ ಮಡ್ಕೆನ ಇಸಿತ್ ಅಲ್ಲಿ ಅದರ ಬೊಳ್ಳಿ ಬಿಚ್ಚಿತ್. ಇವನೂ ಅಲ್ಲಿ ಬೊಳ್ಳಿ ಹಾಕ್ಕಂಡ್ ಸತ್ತತ್. ನಾಲ್ಕ್ ಜನ ಸತ್ತೊ. ಸತ್ತಾಗಿ ಆಕನ ದಾರ್ಲಿ ಎಲ್ಲ ಹೋದವೆ ಅಲ್ಲ. ಅಲ್ಲಿಗೆ ಒಂದು ಕುದ್ಕ ಹೋದೆ. ಕುದ್ಕ ಹೋಗಿ ಮರ ನೋಡ್ತ್. ನೋಡ್ಕನ ಒಂದು, ಎರಡ್, ಮೂರ್, ನಾಲ್ಕ್ ಜನ ಒಳೊ ಅಲ್ಲೆ. ಇದೆಂತ ಕಥೆ ಇದ್ ದೊಡ್ಡ ಕಷ್ಟ. ಅಂವ ಆಲೋಚನೆ ಮಾಡ್ತ್. 'ಇದ್ ಏನ್ ಹಿಂಗೆ ಆಕ್ಕೆ ಕಾರಣ? ಕುದ್ಕ ಅಲ್ಲಿಂದ ಅಂವ ಅಂದಾಜ್ ಮಾಡ್ತ್. ಈ ಹೆಣ್ಣ್ ಸತ್ತತ್'ಂತ ಹೇಳಿ ಗಂಡ ಸತ್ತತ್. ಮಿಂಡತಿ ಸತ್ತತ್'ಂತ ಹೇಳಿ ಅಂವನೂ ಸತ್ತತ್. ಈ ಬೋದಾಲ ಮಿಂಡ್ರ ಮಂಜ ಇಲ್ಲಿ ಮಡಿಕೆ ಇಸಿ, ಅಂವ ಮರಕ್ಕೆ ಹತ್ತಿ ಸಾಯಕೆ ಕಾರಣ ಏನ್? ಇದರ್ಲಿ ಏನು ಉಟ್ಟು! ಯಾರಿಗೆ ಗೊತ್ತುಟ್ಟುಂತ ಕುದ್ಕ ಕೇಳ್ತ್. ಯಾರಿಗೂ ಗೊತ್ತುಟ್ಟ? ದೊಡ್ಡ ಆಶ್ಚರ್ಯ ಆತ್. ಕುದ್ಕ ಹೋತ್. [ಕತಾ ನಿರೂಪಕ:ಬಾಬು ಗೌಡ ಕುಂದಲ್ಪಾಡಿ ಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ 1991]

## 83.ಗುಡ್ಡೆಂದ ಗುಡ್ಡೆ ಅಡ್ಡದ ಕತೆ – ಪಠ್ಯ 1

ಒಂದ್ ಗಂಡ್ ಹೆಣ್ಣ್ ಇಬ್ಬರೆ. ಈ ಗಂಡ ಮಧ್ಯಾಹ್ನ ಊಟ ಮಾಡಿ ಮೀಸೆ ಕಿತ್ತ್ ಗೋದಿಕಂಬಕ್ಕೆ ಬೊಡೀದು. ಈಚೆಲಿ ಹುಕ್ಕ್ ಅದ್ ಆಚೆಲಿ ಹೋದು. 'ನನ್ನಷ್ಟ್ ಉಸಾರ್ ಯಾರೊಳ ಮುಂಡೆ'ಂತ ಹೇಳಿ ಹೆಣ್ಣ್‌ಗೆ ಬೊಡೀದು. ಸುಮಾರ್ ದಿನ ಆಕನ ಒಂದಿನ ಅವಳ ಅಪ್ಪ ಬಾತ್. ಕೇಳ್ತ್, 'ಏನಾತ್ ಮಗಳೆ'ಂತ? 'ಯಾಗೋಲು ಉಂಡ್ ಮಧ್ಯಾಹ್ನ ಮೀಸೆ ಕಿತ್ತ್ ಗೋದಿಕಂಬಕ್ಕೆ ಹೊಡ್ದ್ ನನಷ್ಟ್ ಉಸಾರ್ ಯಾರೊಳಂತ ಹೇಳ್ದು. ನಂಗೆ ಬೊಡಿಯೋದು. ದಿನಾ ಬೊಡ್ದವೆ'. 'ಹಾಂಗಾರೆ ನೀ ನಾಳೆ ಗುಡ್ಡೆಗೆ ಗುಡ್ಡೆ ಎಷ್ಟೋ ಅಡ್ಡ ಉಟ್ಟು'ಂತ ಹೇಳ್.

ಮಾರ್ನೆ ದಿನ ಹಂಗೆ ಮಾಡ್ತ್. ಮೀಸೆ ಕಿತ್ತ್ ಗೋದಿಕಂಬಕ್ಕೆ ಬೊಡ್ತ್, ಹೆಣ್ಣ್‌ಗೆ ಬೊಡ್ತ್. ಇದ್ ಈಚೆಲಿ ಹುಕ್ಕ್ ಆಚೆಗೆ ಹೋತ್. ಆ ಮೀಸೆ ಹೊಡ್ತ್. "ಗುಡ್ಡೆಗೆ ಗುಡ್ಡೆ ಎಷ್ಟೋ ಅಡ್ಡ ಉಟ್ಟು'ಂತ ಹೆಣ್ಣ್ ಹೇಳ್ತ್. ಹೌದೊಂತ್ ಹೇಳ್ತ್ ಹೋತ್. ಒಂದ್ ದಿನ ಇಡೀ ಹೋತ್. ಸುಮಾರ್ ದೂರ ಎತ್ತ್‌ಕನ ಒಂದ್ ಮನೆಲಿ ಒಳ್ತ್. ಮಾರನೆ ಬೊಳ್ಪಿಗೆ ಎದ್ದ್ ಹೋಕನ ಒಬ್ಬ ದೊಡ್ಡ ಆನೆಕಟ್ಟಿಕಂಡ್ ಪಾರೆಕಲ್ಲ್ ಹೂಡ್ದೆ. ಪಾರೆಕಲ್ಲ್ ಹೂಡ್‌ಕನ ಇಂವ ಅಲ್ಲಿ ಹೋಗಿ ನಿಂತ್ ನೋಡ್ತ್. 'ನಾನೇ ಉಸಾರ್ ಇಂವ ನನ್ನಂದ ಉಸಾರ್ ಉಟ್ಟಲ್ಲೆ'? ಇಂವ ಏನ್ ಮಾಡ್ತ್? ಯಾರ್ ಹೂಡಂವ. 'ಅಣ್ಣ ನಂಗೆ ಈಗ ಕಾಫಿ ತಿಂಡಿ ಬಾತ್. ಕಾಫಿ ಕುಡ್ಕೊನೆ. ನೀ ಹನೀಸ್ ಈ ಆನೆಗಳ ಹೂಡ್. ಪಾರೆಕಲ್ಲ್‌ಗೆ ಕೋಲ್‌ನ ಕುತ್ತಿಸಿತ್. ಇಂವಂಗೆ ಕಾಫಿ ಕುಡ್ದ್ ಬಾಂವ ವರೆಗೆ ಆ ಕೋಲ್ ಕಿತ್ತ್ ತೆಗಿಯಕೆ ಆತ್ಲೆ.

ಅದರಂದ ಮುಂದೆಗೆ ಹೋತ್. ಹೋಕನ ಒಬ್ಬ ಎರಡ್ ಆನೆಗಳ ಹೆಗಲ್‌ಲಿ ಕೋಸಿಕಂಡುಟು. ಒಂದು ಆನೆನ ಸುರ್ದ್ ಗಾಳ ಹಾಕಿದೆ. ಗಾಳ ಹಾಕಂಡ್ ನಿತ್ತ್‌ಕಂಡ್ ನೋಡ್ತ್. ನೋಡಿ ಆಕನ ಒಂದು ಗರುಡ ಬಾತ್. ಇವರ ಇಬ್ಬರ್ನೂ ಈ ಆನೆಗಳ್ನೂ ಕಚ್ಚಿಕಂಡ್

ಹೋತ್. ದೂರ ಹೋತ್. ಒಂದ್ ಸೂಳೆನ ಅರಮನೆ ಎದುರ್ಲಿ ಒಂದ್ ಸಂಪಗೆ ಮರಲಿ ಕುದ್ದತ್. ಆ ಸಂಪಗೆ ಮರ ಬಗ್ಗಿತ್. ಮರ ಮುರ್ದದೆಂತ ಹೇಳ್ತ್ ಸೂಳೆ ಒಂದು ಸೆಪ್ಪನ ಕಿತ್ತ್ ಕಂಬ ಕೊಟ್ಟತ್. ಅದ್ ಅಲ್ಲಿಗೆ ನಿಂತ್. ಇಂವ ಇದರೆಲ್ಲ ನೋಡಿ ಮನೆಗೆ ಬಂದ್ ಹೆಣ್ಣ್‌ನೊಟ್ಟಿಗೆ ಜಗಳ ಮಾಡದೆ ಸುಖಾಲಿ ಉಟ್ಟು. ಅಷ್ಟೆ. [ಕತಾ ನಿರೂಪಕ:ಲಿಂಗಪ್ಪಗೌಡ ಉರುಂಡೆ; ಸ್ಥಳ:ಮನೆ; ಸಮಯ:ರಾತ್ರಿ 8ಗಂಟೆ; ವರ್ಷ 1991]

## 84.ಗುಡ್ಡೆಂದ ಗುಡ್ಡೆ ಅಡ್ಡ ಕತೆ –ಪಠ್ಯ 2

ಒಂದು ಊರ್ಲಿ ಒಂದು ಗಂಡನೂ ಹೆಣ್ಣ್‌ಗಡ. ಅಂವ ರಾಜ್ಯದ ಗ್ರಾಮದ ಶ್ಯಾನುಭಾಗ ಗಡ. ಅಂವ ಶ್ಯಾನುಭಾಗ. ಊರ್ಲೆಲ್ಲ ಉಗ್ರಾಣಿ, ಪಟೇಲ ಎಲ್ಲ ಬಂದ್ ಹೋಗಿ ಆಕನ ಅಂವ ಮನೆಗೆ ಬಾದು ಗಡ. ಬಂದ್‌ದ್ ಅಂವ ಬಂದ್ ಅವನ ಹೆಂಗ್‌ಸ್ ನೊಟ್ಟಿಗೆ 'ಇಂದ್ ಯಾರೆಲ್ಲ ಬಂದೊಳಾ'ಂತ ಕೇಳ್ದುಗಡ. 'ಇಂತವೆಲ್ಲ ಬಂದ್ರೊ'ಂತ ಹೇಳ್ದುಗಡ. ಹೇಳಿಕೆ ಆಕನ ಅದ್ ಹೇಳ್ತ್‌ಗಡ 'ನೀವು ಊರ್ ಮೇಲೆ ಎಲ್ಲ ಹೋದರಿ. ನಂಗೆ ಇಲ್ಲಿ ಯಾರೂ ಗೆತಿ ಇಲ್ಲೆ'ಂತ. 'ನಿಂಗೆ ಎಷ್ಟು ಬೇಕಾರು ಮಿಂಡಂದಿರು ಇರುವೊ'ಂತ ಇಂವ ಜೋರು ಮಾಡ್ತ್‌ಗಡ. 'ನಿಮ್ಮಂತವೇ ನಂಗೆ ಗಂಡಂದಿರಿಂಕನ ನಂಗೆ ಮಿಂಡಂದಿರ್ ಎಂತಕೆ'ಂತ ಹೇಳ್ತ್‌ಗಡ. ಹಾಂಗೆ ಅಲ್ಲಿಂದ ಅಂವ ಯಾಗೋಲು ಅದ್ಕೆ ಬೊಡಿದುಗಡ. ಬೊಡಿದುಂತ ಹೇಳ್ರೆ ಮೊನ್ನಂಗೆ ಆಕಿಲ್ಲೆ ಪೆಟ್ಟ್. ಈ ಪೆಟ್ಟ್‌ನ ತಡಿಯಕೆ ಬತ್ತಾಗಿ ಅದರ ಅಯ್ಯೆ ಬಾತ್ ಗಡ. ಬಂದಾಕನ ಇದ್ ವಿಷಯ ಹೇಳ್ತ್, 'ಅವ್ವ ನಂಗೆ ಇಂತ ಕಷ್ಟ ಎಲ್ಲ. ಶ್ಯಾನುಭಾಗಂತ ಗಂಡಗೆ ಕೊಟ್ಟು ಇಂತ ಕಷ್ಟಾಗಿ ಹೋತಲ್ಲ ನಂಗೆ'ಂತ. ಹಾಂಗೆ 'ಅದ್ಕೆ ನೀ ಎಂತಕೆ ಮಗಳೆ ಹೆದರ್ದು, ನೀ ನಾಳೆ ನಿನ್ನ ಗಂಡ ಗ್ರಾಮಲಿ ಹೋಗಿ ಬಂದ್‌ದ್. ಅವನ ಬಟ್ಟೆ ಎಲ್ಲ ಬದಲ್ಸಿ ಊಟಕೆ ಕುದ್ರಿಕೆ ಆಕನ ನೀ ಹೇಳ್ ಪೆಟ್ಟ್‌ಕೊಟ್ಟರೆ ನೀ ಹೇಳ್. 'ಗುಡ್ಡೆಂದ ಗುಡ್ಡೆ ಎಷ್ಟೊ ಅಡ್ಡ ಉಟ್ಟು'ಂತ ಹೇಳ್. 'ಆಗ ಅಂವ ನಿಂಗೆ ಬೊಡಿದು ಬುಡ್ದು'ಂತ ಹೇಳ್ತ್‌ಗಡ ಅಯ್ಯೆ. ಅಯ್ಯೆ ಹೇಳಿ ಕೊಟ್ಟ್‌ದಾಕನ ಅಂವ ಅಂದ ಕುದ್ದ್‌ಕಂಡ್ ಆಲೋಚನೆ ಮಾಡ್ತ್‌ಗಡ. ಯಾಕೆ ಇದ್ ಹೇಳ್ತ್‌ಂತ. 'ಗುಡ್ಡೆಂದ ಗುಡ್ಡೆ ಎಷ್ಟೊ ಅಡ್ಡ ಉಟ್ಟು'ಂತ ಹೇಳ್ತ್. ಗುಡ್ಡೆಂದ ಗುಡ್ಡೆ ಅಡ್ಡ ಉಟ್ಟ್‌ಂತ ಹೇಳಿ ಆದಕೂಡಲೆ ಇಂವ ಎದ್ದ್‌ದ ಹೋತ್. 'ನೋಡೊಕು ನನ್ನಂದ ದೊಡ್ಡವ ಇದ್ದದಕ್ಕೆ ಇದ್ ಹಿಂಗೆ ಹೇಳ್ದು'ಂತ. ಅಷ್ಟ್ ತಲೆ ಇದ್ದಂವ ಅಂವ.

ಹಾಂಗೆ ಎದ್ದ್ ಹೋತ್‌ಗಡ. ಹೋಕನ ಒಬ್ಬ ಪಾರೆ ಹೂಡಿಕಂಡ್ ಉಟ್ಟುಗಡ. ಅಂವ ಹೇಳ್ತ್‌ಗಡ, 'ಅಣ್ಣ ನಾ ಬಾಯರಿಕೆ ಕುಡ್ದ್ ಬನ್ನೆ'ಂತ. ಈ ಆನೆಗಳ ಹೂಡುದರ ಅವನ ಕೈಲಿ ಕೊಟ್ಟ್ ಹೋತ್‌ಗಡ. ಹೋಗಿ ಅಂವ ಪಾರೆ ಹೊಡ್ದರ ಬುಟ್ಟ್ ಊರ್ದ ಕೋಲ್‌ನ ಎಲ್ದ್ ತೆಗಿಯದೆ ಆತ್ಲೆ. ಇಂವ ಬಾಂವ ವರೆಗೆ ಅಲ್ಲೇ ಇದ್ದದೆ ಗಡ. ಅಂವ ಹೋಗಿ ಇಂವಂಗೆ ತಿಂಬಕೆ ಒಂದ

ಹತ್ತ್ ಕೊಪ್ರಿಕಾಯಿ ಒಂದು ಐದ್ ಸೇರ್ ಎಳ್ಳ್ ತಕಂಡ್ ಬಾತ್‌ಗಡ. ಇಂವ ಬಂದ್ 'ಏನಣ್ಣ ಹೂಡ್‌ತ್ಲೆ'ಂತ ಹೇಳ್ತ್‌ಗಡ. ಅಣ್ಣಣ್ಣ ನಂಗೆ ಅದರ ಕೋಲು ತೆಗಿಯಕೆ ಆದ್ಲೆಂತ ಹೇಳ್ತ್‌ಗಡ. ಅದರ ಅದರ ನೀ ಹೊಡಿಯೋಕಾಗಿತ್ತ್. ಆಗ ಕೋಲು ಎಳ್ದ್ ಬಂದದೆಂತ. ಹಾಂಗೆ ಮತ್ತೆ ಅಂವ ಇವನ ಕೈಲಿ ಕೊಟ್ಟ್‌ದ್ ನೀ ಅದರ ಹೊಡಿಮಾಡಿ ತಿನ್ನ್‌ಂತ ಹೇಳ್ತ್‌ಗಡ. ಇಂವ ತಿಂಬಕೆ ಬುಟ್ಟ್ ಅದರ ಹೊಡಿ ಮಾಡಿಕೆನೇ ಬೊತ್ತ್. 'ನೀವು ಏನ್ ತಿಂಬೊದ್ಲೆ'? 'ಅಲ್ಲ ನಂಗೆ ಅದರ ಹೊಡಿ ಮಾಡಿಕೆ ಆದ್ಲೆಣ್ಣ'ಂತ ಹೇಳ್ತ್. ಇಂವ ವಾಪಾಸ್ ಬಂದ್ ಆನೆಗಳ ಹೂಡ್ತ್. ಮತ್ತೆ ಇದರ್ ಹೊಡಿ ಮಾಡಿ ಅವಂಗೆ ಕೊಟ್ಟತ್ ಗಡ. ಕೊಟ್ಟ್ ಕೊಪ್ರಿಕಾಯಿನೂ ಹೊಡಿಮಾಡಿ ಅವಂಗೆ ಕೊಟ್ಟತ್ ಗಡ. ಕೊಟ್ಟ್‌ದ್ ಅಂವ ತೀನ್ತ್ ಗಡ. ಅರ್ಧ ತಿಂದಾಕನ 'ನಂಗೆ ಸಾಕಣ್ಣ'ಂತ್ ಹೇಳ್ತ್ ಗಡ. ಇಂವ ಪೂರ ತೀನ್ತ್. ನಾವು ಇದರ ಎಷ್ಟೋ ತಿಂದವೆಂತ ಹೇಳ್ತ್‌ಗಡ.

ಅದರಿಂದ ಆಚೆ(ಅಂದರೆ) ಒಂದು ಯೋಜನ ಹೋಕನ ಅಲ್ಲಿ ಒಂದು ದಿಕ್ಕಿಲಿ ದೂರಂದ ಎರಡ್ ಆನೆಗಳ ಒಂದ್ ಗೆಂದ ಗಿಡಂಜ ಕಚ್ಚಿಕಂಡ್ ಬಂದದೆ. ದೊಡ್ಡಾ ಒಂದ್ ಅರ್ರುಸನ ಮನೆ ಹಕ್ಕಳೆ ಬಂದ್ ಕುದ್ದತ್ ಗಡ. ಅಲ್ಲಿ ಒಂದು ಆಲದ ಮರ ಇತ್ತ್‌ಗಡ. ಆಲದ ಮರ ಮುರ್ರು ಬಿದ್ದರೆ ಅಂವನ ಮನೆಗೇ ಬೀಳೊಕ್ಕಡ. ಮನೆಗೆ ಬಿದ್ದರೆ ಹೊಡಿಯಾದೆಲ್ಲ. ಅಂವನ ಬೊಬ್ಬೆ ಆತ್‌ಗಡ. ಅದ್ ಗೆಂದ ಗಿಡಂಜ ಆನೆನ ಹಿಡ್ದ್, ಮರಲಿ ಕುದ್ದ್ ಮನೆ ಹೊಡ್ಯಾದುಂತ. ಬಾಯಿ ಮಾಡ್ರೆನೂ ಹಾರುದ್ಲೆ ಗಡ. ಅದ್ ಆನೆಗಳ ಕಚ್ಚಿಕೊಂಡ್ ತಿಂಬಕೆ ಶುರು ಮಾಡ್ತ್. ಆಗ ಈ ಅರ್ರುಸನ ಮಗ ಎದ್ದ್‌ದ್ ಸೌಟ್ಟ್‌ನ ತೆಗ್ದ್ ಅದ್ಕೆ ಓಂದ್ ಕೊಟ್ಟತ್ ಗಡ. ಕೊಟ್ಟಾಕನ ಮರ ಸರ್ತ ನಿಂತತ್. ಅಲ್ಲಿಂದ ಅಂವ ಸ್ವಲ್ಪ ಹೊತ್ತ್ ನೋಡಿದ್ ಅದರಿಂದ ಮುಂದೆ ಹೋತ್‌ಗಡ. ಮುಂದೆ ಹೋಗಿ ತಿರ್‌ಗಿ ಮನೆಗೆ ಬಾತ್‌ಗಡ. ಒಂದು ಊರು ತಿರ್‌ಗಿಯೇ ಬಾತ್‌ಗಡ. ಬಂದ್‌ದ್ ಕಂಕನೆ ಮಲ್ಗಿತ್ ಗಡ ಬೇಸರ್‌ಲಿ. ಮಲ್ಗಿ ಆಕನ 'ಏನ್ ಮಲ್ಗಿದ್‌ಂತ' ಕೇಳ್ತ್‌ಗಡ. 'ನೀ ಹೇಳ್ದೆಲ್ಲ ಸತ್ಯ ಮಾರಾಯ್ತಿ. ಇನ್ತ್ ಮುಂದೆ ನಿಂಗೆ ಬೊಡೀದ್ಲೆ'ಂತ ಹೇಳಿ ಅಂವ ಮತ್ತೆ ಹೆಣ್ಣುನು ಗಂಡನೂ ಬಾರೀ ಸುಖಲಿ ಇದ್ದೊ ಗಡ. [ಕತಾ ನಿರೂಪಕಿ:ದೇವಕಿ ಅಮ್ಚೂರು; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 85. ಒಗಟ್ ಕತೆ

**'ಒಬ್ಬರಿಗಿಂತ ಇಬ್ಬರ್ ಮೇಲ್',**
**'ಉಂಡ್‌ದ್ ಕುದ್ದದ್ ಮಲ್ಗೊಕು',**
**'ಕುದ್ದ್ ತಿಂಬೊದಕ್ಕಿಂತ ಕೂಲಿ ಮಾಡಿ ಉಂಬೊದು ಉತ್ತಮ'.**

ಒಂದಾನೊಂದು ಊರ್‌ಲಿ ಎರಡ್ ಮೂರು ಜನ ಜೋಸ್ತಿಗ ಇದ್ದೊ. ಜೋಸ್ತಿಗಂತ ಹೇಳ್ರೆ

ಅವು ಹಿಂಗೆ ಊರಿಂದ ಊರಿಗೆ ಹೋದವು ಬಾರಿ ಮಿತ್ರರ್. ಈ ಮುಂದೆ ಕಾಲ್ನಡಿಗೆಯಲ್ಲಿ ಹೋವ ಕಾಲ. ವಾಹನದ ವ್ಯವಸ್ಥೆ ಇತ್ಲೆ. ಸುಳ್ಯಂದ-ಸುಬ್ರಹ್ಮಣ್ಯದ ಕಡೆಗೆ ಹೋವಷ್ಟು ದೂರಂತ ತಿಳ್ಕೊನಿ. ಹಾಂಗೆ ಅವು ದಾರಿ ನಡ್ಕಂಡ್ ಬಾಕನ ಅವರ ಪೈಕ್‌ಲಿ ಒಬ್ಬ ಹೇಳ್ತ್ 'ನಾವು ಹೆಂಗಾರು ನಡ್ಕಂಡೇ ಹೋದಲ್ಲ. ಹಾಂಗೆ ಈ ದಾರಿ ನಡಂಡ್ ಹೋಕ್ಕೆ ಈ ಕತೆ ಹೇಳ್ರೆ ಒಳ್ಳೊದು'. ಹಾಂಗಾರೆ ಒಂದು ಕತೆ ಹೇಳಿಂತ ಹೇಳ್ತ್. ಅದ್ಕೆ ಮತ್ತೊಬ್ಬ ಏನ್ ಹೇಳ್ತ್ ಅಂವ ಸ್ವಲ್ಪ ನನ್ನಂಗೆ ಸಣ್ಣ ಮಟ್ಟಿನ ಕತೆಗಾರ 'ನಾ ಕತೆ ಹೇಳಿಕೆಲ್ಲ ಹೇಳ್ವೆ. ಆದರೆ ನಾ ಮೂರು ಕತೆ ಹೇಳ್ನೆ. ಮೂರು ಕತೆಗೆ ಮುನ್ನೂರು ರುಪಾಯಿ ಕೊಡಕ್'ಂತ ಹೇಳ್ತ್. ಅದ್ಕೆ ಮತ್ತೊಬ್ಬ ಮೂರ್ನೆಂವ ಉಟ್ಟಲ್ಲೆ ಅಂವ ಏನ್ ಹೇಳ್ತ್ 'ಅಂತ ಕತೆಂತ ಆದರೆ ನಾ ದುಡ್ಡು ಕೊಟ್ನೆಯಾ'ಂತ ಹೇಳ್ತ್. ಹೌದ. ಹೌದು. ಹೌದುಂತ ಹೇಳಿ ಬರೆ ಬಾಯಿ ಮಾತ್ಲೆ ಆಕ್ಕಿಲ್ಲೆ. ನಮ್ಮೊಳಗೆ ನಿಘಂಟು ಆಕ್ಕು. ನಿಘಂಟು ಎಂತದ್ ಮೂರು ಜನ ಒಳೊ ಅಲ್ಲೆ. ಇಬ್ಬರೂ ವಾದ ಮಾಡಿಕಂಡರೂ ಮತ್ತೊಬ್ಬ ಅದರ ತೀರ್ಮಾನಗಾರ ಉಟ್ಟಲ್ಲೆ. ಅಂವ ಏನ್ ಹೇಳ್ತ್ 'ಕೊಡದಿದ್ದರೆ ನಾ ಒಳೆಯ. ನೀ ಹೇಳ್ದು ಹೇಳ್'ಂತ ಹೇಳ್ತ್. ಆಗ ಇಂವ ಕತೆ ಹೇಳಿಕೆ ಶುರು ಮಾಡ್ತ್ ಕತೆಗಾರ. ಆಗ ಅಂವ ಏನ್ ಹೇಳ್ತ್ಂತ ಹೇಳ್ರೆ 'ಇಂದಾ ಒಬ್ಬರಿಗಿಂತ ಇಬ್ಬರ್ ಮೇಲ್'ಂತ ಹೇಳ್ತ್. 'ಮುಂದೆಂತದ್'. ಒಂದು ಕತೆ ಆತ್. 'ಏ ಇದೆಂತ ಹೊಟ್ಟು ಕತೆ ಮಾರಾಯ. ನೀ ಹಿಂಗೆ ಹೇಳ್ರೆ ನೂರು ರೂಪಾಯಿ ಇದ್ಕೆ ಹೋತಲ್ಲೆ'. ಏನು ಮಾಡ್ದು ? ಆತ್ ಇನ್ನೊಂದ್ ಕತೆ ಹೇಳ್. 'ಇನ್ನೊಂದ್ ಕಥೆ ಹೇಂಗೆಂತ ಹೇಳ್ರೆ ಸರಿ ಕೇಳಿಕೊ. ಆಗದಂಗೆ ವಾದ ಮಾಡಿಕೆ ಆಗದ್. ಏನ್‌ಂತ ಹೇಳ್ರೆ, 'ಉಂಡ್‌ದ್, ಕುದ್ದದ್, ಮಲ್ಗೊಗು'ಂತ ಹೇಳ್ತ್. ಅಲ್ಲಿಗೆ ಆತ್ ಎರಡ್ ಕತೆ. 'ಛೆ! ಇದ್ ಅದರಂದಲೂ ಚಪ್ಪೆ ಆತ್. ಇದ್ ಯಾವ ಅರ್ಥ. ಈ ಕತೆಲ್ಲಾ ಹೇಳಿ ನೀ ಏನೆಲ್ಲಾ ಮಾಡಿ ನೀ ಇನ್ನೂರೂ ರೂಪಾಯಿ ಪೀಂಕಿಸುವ ಅಂದಾಜು. ಇದಾತ್ಲೆ ?"ಆತ್ಲೆಂತ ಹೇಳ್ರೆ ನಂಗೆ ಗೊತ್ತಿಲ್ಲೆ. ನಮ್ಮಲ್ಲಿ ಮುಂದೆ ಆದ ಒಪ್ಪಂದ ಹಾಂಗೆ. ಹೌದೊ ? ಅಲ್ಲವೊ ? ಅದ್ ಹೌದು'ಂತ ಮೂರು ಜನನೂ ಹೇಳ್ದೊ. ಅದ್ ಹೆಂಗೂ ಸಾಯಲಿ. ಇನ್ನೊಂದು ಅಕೇರಿದ್ ಕತೆ ಒಳ್ಳೆದಿರ್ದುಂತ ಇಂವ ಗ್ರೇಸಿಕಂಡತ್. 'ಇನ್ನೊಂದ್ ಹೇಳ್'ಂತ ಹೇಳ್ತ್. ಅಕೇರಿನ ಕತೆ ಏನ್ ಹೇಳ್ತ್ಂತ ಹೇಳ್ರೆ 'ಕುದ್ದ್ ತಿಂಬೊದಕ್ಕಿಂತ ಕೂಲಿ ಮಾಡಿ ಉಂಬೊದು ಉತ್ತಮ'ಂತ ಹೇಳ್ತ್. ಮತ್ತೆ ಅಲ್ಲಿಗೆ ಆತ್ ಮೂರು ಕತೆ. 'ಛೆ! ಇದ್ ಯಾವುದೋ ಒಂದು ಕತೆಂತ ಹೇಳ್ದೆ. ಈ ಕತೆಂತ ಹೇಳ್ವಂತದ್ ಪ್ರೇಜನ ಇಲ್ಲೆ. ಹಂಗಾಗಿರಿಕನ ನಿಂಗೆ ಮುನ್ನೂರು ರುಪಾಯಿ ನಾ ಕೊಡ್ದು ಎಲ್ಲಿಂದ ?"ಅದಾತ್ಲೆ ಅದ್ ಒಪ್ಪಂದ ಪ್ರಕಾರ ನೀ ಕೊಡಕೆ'ಂತ. ಅವರೊಳಗೆ ದೊಡ್ಡ ವಾದ ಶುರು ಆತ್.

ವಾದ ಶುರು ಆಗ್ತಾ ಇರ್‌ಕನ ಅವು ಸಾಧಾರಣ ಮಧ್ಯ ದಾರಿಗೆ ಎತ್ತ್ಯೊಳ. ಓ ಈ ಗುತ್ತಿಗಾರ್ ಈ ಕಡೆ ಬಂದೊಂತ ತಿಳ್ಕೊಮ. ಅಲ್ಲಿಗೆ ಬಂದಾಕನ ಅಲ್ಲಿ ಕೆಲವು ಜನ ದೊಡ್ಡ ದೊಡ್ಡವು ಎಲ್ಲ ಒಳೊ. ಹಂಗಾಗಿ ಇರಿಕನ ನಾವು ಆ ದೊಡ್ಡವರಲ್ಲಿಗೆ ಪೋಯಿ. ಅಂತೂ ಅಲ್ಲಿ ಒಬ್ಬ ಅರು

ಇತ್ತ್. ಇದರ ಅರ್ಸು ಹಕ್ಕಳೆ ಹೇಳೊಮಂತ ಇವು ಅರ್ಸುನ ಹಕ್ಕಳೆ ಹೊರಟೊ. ದೂರು ತಕಂಡ್ ಹೋಕನ 'ಈ ವಾದ ನೀವು ಇತ್ಯರ್ಥ ಮಾಡಿಕೊಡೆಕ್'ಂತ. 'ಎಂತದ್ ?"ಹಾಂಗಾರೆ ನಾವು ಹಿಂಗೆ ದಾರಿ ನಡಿಯಕನ ನಮ್ಮೊಳಗೆ ಹಿಂಗೆ ಮಾತಾತ್. ಈ ಮಾತ್‌ಕತೆ ಮಧ್ಯಲಿ ಮೂರು ಕತೆ ಹೇಳ್ನೆ ಮುನ್ನೂರು ರುಪಾಯಿ ಕೊಡೆಕುಂತ ಹೇಳಿತ್ ಈ ಕತೆಗಾರ. ಅದ್ಕೆ ನಾ ಒಪ್ಪಿಕಂಡೆ. ಅದ್ಕೆ ಇಂವ ಒಬ್ಬ ಸಾಕ್ಷಿಯಾಗಿ ನಿಂತತ್. ಈ ಪ್ರಕಾರ ನಮ್ಮಲ್ಲಿ ಆದ ಮಾತಿಗೆ ಅಂವ ಮೂರು ಶಬ್ದ ಹೇಳ್ತ್. ಏನೆಲ್ಲ ಹೇಳ್ತ್. ಅಂದರೆ 'ಒಬ್ಬರಿಗಿಂತ ಇಬ್ಬರ್ ಮೇಲ್' ಅಲ್ಲಿಗೆ ಒಂದು ಕತೆ ಮುಗ್ತ್. ಮತ್ತೆ ಎರಡ್ನೆದ್ ಏನ್‌ಂತ ಹೇಳ್ರೆ 'ಉಂಡ್‌ದ್ ಕುದ್ದ್ ಮಲ್ಗೊಕು'ಂತ ಹೇಳ್ತ್. ಅಲ್ಲಿಗೂ ಒಂದು ಕತೆ ಮುಗ್ತ್. ಅಲ್ಲಿಗೆ ಎರಡ್ ಕತೆ ಮುಗ್ತಲ್ಲೆ. ಮೂರ್ನೆದಾಗಿ ಹೇಳ್ತ್. 'ಕುದ್ದ್ ತಿಂಬೊದಕ್ಕಿಂತ ಕೂಲಿ ಮಾಡಿ ಉಂಬೋದು ಉತ್ತಮಾ'ಂತ ಹೇಳ್ತ್. ಅಲ್ಲಿಗೆ ಅಂವನ ಮೂರು ಕತೆನೂ ಮುಗ್ತ್. ಇಂಥ ಈ ವಾದಲಿ ನಾವು ಬಂದದ್. ಇದ್ಕೆ ಏನು ಮಾಡ್ದು ನೀವೇ ತೀರ್ಮಾನ ಕೊಡಕು'ಂತ ಮೂರು ಜನ ಆ ಅರ್ಸುಗಳಲ್ಲಿ ಹೇಳಿಕಂಡೊ.

ಹೇಳಿಕಂಡಾಕನ ಅರ್ಸು ಕುದ್ದ್‌ಕಂಡ್ ಆಲೋಚನೆ ಮಾಡ್ತ್. ಇದ್ ಕತೆಂತ ಹೇಳ್ರೆ ಮೋಸ ಅಲ್ಲ ಇದ್. ಇದರ್ಲಿ ರಸ ಉಟ್ಟುಂತ ವಾದ ಬೇಡ. ಇದ್ಕೆ ತೀರ್ಮಾನ ರೂಪವಾಗಿ ಮುನ್ನೂರು ರೂಪಾಯಿ ನಾನೇ ಕೊಟ್ನೆಂತ ಅರ್ಸು ಮುನ್ನೂರು ರುಪಾಯಿ ಅವ್ಕೆ ಕೊಟ್ಟತ್. ಕತೆ ಹೇಳುವವಂಗೆ ಈ ಪಂಥ ಕಟ್ಟಿದವಂಗೆ ಅವರ ತೀರ್ಮಾನ ಅಲ್ಲಿಗೆ ಮುಗ್ಸಿ ಅವು ದಾರಿಲೆ ಹೋದೊ. ಅವು ಮುಂದೆ ಹೋಕನ ಮುಂದೆನಾಂಗೆ ಒಗ್ಗಟ್ಟ್. ಬೇಕಾದಾಂಗೆ ಮಜಾ ಮಾಡಿಕಂಡ್ ಅವು ಹೋದೊ. ಇತ್ತ ಈ ಅರ್ಸಂಗೆ ಹನೀಸ್ ಬೆಚ್ಚಾತ್. ಅಂವಂಗೆ ಮಂಡೆಬಿಸಿ ಅಂದರೆ ಈ ಮುನ್ನೂರು ರುಪಾಯಿ ನನ್ನ ಬೊಕ್ಕಸಂದ ಹೋತಲ್ಲೆ. ಇದ್ಕೆ ಕಾರಣನ ನಾ ಕಂಡು ಹಿಡಿಯೊಕುಂತ ಹೇಳಿ ಅರ್ಸು ಆಲೋಚನೆ ಮಾಡ್ತ್. 'ಆಲೋಚನೆ ಮಾಡ್ತಾ ಕುದ್ದರೆ ಇದಕ್ಕೆ ಪ್ರಾಯಶ್ಚಿತ ಆಕ್ಕಿಲ್ಲೆ. ಇದ್ದಾಗಿ ನಾ ಏನ್ ಮಾಡೊಕು ? ಈ ಅರಮನೆ ಬುಟ್ಟ್ ನಾ ಎಲ್ಲಾರ್ ಈಗ ಸಂಚಾರಕ್ಕೆ ಹೊರ್ಡೊಕು. ಇದರ ತಿರ್ಲ್ ಹಂಞ ತಿಳ್ಕೊನೊಕು'ಂತ ಹೇಳಿ ಅಂವ ಮಂತ್ರಿಗೆ ಎಲ್ಲ ಆಡಳಿತಗಳ ಹೇಳ್ತ್. ಹೇಳಿದ್ 'ನಾ ಸ್ವಲ್ಪ ಸಮಯ ದಾಟಿ ಬನ್ನೆ'ಂತ ಅಂವ ಹೊರ್ಟತ್.

ಅಂವ ಹೊರ್ಟ್ ದಾರ್ಲಿ ಹೋಗ್ತಾ ಇರ್‌ಕನ (ಅರಸನಾಂಗೆ ಹೋತ್ಲೆ ಅಂವ. ವೇಷ ಮರ್ಸಿ ಹೋಗುಟು) ಏನಾತ್‌ಂತ ಹೇಳ್ರೆ ಅಂವಂಗೆ ತಲೆಲಿ ಇದೇ ಆಲೋಚನೆ. ಒಂದ್ –'ಒಬ್ಬರಿಗಿಂತ ಇಬ್ಬರು ಮೇಲ್'. ಎರಡು –'ಉಂಡ್‌ದ್ ಕುದ್ದ್, ಮಲ್ಗೊಕು'. ಮೂರ್ –'ಕುದ್ದ್ ತಿಂಬಲ್ಲಿಂದ ಕೂಲಿ ಮಾಡಿ ಉಂಬೊದು ಉತ್ತಮ'ಂತ ಹೇಳ್ವಂತದಕೆ ಮೂರು ಪ್ರಶ್ನೆಗೆ ಅವನಲ್ಲಿ ಉತ್ತರ ಹೊಳಿತಾ ಇತ್ತ್. ಅಷ್ಟಾಕನ ಅಂವಂಗೆ ಸುರೂಗೆ ಹೇಳ್ದಂತದ್ದ್ 'ಒಬ್ಬರಿಗಿಂತ ಇಬ್ಬರ್ ಮೇಲ್'ಂತ ಹೇಳ್ತಲ್ಲೆ ಇದ್ಕೆ ಒಂದು ಕಾರಣ ಉಟ್ಟು: ಎಂತದ್‌ಂತ ಹೇಳ್ರೆ ನಾ ಈ ದಾರಿಲಿ ಒಬ್ಬನೇ ಹೋವಂವ. ಹಂಗೆ ಇರಿಕನ ನಂಗೆ ಒಂದು ಜೊತೆಗೆ ಏನಾರು ಒಂದು ಸೇರ್ಸಿಕನಕುಂತ

ಆಲೋಚನೆ ಮಾಡಿಕಂಡ್ ಹೋಕನ ಇಂವನ ಜೊತೆಗೆ ಯಾರೋಳ ? ಯಾರೂ ಇಲ್ಲೆ ? ಹಾಂಗೆ ಮಾರ್ಗಲಿ ಹೋಗ್ತಾ ಇರ್ಕನ ಒಂದು ಚೋಡಿನ ಒಳಗೆ ಒಂದು ದೊಡ್ಡ ಎಸ್‌ಂಡ್ ಇತ್ತ್. ಎಸ್‌ಂಡ್ ಇಂವನ ಕಂಡಕೂಡ್ಲೆ ಮಾಟೆಗೆ ಹುಕ್ಕತ್. ಮಾಟೆಗೆ ಹುಗ್ಗ್‌ಕನ ಏನ್ ಮಾಡ್ತ್. ಇದಾದರೂ ಒಂದು ಜೀವ ಇದ್ದ ಪ್ರಾಣಿ ತಾನೆ. ಇದರ ಹಿಡ್ಕನಕುಂತ ಹೋಗಿ ಮಾಟೆಗೆ ಎಲ್ಲ ಕೈ ಹಾಕಿತ್. ಅದು ಮತ್ತೂ ಸ್ವಲ್ಪ ಒಳಗೆ ಹೋತ್. ಒಳಗೆ ಹೋಕನ ಇಂವ ಅದ್ಕೆ ಕೋಲು ಗೀಲು ಎಲ್ಲ ಹೆಟ್ಟಿ ಎಸ್‌ಂಡ್‌ನ ಹೊರಗೆ ಎಳ್ತ್. ಎಳ್ದರೂ ಇವಂಗೆ ಸುಲಭಲಿ ಹಿಡಿಯಕೆ ಆದೆಯಾ. ಅದ್ ಕೊಂಬ ಕಾಲ್‌ಲಿ ಇವಂಗೆ ಕಚ್ಚಿಕೆ ನಿಮುರ್ದೆ. ಇದರ ಕಂಡ್‌ದ್ ಏನೋ ಮಾಡಿ ಅದ್ಕೆ ಅಡ್ಡ ಕೋಲು ಅದ್ ಇದ್ ಎಲ್ಲ ಇಸಿ ಒಂದು ಹಾಲ್ ಬೊಳ್ಳಿ ಹರ್ಕಂಡ್ ಈ ಎಸ್‌ಂಡಿಗೆ ಕಟ್ಟಿದ್ ಅದರ ಕೈಲಿ ನೇಲ್ಸಿಕಂಡ್ ಹೋತ್. ನೇಲ್ಸಿಕಂಡ್ ಮುಂದೆ ಹೋಕನ ಇಂವಂಗೆ ಗ್ರಾಚಾರಕೆ ಸಣ್ಣಂಗೆ ಹೇಲ್‌ಬಾತ್. ಇನ್ನೇನು ಮಾಡ್ದು. ಈ ಎಸ್‌ಂಡ್‌ನ ಬುಟ್ರೆ ಓಡ್ದೆ. ಹಿಡ್ಕಂಡ್ ಹೇಲಿಕೆ ಕುದ್ರೊಕಷ್ಟಂತ ಗ್ರೆಸಿ ಒಂದು ಪುದೆಲ್ ಹಕ್ಕಲೆ ಹೋಗಿ ಇಂವ ಎಸ್‌ಂಡ್‌ನ ದೂರಲಿ ಹಿಡ್ಕಂಡ್ ಅಲ್ಲಿ ಕುದ್ರಿಕೆ ಅಂದಾಜು ಮಾಡ್ಕನ ಅಲ್ಲಿ ಏನಾಗುಟ್ ಗೊತ್ತುಟ, ಒಂದು ದೊಡ್ಡಾ ಸರ್ಪ ಸುರುಳಿ ಹಾಕಿ ಮಲ್ಗಿಟು. ಇಂವ ಅದರ ಮೇಲೆ ಕಾಲ್ ಇಸಿ ಕುದ್ರೊಕಷ್ಟೆ. ಅಂತು ಇಂವ ಕುದ್ರಿಕಾಕನ ಅದ್ ಬುಷ್‌ಂತ ಮೇಲೆ ಎದ್ದತ್. ಮೇಲೆ ಎದ್ರಿಕೆ ಆಕನ ಈ ಎಸ್‌ಂಡ್ ಉಟ್ಟಲೆ. ಅದು ಸ್ವಲ್ಪ ದೂರಲಿ ಹಿಡ್ಕಂಡದರ್ಲೂ ಅದ್ ಕೊಂಬ ಕಾಲ್‌ಲಿ ಇಂವಂಗೆ ಕಚ್ಚಿಕೆ ಮುಂದೆ ನಿಮುರ್ತ ಅದರ ಮಧ್ಯಲಿ ಈ ಹಾವು ಮೇಲೆ ಎದ್ದ ಕೂಡ್ಲೆ ಎಸ್‌ಂಡ್ ಹಿಡ್ಕನ್ತ್. ಎಸ್‌ಂಡ್ ಹಿಡ್ಕಂಡ್ ಆಕನ ಈ ಕಿತಾಪತಿಲಿ ಅಂವಂಗೆ ಮತ್ತೆ ಹೇಲ್ ಬಾದೊ. ಅವಂಗೆ ಹೇಲ್ ಇಲ್ಲೆ ಏನೂ ಇಲ್ಲೆ. ಆದರೂ ನನ್ನ ಜೀವ ಬದ್ಕಿತ್. ಇಂವನ ಸುರೂನ ಪ್ರಶ್ನೆಗೆ ನನ್ನ ನೂರು ರುಪಾಯಿ ಹೋದರೂ ಚಿಂತೆ ಇಲ್ಲೆ. ಇದರ್ಲಿ ನಾ ಬೊದ್ಕಿದೆಂತ ಹೇಳ್ತ್. ಅಲ್ಲಿಂದ ಎದ್ದ್ ಏನೆಲ್ಲಾ ಮಾಡಿ ಆ ಹಾವುನ ಹೊಡ್ದ್ ಬೊಡ್ದ್ ಕೊಂದ್ ಅಲ್ಲಿಂದ ಮುಂದೆ ಹೊರ್ಟತ್ ಅಂವ.

ಮುಂದೆ ಹೊರ್ಟ್ ಆಗಿ 'ಒಬ್ಬರಿಗಿಂತ ಇಬ್ಬರು ಮೇಲು'ಂತ ಸಮಸ್ಯೆಗೆ ಉತ್ತರ ಸಿಕಿತ್. ಅಲ್ಲಿಂದ ಈ ಎಸ್‌ಂಡ್‌ನ ಅತ್ತ ಬೊಳ್ಳಿ ಬಿಚ್ಚಿ ಬುಟ್ಟತ್. ಬುಟ್ಟ್ ಮುಂದೆ ಹೋತ್. ಮುಂದೆ ಹೋಗಿ ಹೋಗಿ ಹೋಗಿ ಒಂದಾನೊಂದು ಊರಿಗೆ ಎತ್ತಿತ್. ಅವನಕ್ಕಳೆ ಇನ್ನೆರಡ್ ಪ್ರಶ್ನೆಗೆ ಉಳ್ದೊಳ ಅಲ್ಲೆ. ಇದ್ಕೆನು ದಾರಿ ಮಾಡ್ದುಂತ ಒಂದ್ ಸಣ್ಣ ಹಳ್ಳಿಗೆ ಹೋತ್. ಹಳ್ಳಿಂತ ಒಂದು ಪೇಟೆ ಅಲ್ಲಿ. ಪೇಟೆ ಆದರೂ ಆ ಪೇಟೆಯ ಮಧ್ಯಲಿ ಒಂದು ಸಣ್ಣ ಮನೆ. ಬಾರಿ ಚೊಕ್ಕ ಆಗಿ ಉಟ್ಟು. ಅಲ್ಲಿ ಹೊರಗೆ ಎಲ್ಲ ಗಿಲಿಟ್ ಎಲ್ಲ್ ಕೊಟ್ಟ್‌ಕಂಡ್ ನೋಡ್ಕನ ಬಾರೀ ಸೋಕು ಕಂಡದೆ ಅದರ ಒಳಗೆ ಹೋಕುಂತ ಸಾಧಾರಣ ಹುಡ್ಗರಿಗೆ ಅಂದಾಜಾದು. ಆದರೂ ಇಂವಂಗೆ ಪರಿಚಯ ಇಲ್ಲದರಿಂದಾಗಿ ಅದರೊಳಗೆ ಹೋತ್ಲೆ. ಹೋಗದೆ ಆಚೆಗೆ ಹೋಗಿ ಹೋಟ್ಲ್‌ಲಿ ಕಾಫಿ

ಒಡಿಯಕೆಂತ ಹೋಗಿ ಕುದ್ದತ್. ಕುದ್ದಾಕನ ಅಲ್ಲಿ ನಾಲ್ಕಾರು ಹುಡ್ಗರ್ ಎಲ್ಲ ಅಲ್ಲಿ ಒಳೊ. ಇಷ್ಟಾಕನ ಇಂವ ಒಬ್ಬ ಗುರ್ತ ಇಲ್ಲದಂವ ಅಲ್ಲ. ಇಂವ ಆ ಹುಡ್ಗರೊಟ್ಟಿಗೆ ಕೇಳ್ತ್ 'ಅಣ್ಣಾಣ್ಣ ಓ ಅಲ್ಲೆ ಬಾಕನ ಒಂದು ಸಣ್ಣ ಮನೆ ಲಾಯ್ಕ್‌ದ್ ಉಟ್ಟಲ್ಲ ಅದ್ ಯಾರ್ದಾತ್'ಂತ ಕೇಳ್ತ್. ಕೇಳಿ ಆಕನ ಅವು ಹೇಳ್ದೊ 'ಅಚ್ಯೋ ಮಾರಾಯ ನಿಂಗೆ ಆ ಮನೆ ಸುದ್ದಿ ಯಾಕೆ? ಅದ್ ಈ ಊರ್‍ಲಿ ಬಾರಿ ಐಶ್ವರ್ಯವಂತರ ಮನೆ. ಅಲ್ಲಿ ಗಂಡ್ ಮಕ್ಕ ಇಲ್ಲೆ ಅಲ್ಲಿ ಇರ್ದು ಹೆಣ್ಮಕ್ಕ. ಅದೊಂದು ಸೂಳೆ ಮನೆಂತ ಬಾರಿ ಮುಂದೆಂದಲೇ ಹೇಳ್ತಾ ಇದ್ದೊ. ನಮ್ಮ ಅಜ್ಜಂದರ ಕಾಲಲಿ ಇಂತ ಸ್ಥಿತಿಲಿ ಇರಿಕನ ಇಂದಿಗಾಕನ ಏನಾಗುಟುಂತ ಹೇಳ್ರೆ ಅಲ್ಲಿಗೆ ಯಾವ ಮೊನ್ಸರೂ ಹೋದ್ಲೆ. ಅದ್ ಯಾಕೆ ಹೋದ್ಲೆಂತ ನಾವ್ಗೂ ಗೊತ್ತ್ಲೆ'ಂತ ಆ ಹುಡ್ಗರ್ ಹೇಳ್ದೊ. ಎಲಾ ಇದೊಂದು ದೊಡ್ಡ ಆಶ್ಚರ್ಯ ಆತಲ್ಲೆ. ಆದರೂ ಊರ್‍ಲಿ ಇರುವ ವಿಷಯ ಏನೂಂತ ತಿಳಿವಂತರ ಮುಖ್ಯ ಇವನ ಕೆಲಸ. ಇಂವ ಒಳ ಆಂತರ್ಯಲಿ ಇಂವ ಅರ್ಸು ಅಲ್ಲ. ಇಂವ ಏನ್ ಮಾಡ್ತ್ ನಂಗೆ ಬೇಡಪ್ಪಾ ಅದರ ಸುದ್ದಿ. ಅದರ ಕೇಳಿ ಬುಟ್ಟದ್ 'ನಾ ಒಬ್ಬ ಪರ ಊರಿನವ'ಂತ ಹೇಳಿಕನ್ತ್. ಅಂತೂ ಆ ಹೊಟ್ಲ್‌ಲಿ ಕಾಫಿ ಕುಡ್ತ್. ಕಾಫಿ ಕುಡ್ದ್ ಸೀದ ಈ ಮನೆಗೇ ಬಾತ್ ಅಂವ. ಈ ಸೂಳೆ ಮನೆಗೆ. ಇಲ್ಲಿ ಬಂದಾಗಿ ಆಕನ ಅಲ್ಲಿ ಜನಂಗ ಬೇರೆ ಯಾರೂ ಇಲ್ಲೆ. ಒಂದು ಒಳ್ಳೊ ಪೊರ್‍ಲಿನ ರೂಪವತಿಯಾದ ಗೂಡೆ ಉಟ್ಟು. ಬಂದಾಕನ ಅದೂ ಇಂವನೂ ಮಾತಾಡಿ ಆತ್. ಮಾತಾಡಿ ಆಕನ ಇದರ ವ್ಯಾಪ್ತಿ ಏನ್ ಬುದ್ದಿ ಏನ್‌ಂತ ಅಂವ ತಿಳ್ಕನ್ತ್. ತಿಳ್ಕಂಡ್ ಆಗಿ ಹೇಳ್ತ್ 'ನಾ ಇಂದ್ ನಿನ್ನ ಮನೆಗೆ ಕತ್ತಳೆಗೆ ಬನ್ನೆ'ಂತ ಹೇಳ್ತ್. ಆದುಂತ ಒಪ್ಪಿತ್ ಅದ್. ಒಪ್ಪಿ ಆಕನ ಇಂವನ ಮನಸಿಗೆ ಆತ್. ಕತ್ತಲೆಗೆ ಬನ್ನೆಂತ ಹೇಳ್ದ ಮೇಲೆ ನನ್ನ ಕತ್ತಲೆನ ಊಟ ತೀರ್‍ದೊಕಲ್ಲೆಂತ ಹೇಳಿಕೊಂಡ್ ನಾ ಸಾಧಾರಣ ಒಂದು ಒಂಬತ್ತ್ ಗಂಟೆ ಸಮಯಕ್ಕೆ ಬನ್ನೆಂತ ಇಂವ ಅಲ್ಲಿಂದ ಹೊರ್ಟತ್. ಹೊರ್ಟ್ ಅಲ್ಲಿ ಇಲ್ಲಿ ನಿತ್ತ್‌ದ್ ಅದೇ ಆ ಹೊತ್ತ್‌ನ ಇಂವ ಕಳ್ತ್. ಕಳ್ದ್‌ದ್ ಒಂದು ಹೊಟ್ಲ್‌ಲಿ ಊಟ ಎಲ್ಲ ಮಾಡಿ ಒಂಬತ್ ಗಂಟೆ ಸಮಯಕ್ಕೆ ಮನೆಗೆ ಎತ್ತಿತ್. ಎತ್ತಿಯಾಕನ ಏನಾಗುಟುಂತ ಹೇಳ್ರೆ ಅಲ್ಲಿಗೆ ಯಾರೂ ಹೋದವು ಇಲ್ಲೆ. ಹೋಗದೆ ಹಲವು ಕಾಲ ಆದ್ದರಿಂದ ಈ ಸೂಳೆ ಮಲ್ಗುವಂತ ಕೋಣೆಲಿ ಮೊಂದ್ರಿ ಎಲ್ಲ ಹಾಕಿ ದೀಪ ಹೊತ್ತಿಸಿ ಅದು ಮುಂದೆಯೇ ಅಲ್ಲಿ ಮಲ್ಗಿಟು. ಇಂವ ಹೋವ ಕಾಲಲಿ ಅದಕ್ಕೆ ಒಳ್ಳೊ ನಿದ್ದೆ. ಈ ನಿದ್ದೆ ಅದರ ಸ್ವಭಾವ. ಅದ್ ನಿಲ್ಗಿಕಂಡಿತ್ತ್. ಇಂವ ಹೋತ್ ಹಾಸಿಗೆಲಿ ಕುದ್ದಾಂಗೆ ಮಾಡ್ತ್ ಮಲ್ಗಿತ್. ಮಲ್ಗಿ ಆಕನ ಅಂವಂಗೆ ಗೇನ ಆತ್. 'ಉಂಡ್‌ದ್ ಕುದ್ದ್ ಮಲ್ಗೊಕು'ಂತ ಅಲ್ಲ ಇಂವ ಹೇಳ್ದ್. ಈ ನೂರು ರುಪಾಯಿ ತಿಂದವ. ಹಂಗಾಗಿರಿಕನ 'ನಾ ಹೊರಟಲ್ಲಿಂದ ಎಲ್ಲಿನೂ ಕುದ್ದತ್ಲೆ'ಂತ ಹೇಳ್ತ್. ಅಂವ ಮಲ್ಗಿದಲ್ಲಿಂದ ಎದ್ದತ್. ಎದ್ದಾಕನ ಅಲ್ಲೊಂದ್ ಏನ್ ಸಂಗತಿ ಆತ್ ಗೊತ್ತುಟ. ಈ ನಿದ್ದೆ ಮಾಡಿದಂತ ಸೂಳೆನ ಮೂಗಿಂದ ಒಂದು ಸರ್ಪ ಹೊರಟ್ ಇಂವ ಮಲ್ಗೊಕಾದಂತ ತಲೆ ದಿಂಬುನ ಭಾಗಕ್ಕೆ ಕಚ್ಚಿತ್. ಇಂವ ಮಲ್ಕಂಡ್ ಇದ್ದಿದ್ದರೆ ಇಂವನನ್ನೇ ಕಚ್ಚ್‌ತ್ತಿತ್ತ್. ಇಂವ

ಎದ್ದ್‌ಕುದ್ದದರಿಂದ ಅದರ ಕಂಡಾಂಗೆ ಆತಷ್ಟೆ. ಈ ಸರ್ಪ ಹೊರ್‍ಟ್ ಅದ್ಕೆ ಕಚ್ಚುವಂತ ದೃಶ್ ನೋಡಿ ಇಂವನ ಬಾಲ್‌ಕತ್ತಿ ತೆಗ್ದ್ ಕಡ್ತ್ ಅದ್ಕೆ. ಕಡ್ದ ಮೇಲೆ ಅದ್ ಹಿಂದಕ್ಕೆ ಮೂಗಿಗೆ ಹೋದು ಹೆಂಗೆ. ಎರಡ್ ತುಂಡಾತ್ ಅದ್. ಆ ತುಂಡುನ ತೆಗ್ದ್ ಮಂಚದ ಅಡಿಗೆ ಹಾಕಿತ್. ಇಂವ ಸುಮ್ಮಂಗೆ ಮಲ್ಗಿತ್. ಮತ್ತೆ ಇವಂಗಾರು ನಿದ್ದೆ ಬಂದದೆನಾ. ಹಾಂಗೆ ಹೊಸಿ ಹೊತ್ತ್ ಕಳಿಯಕ ಆಕನ ಅವಳಿಗೆ ಎಚ್ಚರಿಕೆ ಆತ್. ಅವಳಿಗೆ ಎಚ್ಚರಿಕೆ ಆಗಿ ನೋಡ್ಕನ ಅವಳಿಗೆ ಅಭ್ಯಾಸವೇ ಅದ್ ಇಂವನ ಮೆಲ್ಲ ಮುಟ್ಟಿ ನೋಡ್ತ್. ಇದ್ ಮುಂದೆ ಬಂದವ್ಕೂ ಆದ ಗತಿ ಅದೇ. ಇದ್ ಮುಂದ ಬಂದವು ಆದ ಗತಿ ಅದೇ. ಇವು ಮುಂದೆ ಬಂದವು ಅದರೊಟ್ಟಿಗೆ ಮಲ್ಗುದು. ಮಲ್ಗಿ ಅದ್ ನಿದ್ದೆ ಮಾಡ್ಕನ ಈ ಸರ್ಪ ಬಂದ್ ಅವರ ಕಚ್ಚಿ ಕೊಲ್ಲುದು. ಅಂತೂ ಇಂವನೂ ಅದೇ ರೀತಿ ಸತ್ತುಟ್ಟಂತ ಮುಟ್ಟಿ ನೋಡ್ಕನ ಇಂವ ಎಂತದ್‌ಂತ ಕೇಳ್ತ್. 'ಆಯ್ಯೋ ಮಾರಾಯ ಸಂಗತಿ ಹಿಂಗಿಂಗೆ. ಈ ಮೊದಲು ಯಾರ್ ಬಂದರೂ ನಾ ಸೂಳೆಂತ ನನ್ನ ವಂಶ ಪಾರಂಪರ್ಯಂದಲೇ ಬಂದುಟು. ಆದರೆ ಇಲ್ಲಿವರೆಗೆ ನನ್ನ ಕಾರ್‌ಬಾರ್‌ಲಿ ನನ್ನ ಜೊತೆ ಮಲಗಿದವು ಅವು ಬೊಳ್ಪಿಗೆ ಜೀವ ಇದ್ದ್ ಹೋದವು ಯಾರ್ ಇಲ್ಲೆ. ಹಂಗಾಗಿ ಇರಿಕನ ಅದರ ಗೊತ್ತಾಗಿ ಎಲ್ಲವೂ ಆವರಷ್ಟಕ ಯಾರೂ ಇಲ್ಲಿಗೆ ಬಾರಟ ಇಲ್ಲೆ. ನನ್ನ ಗತಿಯೂ ಬಾರಿ ಶೂನ್ಯ ಆಕ್ಕೊಂಡುಟುಂತ ಹೇಳ್ತ 'ಹಾಂಗೆಯ ಹಂಗಾರೆ ಹಂಗಾರೆ ನಾ ಬದ್ಕ್‌ಯೊಳೆ ಅಲ್ಲೆ. ಅದೇ ನೀ ಬದ್ಕ್‌ಯೊಳ. ನೀ ಹೆಂಗ ಬದ್ಕಿದ್? ಈಗ ನಂಗೆ ದೊಡ್ಡ ಸಮಸ್ಯೆ ಆಗ್ಯೊಳದ್'. 'ಹಾಂಗಾಗಿದ್ದರೆ ನಾವು ಮಲ್ಗಿದಂತ ಈ ಮಂಚದ ಅಡಿ ನೋಡ್'ಂತ ಹೇಳ್ತ್. ಇದ್ ಅಡಿ ನೋಡ್ರೆ ಎಂತದ್. ಒಂದು ಸರ್ಪ ಎರಡ ತುಂಡಾಗುಟು. ಆಗ ಹೋದಂವ ಅದರ ವಿಷಯನ ಕಣ್ಣಾರೆ ಕಂಡಂವ. ಆಗ ಇದ್ ಹೇಳ್ತ 'ಇದ್ ಹೆಂಗಿತ್ತ್, ಹೆಂಗಾತ್ ನಂಗೆ ಗೊತ್ತೆ. ನಂಗೆ ನಿದ್ದೆ ಬಂದ ಕಾಲಲಿ ಹಿಂಗೆ ಆದೆ'ಂತ ಹೇಳ್ತ್. 'ಈಗ ನಾ ತಿಳ್ಕಂಡೆ ಅಷ್ಟೆ. ಹಂಗಾಗಿ ಇರಿಕನ ವಂಶ ಪಾರಂಪರ್ಯಲಿ ಸೂಳೆತನಂತ ನನ ಮನೆತನಕ್ಕಿದ್ದರೂ ನಾ ಯಾರಿಗೂ ಸೂಳೆ ಆತ್ಲೆ. ಇನ್ನು ಮುಂದೆಗೆ ನೀನೇ ನನ್ನ ಆಳುವಂ ಗಂಡನೇ ಆಕ್ಕು ನಾ ಈ ಸೂಳೆತನನ ಬುಟ್ನೆ'ಂತ ಅದ್ ಕೇಳಿಕಂಡತ್. ಆಗ ಅಂವ ಅರ್‍ಸು ಅಲ್ಲ ಸೂಳೆಲಿ ಇರುವಂತಹ ಈ ಕೆಟ್ಟತನ ಹೋತ್. ಸರಿ ಇನ್ನು ಮುಂದೆ ಇದರ ಸರಿದಾರಿಗೆ ತರಕ ಇಂತ ಪಾಪದವರ ರಕ್ಷಣೆ ಮಾಡಕ್‌ಂತ ಹೇಳುವ ಧ್ಯೇಯ ಅವನಲ್ಲಿ ಮೊದಲೇ ಉಟ್ಟು. ಪ್ರಕಾರ ಇಂವ ಅಲ್ಲಿ ಇತ್ತ್. ಅಲ್ಲೇ ಇದ್ದಾಗಿ ಆಕನ ಇಂವನ ಎರಡೂ ಪ್ರಶ್ನೆಗೆ ಉತ್ತರ ಸಿಕ್ಕಿತ ಇಲ್ಲಿಯೂ ಅಂವ ಸಾಯತ್ತಿತ್ತ್.

ಇನ್ನ್ ಒಂದೇ ಒಂದು ಪ್ರಶ್ನೆ ಇರ್‍ದು. ಎಂತದ್ 'ಕುದ್ದ್ ತಿಂಬೊದಕ್ಕಿಂತ ಕೂಲಿ ಮಾ ಉಂಬೊದು ಉತ್ತಮ'ಂತ ಅಂವ ಹೇಳ್ತ್. ಇದ್ಕೇನು ದಾರಿ? ಸೂಳೆ ಮನೆಲೇ ಇತ್ತ್. ಕೆಲ ಕಾಲ ಅಲ್ಲೇ ಇದ್ದರೆ ಇವಂಗೆ ಕೆಲಸ ಎಂತದ್. ಇಂವ ಬೊಳ್ಪಿಗೆ ಎದ್ದ್ ದೂರ ಹೊರ ಕುದ್ದ್‌ಕಸ್ತ್. ಹಿಂಬೊತ್ತಿಗೆ ಇದರೊಟ್ಟಿಗೆ ಮಲ್ಗುದು ಇಷ್ಟೆ ಕೆಲಸ. ಕೆಲವು ಜನ ಅಲ್ಲಿ ಮಾರ್ಗ

ಹೋವವು ಎಲಾ ಇವನ ಗ್ರಾಚಾರ. ಇಂವ ಒಂದು ಒಳ್ಳೊ ಹೈದ. ಇದರ ಮನೆಲಿ ಇಂವ ಒಂದು ಸ್ವಲ್ಪ ಬಾಳ್ತರ ಬಾವ ಅಂದಾಜಿಲಿ ಉಟ್ಟು. ಏನ್'ಂತೆಲಿ ನೋಡಿಕಂಡ್ ಅವರಷ್ಟಕೆ ಮಾತಾಡಿಕಂಡಿದ್ದೊ. ನಗಾಡಿಕನ್ನು ಹೋದು ಬುಟ್ರೆ ಇಂವನ ಅಲ್ಲಿ ಯಾರಿಗೂ ಗುರ್ತವೂ ಇಲ್ಲೆ. ಇಂವ ಯಾರೊಟ್ಟಿಗೂ ಮಾತಾಡ್ದು ಇಲ್ಲೆ. ಕೊನೆಗೆ ಆಕನ ಇಂವಂಗೆ ಏನಾತ್'ಂತ ಹೇಳ್ರೆ 'ಕುದ್ದು ತಿಂಬಲ್ಲಿಂದ ಕೂಲಿ ಮಾಡಿ ಉಂಬೊದು ಉತ್ತಮ'ಂತ ಹೇಳುದಕ್ಕೆ ನಿದರ್ಶನ ಪಡ್ಕನೊಕುಂತ ಹೇಳಿ ಇಂವ ಒಂದು ದಿನ ದೊಡ್ಡವರ ಮನೆಗೆ ಕೆಲಸಕ್ಕೆ ಹೋವಲ್ಲಿ ಒಬ್ಬರ ಕರ್ದ್ ಕೇಳ್ತ್. 'ಅಣ್ಣಾಣ್ಣ ನೀವು ದೂರ ಹೋವವು?''ನಾವು ಕೆಲ್ಸಕೆ ಹೋದು'. 'ನಾ ಬಂದರೆ ನಂಗೂ ಕೆಲ್ಸ ಸಿಕ್ಕುದೊ'. 'ಕೆಲ್ಸ ಸಿಕ್ಕುದಪ್ಪ. ತೋಟದವರಲ್ಲಿ ಹೋದರೆ ಕೆಲ್ಸಕ್ಕೇನ್? ನಾವು ಅಲ್ಲಿಗೆ ಹೋದು'. 'ಹಂಗಾದರೆ ನೀವು ಇಂದ್ ಕೇಳಿಬನ್ನಿ. ನಾಳೆ ನಾ ಕೆಲಸಕ್ಕೆ ಬನ್ನೆ'ಂತ ಇಂವ ಹೇಳ್ತ್. ಆದುಂತ ಹೇಳಿ ಅವು ಒಪ್ಪಿಕಂಡ್ ಹೋದೊ. ಹೋದ್ದ್'ಂತ ಹೇಳ್ರೆ ಅವು ದೊಡ್ಡವರಲ್ಲಿಗೆಂತ ಹೇಳೊಮ. ಅಲ್ಲಿಗೆ ಹೋಗಿ ಆಕನ ಹೇಳ್ದೊ, 'ಇಂದೆನಿ ಆ ಸೂಳೆಮನೆಲಿ ಒಂದ್ ಗಂಡ್ಸ್ ಉಟ್ಟು. ಅಂವ ಕೆಲ್ಸಕೆ ಬಂದದೆ ಗಡ'. 'ಅಯ್ಯೊ ಮಾರಾಯ ಅಂವ ಯಾರ್'ಂತ್ ಗೊತ್ತೆ. ನಾವು ಸುಮಾರ್ ದಿನಂದ ನೋಡ್ತಾ ಒಳೊ. ಹಾಂಗೆ ನಮ್ಮಲ್ಲಿ ಇಂದ್ ಅಂವನೇ ಹೇಳ್ತ್'. 'ಆತ್ ಹಂಗಾರೆ ಬರ್ಲಿ. ನಾಳೆ ನಿಮ್ಮೊಟ್ಟಿಗೆ ಬಾಕನ ಕರ್ಕಂಡ್ ಬನ್ನಿ'ಂತ ಹೇಳ್ದೊ. ಹೇಳಿ ಆಕನ ಅದೇ ದಿನ ಹಿಂಬೊತ್ತಿಗೆ ಅವು ಬಾಕನ ಹೇಳ್ದೊ 'ನಾಳೆ ನಮ್ಮೊಟ್ಟಿಗೆ ಬರೊಕಡ. ನಾಳೆ ನಾವು ಬಂದವೆ ಇಲ್ಲಿ. ಬಾಕನ ನೀ ನಮ್ಮೊಟ್ಟಿಗೆ ಬಾ'ಂತ ಹೇಳ್ದೊ. ಮಾರನೆ ದಿನ ಇಂವ ಏನ್ ಹೇಳ್ತ್. ಏಷ್ಟಾರು ಮುಂದೆ ಸೂಳೆಂತ ಹೇಳಿ ಊರಿನವ್ಕೆ ಪ್ರಚಾರ ಇದ್ರೂ ಆಗ ಅದ್ ಸೂಳೆ ಅಲ್ಲ. ಇಂವನ ಹೆಣ್ಣ್. ಇಂವ ಹೇಳ್ತ್, 'ನಾ ಓ ಇಂತ ಗೌಡರಲ್ಲಿಗೆ ಕೆಲಸಕ್ಕೆ ಹೋನೆ. ನೀ ಮಧ್ಯಾಹ್ನಕ್ಕೆ ಆಕನ ನಂಗೆ ಎರಡ್ ಗಂಜಿ ತಕಂಡ್ ಬರೊಕ್'ಂತ ಹೇಳ್ತ್. 'ಆದು'ಂತ ಹೇಳ್ತ್. ಮಾರನೆ ದಿನ ಕೆಲಸದವರೊಟ್ಟಿಗೆ ಇಂವ ಕೆಲಸಕ್ಕೆ ಹೋತ್. ಕೆಲಸಕ್ಕೆ ಹೋಗಿ ಸುಮಾರು ಹತ್ತ್ ಹನ್ನೊಂದು ಗಂಟೆ ಆಕನ ಆ ದೊಡ್ಡವು ಬಂದೊ ಅಲ್ಲಿ. 'ತೋಟಗಾರ ಯಾರಿಯಾ ಹೊಸಬ ಕೆಲಸಕೆ ಬನ್ನೆಂತ ಹೇಳ್ದ'ಂವಂತ ಕೇಳ್ತ್. 'ಇಂವ ನಾನೇ ಅಣ್ಣ'ಂತ ಹೇಳ್ತ್. 'ಎಲ್ಲಿಯ ನಿನ್ನ ಊರು ?' 'ನಾವು ಅತ್ತ ಸುಳ್ಯ ಕಡೆ ಆತ್'. 'ಎಂತದ್ ನೀ ಮಧ್ಯಾಹ್ನಕ್ಕೆ ಬುತ್ತಿಮನಿ ತಂದೊಳ. ಊಟದ್ದ್ ಏನ್ ಏರ್ಪಾಡ್'ಂತ ಕೇಳ್ದೊ. 'ಊಟ ಅಲ್ಲಿಂದ್ ಅದ್ ತಾದು'. 'ಅದ್'ಂತ ಹೇಳ್ರೆ?''ಅದ್ ನಮ್ಮದ್'. 'ಅಯ್ಯೋ ಮಾರಾಯ ನೀ ಸೂಳೆ ಮನೆಲಿದ್ದವ ಗಡ. ನೀ ನಮ್ಮದ್'ಂತ ಹೇಳ್ಯ ಅಲ್ಲ. ಅದ್ ನಿಂಗೆ ಗಂಜಿ ತಾಕ್ಕೆ ಉಟ್ಟ. ಅಂತಾ ಸೂಳೆಗೆ ನಾವು ಕೂಡ ಹೆದ್ರಿಕಂಡವೆ. ಅದರೊಟ್ಟಿಗೆ ಮಾತಾಡೊಕ್ಕಾರೆ ಲೈಸನ್ಸ್ ಬೇಕ್. ಹೀಂಗಿರಿಕನ ನಿಂಗೆ ಗಂಜಿ ತಾದುಂತ ಆದರೆ ನಾವು ನಂಬ' ಈ ದನಿಕಾರ ಹೇಳ್ದೊ. 'ಅಲ್ಲ ತಂದರೆಂತ ?' ಇಂವ ಮೆಲ್ಲ ಹೇಳ್ತ್. ಇಂವ ಬುದ್ಧಿವಂತ ಆದ್ದರಿಂದ ಅವರೊಟ್ಟಿಗೆ ಜೋರ್ಲಿ ಮಾತಾಡ್ತ್'ಲೆ. ಅಷ್ಟಾಕನ ಅವು

ಹೇಳ್ದೊ, 'ನಿಂಗೆ ಆ ಸೂಳೆ ಗಂಜಿ ತಂದ್ ಕೊಟ್ಟ್ ಬುಡ್ತ್‌ಂತ ಆದರೆ ನಮ್ಮ ಈ ಭೂಮಿ, ಕಾನ
ಎಲ್ಲ ನಿಂಗೆ ಧರ್ಮಕ್ಕೆ ಕೊಟ್ಟು ಬುಟ್ಟವೆ. ಅದಲ್ಲದೆ ತಾತ್ಲೆಂತ ಆದರೆ ನಿನ್ನ ಆಯುಷ ಇರುವಲ್ಲಿ
ವರೆಗೆ ನಮ್ಮಲ್ಲಿ ಗೆಯ್ಯೊಕು ನೀ. ನಿಂಗೆ ಸಂಬಳ ಇಲ್ಲೆ. ಹೊಟ್ಟೆಗೆ ಮಾತ್ರ ಕೊಡ್ದು'ಂತ ಹೇಳ್ದೊ.
ಯಾಕೆಂದರೆ ಅದರ ಕ್ರಮ ಗೊತ್ತುಟು. ಅದ್ ಇನ್ನೊಬ್ಬನ ಚಾಕ್ರಿ ಮಾಡಿದಂತ ಹೆಂಗ್ಸಲ್ಲ.
ಅಷ್ಟೊತ್ತಾಕನ ಇಂವ ಮತ್ತೂ ಹೇಳ್ದು ಹಾಂಗೆ 'ತಾದು'ಂತ. 'ಅದ್ ತಾಕಿಲ್ಲೆ ?"ನೀವು ಹೇಳ್ದಂಗೆ
ಮಾಡೊಮ. ಹಾಂಗಾಗಿದ್ದರೆ ನಾವು ತಾಮ್ರ ಪಟ್ಟಿಲಿ ಶಾಸನ ಬರ್ದಿಸಿಕನೊಕು. ಮಧ್ಯಾಹ್ನಕ್ಕೆ ಅದ್
ಗಂಜಿ ತಾತ್ಲೆಂತ ಇದ್ದರೆ ನಿಂಗೆ ನಮ್ಮ ಭೂಮಿ ಎಲ್ಲ ಬುಟ್ಟ್ ಹೋದವೆ'ಂತ ಇವು ಅಲ್ಲಿ ಶಾಸನ
ಬರ್ಕಂಡೊ. ಬರ್ಕಂಡು ಆತ್ ಮಧ್ಯಾಹ್ನ ಆಕನ ಇದ್ ತಲೆಲಿ ಗಂಜಿ ಹೊತ್ತ್‌ಕಂಡ್ ಬಾತ್.
ನಂಗೆ ಗಂಜಿತಾತ್. ನಿನ್ನ ಪುಣ್ಯಮಾರಾಯ. ನೀ ಯಾರೋ ಒಂದು ದೊಡ್ಡ ಮೊನ್ಸ
ಆಗಿರೊಕು. ದೊಡ್ಡ ಮೊನ್ಸಂತ ಹೇಳ್ರೆ ಒಳ್ಳೊ ಯೋಗ್ಯತೆ ಇದ್ದಂವ. ಹಂಗಾಗಿ ಇರಿಕನ ನಿಂಗೆ
ನಾವು ಇಲ್ಲೆ ಈ ಊರಿನವು ಆಗಿದ್ದ್ ಅದ್ ಇನ್ನೊಬ್ಬನ ಇಲ್ಲೆ ಮಾಡ್ನುಂತ ನಮ್ಮ ಕನಸಲೂ ನಾವು
ಗ್ರೆಸಿ ಇರಿಕಿಲ್ಲೆ. ಇಂದ್ ನಿಂಗೆ ಗಂಜಿ ಹೊತ್ತ್‌ಕಂಡ್ ಬಂದದ್'ಂತ ಇದ್ದರೆ ನಮ್ಮೊಳಗೆ ಆದ
ಪಂತಕೆ ಇಂದ್ ನೀ ಗೆದ್ದೆ. ಗೆದ್ದಂತ ಇರಿಕನ ನಮ್ಮ ಎಲ್ಲ ರಕ್ಷಣೆ ಮಾಡುವ ಜನವೂ ನೀನೆ
ಆಕ್ಕಷ್ಟೆಂತ ಹೇಳಿ ಅಂವಂಗೆ ಎಲ್ಲಾ ಬುಟ್ಟ್‌ಕೊಟ್ಟ್ ಹೊರ್ಡುದಕ್ಕೆ ಅಂದಾಜು ಮಾಡ್ದೊಗಡ. ಹಿಂಗೆ
ಅಂದಾಜಿ ಮಾಡ್ಕನ ಅಂವ ಹೇಳ್ತ್. 'ನೋಡಿ ನಂಗೆ ಹಿಂಗೆ ಮೂರು ವಾದ ಇರುವಂತ
ಹುಡುಗರಿಂದ ಒಂದು ಪ್ರಶ್ನೆ ಬಾತ್. ಈ ಪ್ರಶ್ನೆನ ಪರೀಕ್ಷೆ ಮಾಡೊಕಾಗಿ ನಾ ಹೊರ್ಟಂವ. ನಾ
ಈ ಊರಿನ ಅರ್ಸು. ಹಂಗಾಗಿ ಇರಿಕನ ನಂಗೆ ನಿಮ್ಮ ಈ ಭೂಮಿ ಬೇಡ. ಇದೆಲ್ಲಾ ನೀವ್ಗೇ ಆತ್
ಆದರ್ರೂ ಇನ್ನು ಮುಂದೆಗೆ ಯಾವ ಜನರಲ್ಲೂ ಕೂಡ ಒಂದು ಮುಂದಿನ ಆಲೋಚನೆ ಇಲ್ಲದ
ಯಾವ ವಿಷಯವೂ ಇರಿಕಾಗದ್. ಅಥವಾ ಒಂದು ಮಾತ್ ಒಬ್ಬ ಹೇಳ್ತ್‌ಂತ ಇದ್ದರೆ ಆ ಮಾತ
ಹೇಳಿದ್ದ್ ಏನ್'ಂತ ತಿಳ್ಕೊಂಬವನೇ ಬುದ್ದಿವಂತ. ಹಂಗಾಗಿರಿಕನ ನಾ ಈ ಸೂಳೆನ ಹೆಣ್ಣಾ
ಗ್ರಹಿಸಿಯೊಳೆ. ಇನ್ನ್ ನನ್ನ ಊರ್ಲಿ ಹೋಗಿ ಮೊದ್ವೆ ಆಗುವ ಏರ್ಪಾಡ್ ಎಲ್ಲ ಮಾಡ್ನೆ. ನೀವ
ಮೊದ್ವೆಗೆ ಬಂದ್ ನಮ್ಮ ಆಶೀರ್ವಾದಿಸೊಕುಂತ ಹೇಳಿ ಆ ಅರ್ಸು ಮಾರನೆ ದಿನ ಆ ಸೂಳೆ
ಕರಂಡ್ ಹೋಗಿ ಅಲ್ಲಿ ಮೊದ್ವೆ ಆಗಿ ಈ ದೊಡ್ಡವರ ಎಲ್ಲ ಬಾಕ್ಕೆ ಮಾಡಿ ಇವರಿಂದ ಯೋಗ್ಯವಾ
ಆಶೀರ್ವಾದ ಎಲ್ಲ ಪಡ್ದ್ ಸುಖ ಸಂತೋಷಲಿ ಇತ್ತ್‌ಗಡ. ಇಲ್ಲಿಗೆ ಒಂದು ಕಥೆ ಆತ್. [ಕ
ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ 1991]

## 86.ಅಂಗ್ಡಿಗಾರ ಮತ್ತ್ ಕಳ್ಳರ್ ಕತೆ

ಒಂದು ಊರ್ಲಿ ಒಬ್ಬ ಅಂಗ್ಡಿಗಾರ ಉಟ್ಟುಗಡ. ಅಂವ ದಿನೋಳು ವ್ಯಾಪಾರ ಮಾಡಿ ದುಡ
ತಕಂಡ್ ಮನೆಗೆ ಹೋಕನ ಅಕ್ಕಿ ಸಾಮಾನೆಲ್ಲ ತಕಂಡ್ ಹೋದುಗಡ. ಹಂಗೆ ಹೋಗ್ತಾ ಇಂವ
ಮೋಸ ಮಾಡೊಕುಂತ ಹೇಳಿ ಅಂವ ಹೊಕನ ಅಂವನ ಅಂಗ್ಡಿ ಹಿಂದೆ ಕಾದ್ ಕುದ್ದವೆಗ

ಅಂವ ಹೋದ ಮೇಲೆ ಬೀಗ ಎಲ್ಲ ಮುರ್ದ್ ಬಟ್ಟೆ, ದೋತ್ರ, ಪಂಚೆ ಎಲ್ಲ ತಕಂಡ್ ಹೋದವೆ ಗಡ. ರಾತ್ರಿಹೋಗಿ ಮಲಗ್ವೆ ಗಡ. ಮಲಗಿದ ಮೇಲೆ ಬೆಳಿಗ್ಗೆ ಎದ್ದ್ ಅಂಗ್ಡಿಯಂವ ಬಂದದೆ. ಬಾಕನ ಎಂತ ಇಲ್ಲೆ. ಅಂವ ಮರ್ಬ್ಕಂಡೇ ಹೋದೆ. 'ನನ್ನ ಅಂಗ್ಡಿಗೆ ಕಳ್ಳರ್ ಬಂದ್ ಎಲ್ಲ ತಕಂಡ್ ಹೋಗೋಳ, ಹಣ ಎಲ್ಲಾ'ಂತ ಮರ್ಬ್ಕಂಡ್ ಹೋಕನ ದೇವಸ್ಥಾನದ ಹಕ್ಕಳೆ ಒಂದು ಆಲದ ಮರ ಇದ್ದದೆ ಗಡ. ಅದರ ಅಡಿಲಿ ಕುದ್ದುಕಂಡ್ ಅತ್ತ್‌ಕಂಡೇ ಇದ್ದದೆ. ಆಗ ಒಂದು ಹುಲಿ ಬಾತ್‌ಗಡ. 'ಹುಲಿಯಣ್ಣ ಹುಲಿಯಣ್ಣ ನೀ ಎಲ್ಲಿಗೆ ಹೋಗ್ತಾ ಒಳಾ'ಂತ. 'ನಾನು ಹೊಟ್ಟೆ ಹೊರೆಯೋದಕೆ'ಂತ ಹೇಳ್ದೆಗಡ. 'ನೀ ಬಂದ್ ಕಟ್ಟೆ ಮೇಲೆ ಕೂರು'ಂತ ಹೇಳ್ದೆಗಡ. ಅದ್ ಬಂದದೆ ಗಡ. 'ಬೆಕ್ಕಣ್ಣ ಬೆಕ್ಕಣ್ಣ ನೀ ಎಲ್ಲಿಗೆ ಹೋದಿಯಾ'ಂತ ಕರ್ದ್ ಕೂರ್ಸಿದೆಗಡ. ಮತ್ತೆ ಎಸ್‌ಂಡ್ ಸಿಂಹ ಎಲ್ಲ ಬಾತ್‌ಗಡ ಅವರ ಹಕ್ಕಳೆ. ಆಮೇಲೆ ಹಂಗೆ ಕರ್ದ್ ಬುಟ್ಟು ಕೂರ್ಸಿದೆಗಡ. ಮತ್ತೆ ಒಬ್ಬ ಮಾಯ್ಪು ಮಾರುವಂವ ಬಂದದೆಗಡ. ಅಂವಂಗೆ ಸಹ, ನಿಂಗೆ ದುಡ್ಡೆಲ್ಲ ನಾ ಕೊಟ್ನೆ ಇಲ್ಲಿ ಕುದ್ದುಕಂತ. ಮತ್ತೆ ತುಂಬ ಹೊತ್ತು ಕೂರ್ಕನ ಒಬ್ಬ ನೆಲ್ಲಿಕಾಯಿ ಮಾರಿಕಂಡ್ ಬಂದದೆಗಡ. ಅಂವನ ಸಹ ಹಂಗೆ ಹೇಳಿ ಕೂರ್ಸಿದೆ ಗಡ. ಒಬ್ಬ ದೊಣ್ಣೆ ಹೊತ್ತ್‌ಕಂಡ್ ಮಾರಿಕಂಡ್ ಬಂದದೆ ಗಡ. ಅಂವನ ಸಹ ಹಂಗೆ ಹೇಳಿ ಕೂರ್ಸಿದೆ ಗಡ. ಕೂರ್ಸಿಬುಟ್ಟ್ ಮತ್ತೆ ಎಲ್ಲವು ಸೇರಿ ಹೋದವೆಗಡ. ಕಳ್ಳರ ಮನೆಗೆ. ಹುಲಿನ ಕಳ್ಳರ ಮನೆಂದ ಹೊರಗೆ ಹೋದ ಬಾಗಿಲ್‌ಲಿ ಅಡಂಗಿ ಕೂರ್ಸಿದೆ ಗಡ. ಎಲಿನ ಬೆಸಗೆಲಿ ಕೂರ್ಸಿದೆ ಗಡ. ಒಲೆ ಚಿಂಟೆಲಿ ಬೆಕ್ಕ್‌ನ ಕೂರ್ಸಿದೆ ಗಡ. ಎಸ್‌ಂಡ್‌ನ ನೀರೊಳಗೆ (ಕೊಡ್ಪಾನ) ಕೂರ್ಸಿದೆ ಗಡ. ಮಾಯ್ಪು ಮಾರಂವನ ಬಾಗಿಲ್ ಮೂಲೆಲಿ ಕೂರ್ಸಿದೆ ಗಡ. ನೆಲ್ಲಿಕಾಯಿ ಮಾರಂವನ ಹೊರಗೆ ಜಗಲಿಲಿ ಹರ್ಡಿ ಕೂರ್ಸಿದೆ ಗಡ. ದೊಣ್ಣೆ ಮಾರಂವ ದೊಣ್ಣೆ ಹಿಡ್ಕಂಡ್ ಕುದ್ದದೆಗಡ.

ಮತ್ತೆ ಇಂವ ಹೋಗಿ ಮೆಲ್ಲ ಬಾಗಿಲ್‌ನ ಶಬ್ದ ಮಾಡ್ತ್‌ಗಡ. ಶಬ್ದ ಮಾಡ್ಕನ ಅವು ಕಳ್ಳರ್ ಬಂದೊ, ಕಳ್ಳರ್ ಬಂದೊ ನಂಕಿಂತ ದೊಡ್ಡದ್‌ಂತ ಹೇಳಿ ದೀಪ ಉರ್ಸಿ ನೋಡ್ಕನ ಇಲ್ಲಿ ಕ್ಯೂಂ ಕ್ಯೂಂತ ಹೇಳಿ ಅವನ ಕೈನ ಬೆರಳ್‌ನ ತುಂಡು ಮಾಡ್ತ್‌ಗಡ. ಅಯ್ಯಯ್ಯೋ ಇದೆಂತ ಮಾರಿಂತ ಹೇಳಿ ಹೋಗಿ ಕೊಡ್ಪಾನದೊಳಗೆ ಕೈ ಹಾಕಿತ್‌ಗಡ. ಕೈ ಹಾಕಿಕನ ಎಸ್‌ಂಡ್ ಕಚ್ಚಿತ್‌ಗಡ. ಕಚ್ಚಿಕನ ಕೈಲಿ ರಕ್ತಬಾತ್‌ಗಡ. ಮತ್ತೆ ಅಯ್ಯಯ್ಯೋ ಇದೆಂತ ಮಾರಿಂತ ನಡು ಒಳಗೆ ಓಡ್ಕನ ಅಲ್ಲಿ ಜಾರಿ ಬಿದ್ದದೆಗಡ. ಆಗ ಮಾಯ್ಪು ಸೂಡಿಯಂವ ಮಾಯ್ಪು ತೆಗ್ದ್ ಹೊಡ್ದದೆಗಡ. ಮತ್ತೆ ಅತ್ತ ಓಡ್ಕನ ದೊಣ್ಣೆ ಮಾರಂವ ಆಗ ಅವಂಗೆ ಸರೀ ಹೊಡ್ದದೆಗಡ. ಅಯ್ಯಯ್ಯೋ ಇದೆಂತ ಮಾರಿಂತ ಮತ್ತೆ ಓಡ್ಕನ ಹುಲಿ ಮತ್ತ್ ಸಿಂಹ ಅಂವನ ಕಚ್ಚಿ ಕೊಂದೇ ಬುಟ್ಟದೆ ಗಡ. ಆತ್ ಗಡ. [ಕತಾ ನಿರೂಪಕಿ:ಲೀಲಾವತಿ ಪಡ್ಪುಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ1991]

## 87.ಕಾಸಿಮ ಮತ್ತ್ ಆಲಿಬಾಬ ಕತೆ

ಒಂದು ಊರ್ಲಿ ಕಾಸಿಮ ಮತ್ತ್ ಆಲಿಬಾಬಂತ ಹೇಳಿ ಎರಡ್ ಜನ ಅಣ್ಣ ತಮ್ಮಂದಿರ್. ಆಲಿಬಾಬಂತ ಹೇಳಂವ ಒಳ್ಳೆ ಶ್ರೀಮಂತ. ಈ ಕಾಸಿಮಂಗೆ ಏನೂ ಇಲ್ಲೆ. ಜೀವನಕೆ ಬಾರಿ ಕಷ್ಟ. ಅಂವ ಒಂದು ಕತ್ತೆನ ಕರ್ಕಂಡ್ ಗುಡ್ಡೆಗೆ ಹೋಗಿದ್ ಸೌದೆ ಕಡ್ದ್, ಕತ್ತೆಗೆ ಹೊರ್ಸಿ, ಆತ ಸೌದೆನ ತಂದ್ ಮಾರಾಟ ಮಾಡಿದ್, ಅದರ್ಲಿ ಅಕ್ಕಿ ಸಾಮಾನೆಲ್ಲ ತಂದ್ ಊಟ ಮಾಡ್ದು. ಅವನ ಜೀವನಕ್ಕೆ ಅದೂವೆ. ಸೌದೆ ಮಾರಾಟ ಮಾಡಿಯೇ ಊಟ. ಇಂವ ಯಾಗೋಲು ಕಾಡಿಗೆ ಹೋದಲ್ಲ. ಒಂದಿನ ಹೋಕನ ತುಂಬ ಶಬ್ದ ಕೇಳ್ದೆ. ಏನೊ ತಡಿಯಕೆ ಬೊತ್ತದಂತ ಶಬ್ದ. ಕತ್ತಲೆ ಮೋಡ ಕವಿತಾ ಬಂದದೆ. ಏನಪ್ಪ ಹಿಂಗೆ ಮೋಡ ಬಾದುಂತ ಹೇಳಿ ಇಂವ ಕತ್ತೆನ ಹೊಡ್ದ್ ದೂರ ಬೆರ್ಸಿತ್. ದೂರ ಬೆರ್ಸಿದ್ ತುಂಬ ಸೊಪ್ಪು ತುಂಬಿದ ಮರಕ್ಕೆ ಹತ್ತಿ ಕುದ್ದತ್. ಕಾಸಿಮ ಕುದ್ದ್ ಅರ್ಧಗಂಟೆ ಕಳಿಯಕನ ಮತ್ತೂ ಮತ್ತೂ ಜಾಸ್ತಿ ಶಬ್ದವೇ ಕೇಳ್ದೆ. ಶಬ್ದ ಕೇಳ್ತ್ ಕೇಳ್ತ್ ಕೇಳ್ತ್ ಜನಗ ಎಲ್ಲ ಬಂದೊ. ಬಂದ್ ಅಲ್ಲಿ ಒಂದು ದೊಡ್ಡ ಬಂಡೆಕಲ್ಲುಟ್ಟು ಆ ಬಂಡೆಕಲ್ಲಿನ ಹಕ್ಕಲೆ ನಿತ್ತೊ. ನಿತ್ತ್ 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿ ಬಿಚ್ಚು'ಂತ ಹೇಳ್ದೊ. ಅಷ್ಟ್ ಹೇಳಿ ಆಕನ ಕಲ್ಲ್‌ನ ಬಾಯಿ ಒಡ್ದ್ ನಿಂತತ್. ಈ ಜ'ನಗ ಎಲ್ಲ ಅದರೊಳಗೆ ಹುಕ್ಕೊ. 42 ಜನ ಒಳೊ. ಬೇಕಾದ್ ತಕಂಡೊ. ಇಸುವಂತ್‌ದ್ ಇಸಿದೊ ಅಲ್ಲಿಂದ ಹೊರಟೊ. ಹೊರಟ್ ಸೂಸಮ್ಮಾ ಸೂಸಮ್ಮಾ ಬೇಗಬಾಯಿ ಮುಚ್ಚು'ಂತ ಹೇಳ್ದೊ. ಬಂಡೆಕಲ್ಲಿನ ಬಾಯಿ ಮುಚ್ಚಿ ಹೋತ್. ಇವು ಹೋದೊ. ಇವು ಹೋಕನನೂ ಶಬ್ದ ಇದುವೆ. ತಡಿಯಕೆ ಬೊತ್ತಾದಂತಹ ಶಬ್ದ ಕೇಳ್ತಾ ಉಟ್ಟು. ಶಬ್ದ ಎಲ್ಲ ನಿತ್ತ ಮೇಲೆ ಹೆದ್‌ರಿ ಹೆದ್‌ರಿ ಮರಂದ ಇಳ್ತ್ ಇಂವ. ಇಳ್ದದ್ ಕತ್ತೆನ ಹೊಡ್ಕಂಡ್ ಬಾತ್. ಹೊಡ್ಕಂಡ್ ಬಂದ್‌ದ್ ಈ ಬಂಡೆಕಲ್ಲಿನ ಹಕ್ಕಲೆ ಇಂವ ನಿತ್ತ್ ಇವನೂ ಅದೇ ಬಾತ್ ಹೇಳ್ದೆ. 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿ ಬಿಚ್ಚೊ'ಂತ. ಅಷ್ಟ್ ಹೇಳಿಯಾಕನ ಬಂಡೆಕಲ್ಲ್‌ನ ಬಾಯಿ ಒಡ್ದ್ ನಿಂತತ್. ಅದರ ಒಳಗೆ ನೋಡ್ರೆ ಆಭರಣವೇ ಒಳದ್. ಅದರ ಬೇಕಷ್ಟ್ ಕಟ್ಟಿಕನ್ತ್ ಇಂವ. ಕಟ್ಟಿಕಂಡ್‌ದ್ ಈ ಕಟ್ಟ್‌ನ ಹೊರಗಿಸಿ 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿ ಮುಚ್ಚೊ'ಂತ ಹೇಳ್ತ್. ಈ ಕತ್ತೆನ ಹೊಡ್ಕೊಂಡ್ ಬಾತ್. ಈ ಕಟ್ಟ್‌ನ ಕತ್ತೆಗೆ ಹೊರ್ಸಿತ್ ಮನೆಗೆ ಬಾತ್. ಮನೆಗೆ ಬಾಕನ ಇವನ ಹೆಣ್ಣ್ ಯಾಗೊಳು ಸೌದೆ ಮಾರಾಟ ಮಾಡಿ ಹಂಞ ಹಂಞ ತಕಂಡ್ ಬಾದು. ಇಂದ್ ತಕಂಡ್ ಬಂದ್‌ದ್ ಒಳಗೆ ಇಸಿತ್. 'ಹೇಳ್ಬೇಡ ಯಾರೊಟ್ಟಿಗೆನೂ ಹೇಳ್ಬೇಡಾ'ಂತ ಆದುಂತ ಹೇಳ್ತ್.

ಹೀಂಗೆ ಇಂವ ಯಾಗೋಲು ಹೋಕಂಡ್ ಬಂದ್‌ಕಂಡ್ ಇದೇ ಕ್ರಮಲಿ ಉಟ್ಟು. ಒಂದು ದಿನ ಅವನ ಹೆಣ್ಣ್ ಆಲಿ ಬಾವನ ಹಕ್ಕಳೆ ಹೋತ್. ಆಲಿ ಬಾವನ ಹಕ್ಕಳೆ ಹೋಗಿದ್ 'ಅಕ್ಕ ಒಮ್ಮೆ ಬಳ್ಳ ಕೊಡೊಕು'ಂತ ಅಕ್ಕನೊಟ್ಟಿಗೆ ಕೇಳ್ತ್. ಬಳ್ಳಕೇಳಿ ತೆಕಂಡ್‌ಬಾತ್. ಅಷ್ಟಾಕನ ಅಕ್ಕ ಈ ಸೌದೆಮಾರಿ ಜೀವಿಸುವವು ಬಳ್ಳಲಿ ಅಳಿಯುದು ಎಂತದ್ ಹಾಗೆಂತ ಹೇಳಿದ್ ಬಳ್ಳದ ಅಡಿ

ಒಂದು ಮಾಯಣ ಅಂಟಿಸಿಕೊಟ್ಟತ್. ಇದ್ ತಕಂಡ್‌ಬಾತ್. ಈ ಚಿನ್ನನ ಬಳ್ಳಲಿ ಅಳ್ದ್ ಎಲ್ಲ ನೋಡ್ತ್. ಒ ಇಷ್ಟ್ ಆತ್‌ಂತ ಹೇಳಿ ಬಳ್ಳನ ಕೂಡ್ಲೆ ತಕಂಡೋಗಿ ಕೊಟ್ಟತ್. ಕಾಸಿಮ ಬಾಕ್ಕೆ ಮುಂದೆ ಕೊಡೊಕಲ್ಲೆ. ಗೊತ್ತಾದರೆ ಆಕಿಲ್ಲೆ ಹಾಂಗೆಂತ ಹೇಳಿ ತಕಂಡೋಗಿ ಕೊಟ್ಟತ್. ತಕಂಡೋಗಿ ಕೊಟ್ಟಕೂಡ್ಲೆ ಆ ಹೆಂಗಸ್ ಇದರ ಅಡಿ ಮೊಗ್ಚಿ ನೋಡ್ತ್. ನೋಡ್ರೆ ಅಡಿಲಿ ಒಂದು ತುಂಡು ಹಿಡ್ಕಂಡುಟು. ಸೌದೆ ಮಾರಾಟ ಮಾಡಿಟು. ಇವುಕ್ಕೆ ಇಷ್ಟ್ ಆಸ್ತಿ ಬೊದ್ಕಿದ್ದ್ ಏನ್ ಸುಖಂತ ಹೇಳಿ ಕೋಪಲಿ ಕುದ್ದತ್. ಗಂಡ ಬಾಕ್ಕೆ ಆಕನ ಹೇಳಿಕೊಟ್ಟತ್. 'ನೋಡಿ ನಿಮ್ಮ ಕೈಲಿ ಚಿನ್ನ ಅಳಿಯಕ್ಕೆ ಉಟ್ಟ. ನೋಡಿಲ್ಲಿ ನಾ ತೆಗ್ದ್‌ಸಿಯೊಳೆ'ಂತ ಹೇಳ್ತ್. ಈ ಚಿನ್ನದ ತುಂಡುನ ತೆಗ್ದ್ ಕೊಟ್ಟತ್. ನೋಡ್ರೆ ಹೌದು. ಜನ ಕಳ್ಸಿತ್. 'ಹೋಗ್ ಅವನ ಕಾಸಿಮನ ಬಾಕ್ಕೆ ಹೇಳ್'ಂತ. 'ನೀವು ಬರೊಕಡ'ಂತ ಜನ ಹೋಗಿ ಹೇಳ್ತ್. 'ಬಾಕ್ಕೆ ಹೇಳ್ದ್ ಯಾಕೆ ?' 'ಯಾಕೆಂತ ಹೇಳ್ರೆ ನೀ ಬಳ್ಳಲಿ ಚಿನ್ನ ಅಳ್ದೊಲೊ ಅದ್ ಎಲ್ಲಿಂದಂತ ಹೇಳೊಕು'ಂತ. 'ಹೇಳ್ದುಲ್ಲೆ''ಹೇಳದಿದ್ದರೆ ನಿನ್ನ ಈಗ ತಲೆ ಕಡ್ದ್ ಹಾಕಿನೆ'. ಹೇಳ್ತ್. 'ಆದರೆ ನಾಳೆ ನಂಗೆ ಹೋಕು ಅಲ್ಲಿಗೆ'. 'ಆತ್ ಹೋಗ್'. 'ಇಂತ ಕಡೆಲಿ ಇಂತ ಒಂದು ಬಂಡೆಕಲ್ಲ್ ಉಟ್ಟು. ಅಲ್ಲಿ ಸೊಪ್ಪು ತುಂಬಿದ ಮರ ಉಟ್ಟು. ಆ ಮರಲಿ ಹತ್ತಿ ಕುದ್ರು. ಇಷ್ಟ್ ಹೊತ್ತಿಗೆ ಇಂತ ಜನಗ ಅಲ್ಲಿಗೆ ಬಾವೊ. ಬಂದ್ ಅವುಕೆ ಬೇಕಾದ ವಸ್ತುನ ಅವು ತೆಕಂಡ್ ಹೋವೊ. ಇಸ್‌ವಂತದರ ಇಸಿ ಹೋವೊ. ಅವೆಲ್ಲ ಹೋದ ಮೇಲೆ ನಿಂಗೆ ಬೇಕಾದರ ನೀ ತಕಂಡ್ ಬಾ' ಹಾಂಗೆಂತ ಹೇಳಿ ಕಳ್ಸಿತ್.

ಮಾರನೆ ದಿನ ಇಂವ ಹೋತ್. ಕತ್ತೆನ ಹೊಡ್ದ್ ಬುಟ್ಟತ್. ಮರಕ್ಕೆ ಹತ್ತಿ ಕುದ್ದತ್. ಕುದ್ದಾಕನ ಅವು ಬಂದೊ ಜನಗ ಎಲ್ಲ. ಬಂದ್ ಸೂಸಮ್ಮಾ ಸೂಸಮ್ಮಾ .......' ಬಾಯಿ ಒಡ್ದ್ ನಿಂತತ್. ಎಲ್ಲವು ಅದರೊಳಗೆ ಹೋದೊ. ಬೇಕಾದ್ದ್ ತಕಂಡೊ. ಇಸುವಂತದ್ ಇಸಿದೊ. ಹೊರಟೊ. ಹೊರಟ್ 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿ ಮುಚ್ಚು'ಂತ ಹೇಳ್ದೊ. ಬಂಡೆಕಲ್ಲ್‌ನ ಬಾಯಿ ಮುಚ್ಚಿ ಹೋತ್. ಅವು ಹೋದೊ. ಅವು ಹೋಗಿದ್ ಆ ಶಬ್ದ ಎಲ್ಲ ಕಳ್ದ್‌ದ್ ಅರ್ಧ ಗಂಟೆ ತಡ್ದ್ ಇಂವ ಮರಂದ ಮೆಲ್ಲ ಇಳ್ತ್. ಮರಂದ ಇಳ್ದ್‌ದ್ ಕತ್ತೆನ ಹೊಡ್ಕಂಡ್ ಬಾತ್. ಹೊಡ್ಕಂಡು ಬಂದ್ ಇವನೂ ಅದೇ ಮಾತ್ ಹೇಳ್ತ್. 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿ ಬಿಚ್ಚೂ'ಂತ. ಬಂಡೆಕಲ್ಲ್‌ನ ಬಾಯಿ ಒಡ್ದ್ ನಿಂತತ್. ಇವನೂ ಹುಕ್ಕತ್. ಕಲ್ಲೊಳಗೆ ಹುಕ್ಕ್‌ದ್ ಬೇಕಾದಷ್ಟ್ ಕಟ್ಟಿಕನ್ತ್ ಕಟ್ಟಿದ್ ಇಂವಂಗೆ ಹೇಳಿಕೆ ಬಾದುಲ್ಲೆ. ಇಂವ ಅದರೊಳಗೆ ಸೂಸಮ್ಮಾ ಬೇಗಬಾಯಿ ಮುಚ್ಚುಂತ ಹೇಳಿಕೆ ಮಾತೇ ಬಾದ್ಲೆ. ಇಂವ ಅದರೊಳಗೆ ಬಾಕಿಯಾತ್. ಬಂಡೆಕಲ್ಲ್‌ನ ಒಳಗೆ. ಮಾತ್ ಬಾರದ ಮೇಲೆ ಅಂವ ಅಲ್ಲೇ ಬಾಕಿ ಅಲ್ಲ. ಅಲ್ಲೆ ಒಂದು ದಿನ ರಾತ್ರೆ ಇಡೀ ಇತ್ತ್. ಕತ್ತಾಲೆ ಮುಟ್ಟ ಕಾಸಿಮ ಪಾರಕಾತ್ 'ಆ್ಹಂ ಇವನ ಬೆಸ್ರ್ ಇನ್ನ್ ಅದರೊಳಗೆ ಹೋದರೆ ಸರಿಯಲ್ಲ. ಇಂದ್ ಆಕಿಲ್ಲೆ ನೋಡ ಬೆಳಗಾಗಲಿ'ಂತ ಹೇಳ್ತ್. ಮಾರನೆ ದಿನ ಹೋತ್ ಇಂವ ಹೋಗಿ ಕುದ್ದತ್. ಅದ್‌ವೇ ಮರಕ್ಕೆ ಹತ್ತಿ ಕುದ್ದಾಕನ

ಅವು ಬಂದೊ. ಅವು ಬಂದ್ 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿಬಿಚ್ಚು'ಂತ ಹೇಳ್ದೊ ಬಿಚ್ಚುಂತ ಹೇಳ್ಕನ ಬಂಡಕಲ್ಲಿನ ಬಾಯಿ ಒಡ್ದ್ ನಿಂತತ್. ಅಷ್ಟಾಕನ ಇಂವ ತೆಗ್ದ್ ಹಾರ್ತ್ ಹಾರ್ಕನ ಅವು ಅವರ ಆಯುಧಲಿ ಸಿಗ್ದ್ ನಾಲ್ಕ್ ಭಾಗಕೆ ನಾಲ್ಕ್ ತುಂಡ್‌ಮಾಡಿ ಕೋಸಿ ಇಸಿದೊ ಇಂಥ ಅರಣ್ಯಕ್ಕೆ ಇಂಥ ಬಂಡಕಲ್ಲಿನ ಒಳಗೆ ಈ ನರಪಡೆ ಬಂದ್ ನೋಡಿಕನ್ತಲ್ಲ. ಇವನ ಮಡ್ಗುದಂತ ಹೇಳಿದ್ ಕೊಂದ್ ಹಾಕಿದೊ. ಅವು ಅತ್ತ ಹೋದಮೇಲೆ. 'ಸೂಸಮ್ಮ ಸೂಸಮ್ಮಾ ಬೇಗ ಬಾಯಿ ಬಿಚ್ಚು'ಂತ. ಬಂಡೆಕಲ್ಲಿನ ಬಾಯಿ ಒಡ್ದ್ ನಿಂತತ್. ಇಂವ ಅದರ ಒಳಗೆ ಹುಕ್ಕತ್ ಬೇಕಾದ ಹೊರೆ ಕಟ್ಟಿಕನ್ತ್. ಅಲ್ಲಿಂದ ಹೊರಟ್ ಹೋಗಿ 'ಸೂಸಮ್ಮಾ ಸೂಸಮ್ಮಾ ಬೇಗ ಬಾಯಿಮುಚ್ಚು'ಂತ ಹೇಳ್ತ್. ಮುಚ್ಚಿತ್. ಈ ಕತ್ತೆನ ಮೇಲೆ ಈ ಚಿನ್ನದ ಕಟ್ಟ್‌ನ ಹೊರ್ಸಿತ್. ಮತ್ತೊಂದ್ ಕತ್ತೆನ ಮೇಲೆ ಈ ಹೆಣದ ಹೋಲುಗಳ ಎಲ್ಲ ಹೊರ್ಸಿತ್. ತಕಂಡ್ ಬಾತ್ ಮನೆಗೆ ತಕಂಡ್ ಬಂದ್ ಸಮಗಾರರ ಕೈಲಿ ಈ ಶವನ ಹೊಲಿಸಿತ್. ಹೊಲಿಸಿ ಅದಕ್ಕೆ ಮಾಡುವ ಕ್ರಮ ಎಲ್ಲ ಮಾಡ್ತ್. ಮಾಡಿದ್ ಕೆಲವು ದಿನ ಕಳ್ದ್ ಇಂವ ಈ ಬಂಡೆಕಲ್ಲ್‌ನ ಒಳಗಿದ್ದ ಆಭರಣ ಪೂರ ಮುಗ್ಸಿತ್. ಏನೂ ಗತಿ ಇಲ್ಲದ ರೀತಿಮಾಡ್ತ್. ಅವುಕ್ಕೆ ಕಡೆಕಡೆಗೆ ಆಕನ ಅವುಕ್ಕೆ ಬಾರಿ ಕಷ್ಟಕಂಡತ್. 'ಇಂಥ ಅರಣ್ಯಲಿ ಖಾಲಿ ಮಾಡ್ದಂವ ಯಾರ್ ? ಇದರ ಕಂಡ್ ಹಿಡ್ದಂವ ಯಾರ್? ಇನ್ನ್ ನಾವ್ಗೆ ಏನೂ ಗೆತಿ ಇಲ್ಲೆ? ನಾವು ಇನ್ನ್ ಊರು ತಿರ್‍ಗೊಕಷ್ಟೆ. ನಾವು ಊರ ಮೇಲೆ ಪೊಯ, ಅವನ ಕಂಡ್‌ಹಿಡಿಯೊಕು. ಅದ್ ಯಾವ ಮೊನ್ಸ'ಂತ. ಅಷ್ಟಾಕನ ಅವರ ಪೈಕಿವನವನೇ ಒಬ್ಬ ಹೇಳ್ತ್, 'ಯಾರ್ ತಕಂಡೊದುಂತ ನಾ ಹುಡ್ಕಿ ಹಿಡ್ದ್ ಬನ್ನೆ'ಂತ. ಆತ ಹೋಗ್. ನೀ ಹುಡ್ಕಿ ಹಿಡ್ದ್ ಬಾರದೆ ಇದ್ದರೆ ನಾವು ನಿನ್ನ ತಲೆ ಕಡ್ದು ಹಾಕುದು ಹಾಗೆ'ಂತ ಹೇಳ್ದೊ. ಅಂವ ಬೊಳ್ಪುಂದ ಕತ್ತಾಳೆಮುಟ್ಟ ತಿರ್ಗಾಟ ಮಾಡಿ ಹಾಂಗೇ ಬಾತ್. ಮನೆಗೆ ಅವರ ಹಕ್ಕಲೆ. ನಂಗೆ ಎಲ್ಲೂ ಸಿಕ್ಕಿತ್ಲೆಂತ. ಅವನ ತಲೆಕಡ್ದ್ ಹಾಕಿದೊ. ಒಬ್ಬ ಹೋತಲ್ಲ ಮಾರನೆದಿನ ಯಜಮಾನ ಕೇಳ್ತ್, 'ಇಂದ್ ಯಾರ್ ಹೋದರಿಯ? ಯಾರ್ ಹುಡ್ಕಿ ಹಿಡ್ದ್ ಬಾಂದರಿ?"ನಾ ಹೋವೆ'ಂತ ಮತ್ತೊಬ್ಬ ಹೇಳ್ತ್. 'ಆತ್ ಹೋಗು ಹುಡ್ಕಿ ಹಿಡಿಯದಿದ್ದರೆ ನಿನ್ನ ಇಸಿಕಿಲ್ಲೆಂತ ನವ ಇಂತ ಆಭರಣ ಹೋದ ಮೇಲೆ ನಾವ್ಗೆ ಜೀವದ ಮೇಲೆ ಆಸೆ ಇಲ್ಲೆ. ನಿನ್ನ ಇಸಿಕಿಲ್ಲೆಂತ ಇವನು ಹಾಂಗೆ ತಿರ್ಗಾಟ ಮಾಡಿ ಕತ್ತಲೆ ಆಕನ ನಂಗೆ ಎಲ್ಲೀ ಸಿಕ್ಕಿತ್ಲೆಂತ. ಅವನ ತಲೆ ಕಡ್ದ್ ಹಾಕಿದೊ ಎರಡ್ ಜನ ಹೋದೊ. 42ರಲ್ಲಿ ಎರಡ್ ಜನ ಹೋದೊ. ಮತ್ತೆ 40 ಜನ.

ಹಿಂಗೆ ಆದರೆ ನಮ್ಮ ವಂಶವೇ ನಾಶ ಆದೆ, ಇನ್ನ್ ನಾವ್ ಎಲ್ಲವು ಪೊಯಿ. ಹಾಂಗೆ ಮೂವತ್ತೊಂಬತ್ತು ಡಬ್ಬಿ. ಒಂದು ಮೊನ್ಸಂಗೆ ಒಂದು ಡಬ್ಬಿ. ಒಂದು ಕುದುರೆ ಈ ಕುದುರೆ ಮೇಲೆ ಒಂದೊಂದೇ ಡಬ್ಬ ಇಸಿದ ಈ ಸಾವುಕಾರ ಹೊಡ್ಕಂಡ್ ಹೋತ್. ನಾವು ಎಣ್ಣೆ ಮಾರಾಟದವುಂತ ಹೋಗಿ ಹೋಗಿ ಈ ಸಮಗಾರರ ಮನೆಬಾಗಿಲಿಗೇ ಎತ್ತಿತ್. 'ಏನ ಸಮಚಾರ ನಿಮ್ಮದ್'ಂತ ಅವರೊಟ್ಟಿಗೆ ಕೇಳ್ತ್. 'ನಮ್ಮದ್ ಚಪ್ಪಳಿ ಎಲ್ಲ ಹೊಲಿದು. ನಮ್ಮ

ಇದೇ ಸಮಚಾರ'. 'ಅಷ್ಟೆಯಾ ಬೇರೇನು ಇಲ್ಲೆಯಾ?''ನಾವು ಶವ ಸಿಕ್ಕಿರೂ ಹೊಲಿದು. ನಾವು ಶವ ಹೊಲಿದು ಕೊಟ್ಟೊಳೊ'. 'ಯಾರಾದರ್ ಕೊಟ್ಟೊಳನ ? ಯಾರಿಗೆ ಕೊಟ್ಟದ್?''ಇಂಥ ಇಂಥವ್ಕೆ'. 'ಎಲ್ಲಿ ಅವರ ಮನೆ?''ಅವರ ಮನೆ ಇಂಥಲ್ಲಿ'. 'ಆ ಮನೆನ ನಾವ್ಗೆ ತೋರ್ಸಿ ಕೊಡೊಕು ಹಾಗೆ'ಂತ ಹೇಳ್ತ್ ಈ ಸಾವುಕಾರ. ಆ ಸಮಗಾರ ಆ ಮನೆ ತೋರ್ಸಿಕೊಟ್ಟತ್. 'ಆ ಮನೆಯಾವುಕೆ ನಾ ಶವನ ಹೊಲ್ದು ಕೊಟ್ಟದ್'ಂತ. ಆತ್'ಂತ ಹೇಳ್ದೊ. ಅಲ್ಲಿಂದ ಮುಂದುವರ್ಸಿದೊ. ಈ ಕಾಸಿಮನ ಮನೆಗೆ ಎತ್ತ್‌ಕನ ಕತ್ತಲೆ ಆಗುವ ಅಂದಾಜಿಗೆ ಅವು ಹೋದವೆ. ಹೋಗಿ ಕತ್ತಲೆ ಕತ್ತಲೆ 'ಏಣ್ಣೆ ಮಾರಾಟದವು. ಎಣ್ಣೆ ತಕಂಡ್ ಬಂದದ್ ಮತ್ತೆ ಇಂದ್ ಕತ್ತಲೆ ಆತ್. ನಾವ್ಗೆ ಮಲ್ಗಿಕೆ ಜಾಗೆ ಕೊಡಕ'ಂತ ಆ ಮನೆಲಿ ಕೇಳ್ದೆ. 'ಆತ್ ಜಾಗೆ ಕೊಡೊಕು'. ಕುದುರೆಗಳ ಎಲ್ಲ ಜಾಲ್‌ಲಿ ಬುಟ್ಟ್ ಸಾವುಕಾರ ಮನೆಲಿ ಕುದ್ದತ್. ಕತ್ತಲೆಗೆ ಮಿಯಕೆ ಎಲ್ಲ ನೀರ್‌ಮಾಡಿಕೊಟ್ಟೊ. ಮೀದ್ ಆತ್. ಊಟ ಆತ್. ಇಂವಗೆ ಸಾವುಕಾರಂಗೆ ಮಲಗಿಕೆ ಒಂದು ರೂಮೇ ಬೇರೆ ಕೊಟ್ಟೊ. ಈ ಮನೆವೆಲ್ಲ ಊಟ ಮಾಡಿ ಮಲ್ಗುವ ಅಂದಾಜಿಗೆ ಆಕನ ನೋಡ್ರೆ ಎಣ್ಣೆ ಇಲ್ಲೆ. ಮನೆಲಿ ಕಾಸಿಮನ ಹೆಣ್ಣ್ ಮೋರ್ದ್ದಿಯಾನಳುಂತ. ಆ ಹೆಂಗ್ಸ್ ಅಲ್ಲಿ ಒಂದು ಹೈದ ಉಟ್ಟು ಕೆಲ್ಸಕೆ. ಹುಡುಗ ನೊಟ್ಟಗೆ ಹೇಳ್ತ್. 'ಏ ಹೈದ ಸ್ವಲ್ಪ ಎಣ್ಣೆ ತೆಗಿಯಪ್ಪಾ'ಂತ. 'ನನ್ನಂದ ಈಗ ಎಣ್ಣೆ ತೆಗಿಯಕೆ ಸಾಧ್ಯ ಇಲ್ಲ. ಸಾವುಕಾರ ಎಣ್ಣೆ ಡಬ್ಬಿಂದ ಸ್ವಲ್ಪ ಎಣ್ಣೆ ತಗೋಳಿ ಹಂಗೆ'ಂತ ಹೈದ ಹೇಳ್ತ್. ಈ ಹೆಂಗಸ್ ಅದರ ಕೆಲ್ಸ ಎಲ್ಲ ಆತ್. ಊಟ ಆದ ಮೇಲೆ ಎಣ್ಣೆ ತಕನೆಂತ ಈ ಡಬ್ಬಿ ಮುಟ್ಟಿತ್. ಡಬ್ಬಿ ಮುಟ್ಟಿಕನ ಆ ಡಬಿ ಒಳಗೆಂದ 'ಹೊತ್ತಾಯಿತೊ ಹೊತ್ತಾಯಿತೊ'ಂತ ಕೇಳ್ದೆ. ಅಷ್ಟಾಕನ ಕೂಡ್ಲೆ ಹೆಂಗ್ಸ್ 'ಇಲ್ಲ ಸ್ವಲ್ಪ ತಡಿ ಸ್ವಲ್ಪ ತಡಿ'ಂತ ಸರಿಮಾಡಿ ಬಾತ್. ಬಂದ್ ಕೂಡ್ಲೆ ಕಾಸಿಮನ ಕರ್ದ್ ಎದ್ರಿಸಿತ್. 'ಇಂದ್ ನಮ್ಮ ಮನೆ ಹೋತ್, ಅವು ಎಣ್ಣೆ ಮಾರಾಟದವು ಅಲ್ಲ. ಅವು ಕಳ್ಳರ್. ನಾ ಎಣ್ಣೆಗೆಂತ ಹೇಳಿ ಹೋಗಿ ಡಬ್ಬಿ ಮುಟ್ಟಿಕೆ ಆಕನ ಹೊತ್ತಾಯಿತೊ ಹೊತ್ತಾಯಿತೊಂತ ಅದರೊಳಗಿಂದ ಶಬ್ದ ಕೇಳ್ದೆ. ಇಂದ್ ನಮ್ಮ ಮನೆ ಹೊತ್'. 'ಹ್ಣಂ ಹೌದ'! 'ಹೌದು'. ಕೂಡ್ಲೆ ಹೋದೊ ಸಾವುಕಾರ ಮಲ್ಗಿದ ರೂಮಿಗೆ ಬಾಗಿಲ್ ಹಾಕಿ ಬೀಗ ಹಾಕಿ ಬುಟ್ಟೊ. ಕಡೆಗೆ ಊರ ನೆರೆಕೆರೆಂದ ಹುಡುಗರ ಎಲ್ಲ ಕರ್ದ್ ಜನಗಳ ಎಲ್ಲ ಕರ್ದ್ ಒಲೆಗೆ ಕಡಾಯ ಇಸಿ ಎಣ್ಣೆ ಹೊಯಿದ್ ಕಾಯಿಸಿದೊ. ಕಾಯಿಸಿ ಎಣ್ಣೆ ಎಲ್ಲ ಕೊದ್ದಿಸಿ ಕಾವಂಗಲಿ ಗೊಂಚಿಕಂಡ್ ಹೋಗಿ ಒಂದೊಂದೇ ಕಬ್ಬಿನ ಮುಚ್ಚಳ ತೆಗ್ದ್ ಈ ಮೂವತ್ತೊಂಬತ್ತು ಡಬ್ಬಿಗೂ ಹೊಯಿದೊ. ಇದ್ಕೆ ಎಲ್ಲ ಮುಚ್ಚಳ ಹಾಕಿಸಿದೊ. ಮಾರ್ನೆದಿನ ಬೆಳಿಗ್ಗೆ ಗೌರುಮೆಂಟಿಗೆ ತಿಳಿಸಿ ಈ ಸಾವುಕಾರನ ತಕಂಡ್ ಹೋದೊ. [ಕಥಾ ನಿರೂಪಕಿ:ತಾರಾಮಣಿ ಜತ್ತನ ಮನೆ, ಪೆರಾಜೆ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ1991]

## 88.ಒಣಕೆ – ಒರ್ಲು – ದೋಲು – ಗಗ್ಗರದ ಕತೆ

ಒಂದು ಮನೆಲಿ ಒಂದು ತಂಗೆ ಎರಡ್ ಅಣ್ಣಂದಿರ್. ಅದರ ಹೆಸರ್ ಕುಂಞಿಬಿತ್ತ್'ಂತ. ಅಣ್ಣಂದಿರ್ ಬೊಳ್ಪಿಗೆ ಎದ್ದ್ ಹೊಡಿಕೆ ಹೋದ್ರೊ. ಅದ್ ಮನೆಕೆಲಸ ಮಾಡಿಕಂಡಿತ್ತ್. ಅಷ್ಟೊತ್ತಿಗೆ ಒಂದು ರಕ್ಕಸಿ ಅಜ್ಜಿ ಬಾತ್. ಅಂವ ಹೋಗಿ ಹೊಡ್ಕನ ಕೇಳ್ತ್. 'ಅಣ್ಣಾ ನಂಗೆ ಅರ್ಧ ಮುಡಿ ಬಿತ್ ಕೊಡೆಕು'ಂತ. ಆಗ ಅಣ್ಣ ಹೇಳ್ತ್ 'ಮನೆಗೆ ಹೋಗ್ ಕುಂಞಿಬಿತ್ತ್ ಉಟ್ಟಲ್ಲಿ ಕೊಡ್ದು'ಂತ. ತಮ್ಮ ಹೇಳ್ತ್ 'ಬೇಡಣ್ಣ ಅದರ ಕಳ್ಸ್‌ಬೇಡಾ. ಅದ್ ರಾಕ್ಷಸಿ ಆಗಿರ್ದು'. 'ಅಲ್ಲಪ್ಪ ನಮ್ಮಂತಹ ಮೊನ್ಸ ಹೋಗಲಿ'ಂತ ಹೇಳ್ತ್. ಇದ್ ಹೋಗಿ ಕರ್ತ್ 'ಕುಂಞಿಬಿತ್ತ್ ಕುಂಞಿಬಿತ್ತ್ ಬಾ ಇಲ್ಲಿ'ಂತ. ಅದ್ ಹೊರಗೆ ಬಾತ್. ಹೊರಗೆ ಬಾಕನ ಅದರ ಹಿಡ್ದ್ 'ಮೊಡ್ಸಸಿ'ರೊಳಗೆ ತುಂಬಿಸಿ ಹೆಗಲ ಮೇಲೆ ಹಾಕಿಕಂಡ್ ಹೋತ್.

ಅಷ್ಟೊತ್ತಿಗೆ ತಮ್ಮಂಗೆ ಸಂಶಯ ಬಾತ್. 'ಅಣ್ಣ ನೀ ರಾಕ್ಷಸಿನ ಕಳ್ಸಿದೊ. ನಾ ಮನೆಗೋಗಿ ಬನ್ನೆ'. ಬಂದ್ ಕರ್ದರೆ ಮನೆಲಿ ತಂಗೆ ಇಲ್ಲೆ. 'ಅಣ್ಣಾ ತಂಗೆನ ರಾಕ್ಷಸಿ ತಕಂಡೋತ್'. 'ಇನ್ನೇನು ಮಾಡ್ದು'ಂತ ಹೇಳ್ತ್. 'ಅಯ್ಯೋ ಏನ್ ಮಾಡ್ದಪ್ಪಾ ?' ಇಂವ ಒಂದು ಬಿಲ್ಲು ತಕನ್ತ್. ನಾಲ್ಕ್ ಕಲ್ಲ್ ಹೆರ್ಕಿಕನ್ತ್. ಒಂದು ಅಂಗಿನೂ ಹಾಕನ್ತ್ ಹೋತ್. ಹಿಂಗೆ ದಾರಿ ಉದ್ದಾಕೆ ಹೋಕನ ಒಂದು ಹಕ್ಕಿ ಸಿಕ್ಕಿತ್. ಅದಕ್ಕೆ ಒಂದ್ ಬಿಲ್ಲ್ ಕಲ್ಲ ಬುಟ್ಟತ್. ಆ ಹಕ್ಕಿ ಸಿಕ್ಕಿತ್. ಅದರ ಚೊಲ್ಲಿಕಂಡ್ ಹೋಕನ ಒಂದು ಜಾಗೆಲಿ ಬೆದ್ರ ಹಿಂಡ್ಲು ಹೊತ್ತಿದೆ. ಅಲ್ಲಿ ಇದರ ಕಿಚ್ಚಿಗೆ ಹಾಕನ್ತ್. ಅದರ ಹೋಳು ಮಾಡಿ ಹಾಕಂಡ್ ಹೋತ್. ಇನ್ನ್ ದೂರಕೆ ಹೋಕನ ಒಂದು ಚಾಲೆಲಿ ಕಾಯಿ ಉಟ್ಟು. ಅದಕ್ಕೆ ಒಂದು ಕಲ್ಲ್ ಕೊಟ್ಟತ್. ಆ ಕಲ್ಲ್‌ಲಿ ಕಾಯಿ ಬೀತ್. ಅದರ ಗುದ್ದಿ ಹೋಳು ಮಾಡಿ ಅದರ್‍ನೂ ಹಾಕಿಕನ್ತ್. ತಿಂದ್‌ಕಂಡ್ ಹೋತ್. ಹಾಂಗೆ ಹೋಕನ ಒಂದು ಅಜಲ ದೋಲು ಮಾಡ್ತಾ ಇತ್ತ್. 'ಒಡೆಗ್ ಪೋಪುನ ಉಳ್ಳಾಯ'ಂತ ಎಲ್ಲ ಕೇಳ್ತ್. 'ನಾ ಹಿಂಗೆ ಹೋದು'. 'ನೀವು ಎಂತರ ತಿಂಬೊದು?''ನಾ ಒಂದು ಹಕ್ಕಿ, ಕಾಯಿ ತಿಂಬೊದು'. ಆದರೆ 'ನಂಗೂ ಹಂಞ ಕೊಡುವರಿಯಾ ?' ಆಗ ಅವಂಗೂ ಕೊಟ್ಟತ್. ಎಲೆ ಅಡಿಕೆ ಎಲ್ಲ ತಿಂದೊ. ತಿಂದ್‌ದ್ ಇಂವ ದೋಲು ಗಗ್ಗರ ಎಲ್ಲ ತಕಂಡ್ ಹೊರ್ಟತ್. 'ಅದೆಲ್ಲಿಗೆ ತಕಂಡೋದು? ದೋಲು ಗಗ್ಗರ ತಕಂಡೋಕೆ ಬೊತ್ತ್. ಅಯ್ಯೋ ನಂಗೆ ದೆವ್ವ ಕಟ್ಟಿಕೆ ಬೇಕಲ್ಲಣ್ಣಾ ದೆವ್ವನ ಕಟ್ಟಿ ಬಂದದ್. ಅದೊಂದು ನಂಗೆ ಗೊತ್ತಿಲ್ಲೆ?''ಅಂದರೆ ನನ್ನ ಹಕ್ಕಿ ಹೋಳು ಕಾಯಿ ಹೋಳು ನಾ ಕೊಟ್ಟದರನ್ನ ಕೊಟ್ಟು ಬುಡ್. ಇಲ್ಲರೆ ನಿನ್ನ ದೋಲು ಗಗ್ಗರ ಕೊಡೊಕಂತ ಹೇಳ್ತ್. ಇನ್ನ್ ಏನ ಮಾಡ್ದಪ್ಪ ತಿಂದ್ ಹೋತಲ್ಲಂತ ಹೇಳ್ತ್. ಕೊಟ್ಟ್ ಹೋತ್.

ಮುಂದೆ ಹೋಕನ ಒಬ್ಬ ಔಲಕ್ಕಿ ಮಿಜುವ ಒನಿಕೆನ ಹೊತ್ತುಕಂಡ್ ಹೋದೆ. ಅವನೂ ಕೇಳ್ತ್ 'ಅಣ್ಣಾ ದೂರ ಹೋದು?' ಹಿಂಗೆ' ದಾರಿ ಉದ್ದಕ್ಕೂ ಹೋದು'. 'ನೀ ಎಲ್ಲಿಗೆ ಹೋದು?''ನಾ ಇದರ ಮಾರಾಟಕ್ಕೆ ಹೋದು'. ಹಾಂಗೆ ಅಲ್ಲಿ ನಿತ್ತೊ. 'ನೀವು ಎಂತದಣ್ಣ ತಿಂಬೊದು?''ನಾ

ಒಂದು ಹೋಳುಕಾಯಿ, ಒಂದು ಹೋಳು ಹಕ್ಕಿ'. 'ಅಂದರೆ ನಂಗೂ ಕೊಡುವರಿಯಾ?' ತಿಂಬ ತೆನ್ಸಲ್ಲ. ಕೊಟ್ಟುಕನಕಲ್ಲಂತ ಹೇಳ್ತ್. ಅವಂಗೂ ಕೊಟ್ಟತ್. ಇವನೂ ಇಬ್ಬರೂ ತಿಂದೊ. ಏಲೆ ಅಡಿಕೆನೂ ತಿಂದೊ. ಹೊರ್ಪತ್. 'ನೀ ಹೊರ್ದುದೆಲ್ಲ ಸರಿ ನಿನ್ನ ಸಾಮಾನು ತಕಂಡೋಕೆ ಬೊತ್ತು'. 'ಅಯ್ಯೋ! ನಂಗೆ ಇದರ ಮಾರಾಟ ಮಾಡಿ ಮನೆಗೆ ಅಕ್ಕಿ ಕಾಯಿ ತಕಂಡೋಕಲ್ಲೆ ಅಣ್ಣಾ'. 'ಅದೊಂದು ನಂಗೆ ಗೊತ್ತಿಲ್ಲೆ?''ಅಂದರೆ ನೀ ತಿಂದದರ ಕೊಡು'. 'ಅಯ್ಯೊ ಶಿವನೇ ಹೊಟ್ಟೆಯೊಳಗೆ ಹೋದರ ಹ್ಯಾಂಗಣ್ಣ ಕೊಡ್ದು'. 'ಅದು ನಂಗೆ ಗೊತ್ತಿಲ್ಲೆ?''ಅಂದ್ರ ನೀ ಇದ್ದದ್ದರ ಕೊಟ್ಟು ಹೋಗು'. ಹಾಂಗೆ ಮತ್ತೆ ಈ ಒನಿಕೆ ಕೊಟ್ಟ್ ಹೋತ್.

ಇನ್ನೂ ಮುಂದೆಗೆ ಹೋಕನ ಅದೇ ಅವಲಕ್ಕಿ ಮಿಜ್ಜುವ ಒರ್ಲುನ ಹೊತ್ತುಕಂಡ್ ಹೋದೆ ಒಬ್ಬ. ಅವನೂ ನಿತ್ತ್ ಮಾತಾಡ್ತ್. 'ನೀವು ಎಲ್ಲಿಗೆ ಹೋದಣ್ಣ?''ನಾ ಇದರ ಮಾರಾಟಕ್ಕೆ ಹೋದು'. 'ನೀವು ಎಲ್ಲಿಗೆ ಹೋದಣ್ಣ?''ನಾ ಇದರ ತಿಂದ್‌ಕಂಡ್ ಹೋದು'. 'ಎಂತದ್?''ಹಕ್ಕಿ ಹೋಳು, ಕಾಯಿ ಹೋಳು'. 'ನಂಗೂ ಕೊಡುವರಿಯ?''ಏನಾತಪ್ಪ ಕೊಡದೆ' ಹೇಳ್ತ್. ಅಂವ ಒರ್ಲುನ ಇಳ್ಗಿಸಿತ್. ಅಕ್ಕಿ ಕಾಯಿ ಹೋಳು ತಿಂದೊ. ಏಳೆಅಡಿಕೆ ತಿಂದೊ. ಅಷ್ಟಾಕನ ಹೊರ್ಪತ್. ಅವಂಗೆ ನೇಚಿಕೊನಿಕೆ ಬೊತ್ತಾದೆ. 'ಇದರ ನಂಗೆ ಸ್ವಲ್ಪ ಹಿಡ್ದ್ ಬುಡಿಯಣ್ಣ'. 'ಎಲ್ಲಿಗೆ?''ನಾ ಇದರ ಎಲ್ಲಿಯಾರು ತಕಂಡೋಗಿ ಮಾರಾಟ ಮಾಡೊಕು. ಮನೆಗೆ ಊಟಕ್ಕೆ ಸಾಮಾನು ತರೊಕು'. 'ಅದಾಕಿಲ್ಲೆ?''ಮತ್ತೆ ಅದ್ ನಂಗೆ ಕೊಡೊಕು'. 'ಅಯ್ಯೋ ಅಣ್ಣಾ ಇಂದ್ ನಾ ಮನೆಗೆ ಎಂತರ ತಕಂಡೋದು. ಮಕ್ಕಳಿಗೆ ಎಂತ ಇಲ್ಲೆ?''ನಿನ್ನ ಮಕ್ಕ ಮರ್ಪರೆ ನಂಗೆ ಕೇಳಿಕಿಲ್ಲೆ'. 'ನನ್ನ ಹಕ್ಕಿ, ಕಾಯಿಹೋಳು ಕೊಟ್ಟರೆ ನೀ ತಕಂಡೋಗ್'. 'ಅದಲ್ಲರೆ ನಂಗೆ ಕೊಟ್ಟ್ ಹೋಕ್'ಂತ ಹೇಳ್ತ್. 'ಇನ್ನೇನು ಮಾಡ್ದಪ್ಪಾ? ತಿಂದು ಹೋತಲ್ಲಾ'ಂತ ಹೇಳ್ತ್ ಅದರ್‍ನೂ ಬುಟ್ಟು ಹೋತ್.

ಒರ್ಲು, ಒನಿಕೆ ಎಲ್ಲನೂ ಹೊತ್ತುಕಂಡ್ ಹೋತ್. ಹೋಕನ ರಾಕ್ಷಸಿ ಇಲ್ಲೆ. ಅದ್ ಹೋಗುಟು ಊರು ಮೇಲೆ. ಇದ್ ಉಟ್ಟು ಮನೆಲಿ. 'ಅಯ್ಯೊ ಅಣ್ಣಾ ನೀ ಯಾಕೆ ಬಂದಾಣ್ಣ?''ಬಂದರೆ ತಿಂದು ಬುಡ್ಲಲ್ಲೇ!''ನನ್ನ ಇಂದ್ ಅಡಿಗೆ ಮಾಡಿಕೆ ಹೇಳಿಕಂಡ್ ಹೋಗುಟ್'ಂತ ಹೇಳ್ತ್. ಹಂಗೆ ಹೇಳಿ ಇದ್ ಇವನ ಕರ್ಕಂಡ್ ಹೋತ್. ಅಟ್ಟಕೆ ಹತ್ತಿಸಿ ಅಟ್ಟಲಿ ಕುದ್ರಿಸಿತ್. ಅಷ್ಟೊತ್ತಿಗೆ ಇದ್ ಬಾತ್. ಬಂದ್ 'ಯಾರ್ ಬಂದೊಲೋ ಕುಂಞಿಬಿತ್ತ್? ಮೊನ್ಸ ಮೂರಿ ಬಂದದೆ ನಂಗೆ. ಮೊನ್ಸವಾಸನೆ ಬಂದದೆ'ಂತ ಹೇಳಿಕಂಡ್ ಬಾತ್. ಆಗ ಯಾರೊ ಬಂದೊ. ಯಾರ್‍ದೊ ಪೂಜೆ ಮಾಡ್ತ್. ಊಟಕೆ ಬಂದ್ ಕುದ್ದದ್ ಅದಕ್ಕೆ ಒಂದು ಕೋಣನ ಗೈಪು, ಒಂದು ಅರ್ದ ಮುಡಿ ಅಕ್ಕಿ ಉಗ್ಗೆ, ಒಂದು ದೊಡ್ಡ ಪಾತ್ರೆಲಿ ತಕಂಡೋಗಿ ಹೊರ್‍ಗುದು. ಅಲ್ಲಿ ಕುಂತ್‌ಕಂಡ್ ತೀನ್ತ್. ತಿಂಬಕನ ಇಂವ ಮೆಲ್ಲ ಅಟ್ಟಂದ ಸೆರೇಲಿ ಉಚ್ಚೆ ಹೊಯ್ತ್. ಹ್ಞಾ ಕುಂಞಿಬಿತ್ತ್ ಅಟ್ಟಲಿ ತುಪ್ಪದ ಪಾತ್ರೆ ಇತ್ತ್. ಬಿದ್ದೋತ್ ಕಂಡದೆ. ಎಲ್ಲ ತುಪ್ಪ

ಹೋತ್ಂತ ಉಂಡತ್. ಉಂಡ್ದ್ ಎದ್ದತ್. ಕೈತೊಳ್ತ್. ಎಲೆ ಅಡಿಕೆ ತೀನ್ತ್. ತುಪ್ಪದ ಪಾತ್ರೆ ಹೆಂಗಾಟ್ಟು ನೋಡ್ನೆಂತ ಅಟ್ಟಕೆ ಹತ್ತಿತ್. ಅಟ್ಟಕೆ ಹತ್ತಿಕನ ಅಂವ ಅಲ್ಲಿಂದ ರಾಕ್ಷಸಿಗೆ ಒಣಕೆಲಿ ಬೊಡ್ತ್. ಒಣ್ಕೆಲಿ ಬೊಡ್ದಂಗೆ ಹತ್ತಿತ್. ಹತ್ತಿದಾಂಗೆ ಒರ್ಲುನ ಹಾಕಿತ್. ಈ ದೋಲುನ ಬೊಡ್ತ್ ಗಗ್ಗರ ಆಡ್ಸಿತ್. ಒಳ್ಳೊ ಆಡ್ಸಿಕನ ಆರ್ಭಟೆ ಕೊಟ್ಟತ್. 'ನನ್ನಂದ ದೊಡ್ಡ ರಕ್ಕಸ ಬಂದೊಳ'ಂತ ಹೇಳ್ತ್. ಆರ್ಭಟೆ ಕೊಟ್ಟುಕಂಡ್ ಒಡ್ತ್. ಮನೆ ಬುಟ್ಟ್ ಓಡ್ತ್. ಅಂವ ಓಡಿಯಾಕನ ಇಂವ ಇಳ್ದ್ ಕೆಳಗೆ ಬಾತ್. ಒಂದು ಮಡಿಕೆ ಇಸಿ ಹಲ್ಸಿನಕ್ಕಿ ಹೊರಿಯಕ್ಕೆ ಸುರುಮಾಡ್ದೊ. ಹಲ್ಸಿನಕ್ಕಿ ಹೊರಿಯಕನ ಇದ್ ದೂರ ಓಡ್ದೆ. ಆಗ ಒಂದು ಕುದ್ಕ ಕಾಂಬಕೆ ಸಿಕ್ಕಿತ್. ರಕ್ಕಸಜ್ಜಿನೊಟ್ಟಿಗೆ 'ನೀ ಎಲ್ಲಿಗೆ ಓಡ್ಯ?"ಅಯ್ಯೊ ಮಾರಾಯ ನನ್ನ ಮನೆಲಿ ನಾನೇ ದೊಡ್ಡ ರಕ್ಕಸಿ. ನನ್ನಂದಲೂ ದೊಡ್ಡ ರಕ್ಕಸ ನನ್ನ ಮನೆಲಿ ಉಟ್ಟು. ಅಲ್ಲಿನ ಆರ್ಭಟೆನ ಎಲ್ಲ ಕೇಳಿಕೆ ಬೊತ್ತ್ ನಂಗೆ'ಂತ ಆತ್. 'ನೀ ಒಮ್ಮೆ ಬಾ ನಿನ್ನ ಮನೆಗೆ ಬಾ ಪೋಯಿ'. 'ಇಲ್ಲೆಪ್ಪ ನಾ ಬಾದ್ಲೆ?"ನನ್ನ ಹೊಟ್ಟೆ ಎಲ್ಲ ನಡ್ಗಿ ಹೋತ್'. 'ಮನೆಗೆ ದಾರಿ ತೊರ್ಸಪ್ಪ'. ದೂರಂದ ಮನೆಗೆ ದಾರಿ ತೋರ್ಸಿತ್. 'ಓ ಅಲ್ಲಿಯ ಮನೆ'ಂತ ಹೇಳ್ತ್ ಅಂವ ದೂರಲಿ ನಿಂತತ್. ಇವು ಏನ್ ಮಾಡ್ದೊ ಹಲ್ಸಿನಕ್ಕಿನ ಬಂದಾಂಗೆ ದೂರ ದೂರ ಒಂದೊಂದ್ ಹಾಕಿದೊ. ಇದ್ ಒಂದೊಂದೇ ತಿಂದ್‌ಕಂಡ್ ತಿಂದುಕಂಡ್ ಬಾತ್. ಕುದ್ಕ ಹಕ್ಕಲೆ ಎತ್ತಿಕನ ಈ ಓಡುಂದ ಹಲ್ಸಿನಕ್ಕಿನ ಸೊರ್ಗಿತ್. ಇದರ ತುಟಿಗೆ ಇಸಿಕನ ಬಿಸಿ ಮುಟ್ಟಿತ್. ಅಲ್ಲಿಂದ ಓಡ್ತ್. 'ಓಡೋ ಒಡ್ರ ಅಣ್ಣ'ಂತ ಹೇಳ್ತ್. ಅದು ಕುತ್ತಿಕಂಡ್ ಒಡ್ದು ಒಮ್ಮೆ ತಿರ್ಗಿ ನೋಡ್ದು. ಇಂವ 'ಓಡು ರಕ್ಕಸಜ್ಜಿ'ಂತ ಹೇಳ್ರೆ ಬಾದ್ಲೆಂತ ಹೇಳ್ಕನ ಪೋಯಿಂತ ಹೇಳ್ದೊ. 'ನೀ ಓಡು ರಕ್ಕಸಜ್ಜಿಂತ ಹೇಳ್ರೆ ನಾ ಹೇಂಗೆ ಓಡ್ದು'ಂತ ಓಡ್ದೊ. ಹಾಂಗೆ ಓಡಿ ಓಡಿ ರಾಕ್ಷಸಿ ಮತ್ತೆ ಬಿದ್ದ್ ಸತ್ತದೆ ಗಡ. ಕುದ್ಕನೂ ಸತ್ತದೆ ಗಡ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ1991]

## 89.ಕೊಂಞೆ ಞೆಂಞೆ ಮಂಞೆಯರ ಕತೆ

ಒಂದು ಗಂಡ್ ಹೆಣ್ಣ್‌ಗೆ ಮೂರು ಹೆಣ್ಣ್‌ಮಕ್ಕ. ಆ ಹೆಣ್‌ಮಕ್ಕ ಪ್ರಾಯಕ್ಕೆ ಎಲ್ಲ ಬಂದಾಕನ ಹೆಣ್ಣ್ ನೋಡಿಕೆಂತ ಹೇಳಿ ಕರ್ಕಂಡ್ ಬಾದು. ಮಕ್ಕಳಿಗೆ ಸಂಬಂಧ ಇದ್ದವು. ಅಪ್ಪಾಕನ ಒಂದು ದಿನ ನಿಘಂಟಾಗಿದ್ ಇವ್ಕೆ ಕೆಲ್ಸಕೆ ಹೋಗದೆ ಉಪಾಯ ಇಲ್ಲೆ. ಇವು ಕೆಲ್ಸ ಮಾಡಿ ತಿಂಬವು ಹಿಂಗೆ ಹೇಳ್ವೆ, 'ಇಂದ್ ನೆಂಟ್ರ್ ಬಂದವೆ ಮಕ್ಕಳೆ. ನೀವು ಲಾಯಿಕ್ ಅಡಿಗೆ ಮಾಡಿಕೊಟ್ಟ್‌ದ ಅವ್ಕೆ ಊಟ ಎಲ್ಲ ಮಾಡಿ ಬಡ್ಸಿ ಕೊಡೆಕು. ಮತ್ತೆ ನೀವು ಮಾತಾಡ್ಬೇಡಿ. ಮಾತಾಡದೆ ಇರೊಕು'ಂತ. ಅಪ್ಪಾನ ಅವು ಅಡಿಗೆ ಎಲ್ಲ ಮಾಡ್ದೊ. ನೆಂಟ್ರ್ ಬಂದೊ. ನೆಂಟ್ರ್ ಬಂದ್ ಅಡಿಗೆ ಮಾಡಿ ಇಕ್ಕಿದೊ. ಇಕ್ಕಿ ಆಕನ ಒಂದು ಗೂಡೆ ಹೇಳಿಕೆ ಸುರುಮಾಡ್ತ್. 'ಗೈಪುಗೆ ಉಪ್ಪ್‌ಬ್ಚು

[ಉಪ್ಪು ಹೆಚ್ಚುಟ]ಬಾವ'ಂತ ಹೇಳ್ತ್. ಅಷ್ಟಾಕನ ಮತ್ತೊಂದು ಗೂಡೆ ಹೇಳ್ತ್, 'ಅಪ್ಪ ಅವ್ವ ಹೇಳ್ಜಲ್ಲ ನೆಂತ್ರೆದುರಿಗೆ ಮಾತಾಚ್ಕೆ ಆಗದಲ್ಲಂತ ಹೇಳ್ಜಲ್ಲ'ಂತ [ಹೇಳ್ದಲ್ಲ ನೆಚಿಟ್ರೆದುರಿಗೆ ಮಾತನಾಡಲು ಆಗದು ಎಂದು ಹೇಳಿದ್ದಲ್ಲ]. ಅಷ್ಟಾಕನ ಮತ್ತೊಂದು ಗೂಡೆ ಒಂದು ಮೂಲೆಲಿ ಕುದ್ದ್ ಹೇಳ್ತ್, 'ಯಾಯ್ ಮಾತಾಜುರೂ ನಾ ಮಾತಾಜ್ಕಿಲ್ಲೆ'ಂತ [ಯಾರು ಮಾತನಾಡಿದರೂ ನಾನು ಮಾತನಾಡುವುದಿಲ್ಲ]ಹೇಳ್ತ್. ಇವು ನೆಂಟ್ರ್‌ಗ ಏನ್ ಮಾಡ್ದೊ. ನೆಂಟ್ರ್‌ಗಳಿಗೆ ಕತೆ ಗೊತ್ತಾತ್. 'ಇವು ಮೂರು ಗೂಡೆಗಳೂ ಕೊಂಞ್'ಂತ. ಇವು ಲೈಕ್ ಉಂಡುಕಂಡೊ ಹೋದೊ. ಮತ್ತೆ ಅಪ್ಪಮ್ಮ ಇಬ್ಬರೂ ಹಿಂಬೊತ್ತಿಗೆ ಕೆಲಸ ಬುಟ್ಟ್ ಬಂದೊ. ಮಕ್ಕಳೊಟ್ಟಿಗೆ ಕೇಳ್ದೊ. 'ಹೆಂಗೆ ನೆಂಟ್ರೆಲ್ಲ ಬಂದಿದ್ದನೊ'. 'ನೆಂಟ್ರೆಲ್ಲ ಬಂದಿದ್ದೊ. ಅಡಿಗೆ ಮಾಡಿ ನಾವು ಇಕ್ಕಿದೊ'. ಒಂದು ಹೇಳ್ತ್ ಅಕೇರಿದ್ 'ನಾ ಮಾಚಾಚ್ಚೇ ಇಲ್ಲೆ'ಂತ ಹೇಳ್ತ್. 'ಅವು ಮಾತಾಡ್ದಲ್ಲ ನಾ ಮಾತಾಡ್ದೇ ಇಲ್ಲೆ'ಂತ) ಆಗ ಇವ್ಕೆ ಗೊತ್ತಾತ್ ಈ ಮಕ್ಕ ಮಾತಾಡಿದ್ದೇ ಇವ್ಕೆ ಉಪದ್ರಕೆ ಇವು ಆಗಿರೊಕು. ಇಲ್ಲದಿರೆ ನಾವ್ಗೆ ಆಗಿತ್ತ್‌ಂತ ಅವರ ಮನಸ್ಸಿಗೆ ಬಾತ್. [ಕತಾ ನಿರೂಪಕ:ವಿಶ್ವನಾಥ ಕುಂದಲ್ಪಾಡಿ ಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ1991]

## 90.ಪೆದ್ದ ಅಳಿಯನ ಕತೆ

ಒಂದ್ ಅಯ್ಯನ್ ಮಂಜನ್ ಗಡ. ಅಯ್ಯೆನ್ ಮಂಜನ್ ಬಾಳ ಕಷ್ಟಲಿ ಇದ್ದೊ ಗಡ. ಅಂವ ಒಬ್ಬೆನೆ ಮಂಜ. ಅಯ್ಯೆ ಹೇಳ್ತ್ ಗಡ. 'ಮಂಜ ನೀ ಮೊದ್ವೆ ಆಕು'ಂತ. ಹಾಂಗೆ ಮೊದ್ವೆ ಆಕುಂತ ಹೇಳ್ಕನ 'ಎಲ್ಲಿಯವ್ವ ? ಯಾರವ್ವ ? ನಂಗೆ ಹೆಣ್ಣ್ ಕೊಡ್‌ವವು'ಂತ ಹೇಳ್ತ್‌ಗಡ. 'ಹೆಣ್ಣ್‌ಗೇನ್ ಬರನ. ಈಗ ಊರ್‍ಲಿ ಎಷ್ಟ್ ಬೇಕರೂ ಗೂಡೆಗ ಒಳೊ. ನಮ್ಮ ಊರ್‍ಲಿ ಮಡಿಕೇರಿ ಅತ್ತಕ್ಕೆ ಮೊದ್ವೆ ಆಕ್ಕೇನ್. ಬೊದಿ ಏನೂ ಬೇಡ ಒಳ್ಳೆ ಗೂಡೆ ಸಿಕ್ಕಿರೆ ಮೊದೆ ಆಣ್'ಂತ ಹೇಳ್ತ್. ಹಾಂಗೆ ಅಂವ ಹೆಣ್ಣ್ ಹುಡುಕ್ತಾ ಹೋಕನ ಒಂದ್ ಅಜ್ಜ ಸಿಕ್ಕಿತ್‌ಗಡ. ಅಜ್ಜ ಹೇಳ್ತ್‌ಗಡ 'ನಾ ನಿಂಗೆ ಒಂದ್ ಪಿಳ್ಳಿನ ತೋರ್‍ಸಿ ಕೊಟ್ಟನೆ. ನಂಗೆ ಪಿಳ್ಳಿ ನಿಂಗೆ ಹೆಣ್ಣ್ ಆದು. ನೀ ಬಾ ಪೋಯಿ'ಂತ. ಹೋಗಿ ಅಲ್ಲಿ ಏಳ್ ಜನ ಅಣ್ಣ ತಮ್ಮಂದಿರಿದ್ದೊ ಗಡ. ಅದರ್‍ಲಿ ಒಂದೇ ತಂಗೆ ಇದ್ದದೆ. ಅವ್ ಒಂದೇ ತಂಗೆಂತ ಹೇಳಿ ಬಾಳ ಪ್ರೀತಿಲಿ ಸಾಂಕಿಕಂಡಿದ್ದೊ. ಅದರ ಉಪ್ಪರಿಗೇಲಿ ಕುದ್ರುಸುದುದ್. ಇಂವನ ನೋಡಿಯಾಕನ 'ಹೆಡ್ಡ ಆದರೇನು? ಬಾಳ ಸುಂದರ ಹೈದ'. ಹಾಂಗೆ ಹೆಣ್ಣ್ ಕೊಟ್ನೆಂತ ಹೇಳಿ ನಿಘಂಟಾತ್. ನಿಘಂಟ್ ಎಲ್ಲ ಕಳ್ತ್‌ಗಡ. ಒಳ್ಳೆ ಚಪ್ಪರ ಎಲ್ಲ ಹಾಕಿದೋ. ದಿಬ್ಬಣ ಧಾರೆ ಮಾಡಿ ಅಲ್ಲಿ ಅಂವಂಗೆ ಧರ್ಮಧಾರೆ ಮಾಡಿಕೊಟ್ಟೊ. ಕೊಟ್ಟ್‌ದ್ ಉಡ್ಗಿರೆ ಎಲ್ಲ ಅಜ್ಜಂಗೆ ಕೊಟ್ಟತ್ ಇಂವ. ಕೊಟ್ಟ್ ನೆಂಟ್ರ್ ಎಲ್ಲ ಇಂವನ ಮನೆಗೆ ಹೋಗಿ ಕ್ರಮದಂತೆ ಮೊದ್ವೆ ಎಲ್ಲ ಕಳ್ತ್.

ಕಳ್ದ್‌ದ್ ಈ ಏಳ್ ಜನ ಅಣ್ಣ ತಮ್ಮಂದರ್‌ಗೆ ಮನೆಲಿ ಯಾರ್ ಗಂಜಿ ಮಾಡಿಕೆ ಜನ ಇಲ್ಲೆಂತ ಹೇಳಿ ಅವ್ಕೆನೂ ಹೆಣ್ಣ್ ಹುಡ್ಕಿಕೆ ಸುರ್‌ಮಾಡ್ದೊ. ಹಾಂಗೆ ತಂಗೆನ ಮೊದ್ವೆ ಮುಂದೆ ಕಳ್ತ್.

ಅಣ್ಣಂದರ ಮೊದ್ವೆ ಮತ್ತೆ ಆತ್. ಆಟಿಕುದ್ರಿಕೆ ಹೋದುಂತ ಉಟ್ಟಲ್ಲ. ಹಾಂಗೆ ಆಕನ ಹೆಣ್ಣ್‌ನ ಮನೆಗೆ ಹೋಗಿ ಇಂವನ ಸಮ್ಮನಕೆಲ್ಲ ಕರ್ಕಂಡ್ ಬಂದೊ. ಇಂವ ಕರ್ಕಂಡ್ ಬಂದ್ ಇಂವನ ಅಯ್ಯೆ ಬಾರಿ ಉಸಾರ್‌ದ್ ಗಡ. ಈ ಏಳ್ ಜನ ಗಂಡಿಗೆನೂ ಏಳ್ ಜನ ಹೆಣ್ಮಕ್ಕಳಿಗೆನೂ ಬೇಕಾದ ಎಲ್ಲ ಮಾಡಿ ಸಮ್ಮಾನ ಮಾಡಿ ತಲೆ ಎಲ್ಲ ಬಾಚಿಸಿ ಹೂವೆಲ್ಲ ಮುಡಿಸಿ ಅವರ ಶೃಂಗಾರಲಿ ಕಳ್ಸಿತ್‌ಗಡ. ಇನ್ನ್ ವಾಪಾಸ್ ಇಂವನ ಸಮ್ಮಾನಕ್ಕೆ ಕರೀಬೇಕ್‌ಂತ ಹೇಳಿ ಅವ್ ಸಮ್ಮಾನಕ್ಕೆ ಇಂಥ ದಿನ ಬರೊಕ್‌ಂತ ಹೇಳ್ದೊಗಡ. ಹೋಕನ ಅಯ್ಯೆ ತಲೆಬಾಚಿ ಕಳ್ಸಿತ್. ಕಳ್ಸಿ ಆಕನ ಇಂವ ತಿರ್ಗಿ ನೋಡ್ತ್ ಹೆಣ್ಣ್‌ನ. ತಿರ್ಗಿ ನೋಡಿಕನ ಅದ್ ನಿನ್ನ ತಲೆಲಿ ಬಗಾಳ್ ಕಂಡದೆ. ನಿನ್ನ ತಲೆ ಒಡ್ದುಟುಂತ ಹೇಳ್ತ್‌ಗಡ. ಅಲ್ಲ ಅತ್ತೆ ತಲೆ ಬಾಚಿ ಬುಟ್ಟದ್. ಹಾಂಗೆ ತಿರ್ಗಿತಿರ್ಗಿ ನೋಡ್ತಾ ಹೋತ್. ಹೆಣ್ಮಕ್ಕ ಗಂಡಂದ್‌ರ್ ಹತ್ತ್ ಮಾರ್ ಮುಂದೆ ಹೋಕನ ಹಿಂದೆಂದ ಹೋತ್ ಗಡ. ಹೋಗ್ತಾ ಮುಂದೆ ಹೋಗಿ ಹೋಗಿ ಅವರ ಮನೆಯ ಹಕ್ಕಲೆ ಎತ್ತಿದೊ. ಅಂದ್ ರಾತ್ರೆ ಸಮ್ಮನ ಊಟ ಎಲ್ಲ ಆತ್. ಊಟ ಆಕನ ಇಂವನ ಮನೆಲಿ ಯಾಗೋಳು ಅಂಬೆಲಿ ಗಡ. ಇಂವ ಇಕ್ಕಿಕಂಡ್ ಬಾಕನ ಹೇಳ್ತ್‌ಗಡ, 'ಇದ್ ನಮ್ಮ ಮನೆಲಿ ಉಟ್ಟು ನಾವ್ ನಿತ್ಯ ಮಾಡ್‌ವೆ'ಂತ. ಆಗ ಬಾವಂದಿರ್ ಅಕ್ಕಂದರ್ ಹೇಳ್ದೊಗಡ. 'ಇದ್ ನಮ್ಮ ಮನೆಲಿ ನೆಂಟ್ರಿಗೆ ವರ್ಷಕ್ಕೊಮ್ಮೆ ಮಾಡಿ ಕೊಡ್‌ವಂತ್‌ದ್ ಅಲ್ಲ'. 'ಇದ್ ನಮ್ಮ ಮನೆಲಿ ಯಾಗೋಳ್ ಕೆಲ್ಸದವುಕ್ಕೆಲ್ಲ ಮಾಡಿಕೊಟ್ಟವೆ. ನೀವೀಗ ಮಾಡಿ ತಿಂದ್ರಿಂತ ಹೇಳಿ ನಾವಿಗೆ ವರ್ಷಕ್ಕೊಮ್ಮೆ ಮಾಡಿಗೊತ್ತಿಲ್ಲೆ. ನಾವ್ ಇದರ ನಿತ್ಯವೂ ಮಾಡ್ವೆ'ಂತ ಹೇಳ್ತ್‌ಗಡ. ಹಾಂಗೆ ಇಂವ ಬಾಳೆಲೆ ಕೊಡಿಗೆ ಬಿದ್ದ್‌ದರ ಹನೀಸ್ ನೆಕ್ಕಿ ನೋಡ್ತ್. ನೆಕ್ಕಿ ನೋಡಿಕೆ ಆಕನ ಇದ್ ಬಾಳ ಸಿಹಿ ಮುಟ್ಟಿತ್. ಇನ್ನ್ ಊಟ ಮಾಡಿಕೆ ಆಕನ ವಾಪಾಸ್ ಕೇಳಿಕೆ ನಾಚಿಕೆ ಆದ್ಲೆನ. ಮುಂದೆನ ಕಾಲಲಿ(ನೂರ್) ವರ್ಷಕ್ಕೆ ಹಿಂದೆನ ಕತೆ ಅಲ್ಲೊ. ಹಂಗೆ ಇವೆಲ್ಲ ಉಂಡು ತಿಂದ್ ಮಲಗಿಕನ ಇಂವ ಹೆಣ್ಣ್‌ನೊಟ್ಟಿಗೆ ಕೇಳ್ತ್, 'ಈ ಅಡ್ಗೆ ಮಾಡ್ದ ರೂಮ್ ಯಾವ್ದು'ಂತ. 'ಅದ್ ಓ ಇಂತರೂಮ್'. 'ಅಲ್ಲಿ ಪಾಯ್ಸ ಒಳ್ದಿದ್ದೊ'ಂತ ಕೇಳ್ತ್‌ಗಡ. 'ಯಾಕೆ?''ನೀವ್ ಆಗ ಬೇಡಂತ ಹೇಳ್ದರಿ ಗಡ. ಈಗ ಎಂತಕೆ ತಿಂಬೊದ್'ಂತ. 'ನೀ ಅಂದರೆ ಹಂಞ ತಂದ್ ಕೊಡುವನಾ'ಂತ ಹೇಳ್ತ್. 'ತಂದ್‌ಕೊಡಿಕೆ ಆಕಿಲ್ಲೆ. ಅತ್ತಿಗೆಕ್ಕ ಜೋರ್ ಮಾಡುವ'ಂತ ಆತ್. ಹಂಗೆ ಇಂವ ಒಂದ್ ಕರೆಲಿ ಮಲಗಿತ್. ಅಂವನೂ ಗೂಡೆನೂ ಒಂದ್ ಕರೆಲಿ ಮಲಗಿದೊ.

ಸುಮಾರ್ ರಾತ್ರೆ ಒಂದ್ ಹನ್ನೊಂದ್ ಗಂಟೆ ಹನ್ನೆರಡ್ ಗಂಟೆ ಹೊತ್ತಿಗೆ ಆಕನ ಎದ್ದತ್ ಗಡ. ಎದ್ದ್ ಮೆಲ್ಲ ಹೋನೇಂತ ಹೋತ್ ಗಡ. ಹೋಗಿ (ಮುಂದೆಲ್ಲ ಮಣ್ಣ್‌ನ ಮಡಕೆಗಡ ಈಗೆಲ್ಲ ತಾಮ್ರದ ಮಡಿಕೆ ಅಲ್ಲೊ) ಈ ಮಣ್ಣಿನ ಮಡ್ಕೆಗೆ ತಲೆ ಹೆಟ್ಟ್‌ಕನ ಅಡೀಲಿದ್ದ ಪಾಯ್ಸಕ್ಕೆ ತಲೆ ಹಾಕಿಕನ ತಲೆ ಅಡಿಗೆ ಆತ್‌ಗಡ. ತಲೆ ಅದರ ಒಳಗೆ ಹುಕ್ಕ್‌ತ್ ಹುಕ್ಕಾಕನ ಮಡಕೆ ಒಡ್ದೊತ್ ಮಡಕೆ ಒಡ್ದ ಮೇಲೆ ಇಂವ ಹೆಂಗಾರ್ ಮಾಡಿ ಹೊರಟತ್. ಹೊರಟಾಕನ ಅವು 'ನಾಯಿ

ನಾಯಿ'ಂತ ಜೋರ್ ಮಾಡ್ದೊ. ಜೋರ್ ಮಾಡಿಯಾಕನ ಓಡ್ತ್. ಓಡಿ ಹೋಗಿದ್ ಅಲ್ಲಿ ಒಂದ್ ತೊಂಡೆ ಬೊಳ್ಳಿ ಚಪ್ಪರ ಇತ್ತ್‌ಗಡ. ಈ ತೊಂಡೆ ಬೊಳ್ಳಿ ಚಪ್ಪರಕ್ಕೆ ಇಂವ ಹತ್ತಿ ಕುದ್ದತ್. ಮಾರನೆ ದಿನ 'ನಂಟ ಎಲ್ಲಿಯೋ ದೂರ ಹೊರ್ಕಡೆ ಕುದ್ರಿಕೆ ಹೋಗಿರ್ದು'ಂತ ಗೇನಾ ಮಾಡ್ದೊ ಎಲ್ಲ. 'ಅಣ್ಣಂದಿರ್ ಬಾವಂದಿರ್ ಡೋಂಗಿ ಮಾಡುವಂತ ಹೇಳಿ ದೂರ ಹೋಗಿರ್ದು'ಂತ.

ಬೋಳ್ಳಿಗೆ ಹೋಗಿ ಅಂವನ ಅತ್ತೆ ಹೋಗಿ ತೊಂಡೆಕಾಯಿ ಕೊಯ್ಯಕ್ಕೆ ಸುರ್‌ಮಾಡ್ತ್. ಇಂವ ಉರ್ಬ್ಳಿ ಎದ್ದ್ ಓಡ್ದಂವಲ್ಲ. ಈ ತೊಂಡಕಾಯಿಗೆ ಹೋಕನ ಇಂವನ ಸಾಮಾನ್(ತುಣ್ಣೆ) ಅಡಿಗೆ ನೇಳಿಕೊಂಡ್‌ಟ್ಟುಗಡ. ಇದ್ ಅದರ ಹಿಡ್ದ್ ಎಳ್ದತ್. ಅಷ್ಟೊತ್ತಿಗೆ 'ಅಯ್ಯಯ್ಯೊ'ಂತ ಹೇಳ್ತ್. 'ಅಯ್ಯೋ ಮಾರಾಯಾ ನೀ ಅಳಿಯ ಇಲ್ಲಿ ಬಂದ್ ಕುದ್ದದ್'ಂತ ಹೇಳ್ತ್. ಅವನ ಕರ್ದ್ ಇಳ್ಸಿ ಅವನ ಮೀಸಿ ಇದೆಂತದ್'ಂತ ಹೇಳಿ ಮಡ್ಕೆ ಕಂಠನ ಇಂವನ ಗಂಟ್ಲಿಂದ ತೆಗ್ದ್ ಎಣ್ಣೆ ಎಲ್ಲ ಹಾಕಿ ಇಂವನ ಮತ್ತೆ ಕುರ್ಸಲಿ ಶೃಂಗಾರ ಮಾಡಿ ಕುದ್ರಸಿದೊ ಗಡ. ಆಗ ಮಗ ಬಂದ್ ಹೇಳ್ತ್‌ಗಡ, 'ಅವ್ವ ಅವ್ ಬರಿ ಹೆಡ್ಡ ಆತಲ್ಲೆ. ಅವ್ ಬರೇ ಹೆಡ್ಡ. ಹೆಡ್ಡಂತ ಹೇಳ್ರೆ ಅವ್ಕೆ ಎಂತದ್ ಕತೆ ಗೊತ್ಲೆ. ನನ್ನೊಟ್ಟಿಗೆ ಮಲ್ಗೊಕ್‌ಂತ ಹೇಳ್ಕನ ಹೆಂಗೆ ಮಲ್ಗುದುಂತ ಹೇಳಿ ಮೊಂದ್ರಿನ ನೀಟ ಹಾಕಿ ಮೇಲೆ ಬೀಳ್ದು. ಆತಲ್ಲೆ ಯಾವ ಇದೂ ಗೊತ್ತಿಲ್ಲೆ. ಅವ್‌ಕ್ಕೆ ನಾ ಹೇಳಿಕೊಟ್ಟ್ ಕೊಟ್ಟ್ ಸಾಕಾತ್. ನಿನ್ನೆ ಹಾಂಗೆ ಬಾಕನ ಅವ್ವ ನನ್ನ ತಲೆ ಬಾಚಿ ಅತ್ತೆ ಹೂವೆಲ್ಲ ಮುಡ್ಸಿ ಕಳ್ಸಿದೊ. ಎಡೆದಾರಿಗೆ ಬಾಕನ ನಿನ್ನ ತಲೆ ಏನ್‌ನೇ ಒಡ್ಡದ್'ಂತ ಕೇಳ್ದೊ. ತಲೆ ಎಲ್ಲ ಹಿಡ್ದ್ ನೋಡ್ದೊ. ಆಗ ಅತ್ತೆ ತಲೆಬಾಚಿದೆ ಬಕ್ತಲೆ ಅಲ್ಲಾಂತ ನಾ ಹೇಳ್ದೆ. ಈ ಜೆಡೆ ಏನ್ ಉದ್ದ ಬಂದದ್'ಂತ ಹೇಳ್ದೊ. ಅದ್ ನಂತ್ರ ಮನೆಗೆ ಬಾಕನ ಹಾಂಗೆ ಅಲ್ಲ ಕಟ್ಟುದು. ನಿನ್ನ ಕೈಲಿ ಎಂತದ್'ಂತ ಕೇಳ್ದೊ. ಅದ್ ಎಣ್ಣೆ ಚೊಂಬ್. ಎಣ್ಣೆ ಚೊಂಬ್ ಎಡದ ಕೈಲಿ ಹಿಡಿಯೋದ್ ಅಲ್ಲಂತ ಹೇಳ್ದೊ. ಅಲ್ಲ ಎಡದ ಕೈ ಹೆಣ್ಮಕ್ಕಳಿಗೆ ಭಾಗ್ಯದ ಕೈಗಡ. ಬಲದ ಕೈಲಿ ಹಿಡಿಂತ ಹೇಳಿ ಬಲದ ಕೈಲಿ ಹಿಡ್ಕಂಡ್ ಬಂದೆ. ಹಳ್ಳಲಿ ಸುಮಾರ್ ಸೀರೆನೇಚಿ ದಾಟಿದೆ. ಅವ್ ಹೇಳ್ದೊ ಸೀರೆ ನೇಚಿದೆಂತಕೆ. ಅಡ್ಡ ದಾಟೊಕ್‌ಂತ ಹೇಳ್ದೊ'ಂತ ಹೇಳ್ತ್‌ಗಡ. ಹಾಂಗೆ ಆಕನ ಅವ್ವಂಗೆ ತುಂಬ ಬೇಜಾರ ಆತ್‌ಗಡ. 'ಇಂತಾ ಅಳಿಯನೂ ನಂಗೆ ಆಗಿ ಹೋತಲ್ಲೆ'ಂತ.

ಹಂಗೆ ಅದ್ ಆ ಸರ್ತಿ ಅಂವನ ಎಲ್ಲ ಡೋಂಗಿ ಮಾಡಿ ಕಳ್ಸಿದೊ ಗಡ. ಕಳ್ಸಿ ಸಮ್ಮನಕೆ ಹೋದವ್ ಹಾಂಗೆ ಬಂದೊ ಅಲ್ಲೆ. ಆಟಿ ಕುದ್ರಿಸಿ ಅಯ್ಯೆ ಬಂದ್ ಮಗಳ ಕರ್ಕಂಡ್ ಹೋತ್‌ಗಡ. ಕರ್ಕಂಡ್ ಹೋಗಿ ಆಕನ ಬಾಕಿ ಮಕ್ಕ ಎಲ್ಲ ಕೆಲ್ಸಕೆ ಹೋಗೊಳ ಗಡ. ಬೇಸಾಯ ಕೆಲಸಕೆ ಹೋಗೊಳ ಗಡ. ಅತ್ತೆ ಮೀದ್‌ಕಂಡಿತ್ತ್‌ಗಡ. ಅಳಿಯ ಬಾಕನ ಆಟಿ ಬೊಳ್ಕಿರಿಗೆ ಒಳ್ಳೊ ಕೊಯ್ಪಲ್ಲ. ಮೀದ್‌ಕಂಡಿದ್ದದ್ ಬಾತ್. ಅಳಿಯ ಬಾತ್'ಂತ ಹೇಳ್ತ. ಬೊಳ್ತಿಗೆ ತೆಗ್ತ್ ಅಡ್ಗೆ ಮಾಡ್ತ್. ಊಟಕ್ಕೆ ಎಲ್ಲಾ ರಡೀ ಆತ್. ಅಳಿಯನಿಗೆ ಇಕ್ಕಿಕೊಟ್ಟ್‌ತ್ ಗಡ. ಇಕ್ಕಿ ಕೊಟ್ಟ್ ಅಳಿಯಂಗೆ ಉಪ್ಪನಕಾಯಿ ಕೊಡೆಕುಂತ ಹೇಳಿ ಆದಕ್ಕೆ ಹಾಕಿತ್. ಅಷ್ಟೊತ್ತಿಗೆ ಆಕನ ಹೆನ್ಮಕ್ಕ ಹಿಂಗೆ

ಸೀರೆ ನೇಚಿ ಕಟ್ಟುವ ಅಬ್ಬೆಸ ಉಟ್ಟು ಗಡ. ಸೀರೆ ನೇಚಿಕನ ಸೀರೆ ಇಲ್ಲೆ. ಅಲ್ಲಿಂದ ಓಡಿ ಹೋಗಿ ಸೀರೆ ಉಟ್ಟ್‌ಕಂಡ್ ಬಾತ್‌ಗಡ. ಅಲ್ಲಿಗೆ ಕತೆ ಮುಗ್ತ್. [ಕತಾ ನಿರೂಪಕ:ಲಿಂಗಪ್ಪಗೌಡ ಉರುಂಡೆ; ಸ್ಥಳ:ಮನೆ; ಸಮಯ:ಸಾಯಂಕಾಲ 7ಗಂಟೆ; ವರ್ಷ–1991]

## 91. ಗಡ್ಗೆ ಒಳ್ಗೆ ಕುಂಬ್ಳ ಕಾಯಿ ಕತೆ – ಪಠ್ಯ 1

ಒಂದು ಅರ್‍ಸು. ಒಬ್ಬ ಕೆಲಸ ಮಾಡುಂವ. ಅಲ್ಲಿ ಯಾಗೋಳು ಕೆಲಸಕ್ಕೆ ಹೋವಂವ. ಒಂದು ಅಜ್ಜ. ಅರ್‍ಸುಗೊಂದು ಮಂಜ. ಈ ಕೆಲ್ಸದವಂಗೆ ಒಂದು ಮಗ. ಶಾಲೆಗೆ ಹೋಗಿ ಕಲಿದರಲ್ಲಿ ಇಬ್ಬರೂ ಉಷಾರ್. ಯಾಗ ನೋಡ್ರೂ ಹತ್ತ್ ಮಾರ್ಕ್ ಈ ಗೂಡೆಗೆ ಹೆಚ್ಚು. ಇವಂಗೆ ನಾಚಿಕೆ ಆದು. ಇದರ ಹೆಂಗೆ ಸೋಲ್ಸುದು? ಏನೇನು ಮಾಡ್ರೂ ಇವಂದ ಆದೇ ಇಲ್ಲೆ. ನೋಡಂತ ಎಲ್ಲ ಹೇಳ್ತ್. ಪಾಸ್ ಎಲ್ಲ ಆತ್. ಶಾಲೆಗೆ ಹೋದೊ. ಈ ಗೂಡೆನ ಇವಂಗೆ ಮೊದ್ವೆ ಆಕ್ಕು. ಆ ಸೋಲ್ಸಿದಕ್ಕಾಗಿ. ಇಲ್ಲರೆ ಒಪ್ಪುದ್ಲೆ. ಹಿಂಗೆ ಆಗ್ತಾ ಇರ್‍ಕನ ಇಂವ ಒಂದು ದಿನ ಏನ್ ಹೇಳ್ತ್, 'ಹೌದೊ ಗೂಡೆ, ನಿನ್ನ ಒಂದೇ ದಿನಲಿ ಸೋಲ್ಸುವೆ'ಂತ ಹೇಳ್ತ್. ಆಗ ಆ ಗೂಡೆ ಏನ್ ಹೇಳ್ತ್, 'ನಿನ್ನಂದ ಯಾಗೋಲು ಆಕಿಲ್ಲೆ'. 'ನಿನ್ನ ಒಂದು ದಿನಕ್ಕಾದರು ಸೋಲ್ಸುವೆ'. 'ನಿನ್ನ ಸೋಲ್ಸಿರೆ ನನ್ನ ಮೊದ್ವೆ ಆವ'ಂತ ಹೇಳ್ತ್. 'ಓ ಧಾರಾಳ ಮದುವೆ ಆಕ್ಕು. ಇವಂಗೆ ಆಕ್ಕೊ ಹೌದು. ಅವನ ಸೋಲ್ಸೊಕು. ಆಗೂಡೆ ಅದರ ಅಪ್ಪನೊಟ್ಟಿಗೆ ಹೇಳ್ತ್. ನೋಡಿ ನಂಗೆ ನಾಳದ್ದು ಮೊದ್ವೆ ಉಟ್ಟು'. 'ನಂಗೆ ಒಂದು ಗಡಿಗೆ ಕೆಂಬುಡೆ ಕಾಯಿ ಬೇಕು'ಂತ ಹೇಳ್ತ್. 'ಇಲ್ಲದಿದ್ದರೆ ನಿನ್ನ ಇಷ್ಟೊತ್ತಿಗೆ ತಲೆ ಕಡಿವೆ'. ಒಂದು ಗಡಿಗೆ ಕುಂಬಳಕಾಯಿ ಹೆಂಗೆ ತೆಗೀದು. ಗಡಿಗೆಯೊಳಗೆ ಹಾಕಿತರೊಕು ಕೆಂಬುಡೆ. 'ಕೆಲ್ಸಕೆ ಹೋದ್ಲೆನಪ್ಪ'. 'ಇಂದ್ ಯಾಕೆ?''ಒಂದು ಗಡಿಗೆ ಕೆಂಬುಡಕಾಯಿ ತಕಂಡೋಕಡ. ನಾ ಗಡಿಗೆ ಒಳಗೆ ಹೆಂಗೆ ಹಾಕುದು? ಹಾಕಿರೆ ಗಡಿಗೆ ಒಡ್ದು ಹೋದ್ಲೆನ?''ನೀವು ಅದ್ಕೆಂತಕೆ ಹೆದರ್‍ದು ಹೋಗಪ್ಪ. ಮೂರು ದಿನದ ಪುರುಷೋತ್ತು ಕೇಳಿ ಒಂದು ಗಡಿಗೆ ತನ್ನಿ'. ತಾತ್ ಕೆಂಬುಡೆಕಾಯಿ ಮಿಡಿನ ಅದರೊಳಗೆ ಹಾಕಿತ್. ಒಂದೆರಡಮೂರು ದಿನ ಕಳ್ದಾಕನ ಇದು ಗಡಿಗೆ ಒಳಗೆ ಆತ್. ಮತ್ತೆ ತೆಗಿಯಕೆ ಆದೆನಾ ಇಲ್ಲೆ. ಅದರ ತೊಟ್ಟು ಮುರ್‍ತ್ 'ಅಪ್ಪ ತಕಂಡೋಗಿ ಕೊಡಿ'. 'ಅಪ್ಪಾ ಬಾಕನ ಗಡಿಗೆ ತಕಂಡ್ ಬರೊಕು. ಆಚೆ ಮನೆಯವರ ಗಡಿಗೆ ಅದ್. ಕೆಂಬುಡೆಕಾಯಿ ತಕನಲಿ. ಗಡಿಗೆ ಒಡಿಯಕ್ಕೆ ಬೊತ್ತ್'. ಇವನ ಕೈಂದ ಆದೆನ ಸೋತತಲ್ಲೆ ಅಂವ. ಅಪ್ಪ ಬಾತ್. ಗಡ್ಗೆನ ಕೊಡಿಕೆ ಕೆಂಬುಡೆಕಾಯಿ ತೆಗಿಯಕೆ ಆದೆನಾ. ಇನ್ನೆನ್ ಹೇಳ್ದೊ ಅವಂಗೆ ತುಂಬ ಕಷ್ಟೊ ಉಟ್ಟು ಗಡ.

'ನಾ ನಾಳೆ ಹೋಗಿ ನಿಲ್ಲೊಕು'. 'ಯಾಕೆ ಹೋಗಿ ನಿಲ್ಲುದು?''ಮೊನ್ನೆ ಸೋತದಕ್ಕೆ ನಾಳೆ ನಮ್ಮ ಮನೆಲಿ ದೊಡ್ಡ ಸಂಬ್ರಾಜನೆ ಉಟ್ಟು. ಸಂಬ್ರಾಜನೆಗೆ ತುಂಬ ತುಪ್ಪಬೇಕ್. ಎಮ್ಮೆ ತುಪ್ಪ ಅಲ್ಲ ಕೋಣನ ತುಪ್ಪ'. ಇಂವ ಬಂದ್ ಮಗಳೊಟ್ಟಿಗೆ ಹೇಳ್ತ್, 'ಮಗಳೇ ಎಮ್ಮೆ ತುಪ್ಪ ಕೊಡ್ತು

ಬೇಡ ಕೋಣನ ತುಪ್ಪ ಕೊಡೊಕಡ'. 'ನೀ ಒಮ್ಮೆ ಸುಮ್ಮನಿರಪ್ಪ'. 'ತುಪ್ಪ ಅಲ್ಲ ಕೊಡೊಕಾದ್ ಕೋಣನ ತುಪ್ಪಕೊಡಿಕೆ ಆದ್ಲೆ. ಎಲ್ಲಿಟು?' 'ಅದೆಲ್ಲ ಕೊಡಕಪ್ಪ. ನೀವೊಮ್ಮೆ ಸುಮ್ಮನಿರಿ'. ಬೊಳ್ಪಾಕನ 'ಅಪ್ಪಾ ನೀವು ಹೋಗ್ಬೇಡಿ. ಇಂದ್ ಬೇರೆ ಕಡೆಗೆ ಹೋಗಿ'. 'ಹುಡ್ಕಿಕೊಂಡು ಬಾವೊಲ್ಲ ತಲೆ ಕಡಿಯಕೆ. ನಾ ಇತ್ತಂದತ್ತ ಅರಸುನ ಮನೆಗೆ ಓಡ್ದು. ನೀವು ಎಲ್ಯಾರು ಒಂದು ಕರೇಲಿ ಕುದ್ಕೊನಿ ಸಂಪಿಗೆ ಮರದ ಬುಡಲ್ಯೋ ಹಲ್ಸಿನ ಮರದ ಬುಡಲ್ಯೋ ಕುದ್ಕೊನಿ'. ಹೊತ್ತ್ ತಪ್ಪಿತ್. ಅಂವ ಓಡಿ ಬಾತ್. ಕತ್ತಿ ತೆಕಂಡ್. ಇದ್ ಅಂವ ಬಾಕನ ಸೀರೆನ ಉಜ್ಜಿಕಂಡ್, ತಲೆನ ಹರಂಡಿಕಂಡ್ ಓಡ್ದೆ. 'ಎಲ್ಲಿಗೆನೆ ಓಡ್ದು ಹುಚ್ಚಯ್ಯಾ, ನೀವೊಮ್ಮೆ ಬುಡಿ, ನನ್ನ ಅಪ್ಪ ನೆರ್ದೊಳ. ಅಪ್ಪೆ ತಲೆನೀರ್ ಹೊಯ್ದು ಬೇಡ?''ನಿಂಗೆ ಏನ್?''ನೀವ್ಗೆ ಕೋಣನ ತುಪ್ಪ ಎಲ್ಲಿಂದ?''ಕೋಣನ ತುಪ್ಪ ಇಲ್ಲೆ' ಸೋತತಲ್ಲ. 'ಇದ್ ಲಾಚ್ಯ್ಕಾತ್. ಹೇಂಗೆ ಆದರೂ ಸೋಲ್ಸಿದೆ'.

ಮತ್ತೆ ಅಜ್ಜ ಬಾತ್. ಹೋತ್. 'ಆಮೇಲೆ ಇನ್ನೂ ಸೋಲ್ನೊಕುಂತ ಹೇಳಿ ಬಾಮಿ ತೆಗಿಯೊಕುಂತ ಮನಸಾಗುಟು. ನಾಳ್ದ್ ಮೊದ್ವೆ ಉಟ್ಟು ನಾವ್ಗೆ. ನಮ್ಮ ಬಾಮಿಲಿ ನೀರ್ ಎತ್ತುದ್ಲೆ ಒಂದು ಬಾಮಿ ತೆಗ್ದ್ ಕೊಡೆಕು. ಒಂದು ಬಾಮಿನ ತಂದ್ ಕೊಡೆಕು'. 'ಲಾಯ್ಕಾತಲ್ಲೆ!''ಬಾಮಿನ ತಕಂಡೋಗಿ ನಾ ಅಲ್ಲಿಗೆ ಕೊಡಿಕೆ ಉಟ್ಟ'. 'ಇಲ್ಲೆ ಮಗಳೇ'. 'ಎಲ್ಲಾ ಸೋಲ್ಸಿ ಸೋಲ್ಸಿ ಆತ್. ಇನ್ ಬಾಮಿನ ತೆಗ್ದ್ ಅಲ್ಲಿ ಕೊಡಿಕೆ ಉಟ್ಟ. ಯಾವಾ ಪ್ಲಾನೂ ಆದ್ಲೆ'. ಬೊಳ್ಪಿಗೆ ಎದ್ದತ್. 'ಒಂದು ಕೊಟ್ಟು ತಕೆನಿ. ಒಂದು ಪಿಕ್ಕಾಸ್ ತಕನಿ. ಒಳ್ಳೆ ನೀರಿರುವ ಜಾಗಲಿ ಎಳ್ಳುದು, ಪೊರ್ಲು ಕತ್ತಾಲೆ ಮುಟ್ಟ'. ಅಜ್ಜನ ಕೈಲಿ ತೆಗ್ಸಿದ್ ನೀರ್ ಬೇಕಾದಷ್ಟ್ ತುಂಬಿತ್. ಅದರ ಮಾರ್ನೆ ದಿನ ಮೊದ್ವೆ ಅವಂಗೆ. ಮದ್ವೆ ಮಾತ್ರ ಇಲ್ಲೆ. ಜನಗ ಬಂದೊ, ಹಿಡ್ದೊ. ಒಂದು ದಿನಕ್ಕೆ ಮುಂದೆ ಕರ್ದೊ. 'ಯಾಕೆ ಬಾದ್ಲೆ? ಬಾಮಿ ಯಾಕೆ ತಾತ್ಲೆ?''ನೀವ್ಗೆ ಏನೊ ಹುಚ್ಚಿ ಅರ್ಸುಗಳೆ ಬಾಮಿ ತೆಗ್ದಿಸಿಯೊಲೆ'. 'ತಾತ್ಲೆಯಾಕೆ?''ತಾರದ್ದೆಂತದ್. ತರೊಕಪ್ಪಾ ಇನ್ನ್ ಮೊದ್ವೆ ಹಕ್ಕಲೆ ಆಗಲಿ ಕೊಂಬು ವಾದ್ಯ ಎಲ್ಲ ಕೇಳಲಿ'. 'ಹಾಗೆಯಾ'. ಮತ್ತೆ ಜನ ಎಲ್ಲ ಬಂದದ್'ಂತ ಸುಳ್ಳು ಮಾಡ್ದ್. ನಾಂತ ಅಜ್ಜನ ಕರ್ದೊ, 'ಬಾಮಿ ತಕಂಡೋಕಡ ನೀವು ಅವರೊಟ್ಟಿಗೆ ಹೇಳಿ ನಮ್ಮವ್ರು ಬಾಮಿ ತಕಂಡೋಕಡ. ನೀವು ಅವರೊಟ್ಟಿಗೆ ಹೇಳಿ ನಮ್ಮವು ಒಂದು ಬಾಮಿ ಬಾದ್ಲೆ, ಅದಕ್ಕೆ ನಾಚಿಕೆ. ನಮ್ಮ ಬಾಮಿ ಕೊಂಬು ವಾದ್ಯಲಿ ಬರ್ಲಿ. ಈ ಬಾಮಿನ ಒಟ್ಟಿಗೆ ಕರ್ಕಂಡ್ ಹೋಗಲಿ'ಂತ. ಆ ಬಾಮಿ ಬಾಕೆ ಉಟ್ಟ ಈ ಬಾಮಿ ಹೋಕೆ ಉಟ್ಟ. ಅಲ್ಲಿಗೆ ಅರ್ಸು ಸೋತದ್ ಅಲ್ಲಿಗೆ ಕಥೆ ಮುಗ್ತ್. [ಕತಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 92.ಗಡ್ಡೆ ಒಳ್ಗೆ ಕುಂಬ್ಳ ಕಾಯಿ ಕತೆ – ಪತ್ಯ 2

ಒಂದು ಊರ್ಲಿ ಒಂದು ಅರ್ಸ. ಆ ಅರ್ಸಂಗೆ ಏಳ್ ಮಂಜಂದಿರ್. ಒಂದೇ ಒಂದು ಹೆಣ್ಣ್ ಮಕ್ಕಂತ ಹೇಳಿ ಇಲ್ಲೆ. ಈ ಏಳ್ ಮಂಜಂದರ ಶಾಲೆಗೆ ಕಳ್ಸಿತ್. ಬೇಕಾದ ವಿದ್ಯೆ ಕಲ್ಸಿತ್. ಕಡೆಗೆ

ಮನೆಲೇ ಇದ್ದೊ. ಅವು ಕೆಲಸ ಬೇಸಾಯ ಮಾಡಿಕಂಡ್. ಕಡೆಗೆ ಆಕನ ಅವುಕೆ ಮೊದ್ವೆ ಆಗುವ ಪ್ರಾಯ ಬಾತ್. ಅರ್ಸು ಹೇಳ್ದೊ ನಮ್ಮ ಏಳು ಜನ ಮಕ್ಕಳಿಗೂ ಒಂದೇ ಅಯ್ಯೆಪ್ಪನ ಮಕ್ಕಳ ತರೊಕು. ಒಂದೇ ಮನೆಲಿ ಏಳ್ ಹೆಣ್ಣ್ ಮಕ್ಕ ಇದ್ದ ಮನೆಂದ ಹೆಣ್ಣ್ ಹೆಣ್ಣ್ ತರೊಕ್ಂತ ಅರ್ಸರ್ ಹೇಳ್ದೊ. ಹೇಳಿ ಹುಡ್ಕಾಟಕ್ಕೆ ಹೊರಟೊ. ಹುಡ್ಕುತ್ತಾ ಹುಡ್ಕುತ್ತಾ ಹೋಕನ ಒಂದು ಮನೆ ಸಿಕ್ಕಿತ್. ಒಂದು ಅರ್ಸರ ಮನೆ. ಅಲ್ಲಿ ಏಳ್ ಹೆಣ್ಣ್ ಮಕ್ಕ ಒಳೊ. ಆ ಏಳ್ ಹೆಣ್ಣ್ ಮಕ್ಕಳ ಅರ್ಸರೊಟ್ಟಿಗೆ ಕೇಳ್ತ್, 'ನಮ್ಮಲ್ಲಿ ಏಳ್ ಜನ ಗಂಡ್ ಮಕ್ಕ ಒಳೊ. ನಿಮ್ಮಲ್ಲಿ ಏಳ್‌ಜನ ಹೆಣ್ಣ್ ಮಕ್ಕ ಒಳೊ. ಆದರೆ ನೀವು ನಮ್ಮ ಮಕ್ಕಳಿಗ ಹೆಣ್ಣ್ ಕೊಡೆಕು'ಂತ ಅರ್ಸರ್ ಹೇಳ್ದೊ. ಆದು ನಾವು ಸಹ ಬಂದವೆ ನಿಮ್ಮ ಮನೆಗೆ ಒಂದು ದಿನ. ಆದುಂತ ಹೇಳ್ದೊ.

ಕೆಲವು ದಿನ ಕಳ್ದ್ ಆ ಅರ್ಸರ್ ಈ ಅರ್ಸರ ಮನೆಗೆ ಹೋದೊ. ಇವು ಸಹ ಅವರ ಮನೆಗೆ ಹೋದೊ. ಬಂದೊ. ಹೋಗಿ ಬಂದ್ ಇಂಥ ದಿನ ಮೊದ್ವೆಂತ ಹೇಳಿ ನಿಶ್ಚಯಿಸಿದೊ. ಮೊದ್ವೆ ಗಂಡ್ ಮಕ್ಕಳಿಗೆ ಅಲ್ಲಿಂದ ಏಳ್ ಹೆಣ್ಣ್ ಮಕ್ಕಳ ಮೊದ್ವೆ ಮಾಡ್ದೊ. ಮೊದ್ವೆ ಮಾಡಿ ಅವು ಮನೆಲೇ ಬೇಸಾಯ ಕೆಲಸ ಮಾಡ್ತಾ ಇದ್ದೊ. ಅದರ್ಲಿ ಅಕೇರಿನ ಸೊಸೆ ಅಡಿಗೆ ಕೆಲಸಕೆ. ಬಾಕಿ ಎಲ್ಲವೂ ಬೇಸಾಯ ಕೆಲಸಕೆ. ಈ ಏಳ್ ಜನಗಂಡು ಮಕ್ಕಳೂ ಆರ್ ಜನ ಹೆಣ್ಣ್ ಮಕ್ಕಳೂ ಹೊರಗಿನ ಬೇಸಾಯ ಕೆಲಸಕೆ. ಅಕೇರಿನ ಸೊಸೆ ಮನೆ ಕೆಲಸಕೆ. ಒಂದು ದಿನ ಮನೆಕೆಲಸ ಎಲ್ಲ ಆಗಿ ನಿತ್ತ್ ತಲೆ ಬಾಚಿಕೆ ಆಕನ ಈ ಗಂಧ ಸಾಲೆ ಕಟ್ಟ ಪುಣಿಲಿ ಹದ್ನಾರ್ ಹದ್ನಾರ್ ಕರ್‌ಗ ಬಂದ್‌ಕಂಡ್ ಬೆಳೆ ತಿಂದವೆ. 'ಹೊ! ಮುದ್ದು ಕರುಗ ಬಂದ್ ಬೆಳೆ ತಿಂದವೆ ಅಲ್ಲ' ಹಾಂಗೆಂತ ಹೇಳ್ತ್ ಇದ್ ತಲೆ ಬಾಚಿಕಂಡ್ ಇದ್ದ ಗಿರಾಕಿ ಓಡಿಕಂಡ್ ಹೋತಲ್ಲಿಗೆ. ಹೋಗಿ ಕೂದಲ್‌ನ ಎರಡ್ ಭಾಗ ಮಾಡಿದ್, ಒಂದು ಭಾಗಲಿ ಹದ್ನಾರ್ ಕರ್‌ಗಳ ಹಿಡ್ಕನ್ತ್. ಮತ್ತೊಂದ್ ಭಾಗದ ಕೂದಲ್‌ಲಿ ಹದ್ನಾರ್ ಕರ್‌ಗಳ ಹಿಡ್ಕನ್ತ್. ತಂದ್ ಹಟ್ಟಿಲಿ ಕಟ್ಟಿತ್. ಕರ್‌ಗಳ ಹಟ್ಟಿಲಿ ಕಟ್ಟಿ ಮನೆಕೆಲಸ ಮಾಡ್ತಾ ಇತ್ತ್.

ಅದರ ಆ ಪಕ್ಕದ ಮನೆ ಅರ್ಸ ನೋಡ್ತ್. ನೋಡಿದ್ 'ತಲೆಕೂದಲ್‌ಲಿ ಹದ್ನಾರ್ ಹದ್ನಾರ್ ಕರ್‌ಗಳ ಅದ್ ಕಟ್ಟಿ ತರೊಕಾಗಿದ್ದರೆ ಅದ್ ಹೆಂಗೆ ಇರ್ದು ಹೆಣ್ಣ್?' ಅನ್ನಂತ ಹೇಳಿ ತುಂಬ ಆಲೋಚನೆ ಮಾಡ್ತ್. ಆಲೋಚನೆ ಮಾಡಿ ಅದರ ಮಾವಂಗೆ ಕಾಗದ ಕೊಟ್ಟತ್. ಕೂಡ್ಲೆ ನನ್ನ ಮನೆಗೆ ಒಮ್ಮೆ ಬರೊಕುಂತ ಹಾಂಗೆ ಅರ್ಸ ಹೋತಲ್ಲಿಗೆ. ಅರ್ಸರೆ ನೀವು ಯಾಕೆ ನನ್ನ ಬಾಕೆ ಹೇಳ್ದರಿ ? ಕೇಳ್ತ್. ಹೇಳ್ತ್, 'ಒಂದು ವಾರದೊಳಗೆ ಒಂದು ಗಡಿಗೆಲಿ ತುಂಬ ಕುಂಬಳಕಾಯಿ ತಂದ್‌ಕೊಡೊಕು. ಅದು ಒಂದೇ ಕುಂಬಳಕಾಯಿ ಆಕ್ಕು. ತಂದ್ ಕೊಡದಿದ್ದರೆ ನಿನ್ನ ತಲೆ ಕಡಿದು ಕಂಡಿತ ಹಾಂಗೆ'ಂತ ಹೇಳ್ತ್ ಅಂವ. ಈ ಅರ್ಸ ಬಂದ್ ಬಾರಿ ಬೇಜಾರಲ್ಲಿ ಮಲಗಿತ್ ಮನೆಲಿ. ಆಗ ಈ ಅಕೇರಿನ ಸೊಸೆ ಅಲ್ಲ ಮನೆಲಿ ಒಳದ್. ಅದ್ ಏಲ್ಲ ಕೆಲ್ಸ ಆಗಿದ್ ಕೇಳ್ತ್ 'ನೀವು ಯಾಕೆ ಮಾವ ಹೀಂಗೆ ಮಲಗಿದ್? ಏನ್ ಬೇಜಾರ ನೀವ್ಗೆಂತ?' ಆಗ ಮಾವ ಎದ್ದ್

ದ್ದ್ ಹೇಳ್ತ್, 'ಎಂತಂತ ನಾ ಏನ್ ಹೇಳ್ದುದ್?''ನೀವು ಅರ್ಸರ ಮನೆಗೆ ಹೋಗಿ ಬಂದದಲ್ಲ ಈಗ. ನಾತ್ ನೀವ್ಗೆ ಹಾಂಗೆ'ಂತ ಕೇಳ್ತ್. ಆ ಅರ್ಸರ್ ಹೇಳ್ದೊ 'ಒಂದು ವಾರದೊಳಗೆ ಒಂದು ಗಡಿಗೆ ುಂಬ ಕುಂಬಲಕಾಯಿ ನಾ ಕೊಡೊಕಡ. ಅದು ಒಂದೇ ಕುಂಬಲಕಾಯಿ ಆಕ್ಕು. ನಾ ಎಲ್ಲಿಂದ ೊಡ್ದು. ಈ ಗಡಿಗೆ ಒಳಗೆ ಕುಂಬಲಕಾಯಿ ಹಾಕುದು ಹೇಂಗೆ? ನನ್ನಂದ ಆದೊ? ಆಕಿಲ್ಲೆ ? ಲ್ಲದಿದ್ದರೆ ನನ್ನ ತಲೆಕಡ್ದದೆ ಗಡ ಅಂವ' ಹಾಂಗೆಂತ ಹೇಳ್ತ್. 'ಆಗಲಿ ಅದ್ಕೆ ನೀವ್ ಬೆಜ್ಜ ಾಡ್ದುಬೇಡ. ನೀವು ಎದ್ರಿ ಊಟಮಾಡಿ'ಂತ ಹೇಳಿ ಮಾವಂಗೆ ಊಟ ಎಲ್ಲ ಮಾಡ್ಸಿತ್. ದೇ ಊಟ ಕೊಟ್ಟ್ದ್ ಒಂದು ಕತ್ತಿ ತಕನ್ತ್. ಎರಡ್‌ಕುಂಬಳ ಬಿತ್ತ್ ತಕನ್ತ್. ಸೂಟುಮಣ್ಣ ುಡ್ಡೆಗೆ ಹೋತ್. ಅಲ್ಲಿ ಹೋಗಿ 'ನಾ ಸತ್ಯಲಿ ಹುಟ್ಟಿ ಶಾಪಲಿ ಬೆಳ್ದಂತ ಆದರೆ ಒಂದು ವಾರದ ಳಗೆ ಇದ್ ದೈ ಆಗಿ ಬೊಳ್ಳಿ ಆಗಿ ಹೂವಾಗಿ ಮಿಡಿಯಾಕ್ಕು' ಹಾಂಗೆಂತ ಹೇಳಿ ಬಿತ್ತ್ ಹಾಕಿ ಾತ್. ಬಂದ್ ಮಾರನೆದಿನ ಅಲ್ಲ ಅದರ ಮಾರನೆದಿನ ಅದ್ ದೈ ಆತ್. ದಿನ ದಿನಕ್ಕೆ ಒಂದು ಾರದೊಳಗೆ ಬಳ್ಳಿ ಆತ್. ಹೂವು ಆತ್. ಹೂವು ಆಗಿ ಮಿಡಿ ಬುಟ್ಟತ್. ಮಿಡಿ ಬುಡಿಕೆ ಕನ ಇದ್ ಒಂದು ಗಡಿಗೆ ತಕಂಡ್ ಹೋತ್. ಗಡಿಗೆ ತಕಂಡೋಗಿ ಮಿಡಿ ಸಣ್ಣದಲ್ಲ ಅದರ ಡಿಗೆ ಒಳಗೆ ಇಸಿತ್. ಗಡಿಗೆನ ಅಲ್ಲಿ ಇಸಿ ಬಾತ್. ಮತ್ತೆ ಎರಡೇ ದಿನ ಇರ್ದು. ಅಲ್ಲಿ ವಾಯಿದೆ ರಡ್ ದಿನಲಿ ಕುಂಬಳಕಾಯಿ ತಕಂಡೋಕಲ್ಲ. ಮತ್ತೆ ಎರಡ್ ದಿನ ಕಳ್ದ್ ನೋಡಿಕೆ ಆಕನ ಡಿಗೆ ತುಂಬ ಉಟ್ಟು ಕುಂಬಳಕಾಯಿ. ತೊಟ್ಟು ಕೊಯ್ದ್ ತಕಂಡ್‌ಬಂದ್ ಮಾವಂಗೆ ಕೊಟ್ಟತ್. ಇದರ ನೀವು ತಕಂಡೊಗಿ ಅರ್ಸರಿಗೆ ಕೊಟ್ಟ್ ಬನ್ನಿ. ಮೊನ್ನೆ ನಿಮ್ಮ ಬಾಕೆ ಹೇಳ್ದಲ್ಲ ಅರ್ಸರ್' ಾಂಗೆಂತ.

ಹಂಗೆ ಈ ಅರ್ಸ ಆ ಕುಂಬಳಕಾಯಿ ಗಡಿಗೆನ ಹೊತ್ತ್‌ಕನ್ತ್. ಸೀದ ಅರ್ಸರ ಮನೆಗೆ ಹೋತ್. ೋಗಿ 'ಅರ್ಸರೇ ನೀವು ಮೊನ್ನೆ ನನ್ನೊಟ್ಟಿಗೆ ಹೇಳ್ದಲ್ಲ. ಒಂದು ವಾರಲಿ ನಂಗೆ ಒಂದು ಗಡಿಗೆ ಂಬಳಕಾಯಿ ತಂದ್‌ಕೊಡೊಕುಂತ. ಹಾಂಗೆ ನಾ ತಕಂಡ್ ಬಂದೊಳೆ. ಇಂದೆನಿ'ಂತ. ೌದೊ! ತಂದೊಳ ನೀ'ಂತ ಹೇಳ್ತ್. ಬಂದ್ ನೋಡ್ತ್. ನೋಡ್ರೆ ಒಂದು ಗಡಿಗೆ ತುಂಬ ಂಬಳಕಾಯಿ ಉಟ್ಟು. ಇದರ ತೆಗಿದು ಹೆಂಗೇಂತ ಹೇಳಿ ಅವಂಗೆ ಗೊತ್ತೆ. ಹೇಳಿಕೆ ಅಂವ ೇಳಿಟು. ಹೆಂಗೆಂತ ಅಂವ ಹೇಳ್ದು. ಸುಮ್ಮನೇ ಆಕನ್ತ್. ಆದರೂ ನಾ ಗೇನ ಮಾಡಿದ ಕೆಲ್ಸ ದ್ದೆ ಅಲ್ಲಂತ ಹೇಳ್ತ್.

ಮತ್ತೂ ಒಂದು ವಾರ ಕಳ್ದ್ ಒಂದು ಕಾಗದ ಕೊಟ್ಟತ್. ಕೂಡ್ಲೆ ಬರೊಕು ನನ್ನ ಮನೆಗೆಂತ. ನಾ ಈ ಅರ್ಸ ಅಲ್ಲಿಗೆ ಹೋತ್. 'ಯಾಕೆ ಅರ್ಸರೆನೀವು ಬಾಕೆ ಹೇಳ್ದ್?''ನಂಗೆ ಒಂದು ರದೊಳಗೆ ಎತ್ತ್ ಹಾಕಿದ ಕರ್‌ನ ತಂದುಕೊಡೊಕು. ಹಸ್ ಹಾಕಿದ್ದಲ್ಲ. ಅಲ್ಲದ್ರೆ ನಿನ್ನ ಲೆಕಡಿವೆ'ಂತ ಹೇಳ್ತ್. 'ಒಂದು ಗಡಿಗೆ ಕುಂಬಳಕಾಯಿ ಕೊಟ್ಟಾತ್. ಇನ್ನ್ ನಾ ಎತ್ತ್ ಹಾಕಿದ ್‌ನ ಎಲ್ಲಿಂದ ಕೊಡ್ದು'ಂತ ಹೇಳ್ತ್ ಮನೆಗೆ ಬಾತ್. ಬಂದ್ ಊಟ ಯಾವುದೂ ಮಾಡದೆ

ಕತ್ತಲೆ ಕೋಣೆಲಿ ಮಲ್ಗಿತ್. ಹಂಗೆ ಆಕನ ಈ ಸೊಸೆ ಮಾವನ ಊಟಕೆ ಹುಡುಕಿರೆ ಮಾವ ಎಲ್ಲೂ ಕಾಂಬೊದ್ಲೆ. ನಮ್ಮ ಮಾವ ಎಲ್ಲಿ ಹೋದೊಂತ ಹುಡ್ಕುತಾ ಹುಡ್ಕುತಾ ಹೋದರೆ ಕತ್ತಲೆ ಕೋಣೆಲಿ ಹೋಗಿ ಮಲ್ಕೊಂಡೊಲೊ. 'ಯಾಕೆ ಮಾವ ನೀವು ಮಲಗಿದ್? ಬನ್ನಿ ಊಟ ಮಾಡಿ'ಂತ ಕರ್ದದೆ. ಕರಿಯಕೆ ಆಕನ ಅಂವ ಎದ್ದ್ ಹೋದೆ. 'ಇಲ್ಲೆ ಏನ್ ಬ್ಭೆಜಾರ?''ನೀವು ಮೊನ್ನೆನಾಂಗೆ ಅರ್ಸರ ಮನೆಗೆ ಹೋಗಿದ್ದರಿ. ಅರ್ಸರ್ ನೀವ್ಗೆ ಏನ್ ಹೇಳ್ದೊ?' ಹಾಂಗೆಂತ ಹೇಳಿ ಕೇಳ್ತ್. ಅರ್ಸರ್ ಹೇಳ್ದೊ, 'ಮೊನ್ನೆ ಒಂದು ಗಡಿಗೆ ಕುಂಬಳಕಾಯಿ ಕೇಳ್ದೊ. ತಕಂಡೋಗಿ ಕೊಟ್ಟಾತ್. ಇನ್ನ್ ಎತ್ತ್ ಹಾಕಿದ ಕರ್‌ನ ನಾ ತಕಂಡೋಗಿ ಕೊಡೊಕೊಡ. ನಾ ಎಲ್ಲಿಂದ ಕೊಡ್ದು ?' ಹಂಗೆಂತ ಹೇಳ್ತ್. 'ಅದ್ಕೇಕೆ ನೀವ್ಗೆ ಬೆಚ್ಚ. ಎತ್ತ್ ಹಾಕಿದ ಕರ್‌ನ ಕೊಡೊಣ ಅವ್ಕೆ. ನೀವ್ ಎದ್ರಿ ಊಟ ಮಾಡಿ'ಂತ ಮಾವನೊಟ್ಟಿಗೆ ಹೇಳ್ತ್. ಹಂಗೆ ಮಾವ ಎದ್ದ್ ಬಂದ್ ಮೋರೆ ಎಲ್ಲ ತೊಳ್ದ್ ಊಟ ಮಾಡ್ತ್. ಒಂದು ಎತ್ತ್ ಹಾಕಿದ ಕರ್‌ನ ತಾಕೆ ಹೇಳ್ದಲ್ಲ. ಒಂದು ವಾರ ಆತ್. ಆಗಿದ್ ಒಂದು ದಿನ ಇದ್ ಈ ಮಾವ ಕೈಗೆ ಒಂದು ಗೋಣಿ, ಒಂದು ಮೊಂದ್ರಿ, ಒಂದು ಕತ್ತಿ ಎಲ್ಲ ಹಿಡ್ಸಿ ಆ ಅರ್ಸು ಕಾಡಿಗೆ ಬೇಟೆಗೆ ಹೋಗಿ ಬಾಕೆ ಆಕನ ಈ ಮಾವನ ಕರ್ಕಂಡ್ ಇದ್ ಹೋದೆ. ಆ ಅರ್ಸು ಕೇಳ್ತ್ 'ಎಲ್ಲಿಗೆ ನೀವುಂತ?''ನನ್ನ ಮಾವ ನೆರ್ದೊಳ. ನಾ ಮಾವನ ಮೀಯಕೆ ಕರ್ಕಂಡ್ ಹೊರ್ಟದ್' ಹಾಂಗೆಂತ ಹೇಳ್ತ್. 'ನಿನ್ನ ಮಾವ ಹೆಂಗೆ ನೆರ್ದದ್?' ಅಂತ ಕೇಳ್ತ್. 'ಅವು ಗಂಡುಸಲ್ಲ. ಅವು ಹೆಂಗೆ ಮತ್ತೆ ನೀವು ಎತ್ತ್ ಹಾಕಿದ ಕರ್‌ನ ತಾಕೆ ಹೇಳ್ದಲ್ಲ. ಅದ್ ಹೇಂಗೆ ತಾದು? ಎತ್ತ್ ಹಾಕಿದ ಕರ್‌ನ ನೀವೆ ಅಲ್ಲ ತಾಕೆ ಹೇಳ್ದ್'ಂತ. 'ಅದು ಹೌದು'. 'ಆಗ ನನ್ನ ಮಾವ ನೆರಿಯಕಿಲ್ಲೆ'ನಂತ ಕೇಳ್ತ್. ಇದ್ ಉತ್ತರ ಹೇಳ್ರೆ ಆ ಅರ್ಸುಗೆ ಏನು ಹೇಳಿಕೆ ದಾರಿ ಇಲ್ಲೆ ಅಲ್ಲಿ. ಅಲ್ಲಿಂದ ಹೊರ್ಟ್ ಮಾವನ ಮೀಯಕೆ ಕರ್ಕಂಡ್ ಸೊಸೆ ಹೋತ್. ಆ ಅರ್ಸು ಬೇಟೆಗೆ ಹೋದವು ಬೆಡಿ ತಕಂಡ್ ಅವರ ಮನೆಗೆ ಹೋದೊ. ಆಲ್ಲಿಗೆ ಈ ಕತೆ ತೀರ್ತ್.[ಕಥಾ ನಿರೂಪಕಿ:ತಾರಾಮಣಿ ಪಡ್ಪು; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 93.ಕುರುಡ – ಕುಂಟ – ಮೂಗರ ಕತೆ

ಒಂದಾನೊಂದು ಕಾಲಲಿ ಒಂದು ಊರ್ಲಿ ಒಬ್ಬ ಅರ್ಸನೂ ಅಬ್ಬೆನು ಇಬ್ಬರೇ ಇದ್ದೊ ಗಡ. ಈ ಅರ್ಸನ ಅಬ್ಬೆಗೆನೂ ನಾಲ್ಕ್ ಜನ ಮಕ್ಕ. ನಾಲ್ಕ್ ಜನ ಮಕ್ಕಳಲ್ಲಿ ಒಬ್ಬ ಕುಂಟ, ಇನ್ನೊಬ್ಬ ಕುರುಡ, ಇನ್ನೊಬ್ಬ ಬಾಯಿ ಬಾರದವಂತ ಹೀಗೆ ಮೂರು ಜನ ಇದ್ದವೆ. ಮತ್ತೊಬ್ಬ ಬಾರಿ ಪೊರ್ಲುನ ಹೈದ ಆಗಿದ್ದದೆ. ಈ ಹೈದನ ಅಪ್ಪನು ಅಮ್ಮನು ಬಾರೀ ಕೊಂಡಾಟಲಿ ಸಾಂಕುವೆ. ಆದರೆ ಈ ಹೈದ ಮೊದಮೊದಲು ಕೊಂಡಾಟಲಿ ಕರ್ದದಕ್ಕೆ ಸರಿಯಾಗಿ ಇದ್ದದೆ. ಕಡೆಗೆ ಇಂವ ಕ್ರೂರ ವ್ಯಕ್ತಿತ್ವನ ಸೇರ್ಸಿಕೊಂಡದೆ. ಇದೇ ಸಮಯಕ್ಕೆ ಆಕನ ಅವಂಗೆ ಮೊದ್ವೆ ಮಾಡ್ವೆ. ಅವಂಗೆ ಎರಡು ಗಂಡುಮಕ್ಕ ಹುಟ್ಟುವೆ. ಹಂಞ ಸಮಯ ಕಳ್ದ್ ಅವಂಗೆ ಮತ್ತೊಂದು ಮೊದ್ವೆ ಆಕಾಗಿ

ಬಂದದೆ. ಈ ಮೊದ್ವೆಗೆ ಅಂವನ ಮನೆಯವು ಮನಸ್ಸಿಲ್ಲದೆ ಒಪ್ಪುವೆ. ಇಂವನ ಅಪ್ಪ ಅವ್ವ-ಮುಂದೆನ ಹೆಣ್ಣ್ ಒಪ್ಪಿಗೆ ಕೊಟ್ಟು ಮೊದ್ವೆನೂ ಆದೆ. ಇದರ್ಲಿ ಒಂದ್ ಗಂಡ್ ಕೂಸ್ ಹುಟ್ಟಿದೆ. ಮಕ್ಕ ಪ್ರಾಯಕ್ಕೆ ಬಂದವೆ. ಇಂವ ಮೂರ್ ಮಕ್ಕಳ ಕಟ್ಟಿಕಂಡ್ ಸಾಧಾರಣ ರೀತಿಲಿ ಜೀವನ ಮಾಡ್ದೆ. ದೊಡ್ಡ ಹೆಣ್ಣ್‌ನ ಇಬ್ಬರ್ ಮಕ್ಕ ಒಂದು ಕಡೆ ಆದರೆ ಎರಡನೆ ಹೆಣ್ಣ್‌ನ ಮಕ್ಕಳ್ ಒಂದು ಕಡೆ ಇದ್ದವೆ.

ಇದೇ ಒಂದು ಬೇಜಾರಕೆ ದಾರಿ ಆದೆ. ಇವನ ಕಾಲ ಹೆಂಗೂ ಕಳ್ದದೆ. ಅಂವ ಈ ಮಕ್ಕಳೊಟ್ಟಿಗೆ ಹೇಳ್ದೆ. 'ಮಕ್ಕಳೆ ನೀವು ಮೂರು ಜನ ಒಂದಾಗಿರಬೇಕು. ನಮ್ಮ ಅಪ್ಪನ ಕಾಲಂದ ಬಂದ ಆಸ್ತಿನ ನೀವು ಲೈಕ್‌ಲಿ ನೋಡಿಕಂಡಿರಬೇಕು. ಅಲ್ಲದೆ ಊರ್ನವ್ಕೆ ನೀವು ಒಳ್ಳೆವುಂತ ಕರೆಸಿಕನೊಕು'. ಒಂದು ದಿನ ಮಕ್ಕಳೊಂದಿಗೆ ಹೇಳ್ದೆ, 'ನೀವ್ಗೆ ದೇಶದ ಕಷ್ಟ ಸುಖ ಗೊತ್ತಾಕುಂತ ಹೇಳ್ರೆ ನೀವು ಊರ್ರ್ಲಿ ತಿರ್ಗಿಕಂಡ್ ಬರೊಕು'ಂತ ಹೇಳಿ ಕೆಲವು ಸಮಯ ಕಳ್ಸಿಕೊಟ್ಟವೆ. ಈ ಮೂರು ಜನ ಹೋಗ್ತಾ ಇರ್‌ಕನ ಒಂದು ಕಡೆಲಿ ದೊಡ್ಡಾ ಒಂದ್ ಕಾಡ್ ಸಿಕ್ಕಿದೆ. ಕಾಡ್‌ಲಿ ನಡಿತಾ ನಡಿತಾ ಇದ್ದವೆ. ನಡಿತಾ ಇದ್ದ್ ಹಾಗೆ ಈ ಮೂರು ಜನರ್ಲಿ ಒಬ್ಬ ಆ ಕಾಡ್ ಸೇರಿಕೆ ಆಕನ ಬುಟ್ಟು ಹೋದೆ. ಬುಟ್ಟು ಹೋದಂವ ಅಲ್ಲೆ ಬಾಕಿ ಆದೆ. ಇವರ ಕಣ್ಣಿಗೆ ಅಲ್ಲೇ ಬಾಕಿ ಆದರೂ ಇವರ ಹಿಂದೆನೇ ಅಲ್ಲಲ್ಲಿ ತಪ್ಪಿಸಿಕಂಡ್ ಹೋಗ್ತಾ ಇದ್ದದೆ. ಹೋಗ್ತಾ ಇರ್‌ಕನ ಇಬ್ಬರ್ ಮುಂದೆ ಹೋದವುಕೆ ದೊಡ್ಡಾ ಒಂದ್ ಅರಮನೆ ಸಿಕ್ಕಿದೆ. ಆ ಅರಮನೆ ಒಂದು ರಕ್ಕಸ ಅಜ್ಜಿದ್. ಕ್ರಮಲಿ ರಕ್ಕಸ ಅಜ್ಜಿ ಆದರೂ ಗುಣ ನಡತೆಲಿ ಒಳ್ಳೆದುನೂ ಇದ್ದದೆ. ಆ ರಕ್ಕಸ ಅಜ್ಜಿಗೆ ಒಂದೇ ಮಗ. ಈ ಅಜ್ಜಿ ಮನೆಗೆ ಬೇಕಾದ ಸಾಮಾನ್ ತಾಕೆ ಹೊರಗೆ ಹೋದರೆ ಮಗ ಒಂದೆ. ಈ ಎರಡ್ ಮಕ್ಕಳ್ ಅಲ್ಲೇ ನಿಂತವೆ. ಅಜ್ಜಿ ಬಂದ್ ಕೇಳ್ದೆ. 'ಏನಾಪ್ಪ ಯಾರೋ ಬಂದೊಳೊ'. ಏನೋ ಒಂದು ಮೊನ್ಸನ ಕೇಳ್ತ್. ಆಗ ಮಗ ಹೇಳ್ದೆ. 'ಅವ್ವಾ ಯಾರ್ ಬಾತ್ಲೆ'ಂತ. ಆಗ 'ಅವ್ವ ಎರಡ್ ಪೊರ್ಲುನ ಮಕ್ಕ ಬಂದೊಳೊ. ನೀ ನೋಡಿಯನಾಂತ' ಅಲ್ಲಿಗೆ ಕರ್ಕಂಡ್ ಹೋದೆ. ಅಜ್ಜಿಗೆ ಆತ್. ಇವು ಕಳ್ಳರೆ ಆಗಿರೊಕು. ಇಲ್ಲರೆ ಯಾಕೆ ಇಲ್ಲಿಗೆ ಬಂದವೆ? ನಾವು ಮಾಡಿಸಿದೆಲ್ಲ ಚಿನ್ನಂತ ಅವುಕೆ ಗೊತ್ತುಟು? ಇವು ತಕಂಡ್ ಹೋವ ಅಂದಾಜಿಲಿ ಒಳೊಂತ ಹೇಳಿ, ಬಾರಿ ಬೇಜಾರ್ಲಿ ಇವರ ಏನಾರು ಮಾಡಿ ಕತೆ ಮುಗ್ಸೊಕುಂತ ಹೇಳಿ ಅಜ್ಜಿ ಕುದ್ದದೆ. ಅಜ್ಜಿ ಕತ್ತಲೆನ ಕಾಫಿ, ಮಧ್ಯಾಹ್ನದ ಊಟ ಎಲ್ಲ ಕೊಟ್ಟು ಮಲ್ಗಿಸಿದೆ. ಮಲ್ಗಿಸಿ ಇವರ ಕೊಲ್ಲುವಂತಹ ಅಂದಾಜಿಲಿ ಇದ್ದದೆ. ಆಗ ಏನೋ ಇವರ ದೆಸೆ ಒಳ್ಳೆದುಂತ ಕಂಡದೆ. ಪಾಪ ಅವರ ಹಿಂದೆಂದ ಬಂದಂವ ರಕ್ಕಸ ಅಜ್ಜಿ ಮನೆ ಹಿಂದೆ ಓಲ್ಪಿಕಂಡ್ ಕುದ್ದದೆ. ಇಂವ ಕುದ್ದದ್ ಈ ಅಜ್ಜಿಗೂ, ಅಜ್ಜಿನ ಮಗಳಿಗೂ ಗೊತ್ತಿರ್ದುಲ್ಲೆ. ಅಂವ ಯಾವುದೋ ರೀತಿಲಿ ಮನೆಗೆ ಸೇರಿಕಂಡದೆ. ಮನೆಗೆ ಸೇರಿ ಇವರಿಬ್ಬರ ಹೊರಗೆ ದಾಟಿಸಿ, ಇವು ಮಲಗಿಕಂಡಿದ್ದ ಜಾಗಕೆ ಬಾಳೆ ತುಂಡುನ ತಂದ್ ಅಲ್ಲಿ ಮಲಗಿಸಿ ಅವು ಹೊದ್ದುಕಂಡಿದ್ದಂತಹ ಒಳ್ಳಿನ ಅದ್ಕೆ ಹೊದ್ಸಿದೆ. ಇವು ಮೂರು ಜನ ಅಲ್ಲಿಂದ ಮನೆ ಬುಟ್ಟು ಹೊರಗೆ ಬಂದವೆ. ಮನೆಂದ ಬುಟ್ಟು

ಹೊರಗೆ ಬಂದ್ ಮತ್ತು ಮುಂದೆ ಹೋದರೆ ಅವು ಯಾವುದೋ ಊರಿಗೆ ಎತ್ತಿದೊ. ಇಲ್ಲಿ ರಕ್ಕಸ ಅಜ್ಜಿ ಬಂದ್ ಆ ಎರಡ್ ಬಾಳೆಗೊನೆಗಳಿಗೆ ಕಡ್ದದೆ. ನೋಡ್ರೆ ಇದ್ ಮೊನ್ಸರಲ್ಲ. ಮಗಳೇ ಇಲ್ಲಿ ಬಂದ್ ನೋಡ್ ಮೋಸ ಆತ್. ನಾವು ಮಾಡ್ದಂತದ್ ಒಳ್ಳೊದೇ ಆತ್. ಅವುಕ್ಕೆ ಹೆಂಗೋ ಗೊತ್ತತ್. ಇಲ್ಲದಿದ್ದರೆ ನಮ್ಮನ್ನೇ ಅವು ಕೊಂದ್ ಹೋಗ್ತಿದ್ದೊ. ನಾವು ಮಾತಾಡ್ದ್ ಗೊತ್ತಾತ್. ಹಾಂಗೆ ಹೋದೊ. ನೋಡ್ ಇವರ ಹೆಂಗಾರ್ ಒಂದು ದಿನ ಕಂಡು ಹಿಡಿವೊಂತ ಹೇಳ್ದೆ.

ಇವು ಇನ್ನೊಂದು ಊರಿಗೆ ಏತ್ತಿಕೆ ಆಕನ ಈ ರಕ್ಕಸ ಅಜ್ಜಿನ ಹೆದ್ರಿಕೆಂದ ಊರು ಬುಟ್ಟವೆ. ಹಿಂದಕೆ ಅಪ್ಪನ ಮನೆಗೆ ಬಂದವೆ. ಅಪ್ಪನ ಮನೆಗೆ ಬಂದ್ ಹೇಳ್ವೆ. ನೋಡಿ ಸಂಗತಿ ಹಿಂಗೆ. ನಾವು ಇಷ್ಟ್ ಕಷ್ಟಕೊಟ್ಟ್ ಚಿಕ್ಕವ್ವನ ದೂರಂದ ದೂರ ಮಾಡಿಕೊಂಡಿದ್ದೊ. ಆದರೆ ಆ ಚಿಕ್ಕವ್ವನ ಮಂಜ ಇರದಿದ್ದರೆ ನಾವು ನೀವ್ಗೆ ಎರಡ್ ಮಕ್ಕ ಸಿಕ್ಕಿಕೆ ಇತ್ಲೆ. ಹಾಂಗಾಗಿ ನಾವು ಇನ್ನ್ ಮುಂದೆ ಒಳ್ಳೊದರಲ್ಲಿ ಇರೊಕುಂತ ಹೇಳಿ ಸುಖ ಸಂತೋಷಲಿ ಇದ್ದವೆ. [ಕತಾ ನಿರೂಪಕಿ : ಹೊನ್ನಮ್ಮ ಮೂಲೆಮನೆ ; ಸ್ಥಳ : ಮನೆ; ಸಮಯ : ಹಗಲು; ವರ್ಷ – 1991]

## 94.ಅತಿಯಾಸೆ ಗತಿಗೇಡಾದ ಕತೆ

ಒಂದು ಊರ್ಲಿ ಒಂದು ಅರಸು. ಅದ್ಕೆ ಒಂದು ಆಜ್ಜಿ. ಗಂಡ್‌ಹೆಣ್ಣ್. ಹೀಂಗೆ ಇರ್ಕನ ಏನಾತ್‌ಂತ ಹೇಳ್ರೆ ಐದ್ ಮಕ್ಕ. ಈ ಐದು ಮಕ್ಕಳಲ್ಲಿ ಸಣ್ಣವ ಉಟ್ಟಲ್ಲೆ ಅಂವ ಬುದ್ದಿವಂತ. ಈ ದೊಡ್ಡವು ನಾಲ್ಕ್ ಜನ ಒಳೊ. ಒಬ್ಬ ಕೋಳಿಕಟ್ಟ. ಒಬ್ಬ ಜುಗಾರಿ. ಇನ್ನೊಬ್ಬ ಕಳ್ಳು ಶರಾಬು. ಇಂತವೇ ಆಗಿ ಆಗಿ ತುಂಬ ಕಷ್ಟ ಬಂದದೆ. ಅಂವ ಸಣ್ಣ ಹುಡುಗ. ಅವ್ಕೆ ಒಂದು ಕುದುರೆ ಇದ್ದದೆ. ಅದು ಐದು ಮಕ್ಕಳಿಗೆ. ಅದರ್ಲಿ ಒಂದು ಚೊಟ್ಟ ಬಂದ್ ಇಂವ ಏನ್ ಹೇಳ್ತ್ ಅಪ್ಪನೊಟ್ಟಿಗೆ 'ನೋಡಿ ಇಷ್ಟೆಲ್ಲಾ ಕಷ್ಟ ಬಾದು ನಾ ಒಬ್ಬೆನೆ. ಅಣ್ಣಂದಿರ್ ಹಿಂಗಿಂಗೆ ಮಾಡಿಕೆ ಆಕನ ಇದ್ ಸರಿಯಲ್ಲ. ನಂಗೆ ಅಪ್ಪ ಅಣ್ಣಂದಿರ್ ಬಂದಾಕನ ಒಳ್ಳೊ ರೀತಿಲಿ ನೀವು ಹೇಳೊಕು'. ಎಲ್ಲ ಬಂದೊ. ಬಂದಾಕನ ಹೇಳ್ದೊ. ಅಪ್ಪ ಅಯ್ಯೆನ ಕರ್ತ್. 'ಇವು ಈ ಪೋಲಿ ಕೆಲಸ ಮಾಡ್ದು ಬೇಡ. ಆ ಹೈದ ಬಾರಿ ಕಷ್ಟ ಬಂದದೆ. ಇದ್ ಸರಿ ಬಾದ್ಲೆ. ಆದ್ದರಿಂದಾಗಿ ಅವನ ಒಂದು ಕರೆಗೆ ಇವು ನಾಕ್ ಜನ ಒಂದು ಕರೆಗೆ'. 'ಓಹೊ ಅದ್ ಸರಿ ಅಣ್ಣ ತಮ್ಮಂದಿರೆಲ್ಲ ಓ ಬಾರಿ ಒಳ್ಳೊದ್ ಸಂತೋಷಾತ್'. 'ಸಿಕ್ಕಿದ್ದೆ ಅಲ್ಲ'. 'ಪಾಲು, ಹಣ, ಚಿನ್ನ ದುಡ್ಡು ಎಲ್ಲ ಸಿಕ್ಕಿತ್ ಅಲ್ಲೆ'. ಈಗ ಒಳ್ಳೊದುಂತ ಹೇಳಿದ್ ಇವ್ಕೆ ಒಳ್ಳೊಳ್ಳೊ ಪಾಲ್ ತಕಂಡೊ. ಇಂವ ಹೇಳ್ತ್ 'ನಂಗೆ ಪಾಲ್ ಬೇಡಪ್ಪ ನಂಗೆ ಒಂದು ಭಾಗ ಚಿನ್ನ, ಒಂದು ಬ್ಯಾಗ್‌ಲಿ ಊಟಕೆ ಅನ್ನನೆ, ಇನ್ನೊಂದು ಬ್ಯಾಗ್‌ಲಿ ದುಡ್ಡು. ಚಿನ್ನ ಅನ್ನ ದುಡ್ಡು ಇನ್ನೊಂದು ಕುದುರೆ'. ಇವೆಲ್ಲ ಒಳ್ಳೊಳ್ಳೊ ಕುದುರೆಗಳ ತಕಂಡೊ, ಚೊಟ್ಟ ಕುದುರೆನ ಇಂವ ತಕನ್ತ್. ಬ್ಯಾಗ್ ಚಿನ್ನ ಕೊಟ್ಟೊ. ಅನ್ನ ಕೊಟ್ಟೊ. ದುಡ್ಡು ಎಲ್ಲಾ ಕೊಟ್ಟೊ. ಇಂವ ಸೀದಾ ಹೋತ್.

ಚೊಟ್ಟ ಕುದುರೆ ಹಾರ್‍ರೆ ಹಾರ್‍ರೆ ಎಲ್ಲಿಗೆ ಹಾರ್‍ದು. ಸ್ವಲ್ಪದೂರಕೆ ಎತ್ತಿಕನ ಮಧ್ಯಾಹ್ನದ ಊಟನೂ ಆತ್. ಕತ್ತಲೆಗೆ ಅನ್ನನೂ ಉಟ್ಟು. ಒಂದು ಬರೆ ಬಡವ ಅಜ್ಜಿನಲ್ಲಿಗೆ ಹೋತ್. ಅದ್ ಮನೆಂತ ಹೋತ್ಲೆ. ಒಟ್ಟಾರೆ ಹೋಕನ ಅಜ್ಜಿನ ಮನೆ ಸಿಕ್ಕಿದ್. ಅಲ್ಲಿ ಕುದ್ದತ್. ಕುದ್ದಾಕನ ಈ ಅಜ್ಜಿ ಅಲ್ಲೊಂದು ಅರ್‍ಸು ಬಾರೀ ದೊಡ್ಡ ಅರ್‍ಸು ಅಲ್ಲಿಗೆ ಹೂವುನ ಮಾಲೆಕಟ್ಟಿಕೆಂತ ಹೋದು. ಅಜ್ಜಿ ಹೋಗಿದ್ ಕತ್ತಲೆ ಆಕನ  ನಾಕ್ ಅಕ್ಕಿಯೋ ಮಕ್ಕಿಯೋ ಕೊಟ್ಟದರ ಬೇಯ್ಸಿ ಜೀವನ ಮಾಡ್ದು. ಬಾತ್ 'ಬಾರಿ ದೊಡ್ಡ ಅರ್‍ಸು ಮಕ್ಕಳ ಹಾಂಗೆ ಒಳರಿ ಅಲ್ಲ ನೀವು'. 'ಹೌದೌದು ಇಲ್ಲಿಗೆತ್ತಿಕನ ಕತ್ತಲೆ ಆತ್. ಮಲಗಿಕೆ ಹನಿಸ್ ಜಾಗ ಕೊಡಿ'ಂತ ಹೇಳ್ತ್. ಕೊಟ್ಟ್‌ದ್ ಇಂವನ ಬುತ್ತಿ ಊಟಾತ್. ಊಟ ಆದ ಮೇಲೆ–'ಹೌದಜ್ಜಿ ನಿಮ್ಮ ಊರ್‍ನ ಕಾರ್ಬಾರೇನ'ಂತ ಕೇಳ್ತ್. 'ನಮ್ಮ ಊರ್‍ನ ಕಾರ್ಬಾರೆಂತದ್ ಹೇಳ್ ಮಂಜ. ನಮ್ಮ ಅರ್‍ಸುಗ ಒಳೊ. ಅವರ ಮಗ ಉಟ್ಟು. ಅದು ಉಪ್ಪರಿಗೇಲಿ ಕುದ್ದುಟು. ಎಷ್ಟೊ ಜನನ್ ಅಲ್ಲಿ ನೋಡಿಕಂಡ್ ಬಂದ್ ನೋಡ್ವೆ. ನೋಡ್ಕನ 'ಸುಳ್ಳು ಸತ್ಯ ಅಕ್ಕು, ಸತ್ಯ ಸುಳ್ಳಾಕು'ಂತ ಹೇಳ್ವೆ. ಏನು ಮಾಡ್ರು ಅವರಿಂದ ಆದ್ಲೆ'. 'ಎಲ್ಲಿ ಅವ್ವ ಅವರ ಮನೆ'. 'ಓ ಅಲ್ಲಿ'. 'ಸರೀ ದಾರಿ ಉಟ್ಟು ನಾಯಿಗ ಒಳೊ'. 'ಇಲ್ಲೆ'. ಅಜ್ಜಿ ಮಲಗಿತ್. ಒಳ್ಳೊ ನಿದ್ರೆ ಆಕನ ಈ ಚಿನ್ನಲಿ ಮಾಣಿಕ್ಯ ವೈಡೂರ್ಯ ಎಲ್ಲ ಉಟ್ಟು. ಇದರಂದ ಒಂದು ಕಲ್ಲ್ ಹಿಡ್ಕನ್ತ್ ಅದರ ಹಾಂಗೆ ಹಿಡ್ದಾಕನ ಬೊಳ್ಪು ಅದೆ. ಹೋಗಿ ಹೋಗಿ ನಿಂತತ್. ಹೋಗಿದ್ ಒಂದು ಕಲ್ಲ್‌ನ ತೆಗ್ದಿಸಿತ್. ಮುಚ್ಚಳ ತೆಗ್ದಿಸಿತ್. ನೀರಡಿಗೆ ಕಿಚ್ಚಿ ಹಾಕಿದಂಗೆ ಆತ್. 'ಯಾರ್? ಯಾರ್? ಅಲ್ಲಿ ನೀರಡಿ ಕೊಟ್ಟಗೆಗೆ ಕಿಚ್ಚಿ ಹತ್ತಿದೆ ಓಡಿ'. ಓಡ್ದೊ. ಓಡ್ರೆ ಯಾರ್ ಒಳೊ? ಇದು ಕಲ್ಲ್‌ನ ಬೆಳಕ್. ಯಾರ್? ಏನ್ ಸುಮನೆ ಬಿದ್ದುಕೊಂಡುಟು. ಹಿಡ್ದ್ ಎಳ್ದೊ. ಅಮ್ಮಂತ ಹೇಳ್ತ್. 'ಏನ್ ಬಂದದ್?''ನಾನ್ ಹಿಂಗೆ ಬಂದದ್. ನಂಗೆ ಅದೆಲ್ಲ ಹೋಗಲಿ ಊಟ ಕೊಡೊಕು. ಆಕಲ್ಲ್ ಎಂತದ್? ಮಾಣಿಕ್ಯ'. 'ನಂಗೆ ಕೊಡು'. 'ಕೊಡ್ದೆಲ್ಲ ಕೊಡಕ್. ನೀವು ರವ್ಕೆ ತೆಗಿಯೊಕು'. 'ರವ್ಕೆ ತೆಗ್ದ್ ಅಡಿಗೆ ಹಾಕೊಕು. ಅಂದರೆ ಕಲ್ಲ್ ಕೊಟ್ಟನೆ'ಂತ. 'ಇಂತ ಕಲ್ಲ್ ಇರ್‍ಕನ  ಈ ರವ್ಕೆ ಎಷ್ಟುಟು'ಂತ ತೆಗ್ದ್ ಹೆರ್‍ಕಿಟ್ಟತ್. ಇದರ ಹೊತ್ತುಕಂಡ್ ಸೀದಾ ಹೋತ್ ಇದ್. ತಕಂಡೇ ಹೋತ್. ಹೋಗಿದ್ ಅಜ್ಜಿನಲ್ಲಿ ಬೊಗುಳಾದೆ ಮಲಗಿತ್.

ಬೊಳ್ಪಾಕನ ಹೂವುನ ಮಾಲೆ ಎಲ್ಲ ಕಟ್ಟಿದ್ ಕೊಟ್ಟತ್. ಕತ್ತಲೆ ಆತ್. ಮತ್ತೆ ಹೆಂಗಾದರೂ ದಾರಿ ಗೊತ್ತುಟ್ಟಲ್ಲ. ಅದೇ ಕೊಟಗೆಗೆ ಹೋತ್. ಹೋಗಿದ್ ಎಲ್ಲ ಮೀದಾಗುಟು. ಇಂವ ಹೋಗಿ ಬೇರೊಂದು ಪಚ್ಚೆ ಕಲ್ಲ್ ಇಸಿತ್. ಕೆಂಪು ಹೋಗಿದ್ ಪಚ್ಚೆ ಆತ್. ಆಗ ನೀರಡಿ ಕೊಟ್ಟಗೆ ಹೊತ್ತಿದ ಹಾಂಗೆ ಆತ್. ಓಡಿ ಬಾತ್. ಬಾಕನ ಇಂವ ಉಟ್ಟಲ್ಲ ಇಲ್ಲಿ. 'ಏನ್ ? ಏನ್ ? ಇದ್ ಅಂತದೇ ನಾವ್ಗೆ ಒಳ್ಳೊಳ್ಳೊ ಮೂರು ಸೊತ್ತುಟ್ಟು ಇನ್ನ್‌ನ್'. 'ಎಲ್ಲ ಕೊಡ್'. 'ಇದೆಲ್ಲ ಕೊಡಿಕಿಲ್ಲೆ'. 'ಅಲ್ಲಲ್ಲ ಬೇಕೆ ಬೇಕು'. 'ಥೇ ನೀ ಬಟ್ಟೆ ಬಿಚ್ಚೊಕು'. ಬಟ್ಟೆ ಬಿಚ್ಚಿ ಆತ್. ಕೊಡಕ್‌ಂತ ಹೇಳ್ತ್. ಈ ಒಂದು ಕಲ್ಲಿಗೆ ಈ ಬಟ್ಟೆ ಬಿಚ್ಚುದು ದೊಡ್ಡ ಸಂಗತಿಯೂ. ಇದ್ ಬಿಚ್ಚಿ

ಅಡಿಗಿಸಿ ಇದರ ಹೊತ್ತ್‌ಕಂಡ್ ಹೋತ್. ಓಡ್ತಲ್ಲೆ. ಇಂವ ಅಜ್ಜಿನಲ್ಲಿಗೆ ಬಾತ್.

ಮಾರನೆ ಹಿಂದಕೆ ಅಲ್ಲಿಗೆ ಹೋತ್. ಅಂದ್ ನೀಲಿಕಲ್ಲ್. ಅದರ್ಲಿ ಇಡೀ ಭೂಲೋಕನೇ ಕಾಂಬ ಕಲ್ಲ್. ಅಷ್ಟೇ ಹೊತ್ತಿಗೆ ಹೋತ್. ಹೋಗಿದ್ ತಗ್ದ್ ಇಸಿತ್. ಓಡಿಬಾತ್. ಇದೀಯೆ ಮೊನ್ಸಂತ ಹೇಳಿ ಓಡಿ ಬಂದ್ ಎರಡ್ ಕೊಟ್ಬಾತ್ ಇನ್ನೊಂದು ಕೊಡ್. 'ನಿಂಗೆ ಏನು ಬೇಕ್ ಹೇಳ್'. 'ನಂಗೆ ಬೇಕಾದೆಲ್ಲಾ ವಿಷಯ ಮತ್ತೆ. ನೀ ಎಲ್ಲಾ ಬಟ್ಟೆ ತೆಗ್ದ್ ಬೆತ್ತಲೆ ನಿಲ್ಲೊಕು. ಅಂದರೆ ನಿಂಗೆ ಕೊಟ್ನೆ'ಂತ ಹೇಳ್ತ್. ಈ ಸುಟ್ಬುಂವ ನೋಡ್ರೆ ಏನಾತ್‌ಂತ ಹೇಳಿ ಇದ್ ಎಲ್ಲ ಬಿಚ್ಚಿ ಹೆರ್ಕಿ ಇಟ್ಟತ್. 'ಸರ್ತ ನಿಲ್ಲೊಕು'ಂತ. ಸರ್ತನೆ ನಿಂತತ್. 'ಕಾಲ್, ಕೈ ಡೊಂಕಿಸಿಕೆ ಬೋತ್ತ್. ತಲೆನೂ ಬಗ್ಗಿಸಿತ್'. ಇದ್ ತಕಂಡ್ ಹೋತ್.

ಇಂವನ ಎಲ್ಲ ಹೋತ್. ಮಾರನೆ ದಿನ ಈ ಸತ್ಯ ಸುಳ್ಳು, ಸುಳ್ಳು ಸತ್ಯ ಆಕ್ಕಾದ್ದು. ಎಲ್ಲ ಅಕೇರಿ ದಿನ. ಪರೀಕ್ಷೆ ಎಲ್ಲ ಆದೆ. ಪಾಸಾ ಪೈಲಾ ಅಂದು ಮಾಡ್ದು. ಇಂವ ಹೋಗಿ ಒಂದು ಕರೇಲಿ ಕುದ್ದ್‌ಕನ್ತ್. ಮೂಲೆಲಿ ಕುದ್ದದೆ ಕುದ್ದದೆ. ಅಂದ್ ಆ ಅರ್ಸ ಕುಮಾರರಿಗೆ ಪಾಸ್ ಪೈಲ್ ತೀರ್ಮಾನ. ಸೋತೊ ಎಲ್ಲವು. ಮೂಲೆಲಿ ಕುದ್ದ ಇಂವ ಎದ್ದ್ ನಿಂತ್ ಹೇಳ್ತ್. 'ನೀವೆಲ್ಲ ಯಾಕೆ ವಿದ್ಯೆ ಕಲಿಯೊದುಂತ ನೀ ಹೇಳಿಯ?''ಓ ನಾ ಹೇಳೊಕು. ಶರ್ತ ಎಂತದ್'. ಈ ಗೂಡೆನ ನಿಂಗೆ ಕೊಡ್ದುಂತ ಆತ್. ಅಷ್ಟೆ ಅಲ್ಲ. ತೊಂದರೆ ಇಲ್ಲೆ ನಿಲ್ಲಿ ಹೇಳ್ನೆ. 'ನನ್ನ ಮಾತ್ ಕೇಳಿಕೊಂಬರಿ ಅಲ್ಲೆ'. 'ನೋಡಿ ನಿನ್ನೆ ಹುಣ್ಣಿಮೆಯ ಚಂದ್ರ, ಹುಣ್ಣಿಮೆಯ ಚಂದ್ರ ದಿನ ನಾ ಹೋಗಿ ಒಂದು ಕರೆಲಿ ಕುದ್ದೆ. ಒಳ್ಳೊ ಬೆಳಕ್ ಇರುವಲ್ಲಿ ಕುದ್ರ್‌ಕನ ಒಂದು ಮೊಲಬಾತ್. ಎಂತ ಮೊಲ ಅಂದ್ರೆ ಬಾರಿ ಒಳ್ಳೊ ಮೊಲ. ಅಂದರೆ ಎಷ್ಟೊ ಸೌಕರ್ಯದ ಮೊಲ. ಅದ್ ಮಾತ್ರ ದೊಡ್ಡ ಒಂದು ಹೆಣ್ಣ್ ಮೊಲ ಮಾತ್ರ. ಬೆಡಿ ನನ್ನ ಕೈಲಿ ಉಟ್ಟು. ಬೆಡಿ ಇದ್ದ್‌ದ್ ಸರಿ ನೋಡಿ ಹೊಡ್ದೆ ಎದೆಗೆ, ಬಡ್ಚಿದ್ ಓಡಿ ಮಾರನೆ ದಿನ ಕುದ್ದುಕಂಡೆ. ನೋಡಿ ಇದ್ ಸಿಕ್ಕಿದೆಂತ ಬಾತ್ ಬಾತ್ ಬಾತ್ ಬಾತ್. ತೆಗ್ದ್ ಹೊಕ್ಲಿಗೆ ಹೊಡ್ದೆ. ಬಡ್ಚಿ ಓಟ. ಒಂದೂ ಸಿಕ್ಕಿತ್ಲೆ. ನೋಡ ನೀ ಸಿಕುವೊಂತ ಬಂದ್ ನಿಂತೆ. ಮಾರನೆ ದಿನ ಬಾತ್ ನೋಡ್ ಅಷ್ಟೂ ಲೈಕ. ತೆಗ್ತ್ ಅಡ್ಡ ಹೊಡ್ದೆ. ಕಾಲ್ ಕೈ ತುಂಡು ಅಲ್ಲೆ ಪಡ್ಚ. ಮತ್ತೆ ಆ ಮೊಲ ತಕಂಡ್ ಮನೆಗೆ ಹೋದೆ. ಗೂಡೆ ಹೋತ್. ಹೂವಿನ ಮಾಲೆ ಹಾಕಿತ್ ಅಲ್ಲಿಗೆ ಆ ಕತೆ ಮುಗ್ತ್. [ಕತಾ ನಿರೂಪಕಿ:ಹೊನ್ನೊಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 95.ಪಾಯಸ – ತುಪ್ಪ, ನೆಂಟ–ದೊಣ್ಣೆ ಕತೆ

ಒಂದು ಊರ್‍ಲಿ ಒಬ್ಬ ಗಂಡನು ಹೆಣ್ಣುನು. ಅವ್ಕೆ ಗಂಡಹೆಣ್ಣ್‌ಗಳಿಗೆ ಹೆಸ್ರ ಹೇಳಿಕೆ ಬೊತ್ತಾದೆ. ಹಿಂದನೆ ಕಾಲಲಿ ಹೆಣ್ಣ್‌ನ ಹೆಸರ್ ಗಂಡ ಹೇಳಿಕಿಲ್ಲೆ. ಗಂಡನ ಹೆಸರ್ ಹೆಣ್ಣ್ ಹೇಳಿಕಿಲ್ಲೆ. ಅದ್ಕೆ ಅವು ಹೆಸರ್ ಇಸಿಕೊಂಡದ್ ಪಾಯ್ಸ ಮತ್ತು ತುಪ್ಪಂತ. ಗಂಡ ತುಪ್ಪ, ಹೆಣ್ಣ್ ಪಾಯ್ಸ. ಹಾಂಗೆ ಇವು ಹಿಂಗೆ ಇರ್ಕನ ಒಬ್ಬ ನೆಂಟ ಬಾತ್. ಇಂವ ನೆಂಟ ಬಾಕೆ ಆಕನ ಗದ್ದೆಲಿ ಹೂಡಿಕಂಡುಟು

ತ್ತ್‌ಗಳ. ಎತ್ತ್‌ಗಳ ಹೆಸರ್ ಒಂದು ದೊಣ್ಣೆ, ಒಂದು ನಂಟಂತ. ಇವು ಹೂಡಿಕನ ನಿಂತಿಕಂಡ್ ಹೇಳ್ತಿಂವ 'ನೀವು ಮನೆಗೆ ಹೋಗಿ. ಮನೆಲಿ ಪಾಯ್ಸ ಉಟ್ಟು. ನಾ ಬನ್ನೆ ಈಗ'ಂತ ಹೇಳ್ತ್. ಮನೆ ಹೆಣ್ಣ್‌ನೊಟ್ಟಿಗೆ ಮಾತಾಡಿ ಎಲ್ಲ ಆತ್. ನಾ ಬೇಗ ಅಡಿಗೆ ಮಾಡ್ನೆ ಉಂಡು ಹೋಕು ಹಾಂಗೆಂತ ಅಡಿಗೆ ಮಾಡಿಕೆ ಆಕನ ಇದ್ ಹೇಳ್ತ್. 'ನೀವು ಉಂಬಕೆ ಈಗ ತುಪ್ಪ ಬರಲಿ ಅಲ್ಲ. ಮತ್ತೆ ಒಟ್ಟಿಗೆ ಉಣೋಕಲ್ಲೆ'ಂತ. ಆತಂದರೆ ಪಾಯ್ಸನು, ತುಪ್ಪನು ಉಟ್ಟುಂತ ಅವಂಗೆ ಬಾರಿ ಖುಷಿಯಾತ್ ಕುದ್ದತ್.

ಕುದ್ದಾಕನ ಇಂವ ಎತ್ತ್ ಬುಟ್ಟು ಬಾತ್. ಗದ್ದೆಂದ ಎತ್ತ್‌ನ ಹೊಡ್ಕಂಡ್ ಬಾತ್. ಬಂದ್‌ದ್ ನೆಂಟನ ಕಟ್ಟಿಹಾಕುಟು. ದೊಣ್ಣೆ ಬಾತ್ಲೆ ಹಾಂಗೆ ದೊಣ್ಣೆನ ವಾಪಾಸ್ ಹುಡುಕಿಕಂಡ್ ಹೋತ್. ಹೋಗಿದ್ ದೊಣ್ಣೆನೂ ಬಾತ್. ತಕಂಡ್ ಬಂದ್ ಕಟ್ಟಿ ಹಾಕಿತ್. ಅಷ್ಟಾಕನ ಇಂವ ಕರ್ದ್ ಹೇಳ್ತ್. ಇಂದ ನೆಂಟ ಬಂದುಟ್ಟು ಈಗ ದೊಣ್ಣೆನೂ ಬಾತ್. ಕಟ್ಟಿ ಹಾಕಿದೆ. ಅಷ್ಟಾಕನ ಈ ನೆಂಟ ಗ್ರೇಸಿದ್ ಹೆಂಗೆ ಗೊತ್ತುಟ್ಟ ನನ್ನ ಕಟ್ಟಿ ಹಾಕಿ ದೊನ್ನೆಲಿ ಬೊಡಿದುಂತ 'ಓ ನಂಗೆ ಇವರ ಪಾಯ್ಸನು ಬೇಡ ತುಪ್ಪನೂ ಬೇಡ ಇವು ತಿಂದ್ ಕೊಂಡಿರ್ಲಿ'ಂತ ತೆಗ್ದ್ ಪದ್ರಾಡ್ ಹಾಕಿತ್. [ಕತಾ ನಿರೂಪಕ:ಬಾಬುಗೌಡ ಪಡ್ಪುಮನೆ; ಸ್ಥಳ: ಮನೆ; ಸಮಯ:ಹಗಲು; ವರ್ಷ–1991]

## 96.ಪ್ರಾಣ ಸ್ನೇಹಿತರ ಕತೆ

ಒಂದು ಊರ್ಲಿ ನಮ್ಮ ಪಾಣತ್ತಿಲ್ಲ ಚಂದ್ರಣ್ಣನಂಗೆ ತುಂಬ ಜೋಸ್ತಿಗಡ. ಎಷ್ಟೊ ಜನ ಜೋಸ್ತಿಗ ಅವಂಗೆ. ಅಂವ ಒಂದು ಅಯ್ಯೆಪ್ಪಂಗೆ ಒಂದೇ ಮಂಜ ಗಡ. ಅಂವ ಏನ್ ಮಾಡ್ತ್‌ಗಡ. ಈ ಮಂಜ ಊರ್ಲಿ ಇದ್ದವರ ಕರ್ಕಂಡ್ ಬಾದು. ಮನೆಲಿ ಯಾಗೋಲು ಕೋಳಿಗೈಪು, ಸಮ್ಮಾನ, ಬ್ರಾಂಡಿ ಇದೆಲ್ಲ ಕುಡ್ಕಂಡ್ ದಾರಾಳ ಇರ್ದು. ಹಾಂಗೆ ಇರಿಕೆ ಆಕನ ಅವಂಗೆ ಎಷ್ಟೊ ಜೋಸ್ತಿಗ ಬಂದ್‌ದ್ ಖರ್ಚು ಮಾಡ್ದು ಅಂವ. ಖರ್ಚು ಮಾಡಿ ಅಂವನ ಸಂಸಾರವೇ ಹಾಳಾವ ಅಂದಾಜು ಆತ್. ಅಂವಂಗೆ ಉಂಬಕೆ ತಿಂಬಕೆ ಬಡಸ್ಥಾನಕ್ಕೆ ಬಾತ್. ಬಡಸ್ಥಾನ ಬಾಕನ, ಈ ಮೊದ್ವೆ ಆಗದ ಹೈದ ಆತ್‌ಗಡ. ಅಯ್ಯೆ ಹೇಳ್ತ್‌ಗಡ. 'ಈ ಜೋಸ್ತಿ ಎಲ್ಲ ಹೇಳ್ಕನ ಹೆಂಗವ್ವ ನಾ ಇಂಥಾದರೆಲ್ಲ ಬುಡ್ದು. ಇಂಥಾ ಜೋಸ್ತಿಗ ನನ ಆತ್ಮ ಜೋಸ್ತಿಗ ಇದ್ದ ಹಾಂಗೆ. ಅದರೆಲ್ಲ ಬುಡ್ದು ನಂಗೆ ಅಷ್ಟ್ ಒಳ್ಳೊದುಂತ ಕಾಂಬೊದ್ಲೆ. ನೀ ಇದರ ಹೇಳ್ದು ಸರಿಯಲ್ಲಾ'ಂತ. 'ಅಲ್ಲ ಮಂಜ ಜೋಸ್ತಿಗಂತ ಹೇಳ್ರೆ ನೀ ಹಾಂಗೆ ಬುಡೊಕು. ಅಲ್ಲದೆ ನಮ್ಮ ಭೂಮಿ, ಮನೆ ಯಾವುದೂ ಉಳಿವಂಗೆ ಇಲ್ಲೆ'ಂತ ಹೇಳ್ತ್‌ಗಡ. 'ಹಾಂಗೆ ಹೇಳಿ ಹಂಗಾರೆ ನಿಂಗೆ ನಾ ಒಂದು ಪಂಥ ಹೇಳಿಕೊಟ್ಟನೆ. ನಿನ್ನ ಆತ್ಮಜೋಸ್ತಿಗ ಯಾರ್ ಒಳೊ ? ನಾ ನಿಶ್ಚಯ ಮಾಡಿಕೊಡ್ನೆ'ಂತ ಹೇಳ್ದೆ ಗಡ. 'ಅದ್ ಹೇಂಗೆ ಅವ್ವ?''ನೀ ನಾಳೆ ಊರ್‌ನವರೊಟ್ಟಿಗೆ ಎಲ್ಲ ಹೇಳೊಕು. ಅವ್ವಂಗೆ ಪ್ರಾಣ ಸಂಕಟ. ಅವ್ವನ ನೋಡಿಕೆ ಬರೊಕುಂತ ಹೇಳೋಕು. ನಾ ಅಟ್ಟಕ್ಕೆ

ಹತ್ತಿ ಕುದ್ದನೆ ಮಂಜ. ಆಮೇಲೆ ಅಲ್ಲಿ ಹೆಣದಾಂಗೆ ಮಲ್ಗಿಸ್. ನಿನ್ನ ಆತ್ಮ ಜೋಸ್ತಿಗ ಯಾರ್ ಒಳೊನೊ ಅವುಕ್ಕೆ ನೀ ಹೇಳೊಕು ಅವ್ವನ ಕಾಟ ಮಾಡಿ ಸುಡ್ದು ಬೇಡ, ಅವ್ವನಾ ನಾವು ತಿನೊಕುಂತ ಹೇಳೋಕು. ಊರ್ನವು ಯಾರೂ ಬಂದರೂ ತಿನೊಕುಂತ ಹೇಳೊಕು. ಊರ್ನವು ಯಾರ್ ಬಂದರೂ ತಿನೊಕುಂತ ಒಂದೇ ಹಟ ಕುದ್ರೊಕು. ಅವು ಜವುಳಿ ಎಲ್ಲ ತಕಂಡ್ ಬಾವೊ. ಅದ್ಕೆ ಯಾವುದಕ್ಕೂ ನೀ ಒಪ್ಪಿಕೆ ಬೊತ್ತ್. ಆತಲ್ಲೆ. ತಿನೊಕುಂತೇ ಹಟ ಕಟ್ಟಿಕೊಂತ ಹೇಳಿ ಕೊಟತ್‌ಗಡ'. ಆತ್‌ಂತ ಹೇಳ್ತುಗಡ. ಈ ಊರ್ನವ್ಕೆ ಎಲ್ಲ ಹೇಳ್ತ್‌ಗಡ. ಆತ್‌ಂತ ಹೇಳ್ತ್‌ಗಡ.

ಊರ್ನವ್ಕೆ ಎಲ್ಲ ಹೇಳ್ತ್‌ಗಡ. ನನ್ನ ಅವ್ವಂಗೆ ಪ್ರಾಣ ಸಂಕಟ. ನೀವೆಲ್ಲ ಓಡಿ ಬನ್ನಿಂತ. ಇವು ಬಾಕನ ಇದ್ ಅಟ್ಟಕೆ ಹತ್ತಿ ಕುದ್ದದ್ ಬೇಕಾದ ವ್ಯವಸ್ಥೆ ಎಲ್ಲ ಮಾಡಿದ್ ಹೆಣನ ಮಲ್ಗಿಸಿ ಎಲ್ಲವರೊಟ್ಟಿಗೂ ಬಂದವರೊಟ್ಟಿಗೆ ಹೇಳ್ತ್‌ಗಡ. 'ಕಾಟ ಸೌದೆಂತ ಮಾಡ್ದು ಬೇಡ. ಅವ್ವನ ಹೆಣನ ತಿನೊಕು. ಅವ್ವನ ಹೆಣನ ಸುಡಾಟ ಇಲ್ಲೆ'ಂತ. 'ಭೂಮಿಗೆ ಬುಟ್ಟದ್ ಅದರ ಬೂದಿ ಮಾಡುವಂತ ವ್ಯವಸ್ಥೆ ಬೇಡ. ಆಮೇಲೆ ಭೂಮಿಲಿ ಸುಟ್ರೆ ಆಕಾಶಕ್ಕೆ ಹೋಗೆ ಹೋದೆ. ಅವ್ವನ ತಿಂದ್‌ದೇ ಕಳಿಯೊಕುಂತ ಹೇಳ್ತ್‌ಗಡ'. 'ಹೆಣನ ತಿಂಬೊದು ಯಾರಾರು ಲೋಕಲಿ ಒಳೊನಾ'ಂತ ಹೇಳ್ದೊ ಗಡ. ಹಾಂಗೆ ಎಲ್ಲವೂ ಬುಟ್ಟ್ ಹೋದೊಗಡ. ಬುಟ್ಟ್ ಹೋಕನ ಒಬ್ಬ ಹೇಳ್ತ್‌ಗಡ. 'ಅಣ್ಣ ನೀ ಅವ್ವನ ತಿಂದರೆ ನಾನೂ ತಿಂದನೆ'ಂತೇಲಿ ಮಂಜ ಕಾಲ್ ಕಡೆಂದ ತಿಂಬಕೆ ಸುರು ಮಾಡ್ತ್‌ಗಡ. ಅಂವನ ಜೋಸ್ತಿ ಒಬ್ಬ ತಲೆಕಡೆ ನಿಂತತ್ ಗಡ. ಹಾಂಗೆ ಇವು ತಿಂಬಕೆ ಶುರು ಮಾಡ್ಕನ ಅವನ ಅವ್ವ ಅಟ್ಟಂದ ಎದ್ದ್‌ದ್ 'ನೋಡು ಮಂಜ ಇಂವ ನಿಂಗೆ ಆತ್ಮ ಜೋಸ್ತಿ'ಂತ ಹೇಳ್ತ್‌ಗಡ. [ಕತಾ ನಿರೂಪಕಿ:ಹೊನ್ನಮ್ಮ ಮೂಲೆಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 97.ಹೊಲ್ಕೆ – ನಾಯಿ, ಹೈದ – ಅಜ್ಜ – ಅಜ್ಜಿ ಕತೆ

ಒಂದು ಊರ್ಲಿ ಒಂದು ಅಜ್ಜಿಗಡ. ಒಂದು ಅಜ್ಜ ಅವ್ಕೊಂದು ಮಂಜ. ನಾಯಿನ ಕರ್‍ಕೊಂಡು ಬೇಟೆಗೆ ಹೋತ್‌ಗಡ. ಬೇಟೆಗೆ ಹೋಗಿ ಆಕನ ಒಂದು ಹೊಲ್ಕೆ ಕಾಂಬಕೆ ಸಿಕ್ಕಿತ್‌ಗಡ. ಈ ನಾಯಿ ಹೊಲ್ಕೆನ ಬೆರ್ಸಿತ್. ಬೆರ್ಸಕನ ಹೊಲ್ಕೆ ಓಡಿ ಹೋಗಿ ಮಾಟೆಗೆ ಹುಕ್ಕತ್. ಮಾಟೆಗೆ ಹುಗ್ಗ್‌ಕನ ಈ ನಾಯಿನೂ ಹುಕ್ಕತ್‌ಗಡ. ನಾಯಿ ಹುಕ್ಕತ್‌ಂತ ಹೇಳಿ ನಾಯಿ ಬಾತ್ಲೆಂತ ಅಜ್ಜಿ ಹುಡುಕಿಕಂಡು ಹೋದೊಗಡ. ಹೋಗಿದ್ ಆಕನ ಆ ಒಟ್ಟೆಲಿ ಒಳೊ. ಅಜ್ಜಿನೂ ಹುಕ್ಕತ್. ನಾಯಿ ಅಜ್ಜಿ, ಮಂಜ ಬಾತ್ಲೆಂತ ಹೇಳಿ ಅಜ್ಜ ಹೋತ್‌ಗಡ. ಅಜ್ಜಿ ಅಜ್ಜ, ಹೋಗಿ ಆಕನ ಮಾಟೆಲಿ ಒಳೊ ಇವು. ಅಜ್ಜನೂ ಹುಕ್ಕತ್‌ಗಡ. ಅಷ್ಟಾಕನ ಅತ್ತಂದ ಹೊಲ್ಕೆ ಹೆದ್‌ರಿದ್. ನಾಯಿ ಬಾಯಿಗೆ ದುರುದುರು ದುರು ಹೇತಾಕಿತ್ ಗಡ.. ನಾಯಿ ಹೆದ್‌ರಿದ್ ಹೈದನ ಬಾಯಿಗೆ ದುರುದುರು ದುರೂಂತ ಹೇತ್ ಹಾಕಿತ್‌ಗಡ. ಹೈದ ಹೆದ್‌ರಿದ್ ಈ ಅಜ್ಜಿನ ಬಾಯಿಗೆ ದುರುದುರು ದುರೂಂತ ಹೇತಾಕಿತ್‌ಗಡ. ಅಜ್ಜಿ ಹೆದ್ರಿ ಅಜ್ಜನ ಬಾಯಿಗೆ ದುರುದುರು ದುರೂಂತ ಹೇತಾಕಿತ್ ಗಡ. ಅಜ್ಜ

ಹೆದ್ರಿ ಹೂಂಕುಟ್ಟುವವರ ಬಾಯಿಗೆ ದುರುದುರು ದುರೂಂತ ಹೇತಾಕಿತ್ ಗಡ. [ಕತಾ ನಿರೂಪಕಿ:ತಾರಾಮಣಿ ಪಡ್ಪುಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 98.ಬರಿಂಕ ಉರ್ಚಿದ ಕತೆ

ಒಂದು ಊರ್ಲಿ ಒಂದು ಅಜ್ಜನು ಅಜ್ಜಿನು ಇದ್ದೊ. ಅಜ್ಜ ಅಜ್ಜಿಗೆ ಒಂದು ಮಂಜ ಇತ್ತ್. ಈ ಅಜ್ಜಂಗೆ ಯಾಗೊಲು ಬೇಟೆ ಕೆಲಸ. ಒಂದು ದಿನ ಬೇಟೆಗೆ ಅಪ್ಪನು ಮಂಜನು ನಾಯಿನು ಸಹ ಹೋದೊ. ಹೋಗಿ ಸುಮಾರು ದೂರ ಎತ್ತುವ ಟೈಮ್‌ಲಿ (ಸಮಯಲಿ) ಒಂದು ನಾಯಿ ಒಂದು ಬರಿಂಕನ ಬೆರ್ಸಿಕಂಡ್ ಹೋತ್. ಬೆರ್ಸಿಕಂಡು ಹೋದ ಫೋರ್ಸಿಗೆ ಬರಿಂಕ ಹೋಗಿ ಮಾಟೆಗೆ ಹುಕ್ಕುತ್. ಬರಿಂಕ ಮಾಟೆಗೆ ಹುಕ್ಕತ್‌ಂತ ಹೇಳಿ ನಾಯಿ ಹುಕ್ಕತ್. ನಾಯಿ ಹುಕ್ಕತ್‌ಂತ ಹೇಳಿ ಅಜ್ಜ ಹುಕ್ಕತ್. ಅಜ್ಜ ಹುಕ್ಕತ್‌ಂತ ಹೇಳಿ ಮಂಜ ಹುಕ್ಕತ್. ಬರಿಂಕ ಹೆದ್ರಿ ಉರ್ಚಿತ್. ಬರಿಂಕ ಹೆದ್ರಿ ಉರ್ಚಿಇರೆ ನಾಯಿನ ಬಾಯಿಗೆ. ನಾಯಿ ಉರ್ಚಿರೆ ಅಜ್ಜನ ಬಾಯಿಗೆ. ಅಜ್ಜ ಉರ್ಚಿರೆ ಮಂಜನ ಬಾಯಿಗೆ. ಅಂದರೆ ಮಂಜ ಉರ್ಚಿರೆ? ನಿಮ್ಮ ಬಾಯಿಗೆ [ಕಥಾ ನಿರೂಪಕ:ಸಣ್ಣಮನೆ ಕೃಷ್ಣಪ್ಪಗೌಡ, ಪೆರಾಜೆ; ಸ್ಥಳ:ಮನೆ; ಸಮಯ:ರಾತ್ರಿ 9ಗಂಟೆ; ವರ್ಷ–14.4.1991 ಭಾನುವಾರ]

## 99.ಕಚ್ಚುವ ಪ್ರಾಣಿಗಳ ಕತೆ

ಒಂದ್ ಊರ್‌ಲಿ ಒಬ್ಬ ದಾರಿಲಿ ಹೋಕನ 10 ಪೈಸೆ ಸಿಕ್ಕಿತ್. ಅದರ ಅಂಗಡಿಗೆ ತಕಂಡ್ ಹೋಗಿ ಎರಡ್ ಬಾಳೆ ಹಣ್ಣ್ ತಾತ್. ಒಂದರ ತಿಂದತ್ ಮತ್ತೊಂದರ ಗೊಬ್ಬರ ಗುಡ್ಡೆನೊಳಗೆ ಹುಗ್ಸಿ ಇಸಿತ್. ಹಂಞ ದಿನ ಕಳ್ದ್ ಹೋತ್. ಆ ಹಣ್ಣ್‌ನ ಅವಂಗೆ ತೆಗೆಕ್ಕೆ ಆತ್ಲೆ. ಆಗ ಅಂವ ಸಿದಾ ಆಚಾರಿನ ಹಕ್ಕಲೆ ಬಂದ್ ಹೇಳ್ತ್. 'ಆಚಾರಿ ಆಚಾರಿ ನಿನ್ನ ಉಳಿಬಾಜ ಕೊಡ್‌ವನಾ'ಂತ. ಅಗಾ ಅಚಾರಿ 'ನನ್ನ ಉಳಿಬಾಜ ಕೊಟ್ರೆ ತುಂಡ್ ಆದು. ನಾ ಕೊಡಿಕಲ್ಲೆ'ಂತ ಹೇಳ್ತ್. ಅಲ್ಲಿಂದ ಸಿದಾ ದಾರಿಲಿ ಆಲೋಚಿಸ್‌ತ್ತಾ ಬಾಕನ ಜೇನ್‌ಗೂಡ್ ಸಿಕ್ಕಿತ್. ಆ ಜೇನ್‌ಗೂಡ್‌ಗೆ ಒಂದ್ ಕಲ್ಲ್ ಹೊಡ್ತ್. ಆಗ ಜೇನ್ ಬಂದ್ ನಾಯಿಗೆ ಕುಟ್ಟಿತ್. ನಾಯಿ ಹೋಗಿ ದನಕೆ ಕಚ್ಚಿತ್. ದನ ಹೋಗಿ ಒಬ್ಬ ಮೊನ್ಸುಂಗೆ ಕುತ್ತಿತ್. ಮೊನ್ಸು ಹೋಗಿ ಆ ಬಾಳೆ ಹಣ್ಣ್‌ನ ತೆಗ್ತ್. ಅದರ ತಿಂಬಕೆ ಈಗ ಪೋಯ್. [ಕತಾ ನಿರೂಪಕಿ:ಬೊಮ್ಮಕ್ಕ ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 100. ಎಯ್ಪಂಜಿ ಬೇಟೆ ಕತೆ

ಒಂದ್ ಗ್ರಾಮಲಿ ಮಾವನು ಅಳಿಯನು. ಗೊತ್ತಾತ? ಅವರ ಹಕ್ಕಳೆ ಎರಡ್ ಕೋವಿ ಉಟ್ಟು. ಆಗ ಅಳಿಯ ಏನ್ ಹೇಳ್ತ್ 'ಮಾವ ನಾವು ಎಯ್ಪಂಜಿ ಒಟ್ಟೆಗೆ ಕುದ್ರಿಕೆ ಪೋಯಿ.

ಒಂದಕ್ಕೆ ಹಾಕೊಣಾ'ಂತ ಹೇಳ್ತ್. ಆಗ ಏನಾತ್ ಮಾವಂಗೆ ಹಂಞ ಕುಡಿವ ಅಭ್ಯಾಸ ಜೋರ್. ಎಯ್ಪಂಜಿ ಒಟ್ಟೆಗೆ ಹೋಗಿ ಓ ಅಷ್ಟ್ ದೂರಲಿ ಮಾಳ ಮಾಡ್ದೊ. ಅಷ್ಟ್ ದೂರಲಿ ಮಲ್ಗಿದೊ. ಆಗ ಅಳಿಯನೊಟ್ಟಿಗೆ ಮಾವ ಹೇಳ್ದೆ, 'ದೂರಂದ ಸದ್ದ್ ಕೇಳ್ರೆ ನನ್ನ ಎಬ್ಸೊಕು. ಹಕ್ಕಳೆ ಅಂಡಿ ಬುಟ್ರೆ ಹೊಡಿಯೊಕು'ಂತ. ಮಾವ ಮಲಗಿತ್. ಎಯ್ಪಂಜಿ ಒಂದ್ ಭಾಗಂದ ಬಾತ್. ಹತ್ತಿಕಂಡ್. ಈ ಅಳಿಯ ಕರ್ದತ್ಲೆ. ಹಕ್ಕಳೆ ಹಂಡಿಕನ ಕರ್ದತ್. ಮಾವ ಎದ್ದ್ ಲೈಟಾಕಿ ನೋಡ್ರೆ ಹಂದಿ ಹೋಗ್ತಾ ಉಟ್ಟು. ಅಳಿಯ ಬೆಡಿ ಹಿಡ್ದಂವ ಹಿಡ್ಕೊಂಡೇ ಅಲ್ಲೆ ಬಾಕಿ. ಕೋವಿ ಒಡಿಯಕ್ಕೆ ಕೈ ಹಾಕಿತ್ಲೆ. ಹಂದಿ ಅತ್ತ ಹೋತ್. ಮಾವ ಎದ್ದ್ ಬೊಯ್ಯಕನ ಅಳಿಯ 'ದಮ್ಮಯ ಬೊಯ್ಬೇಡಿ. ನಂಗೆ ಆತ್ಲೆಂತ'. ಅಲ್ಲಿ ಆ ಒಟ್ಟೆಲಿ ಮತ್ತೆ ಏನಾದೆ ? ಹೊಡಿಯಕ್ಕಾದೆಯ ? ಬೊಯ್ಯಕ್ಕಾದೆಯ ? ಮತ್ತೆ ಒಂದ್ ಎಯ್ಪಂಜಿ ಒಟ್ಟೆಗೆ ಕುದ್ದೊ. ಎರಡ್ ಒಟ್ಟೆ ಉಟ್ಟದರ್ಲಿ. ಒಂದ್ ಒಟ್ಟೆಗೆ ಒಬ್ಬ, ಮತ್ತೊಂದೊಟ್ಟೆಗೆ ಮಾವ ಕುದ್ದತ್. ಇದ್ ಬಾತೇ ಇಲ್ಲೆ. ಯಾರ್? ಅಳಿಯ ಕುದ್ದಲ್ಲಿ. ಈ ಜನಕ್ಕೆ ಇಲ್ಲೆ ಒಟ್ಟೆ ಕುದ್ದದ್ ಗೊತ್ತೇ ಇಲ್ಲ. ಮಾವ ಮಲಗಿತ್. ಎಯ್ಪಂಜಿ ಅತ್ತ ಹೋತ್ ಇವು ಇತ್ತ ಬಂದೊ.[ಕತಾ ನಿರೂಪಕ:ಪುರುಷೋತ್ತಮ ಕೆ.ಎಸ್.ಕುಂದಲ್ಪಾಡಿ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 101. 'ಹ್ನುಂ' ಕುಟ್ಟುವ ಕತೆ

ಕಥೆ ಹೇಳ್ ಕಥೆ ಹೇಳ್ಂತ ಒಬ್ಬನ ಪೀಡಿಸುದು ಗಡ. ಇವಂಗೆ ಏನೂ ಕಥೆ ಹೇಳಿಕೆ ಗೊತ್ತ್ಲೆ. ಕಥೆ ಹೇಳಿಕೆ ಗೊತ್ತ್ಲೆಂತ ಇನ್ನ್ ಎಂತ ಮಾಡ್ದು ಇವನ ಹೇಂಗಾರು ಸಮಾಧಾನ ಮಾಡೊಕಲ್ಲಾ. ಇಂವ ಒಪ್ಪುದೂ ಇಲ್ಲೆ. ಕಥೆ ಹೇಳದೆ ಬುಡ್ದೊ ಇಲ್ಲೆಂತ ಹೇಳ್ದೆ. ಆಗ ಇವನೇ ಒಂದು ಸ್ವಂತ ಕಥೆಕಟ್ಟಿತ್. ಒಂದು ಆಚೆ ಊರ್ನ ಅರ್ಸಂಗೂ ಈಚೆ ಊರ್ನ ಅರ್ಸಂಗೂ ಯುದ್ಧ ಆತ್. ಯುದ್ಧ ಆಕನ ಆಚೆ ಅರ್ಸನ ಸೈನ್ಯೆ ಹಳ್ಳ ದಾಟಿ ಬಾಕ್ಕೆ ಇತ್ತ್. ಹಳ್ಳ ದಾಟಿ ಬಾಕ್ಕೆ ಆಕನ ಒಂದು ದೋಣಿ ಒಳದ್. ಒಂದು ದೋಣಿಲಿ ಒಬ್ಬನ ಕರ್ಕಂಡು ಬಾಕ್ಕೆ ಆದೆ. ಇಂವ ಹೇಳಿಕೆ ಸುರುಮಾಡ್ತ್ 'ಹೂಂಕುಟ್ಟಿಕಾ ಹೂಂಕುಟ್ಟಿಕಾ'ಂತ ಹೇಳ್ತ್. ಆಚೆ ಕಡೆಂದ ಒಬ್ಬನ ತಂದೊ. 'ಹ್ನುಂ...'ಇಬ್ಬರ ತಂದೊ'. 'ಹ್ನುಂ...''ಹೂಂಕುಟ್ಟಿಕೊ'. 'ಮೂವರ ತಂದೊ'. 'ಹ್ನುಂ...' ಹಿಂಗೇ 'ಹ್ನುಂ...ಹ್ನುಂ...ಹ್ನುಂತ'ಹೇಳ್ಕನ ಅವಂಗೆ ಬೊಚ್ಚಿತ್. ಅಂವಗೆ ನಿದ್ದೆ ಬಾತ್. ನಿನ್ನ ಕಥೆ ಸಾಕ್ಂತ ಹೇಳ್ತ್. [ಕತಾ ನಿರೂಪಕಿ:ತಾರಾಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

# ಅನುಬಂಧ 1 : ಆಯ್ದ 5 ಕತೆಗಳ ಸಂಕ್ಷಿಪ್ತ ಕನ್ನಡ ಅನುವಾದ ರೂಪ

## 1. ಕುದ್ಕನ ವಂಶ ನಾಶ ಆತ್ ಕತೆ [10ನೇ ಕತೆಯನ್ನು ನೋಡಿ]

ಒಂದು ಊರಿಗೆ ಒಬ್ಬ ಊರುಗೌಡ. ಅವನ ಮನೆಯಲ್ಲಿ ನರಿ ಮತ್ತು ಹಂದಿ ಕೆಲಸಗಾರಕ್ಕೆ ಸೇರುತ್ತವೆ. ಒಂದು ದಿನ ನರಿ ಗದ್ದೆ ಉಳುತ್ತದೆ. ಗದ್ದೆಯ ಮಧ್ಯೆ ಒಂದು ಕಲ್ಲು ನೇಗಿಲಿಗೆ ಸಿಗುತ್ತದೆ. ಆ ಕಲ್ಲನ್ನು ತೆಗೆಯಲು ಆಗದಿರುವುದಿಲ್ಲ. ಅದನ್ನು ತೆಗೆಯುವ ಉಪಾಯವನ್ನು ನರಿ ಊರುಗೌಡನಿಗೆ ಹೇಳುತ್ತದೆ. ನರಿಯ ಉಪಾಯದಂತೆ ಕಲ್ಲಿಗೆ ತೋಟೆ ಹಾಕವ ತಯಾರಿ ಮಾಡುತ್ತಾರೆ. ತೋಟೆಗೆ ಬೆಂಕಿ ಕೊಡಲು ಹಂದಿಯನ್ನು ಕಳುಹಿಸುತ್ತಾರೆ. ಹಂದಿ ಹೆಡ್ಡನಾದುದರಿಂದ ಬೆಂಕಿ ಕೊಡಲು ಒಪ್ಪಿತು. ಬೆಂಕಿ ಕೊಟ್ಟು ಬೇಗ ಬರಬೇಕೆಂದು ನರಿ ಹೇಳಲಿಲ್ಲ. ಆ ಕಾರಣ ಹಂದಿ ಅಲ್ಲೇ ನಿಂತಿತು. ತೋಟೆ ಸಿಡಿದಾಗ ಹಂದಿಯ ಎರಡೂ ಕಣ್ಣುಗಳೂ ಹೋದವು. ಕಣ್ಣಿಲ್ಲದ ಹಂದಿಯನ್ನು ನರಿ ಕರೆದುಕೊಂಡು ಗೌಡನ ಮನೆ ದಾರಿ ಹಿಡಿಯಿತು. ಬರುವಾಗ ನರಿಗೆ ಇನ್ನೊಂದು ಉಪಾಯ ಹೊಳೆಯಿತು. ಹಂದಿಯನ್ನು ಕೆರೆಯೊಂದಕ್ಕೆ ಬೀಳುವಂತೆ ಮಾಡಿತು. ಗುಡ್ಡದ ಮೇಲೆ ನಿಂತು ಊರವರಿಗೆಲ್ಲಾ ಕೂಗಿ ಹೇಳಿತು. 'ಹಂದಿ ಕೆರೆಗೆ ಬಿತ್ತೆಂದು ಮನೆಯವರು ದೊಣ್ಣೆ, ಕೋವಿ, ಕತ್ತಿ ತನ್ನಿರಿ' ಎಂದಿತು. ಊರಿನವರು ದೊಣ್ಣೆ, ಕೋವಿ, ಕತ್ತಿ ತಂದು ಹಂದಿಯನ್ನು ಕೊಂದರು. ಮಾಂಸ ಮಾಡಿದರು.

ಅಷ್ಟರಲ್ಲಿ ನರಿ ಊರಿನವರ ಎಲ್ಲಾ ಮನೆಗಳಿಗೂ ಬೆಂಕಿ ಕೊಟ್ಟಿತು. ಬೆಂಕಿ ಕೊಟ್ಟು ಗುಡ್ಡದ ಮೇಲೆ ಹೋಗಿ ಜೋರಾಗಿ ಕೂಗಿ ಹೇಳಿತು. 'ಮನೆಗೆ ಬೆಂಕಿ ಬಿದ್ದಿದೆ. ಎಲ್ಲರೂ ಬನ್ನಿ'. ಮನೆಗೆ ಬೆಂಕಿ ಬಿತ್ತೆಂದು ಮಂದಿ ಹಂದಿ ಮಾಂಸ ಬಿಟ್ಟು ಮನೆ ಕಡೆ ಓಡಿದರು. ನರಿ ಹಂದಿ ಮಾಂಸವನ್ನು ಬೇಕಷ್ಟು ತಿಂದಿತು. ಸ್ವಲ್ಪ ಬಾಲದಲ್ಲಿ ಕಟ್ಟಿಕೊಂಡಿತು. ಇನ್ನು ಸ್ವಲ್ಪ ಕೈಕಾಲಲ್ಲಿ ಹಿಡಿದುಕೊಂಡು ಓಡಿತು. ಓಡುವ ರಭಸಕ್ಕೆ ಬಾಲದ ಮಾಸವೆಲ್ಲಾ ಬಿದ್ದುಹೋಯಿತು. ಮಾಂಸ ಬಿದ್ದುಹೋಯಿತೆಂಬ ಕೋಪದಲ್ಲಿ ತನ್ನ ಬಾಲವನ್ನು ಚೆನ್ನಾಗಿ ಕಲ್ಲಿನಲ್ಲಿ ಗುದ್ದಿತು.

ಮಾರನೆಯ ದಿವಸ ಪಕ್ಕದ ಊರಿನ ಬ್ರಾಹ್ಮಣರ ಮನೆಯಲ್ಲಿ ಮದುವೆ ಕಾರ್ಯಕ್ರಮ. ಒಬ್ಬ ತುಪ್ಪಕ್ಕೆಂದು ಊರೂರು ಹೋಗುತ್ತಿದ್ದನು. ಅವನಿಗೆ ತುಪ್ಪವನ್ನು ತಾನೇ ಕೊಡುತ್ತೇನೆಂದು ನರಿ ಒಪ್ಪಿತು. ಮದುವೆ ಬೇಕಷ್ಟು ತುಪ್ಪವನ್ನು ನರಿ ತನ್ನ ಬಾಲದಿಮದ ಹಿಂಡಿಕೊಟ್ಟಿತು. ನರಿಯ ಕುತಂತ್ರದಿಂದಾಗಿ ಮದುವೆ ಮನೆಯ ಊಟದಲ್ಲಿ ಗಲಾಟೆಯಾಯಿತು. ಮಾರನೆ ದಿನ ನರಿಯ ಬೇಟೆ ಮಾಡಿದರು. ಮೇಣದ ಬೊಂಬೆ ಮಾಡಿ ನರಿ ಬರುವ ದಾರಿಗೆ ಇಟ್ಟರು. ನರಿ ಬೊಂಬೆಯನ್ನು ಮುಟ್ಟಿ ಮೈಯೆಲ್ಲಾ ಮೇಣ ಅಂಟಿಸಿಕೊಂಡಿತು. ಮೇಣ ಅಂಟಿತೆಂದು ನೆಲದಲ್ಲಿ ಬಿದ್ದು ಹೊರಳಾಡಿತು. ನರಿಯ ಮೈಬಣ್ಣ ಬದಲಾಯಿತು.

ಮಾರನೆಯ ದಿನ ನರಿ 'ತನ್ನ ಜಾತಿ ಬೇರೆ'ಯೆಂದು ಹೇಳಿಕೊಂಡು ಬಂತು. 'ತನಗೆ ಭೂತ ಕಟ್ಟಲು ಗೊತ್ತಿದೆ'ಯೆಂದು ಹೇಳಿತು. ಕೆಲವು ದಿನ ಕಳೆದು ನರಿಯ ಭೂತದ ಏರ್ಪಾಡಾಯಿತು. ಆ ದಿನ ನರಿಯ ಜಾತಿಯವರೆಲ್ಲರೂ ಸೇರಿದ್ದರು. ನರಿಯ ಭೂತ ಸುಳ್ಳು ಎಂದು ಸೇರಿದ ಮಂದಿಗೆ ತಿಳಿಯಿತು. ಅಲ್ಲಿ ಸೇರಿದ್ದ ಎಲ್ಲಾ ನರಿಗಳನ್ನು ಊರವರು ಹೊಡ್ದು ಕೊಂದರು. ಅದರಿಂದ ಒಂದು ನರಿ ತಪ್ಪಿಸಿಕೊಂಡು ಓಡಿತು. ಅದು ಈಗ ಊರಲ್ಲೆಲ್ಲಾ ಸಂಚಾರ ಮಾಡುತ್ತದೆ. [ಕಥಾ ನಿರೂಪಕಿ:ತಾರಮಣಿ ಜತ್ತನಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 2. ಮುಚ್ಚ – ಕುದ್ಕ – ಹುಲಿ ಕತೆ [12ನೇ ಕತೆಯನ್ನು ನೋಡಿ]

ಒಂದು ಹುಲಿಗೆ ಮೂರು ಮಕ್ಕಳಿದ್ದವು. ಆ ಹುಲಿ ಸಾಕುಪ್ರಾಣಿಗಳನ್ನೇ ಹಿಡಿದು ತಿನ್ನುತ್ತಿತ್ತು. ಒಮ್ಮೆ ಆ ಊರ ಜನರು ಹುಲಿಯ ಬೇಟೆಗೆ ಹೊರಟರು. ಹುಲಿಗೆ ಇದು ಗೊತ್ತಾಯಿತು. ಆಮೇಲೆ ಹುಲಿ ಸಾಕುಪ್ರಾಣಿಗಳನ್ನು ತಿನ್ನುವುದನ್ನು ನಿಲ್ಲಿಸಿ ಕಾಡುಪ್ರಾಣಿಗಳನ್ನು ತಿನ್ನಲು ಪ್ರಾರಂಭಿಸಿತು. ಮೊದಲು ಮಂಗದ ಜಾತಿಗೆ ಸೇರಿದ ಮುಚ್ಚ ಎಂಬ ಪ್ರಾಣಿಯ ಸಂತಾನವನ್ನು ಮುಗಿಸುತ್ತಾ ಬಂತು. ಇದರಿಂದಾಗಿ ಒಂದು ಮುಚ್ಚ ತುಂಬಾ ಬೇಸರದಲ್ಲಿತ್ತು. ಅಲ್ಲಿಗೆ ಒಂದು ನರಿ ಬಂತು. ಮುಚ್ಚನಿಗೆ ಸಹಾಯ ಮಾಡಲು ಉಪಾಯ ಹುಡುಕಿತು. ನರಿಯ ಉಪಾಯದಂತೆ ಮುಚ್ಚನನ್ನು ಕೂಡಿಕೊಂಡು ಹುಲಿಯ ಗುಹೆಗೆ ಹೊರಟವು. ಮುಚ್ಚನಿಗೆ ಹುಲಿಯ ಹತ್ತಿರಕ್ಕೆ ಹೋಗಲು ಹೆದರಿಕೆಯಾಯಿತು. ಆಗ ನರಿ ಇನ್ನೊಂದು ಉಪಾಯ ಹೇಳಿತು. ಆ ಪ್ರಕಾರ ನರಿಯ ಬಾಲವನ್ನು ಮುಚ್ಚನ ಬಾಲಕ್ಕೆ ಕಟ್ಟಿತು.
ಇಬ್ಬರೂ ಸೇರಿ ಹುಲಿಯ ಗುಹೆಯ ಬಾಗಿಲಲ್ಲಿ ನಿಂತು ಕರೆಯುತ್ತವೆ. ಹುಲಿ ಬಂದ ವಿಚಾರವನ್ನು ಕೇಳಿತು. ನರಿಯ ಉಪಾಯಕ್ಕೆ ಹುಲಿಯೂ ಒಂದು ಉಪಾಯದ ಮಾತು ಹೇಳಿತು. "ಅಯ್ಯೋ ಮುಚ್ಚನೇ ಈ ನರಿಯಣ್ಣ ಹದಿನಾರು ಮುಚ್ಚರನ್ನು ಕರೆದು ತರುತ್ತೇನೆಂದು ನನಗೆ ಅಂದೇ ಮಾತು ಕೊಟ್ಟಿದ್ದ. ಈಗ ನಿನ್ನೊಬ್ಬನನ್ನೇ ಕರೆದು ತಂದಿದ್ದಾನೆ". ಇಷ್ಟು ಹೇಳಿದ್ದೇ ತಡ ಮುಚ್ಚ ಹಾರಿ ಬಿದ್ದು ಓಡಿತು. ಈ ನರಿ ಮುಚ್ಚನ ಬಾಲಕ್ಕೆ ತನ್ನ ಬಾಲವನ್ನು ಕಟ್ಟಿತ್ತು. ಮುಚ್ಚ ನರಿಯನ್ನು ಎಳೆದು ಓಡಿದ್ದರಲ್ಲಿ ನರಿ ಸತ್ತೇ ಹೋಯಿತು. ಅನಂತರ ಆ ಮುಚ್ಚವು ಎಲ್ಲಾ ಮುಚ್ಚಗಳಿಗೆ ರಾಜ ಆಯಿತು.
[ಕಥಾ ನಿರೂಪಕಿ:ಲೀಲಾವತಿ ಪಡ್ಪು ಮನೆ; ಸ್ಥಳ:ಮನೆ; ಸಮಯ:ಹಗಲು; ವರ್ಷ–1991]

## 3. 'ಜಾಣ ಕುಂಡತನ ಬಾಲ ಮುರ್ತ್' ಕತೆ [ಈ ಸಂಕಲನದ 15ನೇ ಕತೆಯನ್ನು ನೋಡಿ]

ಒಂದು ಊರಲ್ಲಿ ಒಂದು ಅಳಿಲು ಇತ್ತು. ಅದು ಬೇಲಿ ಬದಿಯಲ್ಲೇ ಹೋಗುವಾಗ ಅದರ ಬಾಲಕ್ಕೆ ಮುಳ್ಳು ಚುಚ್ಚಿತು. ಅಲ್ಲಿ ಒಬ್ಬ ಬೇಲಿ ಹಾಕುತ್ತಿದ್ದ. ಅಳಿಲು ತನ್ನ ಬಾಲದ ಮುಳ್ಳು ತೆಗೆಯಲು ಅವನೊಂದಿಗೆ ಹೇಳಿತು. 'ಅಣ್ಣಣ್ಣ ನನ್ನ ಬಾಲದ ಮುಳ್ಳು ತೆಗೆಯುತ್ತೀಯಾ?"ನಿನ್ನ ಬಾಲ ತುಂಡಾದರೆ ನನ್ನ ಕತ್ತಿ ಕೇಳುವನಾ?"ಕತ್ತಿ ಕೇಳುವುದಿಲ್ಲ'. ಬೇಲಿ ಹಾಕುವಾತ ಮುಳ್ಳು ತೆಗೆಯುವಾಗ ಅಳಿಲ ಬಾಲ ತುಂಡಾಯಿತು. ಬಾಲ ತುಂಡಾದುದಕ್ಕೆ ಅವನ ಕತ್ತಿ ಕೇಳಿತು.

ಸ್ವಲ್ಪ ಮುಂದೆ ಹೋದಾಗ ಒಬ್ಬ ಗಡಿಗೆ ಮಾಡುವ ಕುಂಬಾರ ಸಿಕ್ಕಿದ. ಅವನು ಕೈಯಲ್ಲೇ ಮಣ್ಣು ಹದ ಮಾಡುತ್ತಿದ್ದ. 'ಅಣ್ಣಣ್ಣ ನನ್ನ ಕತ್ತಿ ಬೇಕಾದರೆ ಕೊಡುತ್ತೇನೆ' ಎಂದಿತು. 'ಕತ್ತಿ ಮುರಿದರೆ ನನ್ನ ಗಡಿಗೆ ಕೇಳುವನಾ?"ಕೇಳುವುದಿಲ್ಲ'ವೆಂದು ಅಳಿಲು ಹೇಳಿತು. ಮಣ್ಣು ಹದ ಮಾಡುವಾಗ ಕತ್ತಿ ಮುರಿಯಿತು. ಅಳಿಲು ಗಡಿಗೆ ಕೇಳಿತು. ಕುಂಬಾರ ಗಡಿಗೆ ಕೊಟ್ಟ. ಗಡಿಗೆ ತೆಗೆದುಕೊಂಡಿತು.

ಒಬ್ಬ ಸೌತೆಕಾಯಿ ಬಳ್ಳಿಗೆ ಕೈಯಲ್ಲೇ ನೀರು ಹಾಕುತ್ತಿದ್ದ. ಅಲ್ಲಿಗೆ ಗಡಿಗೆ ತಕೊಂಡು ಅಳಿಲು ಬಂತು. 'ಅಣ್ಣಣ್ಣ ನನ್ನ ಗಡಿಗೆ ತಕೋ' ಎಂದು ಹೇಳಿತು. 'ನಿನ್ನ ಗಡಿಗೆ ಒಡೆದರೆ ನನ್ನ ಸೌತೆಕಾಯಿ ಕೇಳುವನಾ?"ಕೇಳುವುದಿಲ್ಲ'ವೆಂದಿತು. ನೀರು ಹಾಕುವಾಗ ಗಡಿಗೆ ಒಡೆಯಿತು. ಸೌತೆಕಾಯಿ ಕೊಡೆಂದು ಕೇಳಿತು.

ಸೌತೆಕಾಯಿ ತೆಗೆದುಕೊಂಡು ಹೋಗುವಾಗ ದಾರಿಯಲ್ಲಿ ಅಳಿಲಿಗೆ ಬಾಯಾರಿಕೆಯಾಯಿತು. ದಾರಿಯಲ್ಲಿ ದನ ಮೇಯಿಸುವ ಮಕ್ಕಳು ಸಿಗುತ್ತಾರೆ. ಅವರೊಂದಿಗೆ 'ಇಲ್ಲಿ ನೀರು ಎಲ್ಲಿ ಸಿಗುತ್ತದೆ'ಂದು ಕೇಳಿತು. ಅವರು 'ಈ ಗುಡ್ಡೆಯಿಂದ ಆಚೆ ಗುಡ್ಡೆಗೆ ಹೋದರೆ ನೀರು ಸಿಗುತ್ತದೆ'

'ನಾನು ಸೌತೆಕಾಯಿ ಇಲ್ಲಿ ಇಟ್ಟು ನೀರು ಕುಡಿದು ಬರುತ್ತೇನೆ'ಂದು ಹೇಳಿತು. ಅಳಿಲು ನೀರು ಕುಡಿದು ಬರುವಾಗ ಸೌತೆಕಾಯನ್ನು ದನಕಾಯುವವರ ಎತ್ತುಗಳು ತಿಂದವು. ಅಳಿಲು ಎಲ್ಲ ಎತ್ತುಗಳ ಬಾಯಿ ಪರೀಕ್ಷೆ ಮಾಡಿ ನೋಡಿತು. ಒಂದು ಎತ್ತಿನ ಬಾಯಲ್ಲಿ ಸೌತೆಕಾಯಿ ಬೀಜ ಇತ್ತು. 'ಅಣ್ಣಣ್ಣ ನಿನ್ನ ಎತ್ತು ಕೊಡು. ನನ್ನ ಸೌತೆಕಾಯಿ ತಿಂದಿವೆ'. ಅವರು ಒಂದು ಎತ್ತನ್ನು ಕೊಟ್ಟರು.

ಒಬ್ಬ ಗಾಣಿಗ ಒಂದು ಎತ್ತನ್ನು ಕಟ್ಟಿ ಗಾಣ ಹೊಡೆಯುತ್ತಾನೆ. 'ಅಣ್ಣಣ್ಣ ನಿನ್ನ ಗಾಣದ ಎತ್ತಿನೊಂದಿಗೆ ನನ್ನದೊಂದು ಎತ್ತು ಸೇರಿ ಗಾಣ ಹೊಡಿ' ಎಂದಿತು. 'ನಿನ್ನ ಗಾಣದ ಎತ್ತು ಸತ್ತರೆ ನನ್ನ ಗಾಣದ ಎತ್ತನ್ನು ಕೇಳುವನಾ?''ಕೇಳುವುದಿಲ್ಲ'. ಅವನ ಗಾಣದ ಎತ್ತು ಎರಡು ಸುತ್ತು ಬರುವಾಗ ಸತ್ತು ಹೋಯಿತು. ಅವನ ಗಾಣದ ಎತ್ತನ್ನು ಹೊಡೆದುಕೊಂಡು ಮುಂದೆ ಹೋಯಿತು.

ಒಬ್ಬ ಡೋಲು ಗಗ್ಗರ ಹೊಡೆಯುತ್ತಾ ಪಾಡ್ದಾನ ಹೇಳುತ್ತಿದ್ದ. ಗಾಣದ ಎತ್ತನ್ನು ಅವನಿಗೆ ಕೊಟ್ಟಿತು. ಅವನ ಡೋಲು ಗಗ್ಗರ ತೆಗೆದುಕೊಂಡಿತು. ಅಳಿತು ಡೋಲು ಹೊಡೆಯಿತು. ಗಗ್ಗರ ಕಟ್ಟಿಕೊಂಡಿತು. ಪಾಡ್ದಾನ ಹೇಳಿಕೊಂಡು 'ನಾನು ಕತ್ತಿಲಿ ಗೆದ್ದೆ ಥೈಥಕಥೈ, ನಾನು ಗಡಿಗೆಲಿ ಗೆದ್ದೆ ಥೈಥಕಥೈ, ನಾನು ಎತ್ತನ್ನು ಗೆದ್ದೆ ಥೈಥಕಥೈ' ಹೇಳಿಕೊಂಡು ಬೇಲಿ ಬದಿಯಲ್ಲೇ ಹೋಯಿತು.
**[ಕಥಾ ನಿರೂಪಕಿ:ಬೊಮ್ಮಕ್ಕ, ಸ್ಥಳ:ಮನೆ, ಸಮಯ:ಬೆಳಿಗ್ಗೆ 10ಗಂಟೆ; ವರ್ಷ–1991]**

## 4. ಚೋರೆಕ್ಕಿನ ಜಾಣತನದ ಕತೆ [ಈ ಸಂಕಲನದ 21ನೇ ಕತೆಯನ್ನು ನೋಡಿ]

ಒಂದು ಚೋರೆ ಹಕ್ಕಿ ಇತ್ತು. ಅದು ಮೂರು ಮೊಟ್ಟೆ ಇಟ್ಟಿತು. ಮೊಟ್ಟೆ ಮೇಲೆ ಕೂತು ಕಾವು ಕೊಟ್ಟಿತು. ಮಧ್ಯ ರಾತ್ರಿಗೆ ಸಂತೆಗೆ ಹೋದ ಕಡವೆ ಬಂತು. ಅದಕ್ಕೆ ಚಳಿ ಹಿತಿಯಿತು. 'ಚೋರೆಕ್ಕ ಚೋರೆಕ್ಕ ನನಗೆ ಚಳಿ ಹಿಡಿದಿದೆ. ಚಳಿ ಕಾಯಿಸಲು ಜಾಗ ಕೊಡುವೆಯಾ?' ಎಂದು ಕೇಳಿತು. ಕಡವೆಗೆ ಚಳಿ ಕಾಯಲು ಸ್ವಲ್ಪ ಜಾಗ ಕೊಟ್ಟಿತು. ಅದು ಚಳಿ ಕಾಯಿಸಿ 'ನಾನು ಹೋಗುತ್ತೇನೆ ಚೋರೆಕ್ಕಾ'ಂತ ಹೇಳಿತು. ಅದರ ಮನೆಗೆ ಹೋಯಿತು.

ಸ್ವಲ್ಪ ಹೊತ್ತಲ್ಲಿ ಮೊಲಣ್ಣ ಬಂತು. ಅದಕ್ಕೆ ಚಳಿ ಹಿತಿಯಿತು. 'ಚೋರೆಕ್ಕ ಚೋರೆಕ್ಕ ನನಗೆ ಚಳಿ ಹಿಡಿದಿದೆ. ಚಳಿ ಕಾಯಿಸಲು ಜಾಗ ಕೊಡುವೆಯಾ?' ಎಂದು ಕೇಳಿತು. ಮೊಲಣ್ಣನಿಗೆ ಚಳಿ ಕಾಯಲು ಸ್ವಲ್ಪ ಜಾಗ ಕೊಟ್ಟಿತು. ಅದು ಚಳಿ ಕಾಯಿಸಿ 'ನಾನು ಹೋಗುತ್ತೇನೆ ಚೋರೆಕ್ಕಾ'ಂತ ಹೇಳಿತು. ಅದರ ಮನೆಗೆ ಹೋಯಿತು.

ಸ್ವಲ್ಪ ಹೊತ್ತಲ್ಲಿ ನರಿಯಣ್ಣ ಬಂತು. ಅದಕ್ಕೆ ಚಳಿ ಹಿತಿಯಿತು. 'ಚೋರೆಕ್ಕ ಚೋರೆಕ್ಕ ನನಗೆ ಚಳಿ ಹಿಡಿದಿದೆ. ಚಳಿ ಕಾಯಿಸಲು ಜಾಗ ಕೊಡುವೆಯಾ?' ಎಂದು ಕೇಳಿತು. ನರಿಯಣ್ಣನಿಗೆ ಚಳಿ ಕಾಯಲು ಸ್ವಲ್ಪ ಜಾಗ ಕೊಟ್ಟಿತು. ಅದು ಚಳಿ ಕಾಯಿಸಿಕೊಂಡಿತ್ತು. ಚೋರೆಕ್ಕ ಭತ್ತ ಕುಟ್ಟಲು ಹೋಯಿತು. 'ಊಂಹ್ಞು ಊಂಹ್ಞುಂತ ಭತ್ತ ಕುಟ್ಟುತ್ತಾ ಇತ್ತು. ಆಗ ಕಟ್‌ಕಟ್‌ಂತ ಕೇಳಿತು. ಏನು ನರಿಯಣ್ಣ ಭಾರೀ ಜಗಿಯುತ್ತೀಯಾ ?''ನಾನು ಸಂತೆಗೆ ಹೋಗಿ ಬರುವಾಗ ಮೂರು ಜಿಬ್ಬಡಿಕೆ ಹೋಳು ತಂದಿದ್ದೇನೆ. ಅದರಲ್ಲಿ ಒಂದು ತಿಂದಾಯ್ತು. ಇನ್ನು ಎರಡು ಉಂಟು'.

ಮತ್ತೆ ಚೋರೆಕ್ಕ ಭತ್ತ ಕುಟ್ಟಲು ಹೋಯಿತು. 'ಊಂಹ್ಞು ಊಂಹ್ಞುಂತ ಭತ್ತ ಕುಟ್ಟುತ್ತಾ ಇತ್ತು. ಆಗ ಕಟ್‌ಕಟ್‌ಂತ ಕೇಳಿತು. 'ಏನು ನರಿಯಣ್ಣ ಭಾರೀ ಜಗಿಯುತ್ತೀಯಾ?''ನಾನು ಸಂತೆಗೆ ಹೋಗಿ ಬರುವಾಗ ಮೂರು ಜಿಬ್ಬಡಿಕೆ ಹೋಳು ತಂದಿದ್ದೇನೆ. ಅದರಲ್ಲಿ ಎರಡು ತಿಂದಾಯ್ತು. ಇನ್ನು ಒಂದು ಉಂಟು'.

ಚೋರೆಕ್ಕ 'ಊಂಹ್ಞು ಊಂಹ್ಞುಂತ'ಭತ್ತ ಕುಟ್ಟುತ್ತಾ ಇತ್ತು. ಮತ್ತೆ 'ಕಟ್‌ಕಟ್‌ಂತ' ಕೇಳಿತು. 'ಏನು ನರಿಯಣ್ಣ ಭಾರೀ ಜಗಿಯುತ್ತೀಯಾ ?''ನಾನು ಸಂತೆಗೆ ಹೋಗಿ ಬರುವಾಗ ಮೂರು ಜಿಬ್ಬಡಿಕೆ ಹೋಳು ತಂದಿದ್ದೇನೆ. ಅದರಲ್ಲಿ ಮೂರನ್ನು ತಿಂದಾಯ್ತು'. ಚೋರೆಕ್ಕ ಭತ್ತ ಕುಟ್ಟುತ್ತಾ ಇತ್ತು. 'ನಾನು ಹೋಗುತ್ತೇನೆ ಚೋರೆಕ್ಕಾ'ಂತ ನರಿಯಣ್ಣ ಹೇಳಿತು. ಅದರ ಮನೆಗೆ ಹೋಯಿತು.

ಚೋರೆಕ್ಕ ಭತ್ತ ಕುಟ್ಟಿ ಆದ ನಂತರ ನೋಡಿದ್ರೆ ಮೊಟ್ಟೆ ಇರಲಿಲ್ಲ. ಏನು ಮಾಡುವುದು ? ಇನ್ನೇನು ಮಾಡುವುದೆಂದು ಮೊದಲು ಕಡವೆ ಮನೆಗೆ ಹೋಯಿತು. ಮೊದಲು ಅದು ಬಂದದಲ್ಲ. ಅಲ್ಲಿಗೆ ಹೋದಾಗ "ಹೊಸ್ತೂಂತ ಬಾರ ಹಬ್ಬಾಂತ ಬಾರ, ಇಂದೇಕೆ ಬಂದೆ ನೀರ್ ಚಾಪೆ ತನ್ನಿರೋ ಮಕ್ಕಳಿರಾಂತ" ಹೇಳಿತು. ನಿನ್ನ ನೀರ್‌ಚಾಪೆ ತೆಗೆದು ಬೆಂಕಿಗೆ ಹಾಕು. ನನ್ನ ಮಕ್ಕಳ ತಿಂದದ್ದನ್ನು ವಿಚಾರಿಸಿ ಕೊಡು? ಎಂದು ಹೇಳಿತು. ಹಾಗಾದರೆ, "ಬಾಳೆ ಪಾಲ ಹಾಕು, ನೂಲಿನ ಕೈತಾಂಗ್ ಸೇರಿಸು, ಅಳೆತ್ತರ ಕೆಂಡ ರಾಶಿಮಾಡು. ಅಲ್ಲಿ ಬಂದು ಸತ್ಯ ಹೇಳಲು ಬರುತ್ತೇನೆ" ಎಂದು ಹೇಳಿತು.

ಅಲ್ಲಿಂದ ಮುಂದೆ ಮೊಲಣ್ಣನ ಮನೆಗೆ ಹೋಯಿತು. ಅಲ್ಲಿಗೆ ಹೋದಾಗ "ಹೊಸ್ತೂಂತ ಬಾರ ಹಬ್ಬಾಂತ ಬಾರ, ಇಂದೇಕೆ ಬಂದೆ ನೀರ್ ಚಾಪೆ ತನ್ನಿರೋ ಮಕ್ಕಳಿರಾಂತ" ಹೇಳಿತು. ನಿನ್ನ ನೀರ್‌ಚಾಪೆ ತೆಗೆದು ಬೆಂಕಿಗೆ ಹಾಕು. ನನ್ನ ಮಕ್ಕಳ ತಿಂದದ್ದನ್ನು ವಿಚಾರಿಸಿ ಕೊಡು ? ಎಂದು ಹೇಳಿತು. ಹಾಗಾದರೆ, "ಬಾಳೆ ಪಾಲ ಹಾಕು, ನೂಲಿನ ಕೈತಾಂಗ್ ಸೇರಿಸು, ಅಳೆತ್ತರ ಕೆಂಡ ರಾಶಿಮಾಡು. ಅಲ್ಲಿ ಬಂದು ಸತ್ಯ ಹೇಳಲು ಬರುತ್ತೇನೆ" ಎಂದು ಹೇಳಿತು.

ಅಲ್ಲಿಂದ ಮುಂದೆ ನರಿಯಣ್ಣನ ಮನೆಗೆ ಹೋಯಿತು. ಅಲ್ಲಿಗೆ ಹೋದಾಗ "ಹೊಸ್ತೂಂತ ಬಾರ ಹಬ್ಬಾಂತ ಬಾರ, ಇಂದೇಕೆ ಬಂದೆ ನೀರ್ ಚಾಪೆ ತನ್ನಿರೋ ಮಕ್ಕಳಿರಾಂತ" ಹೇಳಿತು. ನಿನ್ನ ನೀರ್‌ಚಾಪೆ ತೆಗೆದು ಬೆಂಕಿಗೆ ಹಾಕು. ನನ್ನ ಮಕ್ಕಳ ತಿಂದದ್ದನ್ನು ವಿಚಾರಿಸಿ ಕೊಡು ? ಎಂದು ಹೇಳಿತು. ಹಾಗಾದರೆ, "ಬಾಳೆ ಪಾಲ ಹಾಕು, ನೂಲಿನ ಕೈತಾಂಗ್ ಸೇರಿಸು, ಅಳೆತ್ತರ ಕೆಂಡ ರಾಶಿಮಾಡು. ಅಲ್ಲಿ ಬಂದು ಸತ್ಯ ಹೇಳಲು ಬರುತ್ತೇನೆ" ಎಂದು ಹೇಳಿತು.

ಹಾಗೆ ಹೇಳಿ ಚೋರೆಕ್ಕ ನೇರ ಮನೆಗೆ ಬಂತು. ಬಂದು ಆಳೆತ್ತರ ಕೆಂಡ ರಾಶಿ ಮಾಡಿತು. ಬಾಳೆ ಪಾಲ ಹಾಕಿತು. ನೂಲ ಕೈತಾಂಗ ಹಾಕಿತು. ಮತ್ತೆ ಇವರೆಲ್ಲರನ್ನೂ ಬರ ಹೇಳಿತು. ಇವರು ಒಬ್ಬೊಬ್ಬನೇ ಬಂದು, "ಬಾಳೆ ಪಾಲ, ನೂಲ ಕೈತಾಂಗು, ಆಳೆತ್ತರ ಕೆಂಡದ ರಾಶಿ' ಎಂದು ಹಾರಿದರಂತೆ. ಹಾರಿ ಕಡವೆ ಮತ್ತು ಮೊಲಣ್ಣ ಏನೂ ಆಗದೆ ಹೋದರು. ಕೊನೆಗೆ ನರಿಯಣ್ಣ ಬಂದ. "ಬಾಲೆ ಪಾಲ, ನೂಲ ಕೈತಾಂಗು, ಆಳೆತ್ತರ ಕೆಂಡಂತ" ಹೇಳಿ ಹಾರಿತು. ಹಾರಿ ಕೆಂಡದ ನಡೂವಿಗೆ ಹಾರಿತು. ನರಿಯಣ್ಣನನ್ನು ಕೆಂಡದಿಂದ ತೆಗೆದು ಹೊಂಡದಲ್ಲಿ ಹಾಕಿತು. ಅದನ್ನು ನೋಡಲು ಹೋಗಬೇಕಂತೆ. [ಕಥಾ ನಿರೂಪಕಿ:ಸುಬ್ಬಮ್ಮ; ಸ್ಥಳ:ಮನೆ; ಸಮಯ:ಬೆಳಿಗ್ಗೆ; ವರ್ಷ–1991]

## 5. ಮೀನ್ ಕುಮಾರನ ಕತೆ [ಈ ಸಂಕಲನದ 36ನೇ ಕತೆಯನ್ನು ನೋಡಿ]

ಒಂದು ಊರಲ್ಲಿ ಒಬ್ಬ ಅರಸು. ಆ ಅರಸನಿಗೆ ಮೊದಲು ಒಂದು ಮದುವೆ ಆಗಿತ್ತು. ಮದುವೆ ಆಗಿ ಒಬ್ಬಳು ಮಗಳು ಹುಟ್ಟಿದಳು. ಮಗಳಿಗೆ ಆರೇಳು ವರ್ಷ ಆಗುವಾಗ ಹೆಂಡತಿ ತೀರಿಕೊಂಡಳು. ತೀರಿ ಹೋದ ಮೇಲೆ ಅವನಿಗೆ ಗತಿ ಇಲ್ಲ. ಹೆಂಡಿತಿ ಇಲ್ಲ ಅಲ್ವ. ಆ ಅರಸು ಮನೆತನದವರಿಗೆ ಹೆಣ್ಣು ಇಲ್ಲವೆಂದು ಎಲ್ಲರಿಗೂ ಬೇಸರದ ಸಂಗತಿಯಾಯಿತು. ಅರಸು ಮನೆತನಕ್ಕೆ ಗತಿ ಇಲ್ಲವೆಂದು ಪ್ರಜೆಗಳನ್ನು ಬರಲು ಹೇಳುತ್ತಾನೆ. ಮಂತ್ರಿಯನ್ನೂ ಬರ ಹೇಳುತ್ತಾನೆ. 'ನನಗೊಂದು ಹೆಣ್ಣು ನಿಶ್ಚಯ ಮಾಡಬೇಕು. ನೀನು ಎಲ್ಲಿಯಾದರೂ ಹೋಗು

ಹಾಗೆ ಮಂತ್ರಿ ಊರಲ್ಲಿ ಹೆಣ್ಣು ಹುಡುಕುತ್ತಾ ಹೋದ. ಒಂದು ಊರಿನಿಂದ ಮತ್ತೊಂದು ಊರಿಗೆ, ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಹೋದನು. ಇಲ್ಲಿಂದ ಮಡಿಕೇರಿಗೆ, ಮಡಿಕೇರಿಯಿಂದ ಭಾಗಮಂಡಲಕ್ಕೆ, ಭಾಗಮಂಡಲದಿಂದ ತಿರುಗಿ ಬರುವಾಗ ಕರಿಕೆ ರೋಡಿಗೆ ಬರುವಾಗ ಒಂದು ಹೆಣ್ಣು ಮಗಳೂ ಒಂದು ಹೆಂಗಸೂ ಬಹಳ ಸುಂದರಿ ಹೆಂಗಸು ಮಾತನಾಡುತ್ತಾ ಹೋಗುತ್ತಿದ್ದಾರೆ. ನೀವೆಲ್ಲಿಗೆ ಹೋಗುವುದು? 'ನನ್ನ ಗಂಡ ಮೊನ್ನೆ ಸುತ್ತೊಗಿದ್ದಾನೆ, ಈಗ ನನಗೆ ಯಾರೂ ಗತಿ ಇಲ್ಲ. ಹಾಗೆ ನಾನು ಮಗಳನ್ನು ಕರೆದುಕೊಂಡು ಹೋಗುವುದು'. 'ಅಯ್ಯೋ ಅಯ್ಯೋ ನಮ್ಮ ರಾಜ್ಯದಲ್ಲಿ ಕೂಡ ಹಾಗೆ. ಒಂದು ಹೆಣ್ಣು ಬೇಕುಂತ ಹುಡುಕಲು ನನ್ನನ್ನು ಕಳಿಸಿದ್ದಾರೆ. ಅವರಿಗೆ ಮೊದಲು ಮದುವೆ ಆಗಿರುವುದರಿಂದ ಕೈ ಧಾರೆ ಕೊಡುವುದಿಲ್ಲ. ಅದಕ್ಕೆ ನಿರ್ಧಾರವೆಂದು ನನ್ನೊಂದಿಗೆ ಹೇಳಿದ್ದಾರೆ. ನನಗೆ ಪತ್ರವನ್ನೂ ಕೊಟ್ಟಿದ್ದಾರೆ. ರೂಪ ಲಾವಣ್ಯ ನೋಡಿ ಹೆಣ್ಣು ನೋಡಿ ಹೆಣ್ಣು ನೋಡಬೇಕು ಎಂದು ಹೇಳಿದ್ದಾರೆ. ನಾನು ಅವರ ಮಂತ್ರಿ. ಹಾಗೆ ನಾನು ಬಂದಿರೊದು' ಎಂದು ಹೇಳಿದ. ಹಾಗಾದರೆ ನಾನು ಬರುತ್ತೇನೆ. ನನ್ನನ್ನು ಮದುವೆ ಮಾಡುವುದಾದರೆ ಮಾಡಲಿ. ಮನೆ ಎಲ್ಲ ಶೃಂಗಾರ ಮಾಡಿ, ಅಲ್ಲಿಯೇ ಒಂದು ಅರಸು ಮನೆತನದ ರೂಮಲ್ಲಿ ನಾನು ಇರುವಂತೆ ಮಾಡಲಿ. ಅಲ್ಲಿಂದ ಮತ್ತೆ ಕಾರ್ಯಕ್ರಮಕ್ಕೆ ಆಗುವಾಗ ಕರೆದುಕೊಂಡು ಹೋದರೆ ಸಾಕು' ಎಂದು ಹೇಳಿದಳು.

ಮಂತ್ರಿ ಅವಳನ್ನು ಚೆನ್ನಾಗಿ ಮೀಯಿಸಿ ತನ್ನ ಮನೆಗೆ ಕರೆದು ತಂದನು. ಮರುದಿನ ಅರಮನೆಗೆ ಕರೆದುಕೊಂಡು ಹೋದನು. ಅರಸು ಮನೆಯಲ್ಲಿ ಈಗಿನ ಬುಡುದಾರೆ ಕ್ರಮದಲ್ಲಿ ಮದುವೆ ಕ್ರಮ ಆಯಿತು. ಮದುವೆ ಆಗಿ ಅವರು ಹಾಗೆ ಸ್ವಲ್ಪ ಸಮಯ ಸುಖವಾಗಿ ಇದ್ದರು. ಆಗ ಅರಸು ಮನೆಸ್ಥನದಲ್ಲಿ ಅದು ಪಟ್ಟದ ರಾಣಿ. ಈ ಎರಡನೆ ಹೆಣ್ಣು. ಈ ಮೊದಲ ಹೆಂಡತಿ ಮಗಳು ಸ್ವಲ್ಪ ದೊಡ್ಡವಳಾದಳು. ಅವಳನ್ನು ದನ ಕಾಯಲು ಕಳಿಸಿದರು. ಅಡುಗೆ ಎಲ್ಲ ಬಿಟ್ಟಳು. ಇದಕ್ಕೆ ಬಾರಿ ಕಷ್ಟ ಆಯಿತು. ದನ ಕಾಯೋದಕ್ಕಾದರೂ ಹೋಗುತ್ತೇನೆಂದು ಹೇಳಿ ಚಿಕ್ಕವ್ವನೊಂದಿಗೆ ಹೇಳಿ ಹೋದಳು. ಹಾಗೆ ದನಕಾಯುವದಕ್ಕೆ ಹೋಗಿ ಹೋಗಿ ಹೋಗಿ ಇವಳಿಗೆ ಯಾವಗಲೂ ಊಟ ಕೊಡುವುದಿಲ್ಲ. ಆದರೂ ಇವಳು ಬಹಳ ಸುಂದರಿ ಹುಡುಗಿಯಾದಳು. ಇನ್ನು ನನ್ನ ಮಗಳು ಕುರುಡಿಯನ್ನು ಇವರು ನೋಡುವುದಿಲ್ಲ ? ಈ ಅರಸು ಮೊದಲ ಹೆಂಡತಿ ಮಗಳನ್ನು ಪ್ರೀತಿಯಲ್ಲಿ ಸ್ನಾನ ಮಾಡಿಸುವುದು, ತಲೆಗೆ ಎಣ್ಣೆಹಾಕಿ ಬಾಚುವುದನ್ನು ಕಂಡು ಇವರ ಮಗಳನ್ನೇ ಹೊಗಳುತ್ತಾರೆಂದು ಹೇಳಿ ನಂಜಾಯಿತು. ನನ್ನ ಮಗಳನ್ನು ನೋಡುವಂತೆ ಮಾಡಿದಳು. ಇವನು ಅರಮನೆಗೆ ಹೋಗುವಾಗ ಮೊದಲ ಹೆಂಡತಿ ಮಗಳನ್ನು ಹೊಡೆದು ಕಷ್ಟ ಕೊಡುವುದು. ಹೀಗೆ ಅವಳು ಇನ್ನು ದನ ಮೇಯಿಸಲು ಹೋಗುವೆನೆಂದು ಹೇಳಿದಳು. ಚಿಕ್ಕಮ್ಮ ಇವಳಿಗೆ ತಂಗಳನ್ನ ನೀರು ಕೊಡುವುದು. ಇವಳು ಆಚೆ ಈಚೆ ಕೈ ಹಾಕಿ ಅಕ್ಕಚ್ಚಿಗೆ ಸುರಿಯುತ್ತಿದ್ದಳು. ಹಾಗೆ ದನಮೇಯಿಸಲು ಉಪವಾಸ ಹೋಗುವುದು. ಹೀಗೆ ಹೋಗಿ ಹೋಗಿ ಮಳೆಗಾಲ ಹಿಡಿಯಿತು. ಅವಳ ಅಮ್ಮ ಸತ್ತು ದೊಡ್ಡ ಬಯಲಲ್ಲಿ ಸುಟ್ಟಿದ್ದಾರೆ. ಅವಳ ಸುಟ್ಟ ಜಾಗ 'ದೂಪೆ' ಹತ್ತಿರ ಕಾಡು ತೊಂಡೆಕಾಯಿ ಬಳ್ಳಿ ಹಬ್ಬಿಕೊಂಡಿತ್ತು. ಅದರಲ್ಲಿ ತುಂಬ ಕಾಡುತೊಂಡೆಕಾಯಿ. ಅವಳು ಏನು ಮಾಡಿದಳು? ಈ ಕಾಡುತೊಂಡೆಕಾಯನ್ನು ಚೆನ್ನಾಗಿ ಕೊಯ್ದು ದಿನಕ್ಕೆ ಹತ್ತಷ್ಟು ತಿನ್ನುತ್ತಿದ್ದಳು. ಒಂದು ದಿನ ಈ ತೊಂಡೆಕಾಯಿ ಕೊಯ್ದು, ಕಪಿಲೆ ಹಸು ಹಾಲು ಕರೆದಳು. ಅದನ್ನು ಹಿಚುಕಲು ಮನೆಯಿಂದ ಹಾಳೆ ಏನಾದ್ರು ತರುತ್ತಿದ್ದಳು. ಈ ಕಾಡು ತೊಂಡೆಕಾಯಿ ಮತ್ತು ಹಾಲನ್ನು ಒಟ್ಟು ಹಿಚುಕಿ ನೀರು ಮಾಡಿ ಕುಡಿಯುತ್ತಿದ್ದಳು. ಕುಡಿದು ಮನೆಗೆ ಬರುತ್ತಿದ್ದಳು. ದನಗಳನ್ನು ಕಟ್ಟಿಹಾಕಿ ಕರು ಬಿಟ್ಟು

ಹಾಲು ಕರೆಯುತ್ತಿದ್ದಳು. ಹಾಲನ್ನು ಕಾಯಿಸಿ ಇರಿಸಿದ್ದೇನೆಂದು ಚಿಕ್ಕಮ್ಮನೊಂದಿಗೆ ಹೇಳಿ ಹೊರಗೆ ಹೋಗುತ್ತಿದ್ದಳು. ಚಿಕ್ಕಮ್ಮ ಹಾಲಿನ ಮೇಲಿನ ಕೆನೆಯನ್ನು ತೆಗೆದು ತನ್ನ ಕುರುಡಿ ಮಗಳಿಗೆ ಕೊಡುವುದು. ಆ ಮೇಲೆ ಇವಳೊಂದಿಗೆ ನಿನಗೆ ಅಲ್ಲಿ ಹಾಳೆ ಬಟ್ಟಲಲ್ಲಿ ಗಂಜಿ ಇಟ್ಟಿರುವೆನೆಂದು ಹೇಳುತ್ತಿದ್ದಳು. ಬೇಕಾದರೆ ತಿನ್ನು ಎಂದು ಹೇಳುತ್ತಿದ್ದಳು. ಆ ಗಂಜಿಯಲ್ಲಿ ನೊಣವೋ ಇನ್ನೇನಾದರೂ ಕಸ ಬಿದ್ದುಕೊಂಡಿರುತ್ತದೆ. ಇವರು ಉಂಡು ಬಿಟ್ಟ ಅನ್ನವನ್ನು ಅವಳ ತಟ್ಟೆಗೆ ಹಾಕುತ್ತಿದ್ದರು. ಇವಳು ಉಪವಾಸವೆ ಇದ್ದು, ಮಾರನೆ ದಿನ ಕಾಡು ತೊಂಡೆಕಾಯಿ ಮತ್ತು ಕಬಿಲೆ ಹಸುವಿನ ಹಾಲು ಕುಡಿದು ಹೊಟ್ಟೆ ತುಂಬಿಸುತ್ತಿದ್ದಳು. ಹೀಗೆ ಇವಳು ದಿನದಿಂದ ದಿನಕ್ಕೆ ದಪ್ಪ ಆಗಿ ಚಂದ ಕಾಣುತ್ತಿದ್ದಳು. ಒಂದು ದಿನ ಚಿಕ್ಕಮ್ಮ ಅರಸನೊಂದಿಗೆ 'ನಿಮ್ಮ ಮಗಳು ದಿನದಿಂದ ದಿನಕ್ಕೆ ಮಡ್ಡಮ್ಮನಂತೆ ಕಾಣಿತ್ತಾಳೆ ಏನು? ಎಂದಳು. ನಿಮ್ಮ ಸಂಬಂಧದವರು ನರೆಕರೆಯಲ್ಲಿ ಎಲ್ಲಾದರೂ ಇದ್ದರೋ ಏನೋ? ಅವಳು ಈ ತರಹ ಹೇಗೆ ಆದಳು? ಇದು ನಾಳೆಗೆ ನಮಗೆ ಕೆಟ್ಟ ಹೆಸರು ಬರಹುದೋ ಏನೋ? ಎಂದಳು.

ಅರಸು ನನ್ನ ಮಗಳು ಎಂತಹವಳೆಂದು ನನಗೆ ಗೊತ್ತಿದೆ. ಅವಳ ಕಷ್ಟ ಏನೆಂದು ನನಗೆ ಗೊತ್ತಿದೆ. ಹಾಗೆ ಇರೋವಾಗ ಈ ಚಿಕ್ಕಮ್ಮನ ಮಗಳು ಕುರ್ಡಿ 'ಅಕ್ಕಕ್ಕ ದನ ಮೇಯಿಸಲು ನಾನೂ ಬರಬೇಕ' ಎಂದು ಕೇಳಿದಳು. 'ಅಯ್ಯೋ ನೀನು ಬರಬೇಡ. ಅಲ್ಲಿಗೆ ಹೋಗುವಾಗ ಮಳೆಗೆ ಒದ್ದೆಯಾಗಿ ಹೋಗಬೇಕು. ಕಲ್ಲು, ಮುಳ್ಳು ಮೆಟ್ಟಿಕೊಂಡು ಹೋಗಬೇಕು. ನನ್ನಲ್ಲಿ ಒಂದೇ ಪಣೆಗೊರಬೆ ಇರುವುದು. ಅದರಲ್ಲಿ ನಾವಿಬ್ಬರು ಒದ್ದೆಯಾಗಿಕೊಂಡು ಹೇಗೆ ಹೋಗುವುದು? ನೀನು ಬರಬೇಡ' ಎಂದಳು. ಆ ದಿನ ಅವಳು ದನ ಮೇಯಿಸಲು ಹೋದಳು. ಹೋಗಿ ಎರಡು ಹಸುಗಳ ಹಾಲು ಹಿಂಡಿ ಕಾಡುತೊಂಡೆಕಾಯಿ ಹಿಚುಕಿ ಹೊಟ್ಟೆತುಂಬ ಕುಡಿದಳು. ಮಾರನೆ ದಿನ ನಾನೂ ಬರುತ್ತೇನೆಂದು ಈ ಕುರ್ಡಿ ಜೊತೆಗೆ ಹೊರಟಳು. ಇವಳು ಕರೆದುಕೊಂಡು ಹೋಗಿ ಎಲ್ಲ ತೋರಿಸಿದಳು. ಈ ಕುರ್ಡಿಗೆ ಇದ್ದ ಅಡ್ಕ, ಕಲ್ಲು ಮುಳ್ಳುಂತ ಎಲ್ಲ ಕಡೆ ತಿರುಗಿಸಿದಳು. ಆ ದಿನ ಹಾಲು ಹಿಂಡಲಿಲ್ಲ. ಸಂಜೆ ಮನೆಗೆ ಬಂದ ಕುರ್ಡಿ ಮಗಳು ಅಲ್ಲಿ ಕಷ್ಟ ಬಂದದ್ದನ್ನೆಲ್ಲಾ ವಿವರಿಸಿ ಹೇಳಿದಳು. ಆ ದಿನ ಸಾಯಂಕಾಲ ಇವರಿಬ್ಬರೂ ಬಂದು ದನಗಳಿಗೆ ಕೊಡುವ ಅಕ್ಕಚ್ಚು ಕುಡಿದರು. 'ನಾಳೆ ಅಕ್ಕನೊಂದಿಗೆ ನಾನು ಹೋಗುವುದಿಲ್ಲ. ಅವಳೊಂದಿಗೆ ಹೋದರೆ ಸತ್ತುಹೋಗುವರು'. ಮಾರನೆಯ ದಿನ ನೆರೆಕರೆಯ ಹೆಂಗಸು ಬಂದಳು. ಅವಳೊಂದಿಗೆ ತನ್ನ ಮಗಳನ್ನು ಕುರ್ಡಿಯಾದರೂ ಯಾರೂ ಮದುವೆಯಾಗುವರು. ಇಷ್ಟು ದೊಡ್ಡ ಮನೆತನದಲ್ಲಿ ಇದ್ದ ಮೇಲೆ ಯಾರೂ ಮದುವೆಯಾಗಿ ಕರೆದುಕೊಂಡು ಹೋಗುವರು. ಎಷ್ಟಾದರೂ ಅರಸರ ಮಗಳಲ್ವೇ ಎಂದು ಜಂಬ ಕೊಚ್ಚಿದಳು. ನನ್ನ ಮಗಳಿಗೆ ಯಾವ ತಿಂಡಿ ಕೊಟ್ಟರೂ ಚೆಂದ ಆಗುವುದಿಲ್ಲ ? 'ಅಯ್ಯೋ ಅಕ್ಕ ನೀವು ಒಂದು ಸಂಗತಿ ಮಾಡಿ. ಅಕ್ಕಿಯನ್ನು ತೊಳೆದು ಹಾಲಲ್ಲಿ ಬೇಯಿಸಿರಿ. ಅದರ ಗಂಜಿಯನ್ನು ನಿಮ್ಮ ಮಗಳಿಗೆ ಕೊಡಿ. ಅದರೆ ನೀರನ್ನು ನಿಮ್ಮ ಅರಸನ ಮೊದಲ ಹೆಂಡತಿ ಮಗಳಿಗೆ ಕೊಡಿ' ಎಂದಳು. ಯಾರು? ಈ ನೆರೆಕರೆ ಹೆಂಗಸು.

ಇವಳು ಹೀಗೆ ಒಂದು ಆರು ತಿಂಗಳು ಹೀಗೆ ಮಾಡಿರಬೇಕು. ಈ ಕುರ್ಡಿ ಅಲ್ಲಿಗೆ ಇನ್ನೂ ಸಣ್ಣ ಆದಳು. ಅರಸುನ ಮೊದಲ ಹೆಂಡತಿ ಮಗಳು ಇನ್ನೂ ಚೆಂದ ರೂಪದ ಹುಡುಗಿಯಾದಳು. ನೀನು ಇನ್ನೊಂದು ದಿನ ಅಕ್ಕನೊಂದಿಗೆ ಹೋಗು ಎಂದು ಹಟಮಾಡಿ ಕುರ್ಡಿಯನ್ನು ಕಳುಹಿಸಿದಳು. ಅವಳು ಒಬ್ಬಳೇ ಹೋಗುವುದಲ್ಲ. ಪ್ರಾಯಕ್ಕೆ ಬಂದ ಹೆಣ್ಣು ಮಗಳು ಅಲ್ಲವೇ. ಹತ್ತು ಹದಿನಾರು ವರ್ಷದ ಹೆಣ್ಣುಮಗಳನ್ನು ಒಬ್ಬಳನ್ನೇ ಕಾಡಿಗೆ ಕಳುಹಿಸುವುದು ಒಳ್ಳೆಯದಲ್ಲ. ಆ ದಿನ ಇವಳು ಕುರ್ಡಿಗೂ ಕಾಡುತೊಂಡೆಕಾಯಿ, ಹಸು ಹಾಲು

ಹಿಂಡಿ ಕುಡಿಯಲು ಕೊಟ್ಟಳು. ಸಂಜೆಗೆ ಮನೆಗೆ ಬಂದರು. ಅಮ್ಮನೊಂದಿಗೆ ನಡೆದ ಎಲ್ಲಾ ಕತೆಯನ್ನೂ ಬಿಡದೆ ಹೇಳಿದಳು. ಅಮ್ಮ ನಿನಗೆ ಗೊತ್ತಿದೆಯಾ? 'ಅಕ್ಕ ನಮ್ಮ ಕಬಿಲೆ ಹಸುವನ್ನು ಹಾಲು ಹಿಂಡಿ, ತೊಂಡೆಕಾಯನ್ನು ಜೊತೆಗೆ ಹಿಚುಕುವಳು. ನನಗೂ ಸ್ವಲ್ಪ ಕೊಟ್ಟಳು. ಅವಳಿಗೆ ಅನ್ನವೂ ಬೇಡ ಏನೂ ಬೇಡ? ಆ ದೂಪೆ ಹತ್ತಿರ ತುಂಬ ಮೆದು ಮಣ್ಣು ಇದೆ' ಎಂದು ನಡೆದದ್ದನ್ನೆಲ್ಲಾ ಹೇಳಿದಳು. ಹಾಗಾದರೆ 'ನಾಳೆ ನೀನು ಹೋಗುವಾಗ ಒಂದು ಕುಂಞ ಕತ್ತಿ ತೆಗೆದುಕೊಂಡು ಹೋಗು' ಹೀಗೆ ಅಮ್ಮ ಹೇಳಿದಳು. ಮಾರನೆ ದಿನ ಅಕ್ಕ 'ನೀನು ಬರುವುದು ಬೇಡವೆಂದರೂ ಹೋಗು'. ಆ ಕಾಡು ತೋಂಡೆಕಾಯಿಯ ಬಳ್ಳಿಯನ್ನು ಕೊಯ್ದು ಹಾಕು ಎಂದಳು ಅಮ್ಮ. ಮರುದಿನ ಕುರ್ದಿ ಜೊತೆಗೆ ಬಂದಳು. ಆ ದಿನ ಅವಳಿಗೆ ಇನ್ನೂ ಹೆಚ್ಚು ಕುಡಿಯಲು ಕೊಟ್ಟಳು. ಅವಳು ಈ ಕಾಡು ತೊಂಡೆಕಾಯಿ ಮತ್ತು ಹಾಲನ್ನು ಹಿಚುಕುವಾಗ ಈ ಬಳ್ಳಿಯ ಬುಡವನ್ನು ಕೊಯ್ದು ಬಿಟ್ಟಳು. ಅಕ್ಕನೊಂದಿಗೆ ಬೇಗ ಮನೆಗೆ ಹೋಗೋಣವೆಂದು ಹೇಳಿದಳು. ಆ ದಿನ ಇವಳಿಗೆ ಒಳ್ಳೆಯ ಊಟ, ಮಲಗಳು ಒಳ್ಳೆಯ ಹಾಸಿಗೆ, ಹೊದಿಕೆ ಕೊಟ್ಟಳು.

ಮರುದಿನ ಈ ಕುರ್ದಿ ಕಾಡಿಗೆ ಬರಲಿಲ್ಲ. ಬಾ ಎಂದು ಕರೆದರೂ ಬರಲಿಲ್ಲ. ನನಗೆ ಮುಳ್ಳು ಚುಚ್ಚುತ್ತದೆ ಬರುವುದಿಲ್ಲವೆಂದಳು. ಅವಳು ಅಲ್ಲಿ ಹೋಗಿ ನೋಡಿದ್ರೆ ಈ ಕಾಡುತೊಂಡೆಕಾಯಿ ಬಳ್ಳಿ ಪೂರ್ತಿ ಬಾಡಿದೆ. ಇದು ಆ ಕುರ್ದಿಯದ್ದೇ ಕೆಲಸ ಆಗಿರಬೇಕೆಂದು ತಿಳಿದಳು. ಹೀಗೆ ನನ್ನ ಭಾಗ್ಯವೇ ಹೋಯಿತೆಂದು ತಿಳಿದು ಅದರಲ್ಲಿದ್ದ ಕಾಯಿಗಳನ್ನು ಬಳ್ಳಿ ಒಣಗುವವರೆಗೂ ಕೊಯ್ದು ತಿಂದಳು. ಮನೆಗೆ ಬಂದಳು.

ಒಂದು ಊರಿನ ಅರಸು. ಅವನ ಹೆಂಡತಿಗೆ ಒಬ್ಬ ಮಗ ಹುಟ್ಟಿದ. ಆ ಮಗು ಮೀನಿನ ಆಕಾರದಲ್ಲಿತ್ತು. ಮೀನು ಒಂದು ತಿಂಗಳಾಗುವಾಗ ಸ್ವಲ್ಪ ದೊಡ್ಡದಾಯಿತು. ಅದನ್ನು ಮನೆ ಹತ್ತಿರದ ಕರೆಯಲ್ಲಿ ಹಾಕಿದ. ಈ ಅರಸು ದಿನಾ ಬೆಳಗ್ಗೆ ಎದ್ದು ಈ ಕರೆಗೆ ಮುಖ ತೊಳೆಯಲು ಬರುವುದು. ಒಂದು ದಿನ ಈ ಮೀನು 'ನನಗೆ ಹೆಣ್ಣು ಕೊಡುತ್ತೀಯಾ ಅಲ್ಲ ನಿನ್ನನ್ನು ತಿನ್ನಬೇಕಾ?' ಎಂದಿತು. ಹಾಗಾಗಿ ಆ ಊರಿನಲ್ಲಿದ್ದ ಎಲ್ಲಾ ಹೆಣ್ಣು ಮಕ್ಕಳನ್ನು ಕರೆಯ ಹತ್ತಿರ ಶೃಂಗಾರ ಮಾಡಿ ಬಿಡುವುದು. ಆ ಮೀನು ತಿಂದು ಮುಗಿಸುವುದು. ಹೀಗೆ ನಡೆದು ಆ ಊರಿನಲ್ಲ ಹೆಣ್ಣು ಮುಗಿಯಿತು. ಹಾಗೆ ಆ ಅರಸ ಬಂದು ಹೆಣ್ಣು ಕೇಳಿದ. ನನ್ನೊಂದಿಗೆ ಅಮ್ಮ ಇಲ್ಲದ ತಬ್ಬಲಿ ಮಗಳಿದ್ದಾಳೆ. ಅವಳನ್ನು ಮಗ ಮೀನುಕುಮಾರನಿಗೆ ಮದುವೆ ಮಾಡಲು ಕೇಳಿದ. ಈ ಅರಸ ಮಗಳನ್ನು ಮದುವೆ ಮಾಡಿಕೊಡಲು ಒಪ್ಪಿದ್ದಾನೆ. ಮದುವೆ ನಿಘಂಟು ಆಗಿದೆ. ಈ ವಿಷಯವನ್ನು ಕುರ್ದಿ ಅಕ್ಕನಿಗೆ ವಿವರವಾಗಿ ಹೇಳಿದಳು.

ಇವಳು ಆ ದಿನ ದನಗಳೆಲ್ಲ ಕಟ್ಟಿಹಾಕಿ 'ನಾಳೆಯಿಂದ ಮೇಲೆ ನಿಮ್ಮ ಚಾಕರಿ ಮಾಡಲು ನಾನಿಲ್ಲ' ಎಂದಳು. ಆಗ ದನಗಳು ಬೆರೆಬೆರೆ ಎಂದು ಕರೆದವು. ಆಗ ಆಕಾಶದಿಂದ ಅಶರೀರವಾಣಿ ಕರೆ ಕೇಳಿತು. 'ನಿನ್ನ ಅಮ್ಮನ ದೂಪೆಯಿಂದ ಎಡ ಭಾಗದಲ್ಲಿ ಈಶಾನ್ಯದಲ್ಲಿ ಒಂದು ನಾಗರ ಹುತ್ತ ಇದೆ. ಈ ಹುತ್ತದಲ್ಲಿ ಒಂದು ಸರ್ಪ ಪ್ರಾಣಸಂಕಟದಲ್ಲಿದೆ. ಆಹುತ್ತವನ್ನು ಮುರಿಯಬೇಕು. ನೀನು ಮುರಿದರೆ ಆ ಸರ್ಪದ ನೋವು ಒಡೆಯುತ್ತದೆ'. ಇದು ದೈವ ಕಾರ್ಯವೆಂದು ತಿಳಿದ ಅವಳು ಮೀನಿನ ಜೊತೆ ಸಾಯುವುದಕ್ಕಿಂತ ಹಾವಿನೊಂದಿಗೆ ಸಾಯುವುದು ಉತ್ತಮವೆಂದು ಆ ಸರ್ಪದ ಹತ್ತಿರ ಬಂದು ಹುತ್ತದ ಒಳಗೆ ಕೈ ಹಾಕುವಳು. ಈ ತಬ್ಬಲಿ ಮಗಳ ಕೈ ಸೋಂಕಿನಿಂದ ಆ ಸರ್ಪದ ನೋವು ಒಡೆದು ಗುಣವಾಯಿತು. ಆಗ ಆ ಸರ್ಪ 'ನೀನು ಏನಾಗಿ ಬಂದೆ ಮಗಳೇ' ಎಂದು ಕೇಳಿತು. ತನ್ನ ಕಷ್ಟವನ್ನು ಸರ್ಪಕ್ಕೆ ಹೇಳಿದಳು. ಅಯ್ಯೋ ಮಗಳೆ 'ನಿನ್ನನ್ನು ನಾನು ಕೊಲ್ಲುವುದಿಲ್ಲ. ನಿನಗೆ ಮೂರು ಕಲ್ಲು ಮಂತ್ರಿಸಿ ಕೊಡುತ್ತೇನೆ. ಇದನ್ನು ನಿನ್ನ ಉಡಿಯಲ್ಲಿ ಗಟ್ಟಿಯಾಗಿ ಕಟ್ಟಿಕೋ. ನಿನ್ನನ್ನು ಶೃಂಗಾರ ಮಾಡಿ ಬಾವಿಕಟ್ಟೆಗೆ

ಕರೆದುಕೊಂಡು ಹೋಗುವರು. ಬಾವಿ ಕಟ್ಟೆಯಲ್ಲಿ ದೀಪ ಉರಿಸಿ ನಿನ್ನನ್ನು ಬಿಟ್ಟು ಹೋಗುವರು. ಆಗ ಕತ್ತಲೆ ಸುಮಾರು ಒಂಬತ್ತುವರೆ ಗಂಟೆಗೆ ಆ ಮೀನು ಬರುತ್ತದೆ. ಬಂದಾಗ ಈ ಮಂತ್ರಾಕ್ಷತೆಯ ಕಲ್ಲನ್ನು ಗುರಿಯಿಟ್ಟು ಹೊಡಿ' ಎಂದು ಸರ್ಪ ಹೇಳಿತು.

ಸರ್ಪ ಹೇಳಿದಂತೆ ಎಲ್ಲವೂ ನಡೆದುವು. ಅವಳಲ್ಲಿ ಇರುವುದು ಮಂತ್ರಾಕ್ಷತೆಯ ಕಲ್ಲಲ್ಲ ? ಅವಳು ಹೇಗೆ ಹೊಡೆದರೂ ಆ ಕಲ್ಲು ಮೀನಿಗೆ ತಾಗುತ್ತದೆ. ಹೀಗೆ ಮೂರು ಬಾರಿ ಮೀನು ಬಂದಾಗ ಕಲ್ಲು ಎಸೆದಳು. ಮೀನು ಒಂದು ಸುಂದರ ಹುಡುಗನಾಗಿ ನೀರಿನಿಂದ ಹೊರ ಬಂದ. ಮರುದಿನ ಆ ಬಾವಿ ಕಟ್ಟೆಯಲ್ಲಿ ಮೀನುಕುಮಾರನೂ ಸೊಸೆಯೂ ಮಾತನಾಡುತ್ತಾ ಇದ್ದಾರೆ. ಅರಸನಿಗೆ ಇವರನ್ನು ನೋಡಿ ಸಂತೋಷವಾಯಿತು. ಅವರನ್ನು ಕರೆದುಕೊಂಡು ಬಂದು ಮನೆ ತುಂಬಿಸಿಕೊಂಡರು. ಮದುವೆಗೆ ಏರ್ಪಾಡು ಮಾಡಿದರು. ಧಾರೆಕಾರ್ಯಗಳನ್ನು ಮಾಡಿದರು. ಊರಿಗೆ ಡಂಗುರ ಸಾರಿದರು. ಈ ಹೆಣ್ಣು ಕೊಟ್ಟ ಅರಸನನ್ನೂ ಬರ ಹೇಳಿದರು. ಮದುವೆ ಶೇಷೋಪಚಾರ ಎಲ್ಲ ಕಳೆಯಿತು. ಹೆಣ್ಣು ಕೊಟ್ಟವರಿಗೆ ಉಡಿಗೊರೆ ನೀಡದರು. ಅವರೆಲ್ಲ ಮೆರೆಯುತ್ತಾ ಚೆನ್ನಾಗಿದ್ದಾರೆ. ಅಲ್ಲಿಗೆ ಕತೆ ಮುಗಿಯಿತು. [ಕಥಾ ನಿರೂಪಕ:ಲಿಂಗಪ್ಪಗೌಡ; ಉರುಂಡೆ; ಸ್ಥಳ:ಮನೆ; ಸಮಯ:ರಾತ್ರಿ 7ಗಂಟೆ; ವರ್ಷ–1991]

## ಅನುಬಂಧ 2 : ಸಾಂಸ್ಕೃತಿಕ ಪದಕೋಶ

### ಅ

ಅಂಕ್‌ಡೊಂಕ್ – ಓರೆಕೋರೆ, ವಕ್ರ, ನೇಗಿಲು
ಅಕ್ಕ್ – ಆದ್/ಆದು, ಆದೀತು, ಆಗಬಹುದು
ಅಕಸ್ಮತ್ –ಅಚಾನಕ್, ಅನಿರೀಕ್ಷಿತ, ಆಕಸ್ಮಿಕ, ಆ ಕೂಡಲೇ
ಅಕೇರಿಗೆ – ಅಂತಿಮವಾಗಿ, ಕಡೇಗೆ, ಕೊನೇಗೆ, ಮುಕ್ತಾಯಕ್ಕೆ
ಅರ್ಕಿಲ್ – ಬೇಸಗೆ ಕಾಲ, ಅರೆಗ್ಗಲ
ಅರ್ಕೆ – ಒಟ್ಟಾಗಿ ಹಿಡಿ
ಅಂಗ್‌ಡಿ – ಅಂಗಡಿ, ಮಾರಾಟ ಮಳಿಗೆ
ಅಂಗ್‌ಲ – ಅಂಗುಲ, ಉದ್ದವನ್ನು ಅಳೆಯುವ ಮಾಪನ.
ಅಂಗ – ಬಾಯಾರಿಕೆ(ಚಿಕ್ಕ ಮಕ್ಕಳು ನೀರು ಕೇಳುವಾಗ ಬಳಸುವ ಪದ)
ಅಂಗತನೆ – ಮೇಲ್ಮುಖವಾಗಿ ಮಲಗು ಅಥವಾ ಬೀಳು
ಅಂಗರಬಾಕ್‌ಡ – ಅಂಗರ ಬಾಕ್ಡ, ಒಂದು ಭೂತದ ಹೆಸರು.
ಅಂಗಿ – ಗಂಡಸರು ಧರಿಸುವ ವಸ್ತ್ರ, ಮೇಲು ಹೊದಿಕೆ
ಅಂಗಿಲೊ – ಉದ್ದವನ್ನು ಅಳೆಯುವ ಮಾಪನ
ಅಂಗ್ಡಿ – ಅಂಗಡಿ
ಅಗ್ಗ್‌ಟೆ – ಅಗ್ಗಿಷ್ಟಿಕೆ, ಚಳಿಗಾಲದಲ್ಲಿ ಬೆಂಕಿಯ ರಾಶಿ ಮಾಡುವುದು, ಬೆಂಕಿ ಕುಂಡ
ಅಗ್ತೆ – ಅಗೆ, ಅಗತ್ತೆ, ಅಗೆಯು, ತೋಟವನ್ನು ಅಗೆಯುವುದು.
ಅಜಕಳ – ಹಸನು ಮಾಡುವುದು, ಪ್ರಾಣಿಯನ್ನು ಮಾಂಸ ಮಾಡಿ ವಿಂಗಡಿಸುವುದು

ಅಜಲ – ಭೂತ ಕಟ್ಟುವವ, ನಲಿಕೆ ಜನಾಂಗ, ಅಜಲಾಯ

ಅಂಡ್ – ಅಂಜಿಕೊಂಡು, ತಾಗಿಕೊಂಡು, ತಾಗು, ಸೊಂಟದ ಹಿಂಭಾಗ, ಕುಂಡೆ(ತು)

ಅಂಡಟ್ಟೆ – ಮೊಂಟೆ, ಮರದ ಗಂಟೆ,

ಅಡಿನೋಡ್ – ಕೆಳಗೆ ನೋಡು

ಅಡ್ಪು – ಮುಚ್ಚು, ಅಡೆಪ್ಪು(ತು)

ಅದ್ – ಅದು, ಅವನು, ಅವಳು

ಅಂಬೆಲಿ – ಅಂಬಲಿ, ರಾಗಿಗಂಜಿ

ಅಪ್ರೂಪ – ಅಪೂರ್ವ, 'ಅಪರೂಪ' ಎಂಬ ಪ್ರಯೋಗವೂ ಇದೆ.

ಅಬ್ಬೆ – ಅಮ್ಮ, ಅಪ್ಪೆ(ತು)

ಅಯ್ಯೆ – ಅಮ್ಮ, ಅಜ್ಜಿ, ಹೆಂಗಸು

ಅರ್ಕಿಲ್ – ಬೇಸಿಗೆಕಾಲ, ಅರೆ+ಕಾಲ=ಅರೆಗಾಲ

ಅರ್ಸ್ – ಅರಸು, ರಾಜ

ಅವ್ವ – ತಾಯಿ, ಅಜ್ಜಿ, ಅಮ್ಮ

ಅಳ್ತ್ – ಅಳಿಯಿತು, ನಾಶವಾಯಿತು

ಅಳ್ದ್ – ಅಳತೆ ಮಾಡು, ನಾಶವಾಗು

ಆ

ಆಟಿಕುದ್ರುದು – ಆಟಿ ಕುಳಿತುಕೊಳ್ಳುವುದು, ಮಗಳು ಮದುವೆಯಾಗಿ ಆಟಿ ತಿಂಗಳಲ್ಲಿ ತವರುಮನೆಗೆ ಬಂದಿರುವುದು

ಆರಾದ್ರೆ ಮಳೆ – ಒಂದು ಮಳೆ ನಕ್ಷತ್ರ

ಆಕಿಲ್ಲೆ – ಆಗುವುದಿಲ್ಲ, ಆಗದು, ಆಕು+ಇಲ್ಲೆ=ಆಗುವುದು+ಇಲ್ಲ

ಆತ್ – ಆಯಿತು, ಮುಗಿಯಿತು

ಇ

ಇಕ್ಕ್ – ಬಡಿಸು, ಇಡು, ಹೊಡಿ

ಇಡ್ – ಇಡು, ಬಿಸಾಡು,

ಇಟ್ಟತ್ – ಬಿಸಾಡಿದನು, ಬಿಸಾಡಿದಳು, ಬಿಸಾಡಿತು

ಇಟ್ಕೊ – ಇರಿಸಿಕೊ

ಇಟ್ಬೊ – ಇರಿಸಿಕೊಂಡರು, ಬಿಸಾಡಿದರು

ಇಟ್ಬೋವು – ಇಟ್ಟೇವು, ಇಟ್ಟೆ+ಹೂ=ಇಟ್ಬೋವು ಎಂಬುದು ಒಂದು ಗಿಡದ ಹೆಸರು

ಇಣ್ಕ್ – ಇಣುಕು, ಬಗ್ಗಿ/ಬಾಗಿ ನೋಡು, ಅಡ್ಡದಲ್ಲಿ ನಿಂತು ನೋಡು

ಇತ್ತ್ – ಇತ್ತು

ಇತ್ತ್‌ಲೆ – ಇರಲಿಲ್ಲ

ಇಂದೆನಿ – ಇವರೇ, ರೀ, ಗಂಡನನ್ನು ಹೆಂಡತಿ ಕರೆಯುವ ಪದ

ಇದ್ದೊ – ಇದ್ದರು, ಇದ್ದವು, ಇದ್ದಿತು

ಇಲ್ಲೆ – ಇಲ್ಲ

ಇಲ್ಗಿಸ್ – ಇಳಿಸು, ಕೆಳಗಿಡು
ಇರ್ಲ್ – ರಾತ್ರಿ, ಇರುಳು, ನೆಡೀರ್ಲ್
ಇವ್‌ಕ್ಕೆ – ಇವರಿಗೆ, ಇವುಗಳಿಗೆ, ಗಂಡನನ್ನು ಕುರಿತು ಹೆಂಡತಿ ಹೇಳುವ ಪದ
ಇಸ್ – ಇಡು
ಇಸಿಕನಕ್ – ಇಟ್ಟುಕೊಳ್ಳಬಹುದು
ಇಸಿಕೊ – ಇಟ್ಟುಕೊಳ್ಳು, ಇರಿಸಿಕೊ
ಇಸಿತ್ – ಇಟ್ಟನು, ಇಟ್ಟಳು, ಇಟ್ಟಿತು,
ಇಸಿತ್ – ಹಸಿವೆಯಾಯಿತು
ಇಸಿದೊ – ಇಟ್ಟರು, ಇಟ್ಟವು

ಈ

ಈಸ್ – ಸವರು, ಹೊಟ್ಟೆ ಈಸ್–ಹೊಟ್ಟೆಯನ್ನು ಸವರು

ಉ

ಉಂಬ – ಊಟ ಮಾಡೋಣ
ಉಂಬಕೆ – ಊಟಮಾಡುವುದಕ್ಕೆ, ಉಣ್ಣುವುದಕ್ಕೆ
ಉಂಬಗಂಗ್ಳ – ಉಣ್ಣುವ ಬಟ್ಟಲು
ಉಗ್ಗೆ – ಅನ್ನ
ಉಜ್ಜಾಲ್‌ಲಿ ಒಚ್ಚ್ – ತೊಟ್ಟಿಲಲ್ಲಿ ತೂಗು
ಉಟ್ಟ್ – ಉಂಟು, ಇದೆ
ಉಡ್‌ಗ್‌ರೆ – ಉಡುಗೊರೆ, ಬಹುಮಾನ
ಉಡ್ಸ್ – ಉಡಿಸು
ಉಣ್ – ಊಟಮಾಡು, ಉಣ್ಣು, ತಿನ್–ತಿನ್ನು
ಉದ್ದ – ಅಳತೆ ಮಾಪನ, ಎತ್ತರ
ಉದ್ದ ನೋಡ್ – ಮೇಲೆ ನೋಡು, ಎತ್ತರ ನೋಡು
ಉಬರ್ – ಉಬ್ಬರ, ಮಳೆಗಾಲದಲ್ಲಿ ನೀರು ಉಕ್ಕೇರಿದಾಗ ನದಿಯಿಂದ ಮೀನುಗಳು ನೀರಿನ ಇತರ ಮೂಲಗಳ ಮೂಲಕ ಮೇಲಕ್ಕೆ ಹತ್ತುವುದು, ಉಬ್ಬರ–ಇಳ್ತ
ಉಮಿ – ಬತ್ತದ ಸಿಪ್ಪೆ, ಹೊಟ್ಟು
ಉಮೇದ್ – ಆಸಕ್ತಿ
ಉರ್ಗ್ – ಊದು, ಬೆಂಕಿ ಉರಿಸಲು ಊದು; ಹಾರಿಸು
ಉರ್ಗಿತ್ – ಊದಿದನು, ಹಾರಿಸಿದನು,
ಉರ್ಗ್‌ಲ್ – ಮರದ ಗೇಟ್ (ಉರುವೆಲ್ – ತುಳು)
ಉಲ್ಲಿ – ಸ್ತ್ರೀ ಜನನಾಂಗ ನಾಯಿ ಉಲ್ಲಿ, ಎಮ್ಮೆ ಉಲ್ಲಿ
ಉಃಸಾರ್ – ಜಾಣ

ಊ

ಊರ್‌ಗೌಡ – ಊರಿನ ಯಜಮಾನ

ಊರ್ದಕೋಲ್ – ಆಧಾರ ಕೋಲು, ಹೂತ ಕೋಲ್

ಎ

ಎತ್ತ್ – ಎತ್ತು, ಹೋರಿ

ಎತ್ತಿತ್ – ತಲುಪಿತು, ಮುಟ್ಟಿದನು,

ಎದ್ದ್‌ರ್ – ಎದ್ದೇಳು, ಎದ್ದು ನಿಲ್ಲು

ಎಲಿ – ಇಲಿ

ಎಲೆ – ಎಲೆ, ವೀಳ್ಯದ ಎಲೆ

ಎಲೆಬೊಳ್ಳಿ – ವೀಳ್ಯದ ಎಲೆಯ ಬಳ್ಳಿ

ಎಲ್ಕಿತ್ – ಎದ್ದಿತು

ಎಲ್ಕಿಸ್ – ಎಬ್ಬಿಸು

ಎಸ್‌ಂಡ್ – ಏಡಿ

ಎಳ್ಳ್ – ಅಗೆಯು

ಎಳ್ತ್/ಎಳತ್ತ್ – ಎಳೆಯದು, ಬೆಳೆಯುತ್ತಿರುವುದು

ಎಳಿ – ಎಳೆಯು

ಎಳ್ಳ್ – ಎಬ್ಬಿಸು, ಎಳ್ಳು ಹೆಸರಿನ ಎಣ್ಣೆ ಕಾಳು

ಒ

ಒಂದು ಕವುಳೆ ಎಲೆ – 20 ಎಲೆಗಳ ಕಟ್ಟು, ಒಂದು ಸೂಡಿಯ ನಾಲ್ಕನೆ ಒಂದು ಭಾಗ

ಒಗ್ಗು/ಒಗ್ಗ್ – ಗೊಬ್ಬರ, ಮೆದು

ಒಟ್ಟ್ – ಒಡ್ಡು, ಒಟ್ಟು ಮಾಡು, ಸೇರಿಸು;

ಒಟ್ಟೆ – ತೂತು;

ಒಡ್ಡ್ – ಒಟ್ಟು ಮಾಡು, ಮಳೆ ಒಡ್ಡ್‌ಟ್ಟು.

ಒಡ್ಡುಟ್ಟು – ಒಡೆದಿದೆ; ಒಡೆದ

ಒರ್ಲ್ – ನೆಲಗುಳಿ, ನೆಲಕ್ಕುರಿ(ತು), ಬತ್ತ ಕುಟ್ಟುವ ಕಲ್ಲಿನ ಗುಳಿ

ಒಲ್ಲಿ – ಹೊದಿಕೆ;

ಒಲೆ ಬೆಂಡೆ – ಒಲೆಯ ಮೂಲೆ

ಒಳ್ಸ್ – ಉಳಿಸು

ಒಳ್ಳಿ – ಹೊದಿಕೆ

ಒಳೊ – ಇದ್ದಾರೆ, ಇದ್ದಾವೆ; ಅಪ್ಪ ಮನೆಲಿ ಒಳೊ(ಪ್ರ)

ಒಳ್ಳೊ – ಒಳ್ಳೆಯ, ತುಂಬಾ, ಒಳ್ಳೊ ಜನ(ಪ್ರ)

ಓ

ಓಂಗು – ಲಾಭಕ್ಕಾಗಿ ಹಿಂಬಾಲಿಸು

ಓಂತಿ – ಓತಿ, ಓತಿಕೇತ;

ಓಡ್ತ್ – ಓಡಿತು

ಓಲ್ಪ್ – ಹಿಂಬಾಲಿಸು, ಹಿಂದಿನಿಂದ ಬರು, ಇಂವ ನನ್ನ ಹಿಂದೆಂದ ಓಲ್ಪಿಕೊಂಡ್ ಬಂದದೆ,

ಕ

ಕಂಕಣಿ – ಬೆನ್ನು ಮೇಲೆ, ಮುಖ ಕೆಳಗೆ; ಕವುಚು, ಮುಖ ಕೆಳಗೆ ಮಾಡಿ ಮಲಗು

ಕಂಡಿ – ಕಿಟಕಿ

ಕಂಡ್ರಕುಟ್ಟಿ – ಹಾದರಕ್ಕೆ ಹುಟ್ಟಿದ,ಬೈಗುಳ; ಕಂಡೋರಿಗೆ ಹುಟ್ಟಿದವ, ಕಂಡೋರ ಕುಟ್ಟಿ, ಕುಟ್ಟಿ ಮಲಯಾಳಿ ಪದ. ಕುಟ್ಟಿ ಎಂದರೆ ಮಗು

ಕಂತಿಸ್ – ಮುಳುಗಿಸು, ಅದ್ದು, ಒದ್ದೆ ಮಾಡು

ಕಂತ್ರಿ – ಕಂಟ್ರಿ; ಕಂತ್ರಿನಾಯಿ

ಕಂತ್ರಾಟ್ – ಕಾಂಟ್ರೆಕ್ಟ್; ತೋಟದ ಅಗತ್ತೆ 'ಕಂತ್ರಾಟ್' ಕೊಟ್ಟಿರುವುದು.

ಕಂಪರ – ಕಂಕನಿ, ಕವುಚಿ ಮಲಗು, ಕಪ್ಪರ(ತು) ಹೊಟ್ಟೆ ಕೆಳಗೆ ಬೆನ್ನು ಮೇಲೆ ಮಾಡಿ ಮಲಗುವುದು

ಕಾಂಬ – ಇನ್ನೊಮ್ಮೆ ಸಿಗೋಣ, ಕಾಣುವ, ಕಾಣು, ಸಿಗೋಣ,

ಕಂಬ್ಳಿ – ಕಂಬಳಿ; ಮೇಲು ಹೊದಿಕೆ

ಕಡ್ಡೆ – ಕಡವೆ; ಕಡಮ್ಮ(ತು)

ಕಡ್ಕಲ್ಲ್ – ಕಡೆಯುವ ಕಲ್ಲು, ರುಬ್ಬುವ ಕಲ್ಲು, ಅರೆಯುವ ಕಲ್ಲು;

ಕಬೆ – ಕಂಬ; ಚಪ್ಪರದ ಕಂಬ; ಎಗೆ(ತು) ಕವಚವಿರುವ ಮರ

ಕಬ್‌ಲ್ಜಿ ಹಸ್ – ಕಪಿಲೆ ಹಸು

ಕರ್‌ಬುಡ್ – ಹಾಲು ಕರೆಯುವುದು;

ಕರ್‌ಬುಡ್ದು – ಹಾಲು ಕರೆಯುವುದು, ಹಾಲು ಕರೆಯಲು ಕರುಬಿಡುವುದು

ಕರಿ – ಕರೆಯು; ಕಪ್ಪು

ಕಾಗಡೆ – ಕೆಳಗಡೆ, ಕೆಳಗಿನ, ಕೆಳಭಾಗ

ಕಾಂಬಾಕನ – ಕಾಣಿಸುವಾಗ, ಸಿಕ್ಕಾಗ, ಸಿಗುವಾಗ, ಮುಖತಃ ಭೇಟಿಯಾದಾಗ

ಕಾಂಬೊದ್ – ಕಾಣುವುದು; ಕಾಣಸಿಗುವುದು

ಕಾಂಬೊದ್ಲೆ – ಕಾಣುವುದಿಲ್ಲ; ಕಾಣಲು ಸಿಗುವುದಿಲ್ಲ

ಕಾಸ್ – ಕಾಯಿ, ಬಿಸಿಮಾಡು, ಹಣ

ಕಿಂಕ್‌ಣಿಕೆ ಬೆರ್ಲ್ – ಕಿರುಬೆರಳು;

ಕಿಜ್ಜಿ – ಬೆಂಕಿ;

ಕಿಳ್ಳಿ – ಹಾಳೆಯಿಂದ ಮಾಡಿದ ಪಾತ್ರೆ, ಹಾಳೆಯ ಎರಡು ತುದಿಗಳನ್ನು ಕಟ್ಟಿದಾಗ 'ಕಿಳ್ಳಿ' ಆಗುತ್ತದೆ. ತೋಟಕ್ಕೆ ನೀರು ಹಾಯಿಸಲು ಕಿಳ್ಳಿ ಉಪಯೋಗ;

ಕುಂಞ – ಸಣ್ಣ; 'ಕುಂಞ' ಕತ್ತಿ

ಕುಂಬ್‌ಮರ – ಒಣಗಿ ಹಾಳಾದ ಮರ, ತ್ರುಟಿತ, ಸವೆದ, ಕೊಳೆತ;

ಕುಕ್ಕೆ – ಬುಟ್ಟಿ, ಹೆಡಗೆ

ಕುಟ್ಟೆ – ಕುಂಬು, ಕೊಳೆತ

ಕುಟ್ಟೆತೆಗಿ – ನಾಶ ಮಾಡಿ

ಕುಡಂಗೆ –ಕೊಡಂಗೆ(ತು), ಗಂಡಸರ ಕಿವಿಯ ಆಭರಣ

ಕುಡಿಯಕೆ ಆತ್ – ಬಾಯಾರಿಕೆ ಆಯಿತು

ಕುಡ್ಪ್ – ಕೊಡಹು, ಗಂಜಿ ಬಸಿಯುವ ಬಿದಿರಿನ ಅಥವಾ ಬೆತ್ತದ ತಟ್ಟೆಯಾಕಾರದ ಪಾತ್ರೆ;

ಕುಡೆ – ಇಲಿಯ ವಾಸಸ್ಥಳ, ಬಿಲ, ಮಾಟೆ(ತು)

ಕುತ್ರಿ – ಪುಣುಗು ಬೆಕ್ಕು, ಪುರುಂಗು(ತು)

ಕುದ್ಕ – ನರಿ

ಕುದ್ದ್‌ರ್ – ಕುಳಿತುಕೋ, ಕೂತ್ಕೋ, ಕೂರ್

ಕುದ್ದತ್ – ಕುಳಿತನು, ಕುಳಿತಳು, ಕುಳಿತಿತು

ಕುದ್ದು – ಸ್ವತಃ, ಮುಖತಃ

ಕುಪ್ಳ – ಕೆಂಬೂತ, ಕುಪ್ಪುಲು(ತು)

ಕುರೆ – ಮಂಗ, ಕೋತಿ

ಕುರ್ಸ್ – ಕುರ್ಚಿ

ಕೂಗ್ – ಅಳು, ಕರೆಯು

ಕೂರ್ – ಕುಳಿತುಕೋ, ಕುದ್ದರ್

ಕೆಂಪ – ಕಾಡುಕುರಿ, ಕೆಮ್ಮ(ತು)

ಕತ್ತಿ – ಕುಡುಗೋಲು,

ಕೆತ್ತೆ – ಸಿಪ್ಪೆ, ತೊಗಟೆ

ಕೆನಿ – ಉಪಾಯ, ಜಾಣತನ

ಕೆಪ್ಪಟೆ – ಕೆನ್ನೆ

ಕೆಬಿ – ಕಿವಿ

ಕೇಡ್ – ಕೆಡುಕು, ಕೆಟ್ಟ, ಕೊಳೆತ, ಹಾಳಾದ, ಕಪ್ಪಾದ

ಕೇಡ – ಕೆಟ್ಟವ

ಕೊಂಕಣಿ ದಂಟ್ – ಕೊದಂಟಿ, ದೊಣ್ಣೆ ಗಾ:ಕೊಂಕಣಿ ಎರ್ಮೆಗ್ ಕೊದಂಟಿ ಮರ್ದ್(ತು)

ಕೊಂಬಚೇಳ್ – ಚೇಳು

ಕೊಟ್ಟನೆ – ಕೊಡುತ್ತೇನೆ

ಕೊಟ್ಟಿಯಾ – ಕೊಡುತ್ತೀಯಾ

ಕೊಟ್ಟ್ – ಗುದ್ದಲಿ, ಹಾರೆ

ಕೊಟಗೆ – ಕೊಠಡಿ, ಕೊಟ್ಟಿಗೆ

ಕೊಡಿ – ತುದಿ, ಕೊನೆ ಪ್ರ:ಕೊಡಿ ಎಲೆ(ತುದಿ ಎಲೆ)

ಕೊಣ್ – ಕೊಳ್ಳು, ಗಾಯ, ಕೊಂಡುಂಡು(ತು)–ಗಾಯವಾಯಿತು

ಕೊಣಿ – ಕುಣಿ

ಕೊತ್ತಿ – ಬೆಕ್ಕು

ಕೊದಂಟಿ – ದೊಣ್ಣೆ, ಮರದ ಕೋಲು, ದಂಟು, ದಿಂಡು

ಕೊಪ್ರಿಕಾಯಿ – ಕೊಬ್ಬರಿ, ಕೊಪ್ಪರೊ(ತು)
ಕೊಪ್ರಿ – ಕೊಪ್ಪರಿಗೆ
ಕೋಮನ – ಲಂಗೋಟಿ
ಕೊಂಬಕಾಲ್ – ಹೆಬ್ಬೆರಳು, ಡೆಂಜಿದ ಕೊಂಬಕಾರ್(ತು)–ಏಡಿಯ ಹೆಬ್ಬೆರಳು
ಕೊರಂಟ್ – ಗೊರಟು, ಬೀಜ
ಕೋಸಿಕನ್ತ್ – ಸಿಕ್ಕಿಕೊಂಡಿತು
ಕೈದಾರೆ ಮಾಡು – ಕೈಪತ್ತಾವುನೆ(ತು)–ಕೈ ಹಿಡಿಸಿ ಮದುವೆ, ದಾರೆ ಎರೆದು ಮದುವೆ

ಗ

ಗಂಜಿ – ಅಕ್ಕಿಯಿಂದ ಬೇಯಿಸಿದ ತೆಲಿ(ನೀರು) ಇರುವ ಅನ್ನ
ಗಡ – ಅಂತೆ, ಹಾಗೆ
ಗದ್ದೆಗೋರ್ – ಗದ್ದೆ ಕೋರು, ಬೆದೆಗೆ ತಯಾರು ಮಾಡು, ಬಿತ್ತನೆಗೆ ತಯಾರು ಮಾಡುವುದು
ಗದ್ದೆಪುಣಿ – ಗದ್ದೆಯ ಬದು, ಪುಣಿ(ತು)–ಹುಣಿ
ಗಿಣ – ಗಿಳಿ
ಗುಂಡಿ – ಹೊಂಡ, ಆಳವಿರುವ ಜಾಗ
ಗುಡಗೆ – ಗುಡ್ಗೆ, ಗುಡಿ, ಮುಸುಕು
ಗುಳಿ – ಹೊಂಡ
ಗೂಡೆ – ಹುಡುಗಿ
ಗೆಂದಗೆಣ – ಕೆಂಪು ಗಿಡುಗ, ಗಿಡ್ಗ, ಹದ್ದು
ಗೆಲ್ಸ್ – ಗೆಣಸು
ಗೊಬ್ರದ ಗುಡ್ಡೆ – ಗೊಬ್ಬರದ ರಾಶಿ
ಗೋಂಟೆಕಾಯಿ – ಕಾಡ್ ತೊಂಡೆಕಾಯಿ
ಗೋರ್ – ಅನುಕರಣಾ ಅವ್ಯಯ ಪದ, ಎತ್ತಿ ಕುಡಿ, ಬಾಚಿಕೊಕೋ, ಒಟ್ಟು ಸೇರು
ಗೋಷ್ಠಿಗೆ – ಗೋಚರ,ಗೋಷ್ಠಿಗೆ ಆತ್ಲೆ
ಗೈಪು – ಪದಾರ್ಥ, ಮಾಂಸಾಹಾರಿ ಅಥವಾ ಸಸ್ಯಾಹಾರಿ ಸಾರು, ಸಾಂಬಾರು ಇತ್ಯಾದಿ
ಗ್ಯಾನ – ಜ್ಞಾನ, ನೆನಪು

ಚ

ಚವ್ಳಿ – ಕೆಂಜಿಗ, ಕೆಂಪಿರುವೆ
ಚಿಟ್ಟೆಕ್ಕಿ – ಚಿಟ್ಟೆ ಹಕ್ಕಿ
ಚಿರ್ಂಬ್ – ಹಿಸುಕು, ಹೊಸಕು, ಪೊರ್ಲ್ ಚಿರ್ಂಬಿ – ಚೆನ್ನಾಗಿ ಹಿಚುಕು
ಚರ್ಕಿಕೊ – ಎತ್ತಿಕೊಳ್ಳು
ಚಾಲ್ಯ – ಜೇಡ, ನೇಯ್ಗೆಯವ, ಶಾಲಿಯ

ಚಾಳೆ – ತೆಂಗಿನ ಮರ
ಚಿಂಟೆ – ಚಿಟ್ಟೆ/ತಿಟ್ಟೆ/ಹಿಟ್ಟೆ(ತು), ಜಗಲಿ, ಬದಿ, ಮಣ್ಣಿನ ಚಿಂಟೆ
ಚಿವ್‌ಂಟ್ – ಚಿವುಟು,ಚಿವ್‌ಂಟಿ ಇಸ್
ಚೆಂಡಿ – ಒದ್ದೆ, ಹಸಿ, ಚೆಂಡಿ ಬಟ್ಟೆ
ಚೆಂಡೆ – ಒಂದು ಜಾತಿ ಮುಳು,ಚೆಂಡೆ ಬಲ್ಲೆ(ಪ್ರ), ಒಂದು ಚಾತಿಯ ವಾದ್ಯ, ಯಕ್ಷಗಾನದಲ್ಲಿ ಬಳಸುವ ಚೆಂಡೆ
ಚೆನ್ನನಾಯಿ – ಕೆನನಾಯಿ, ತೋಳ
ಚುರ್ – ಚುರಿ, ಪೋಣಿಸು, ಸುರಿ
ಚುರ್ಕೊ – ತುಂಬಿಸಿಕೋ
ಚೊಂಟೆ – ಏತ, ಚೊಟ್ಟೆ
ಚೊಂಬು – ತಂಬಿಗೆ, ಬಿಂದಿಗೆ
ಚೋಂಪ್ – ಎಸೆ, ಚೆಲ್ಲು, ಸುರಿ
ಚೋಲಿ – ತೊಗಲು, ಚರ್ಮ
ಚೋಳ್ – ಕೆಸರು, ಚೋರ್(ತು)
ಚೊಳ್ಳು – ತೊಳ್ಳ್(ತು)–ಸಿಪ್ಪೆ ತೆಗೆ

## ಜ

ಜಬ್ಬಿ ಜಬ್ಬಿ – ಕಚ್ಚಿ ಕಚ್ಚಿ(ದ್ವಿ)
ಜಬ್ಬು – ಕಚ್ಚು
ಜಾಲ್ – ಅಂಗಳ
ಜಾಸ್ತಿ – ಹೆಚ್ಚು
ಜಿವ್‌ಂ ಟ್ – ಚಿವುಟು, ಚುಚ್ಚು
ಜಿಬ್ರಡಿಕೆ – ಜಿಬ್ಬು ಅಡಿಕೆ
ಜುವ್ವ – ಜೀವ
ಜೋಬು – ಜೇಬು, ಜೋಪು(ತು)

## ತ

ತಂಬ – ತಾಂಬ, ತೆಗೆದುಕೊಂಡು ಬಾ
ತಡಿ – ನಿಲ್ಲು, ತಡೆ, ತಡಿಯಕೆ ಬೊತ್ತ್(ತಡೆಯಲಾಗದು)
ತಡ್ಮೆ – ಬೇಲಿ ದಾಟುವುದಕ್ಕೆ ಇರುವಜಾಗ, ಅಡಮ್ಮೆ–ತಡಮ್ಮೆ–ಸಡಮ್ಮೆ ಹಡಮ್ಮೆ(ತು)
ತನ್ನ್ಯಾನ – ತಂಗಳು ಅನ್ನ
ತಬ್ಬ್‌ಲಿ – ತಬ್ಬಲಿ, ಯಾರು ಇಲ್ಲದ ತಬ್ಬ್‌ಲಿ, ತಬ್ಬೊರಿ/ತಬ್ರಿ – ತಬ್ಬಲಿ
ತಾತ್ – ತಂದ, ತಂದನು, ತಂದಳು, ತಂದಿತು
ತಾಂವ – ತರುತ್ತಾನೆ

ತಾಂವೆ – ತತ್ತೇನೆ
ತಾಧು – ತೆಗೆದುಕೊಂಡು ಬರುವುದು
ತಾಪತ್ರೆ – ತಾಪತ್ರಯ, ತೊಂದರೆ
ತಿಂಗ – ತಿಂಗಳು, ತಿಂಗಳು ಬೆಳಕು
ತಿಂಬಕೆ – ತಿನ್ನುವುದಕ್ಕೆ
ತಿಂಬೊದ್ – ತಿನ್ನುವುದು
ತಿನ್ಸ್ – ತಿನ್ನಿಸು
ತಿಳ್ಕಂಬಕೆ – ತಿಳಿದುಕೊಳ್ಳುವುದಕ್ಕೆ
ತೀನ್ತ್ – ತಿಂದನು, ತಿಂದಳು, ತಿಂದಿತು
ತೀರ್ತ್ – ತೀರಿ ಹೋದ, ಮುಗಿಯಿತು, ಸತ್ತನು
ತೂಂಬ್ – ನೀರು ಹೋಗುವ ಕೊಳವೆ, ಪೈಪು, ಚೂಂಬ್/ಸೂಂಬು(ತು)
ತೂರ್ – ಮಲವಿಸರ್ಜನೆ ಮಾಡು, ಸೋರು
ತೆನಸ್ – ತಿನಿಸು, ಆಹಾರ
ತೆಳಿ – ಗಂಜಿ ತೆಳಿ, ಬೇಯಿಸಿದ ಅನ್ನದ ನೀರು
ತೊಪ್ಪ್ – ತಪ್ಪು, ಗುರಿ ತಪ್ಪು, ತಾಗದಿರು
ತೊಪ್ಪೆ – ಸಿಪ್ಪೆ
ತೊರ್ಸ್ – ತುರಿಸು
ತೋಟೆ ಹಾಕ್ – ಮೀನು ಹಿಡಿಯಲು ಹಾಕುವ ಬಾಂಬ್
ತೋರ್ಸ್ – ತೋರಿಸು
ತೋರ – ದಪ್ಪ

ದ

ದರ್ಗ್ – ಹುಲ್ಲು, ತರಗೆಲೆ, ತೆಳ್ಳಗೆ
ದಳಿ – ದರಿ, ಮನೆಯ ಮುಂಬಾಗದ ಕಿಟಕಿ
ದಾರಂದ – ಮನೆಯ ಮುಖದ್ವಾರದ ಮೇಲ್ಭಾಗ, ಬಾಗಿಲಿನ ಚೌಕಟ್ಟು
ದಿಕ್ಕ – ದಿಕ್ಕು ಇಲ್ಲದವ, ಮೇರ ಜನಾಂಗದ ಗಂಡು, ಹರಿಜನ, ಹೊಲೆಯ
ದಿಕ್ಕಾಳ್ತಿ – ದಿಕ್ಕಿಲ್ಲದವಳು, ಮೇರ ಜನಾಂಗದ ಹೆಣ್ಣು
ದೂಪೆ – ಗೋರಿ, ದೂಪೆ ಹಕ್ಕಲೆ–ಗೋರಿ ಹತ್ತಿರ, ಸತ್ತವರನ್ನು ಸುಟ್ಟ ಜಾಗದಲ್ಲಿ ಕಟ್ಟುವ ಕಲ್ಲಿನ ಮನೆ, ಒಂದು ಬೈಗುಳ
ದೊಡ್ಡಿತ್ – ದೊಡ್ಡದು
ದೊರ್ಗ್ – ದಪ್ಪ, ದೊರಗು

ನ

ನಡ್‌ವನ – ನಡುವಿನ, ನೆಡ್ವನ, ಮಧ್ಯಮ
ನಡ್ತ್ – ನಡೆಯಿತು, ನಡೆದುಕೊಂಡು ಹೋದ
ನಿತ್ತ – ನಿಂತ, ಎದ್ದುನಿಲ್ಲು
ನಿಮುರ್ – ಕಾಯು, ತಯಾರಾಗು,ಸಾರು, ಹೊಡಿಯಕೆ ನಿಮುರ್–ಹೊಡೆಯುವುದಕ್ಕೆ ಕಾಯು

ನಿಲ್ಗ್ – ಮಲಗು, ನಿದ್ದೆಮಾಡು
ನೀರ್‌ತಲ್ತ್ – ನೀರು ಚಿಮುಕಿಸು, ನೀರಿನ ಹನಿ ಹಾಕು
ನೀರಡಿ – ಬಾವಿ, ಬಚ್ಚಲು ಮನೆ
ನುಚ್ಚಕ್ಕಿ – ಅರ್ಧ ತುಂಡಾದ ಅಕ್ಕಿ, ಕಡ್ಡಿಯಕ್ಕಿ, ಕಡ್ಯೆರಿ(ತು)
ನೂಂಕ್ – ದೂಡು, ನೂಕು
ನಟ್ಟಿ – ತರಕಾರಿ, ನಟ್ಟಿಕಾಯಿ(ತು)
ನೆಟ್ಟಿ – ಬೇಸಾಯ, ಲಟಿಕೆ ತೆಗೆಯುವುದು
ನೆಳ – ನೊಣ

## ಪ

ಪಣೆ – ತಾಳೆಮರದಂತೆ ಒಂದು ಜಾತಿ
ಪಣೆಕೊಡೆ – ಪಣೆ ಮರದ ಗೊರಬೆ
ಪದ್ರಾಡ್ – ಹೇಳದೆ ಓಡು
ಪರಂಕ್ – ಪರಚು, ಗೀಚು, ಗೀರು
ಪಳ್ಳ – ನೀರಿನ ಹೊಂಡ, ಮಳೆಗಾಲದಲ್ಲಿ ನೀರು ನಿಲ್ಲುವ ಸ್ಥಳ, ಹಳ್ಳ
ಪಾರ್ತನ – ಪಾಡ್ದನ
ಪಾರೆ – ಕಪ್ಪು ಕಲ್ಲು, ಬಂಡೆಕಲ್ಲು , ಬಂಡೆ
ಪಿಂಚು – ಕಿವುಚು, ಚಿರುಂಬು, ಪಿನ್ಚು, ಹಿಚುಕು/ಹಿಸುಕು
ಪಿಜಿನ್ – ಇರುವೆ
ಪಿಳ್ಳಿ/ಪುಳ್ಳಿ – ಮೊಮ್ಮಗ
ಪೀಂಕಿಸು – ಜಾರಿಸು, ತೆಗೆಸು
ಪುಕ್ಕ್‌ಳಿ – ಕುಂಡೆ, ತಿಕ, ಮೂಕೂಲಿ(ತು), ಹುಕ್ಕ್‌ಳಿ
ಪೂರಾ – ಎಲ್ಲಾ
ಪೆರ್ಚ್ – ಭಯ, ಪೆರ್ಚ್‌ಕಟ್ಟ್–ಹುಚ್ಚು ಕಟ್ಟು
ಪೆಟ್ಟ್ – ಏಟು, ಹೊಡೆ
ಪೊಟ್ಟ್ – ಹೊಟ್ಟು, ಸುಳ್ಳು, ತಿರುಳಿಲ್ಲದ್ದು
ಪೊಟ್ಯ – ಪತ್ಯ
ಪೊಡಿ – ಹುಡಿ
ಪೆದ್ದೋಳ್ತಿ – ಹೆರಿಗೆ ಆದ ಹೆಂಗಸು
ಪೊರ್ಲ್ – ಚಂದ, ಚೆಲುವಾದ
ಪೊಲಿ – ಪೆಟ್ಟು, ಸಾಲ
ಪೊಲ್ಲಿ – ಹಲ್ಲಿ
ಪೊಳ್ಸ್ – ಅದೃಷ್ಟ, ಪೊಲ್ಸು(ತು)
ಪೊಯ್ಯೆ – ಹೊಯ್ಗೆ
ಪೋಯಿ – ಹೋಗೋಣ
ಪೌರುಕೊಚ್ಚ್ – ಅಹಂಕಾರ ಮಾತಾಡು

ಪ್ರೇಜನ – ಪ್ರಯೋಜನ

ಬ

ಬಂಗ – ಕಷ್ಟ,ಬಂಜ(ತು)
ಬಗಾಲ್ – ಇಬ್ಭಾಗವಾಗು, ಬೈತಲೆ
ಬಡ್ಜಿ – ಒಮ್ಮೆಗೆ ಓಡು, ಓಟ
ಬದಿ – ನಗನಾಣ್ಯ, ಬಂಗಾರ ಇರುವ ಜಾಗ, ಬೊದಿ ಬಂಗಾರ–ವರದಕ್ಷಿಣೆ
ಬನ್ನೆ – ಬರುತ್ತೇನೆ
ಬರೆಂಗೋಲ್ – ಕೆಂಪಾಗಿ ಕಾದ ಕಬ್ಬಿಣದ ಕೋಲು, ಕಾಯಿಸಿಡುವ ಕೋಲು
ಬರೊಕಡ – ಬರೋಕು+ಗಡ=ಬರಬೇಕಂತೆ
ಬರ್‌ಂಬ್ – ಕೈಗಳಲ್ಲಿ ಗೋಚು, ಎರಡೂ ಕೈಯಲ್ಲಿ ಗೋರಿ ತೆಗೆದುಕೋ
ಬರ್ಲ್ವೆ – ಸೊರಗು
ಬಲ್ಲೆ – ದಟ್ಟವಾದ ಕಾಡು, ದೊಡ್ಡ ಪೊದರು, ತಿಳಿ(ಕ)
ಬಾಳ – ಬಹಳ
ಬಳ್ಸ – ಬಡಿಸು
ಬಾಂಜಾರ್ – ಗುಹೆ, ದೊಡ್ಡ ಮಾಟೆ
ಬಾಂವ – ಬರುವವ
ಬಾಕಿಲ್ಲೆ – ಬರಲಿಕ್ಕಿಲ್ಲ
ಬಾಕೆ – ಬರಲಿಕ್ಕೆ
ಬಾತ್ – ಬಂದನು, ಬಂದಳು, ಬಂದಿತು
ಬಾತಿದ್ದೊ – ಬರುತ್ತಿದ್ದರು
ಬಾತ್ಲೆ – ಬರಲಿಲ್ಲ
ಬಾದು – ಬರುವ
ಬಾದ್ಲೆ – ಬಾದು+ಇಲ್ಲೆ=ಬರುವುದಿಲ್ಲ
ಬಾನೆ – ಬಾರೋ/ಬಾರೆ – ಹುಡುಗ ಅಥವಾ ಹುಡುಗಿಯನ್ನು ಏಕವಚನದಲ್ಲಿ ಕರೆಯುವುದು
ಬಾಮಿ – ಬಾವಿ
ಬಾಲ ಹಿಟ್ಟ್ – ಬಾಲವನ್ನು ತುರುಕಿಸು
ಬಿತ್ತ್ – ಬೀಜ
ಬಿದ್ದುಟ್ಟ್ – ಬಿದ್ದಿದ್ದಾನೆ, ಬಿದ್ದಿದ್ದಾಳೆ, ಬಿದ್ದಿದೆ
ಬೀಜದ ಎಣ್ಣೆ – ಗೇರುಬೀಜದ ಎಣ್ಣೆ
ಬೀತ್ – ಬೀಳು
ಬುಟ್ಟ್ – ಬಿಡು
ಬುಟ್ಟತ್ – ಬಿಟ್ಟನು, ಬಿಟ್ಟಳು, ಬಿಟ್ಟಿತು, ಬಿಟ್ಟಿದೆ
ಬುಟ್ಟೊಳೊ – ಬಿಟ್ಟಿದ್ದಾರೆ, ಬಿಟ್ಟಿದ್ದಾನೆ

ಬುಡ್‌ದಾರೆ – ಕೈ ಹಿಡಿಸುವ ಮದುವೆ–ಕೈಪತ್ತಾವುನ ಮದ್ಮೆ(ತು) ಕೈದಾರೆ
ಬುಳ್ಕ – ಒಮ್ಮೆಲೆ ನುಂಗು, ಬುಳುಂಕ(ತು)
ಬುಳ್ಗ್ – ಬಿಡಿಸು
ಬೆಡಿ – ಕೋವಿ, ಗನ್
ಬೆದ್ರ್ – ಬಿದಿರು, ಹೆದರು
ಬೆರ್ಸ್ – ಓಡಿಸು
ಬೆರೆಬೆರೆ – ದನಕರುಗಳು, ಆಡುಕುರಿಗಳು ಅಪಾಯಬಂದಾಗ ಭಯದಿಂದ ಮಾಡುವ ಶಬ್ದ
ಬೆಳ್ದ್ – ಬಿಳಿಯ, ಬೆಳ್ಳಗಿನ
ಬೆಳ್ಳೆಹುಂಜ – ಬಿಳಿ ಹುಂಜ

## ಯ

ಯಾಗ – ಯಾವಾಗ
ಯಾಮೆ – ಆಮೆ

## ಲ

ಲಾಯಿಕ್ – ಚೆನ್ನಾಗಿ, ಒಳ್ಳೆಯ, ಚಂದ
ಲೈಕಾತ್ – ಚೆನ್ನಾಗಿ ಆಯಿತು

## ಸ

ಸಗಣಿ ಗುಬ್ಬೆ – ಸಗಣಿ ಮುದ್ದೆ
ಸಮ್ರಾಜನೆ – ಸಮಾರಾಧನೆ, ಸನ್ಮಾನ, ಬೊಜ್ಜ
ಸರ್ತ – ನೇರ
ಸಾಂಕ್ – ಸಾಕು
ಸಿರಾಂಡಿ – ಚರಂಡಿ, ನೀರು ಹೋಗುವ ಕಣಿ
ಸೀಂತ್ – ಚೇಂತ್/ಚೇತ್(ತು), ಸಿಗಿದ ಬಾಳೆಎಲೆ
ಸೀದಾ – ನೇರ
ಸುರು – ಮೊದಲು, ಆರಂಭ
ಸೆಡೆ – ಮರದ ಸೌಟು, ಚಮಚ
ಸೆನಿ – ಶನಿ
ಸೆರ್ಗ್ – ಸೆರಗು
ಸೆರ್ರ – ಶರೀರ
ಸೊರ್ಗ್ – ಸುರಿಯು
ಸೊಸ್ತ್ – ಸಂಪತ್ತು, ಸೊತ್ತು
ಸೋಂತೆ – ಸೌತೆ

## ಶ

ಶರ್ತ – ಪಂಥ, ಸ್ಪರ್ಧೆ

## ಹ

ಹಂಞ – ಸ್ವಲ್ಪ
ಹಂತಿ – ಪಂಕ್ತಿ, ಪಂತ್ಯೆ(ತು)
ಹೆಂಗ್‌ಸ್ – ಹೆಂಗಸು, ಹೆಣ್ಣು
ಹಕ್ಕಲೆ – ಹತ್ತಿರ
ಹನ್ಯನಿ – ಸ್ವಲ್ಪ ಸ್ವಲ್ಪ
ಹನೀಸ್ – ಸ್ವಲ್ಪ
ಹಿಟ್ಟ್ – ತುರುಕಿಸು, ಬಂದೊ, ಅಕ್ಕಿ, ಗೋಧಿ ಮೊದಲಾದವುಗಳ ಪುಡಿ, ಅಕ್ಕಿ ಮೊದಲಾದ ಧಾನ್ಯಗಳ ಹಿಟ್ಟಿನಿಂದ ಮಾಡಿದ ದೋಸೆ, ರೊಟ್ಟಿಯಂತಹ ತಿಂಡಿ
ಹರಂಡ್ – ಹರಡು
ಹರ್ದದೆ – ಹರಿಯುತ್ತದೆ
ಹರ್ದ್ ಹೋತ್ – ಹರಿದು ಹೋಯಿತು
ಹಳ್ಳ – ನದಿ
ಹಾಳೆ ಕಿಳ್ಳಿಲಿ – ಹಾಳೆಯಿಂದ ಮಾಡಿದ ಬಟ್ಟಲು
ಸಟ್ಟ್‌ಗ – ದೋಸೆ ಮೊದಲಾದ ತಿಂಡಿಗಳನ್ನು ಕಾವಲಿಯಿಂದ ಎಬ್ಬಿಸುವ ಸಟ್ಟುಗ
ಹಿತ್ತ್‌ಲ್ – ಹಿತ್ತಿಲು
ಹಿರ್ – ಹಿಂಡು
ಹಿರ್ತ್ – ಹಾಲ್ ಹಿರ್ತ್–ಹಾಲು ಹಿಂಡಿದಳು
ಹಿಳ್ಳೆಲಿ – ಪಿಳ್ಳೆ, ಗೆಲ್ಲು
ಹುಗ್ಗ್ – ನುಗ್ಗು, ಹುಕ್ಕ್, ಹೊಗು, ಪ್ರವೇಶಿಸು
ಹುಕ್ಕೊತ್ – ಪ್ರವೇಶಿಸಿತು, ನುಗ್ಗಿತು
ಹುಗ್ದ್ – ಹುಗಿದು ಹೊಂಡದಲ್ಲಿ ಹಾಕಿ ಮುಚ್ಚು
ಹುಗ್ಗ – ಅನ್ನ, ಗಂಜಿತೆಲಿ ಬಸಿದ ಅನ್ನ, ಹುಗ್ಗಿ
ಹೂಡ್ – ಉಳು
ಹೂಳ್ – ತಾಗು, ಹಾಕು, ತುರುಕು
ಹೆರ್ಕ್ – ಹೆಕ್ಕು
ಹೆರ್ಕಿ ಇಟ್ಟತ್ – ಎತ್ತಿ ಬಿಸಾಡಿದನು, ಬಿಸಾಡಿತು, ಬಿಸಾಡಿದಳು
ಹೇಂಗಾರ್ – ಹೇಗಾದರೂ
ಹೈದ – ಹುಡುಗ, ಯುವಕ
ಹೋಂವ – ಹೋಗುವವ
ಹೊಟ್ಟೆ ಇಸಿತ್ – ಹೊಟ್ಟೆ ಹಸಿವಾಯಿತು
ಹೊಟ್ಟೆ ಬಾರ್ – ಹೊಟ್ಟೆ ಭಾಗ ಮಾಡು
ಹೊಣ್ಕ್ – ಹೊರಳು
ಹೊನ್ನಿಕಿಸು – ಎಬ್ಬಿಸು

| | |
|---|---|
| ಹೊದ್ರಿ | – ಅರಳು, ಹೊದ್ಲು |
| ಹೋಕ್ಕ್ | – ಹೋಗಬಹುದು |
| ಹೋಕನ | – ಹೋಗುವಾಗ |
| ಹೋತ್ | – ಹೋದನು, ಹೋದಳು, ಹೋಯಿತು, |
| ಹೋನೆ | – ಹೋಗುತ್ತೇನೆ |
| ಹೈದ | – ಹುಡುಗ |

## ಅನುಬಂಧ : 3 : ಕಥಾ ನಿರೂಪಕರು (1991–92 ಸಂಗ್ರಹಿಸುವಾಗ ಕತೆ ಹೇಳಿದ ಮಾಹಿತಿದಾರರು)

1. ಅಣ್ಣಪ್ಪಗೌಡ 55(ವ) ಅಂಬೆಕಲ್ಲು ಮನೆ. ದೇವ(ಕಂದ್ರಪಾಡಿ), ದೇವಚಳ್ಳ ಅಂಚೆ, ಸುಳ್ಯ ದ.ಕ.
2. ಓಡ್ಯಪ್ಪ ಗೌಡ85(ವ) ಸ್ವರಂಜ ಮನೆ, ಪೇರಾಲು–ಅಂಬ್ರೋಟಿ, ಪೇರಾಲು ಅಂಚೆ, ಮಂಡೆಕೋಲು ಗ್ರಾಮ, ಸುಳ್ಯ ದ.ಕ.
3. ಕಾವೇರಮ್ಮ62(ವ) ಕೆದಿಲ ಮನೆ, ಹರಿಹರ ಪಲ್ಲತಡ್ಕ ಅಂಚೆ, ಸುಳ್ಯ ದ.ಕ.
4. ಕುಸುಮಾದರ35(ವ) ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
5. ಕುಸುಮಾವತಿ42(ವ) w/o ಲೋಕಯ್ಯ ಗೌಡ, ಪೆರಾಜೆ ಅಂಚೆ, ಕೊಡಗು ಜಿಲ್ಲೆ, ಮಡಿಕೇರಿ
6. ಕೃಷ್ಣಪ್ಪ ಗೌಡ65(ವ) ಕುಂದಲ್ಪಾಡಿ–ಬಾಳಕಜೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
7. ಜಗದೀಶ ಬಿ.ಎಲ್. 25(ವ) ಬಂಗಾರಕೋಡಿ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
8. ದೇವಕಿ ನೆಡ್ಚಿಲ್54(ವ) ನೆಡ್ಚಿಲ್ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
9. ದೇವಕಿ ಅಮ್ಚೂರು58 ಅಮ್ಚೂರು ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
10. ತಾರಾಮಣಿ 30(ವ) c/o ದಾಮೋದರ ಗೌಡ, ಜತ್ತನ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
11. ತಾರಾಮಣಿ31(ವ) w/o ಬಾಬು ಗೌಡ, ಪಡ್ಪು ಮನೆ, ಜಾಲ್ಸೂರು ಅಂಚೆ, ಮಂಡೆಕೋಲು ಗ್ರಾಮ, ಸುಳ್ಯ ದ.ಕ.
12. ಪುರುಷೋತ್ತಮ ಕೆ. ಎಸ್. 21(ವ) c/o ಪದ್ಮಯ್ಯ ಗೌಡ, ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
13. ಪೂವಮ್ಮ77(ವ) ಆಲಂಕಳ್ಯ ಮನೆ, ಜಾಲ್ಸೂರು ಅಂಚೆ, ಮಂಡೆಕೋಲು ಗ್ರಾಮ, ಸುಳ್ಯ ದ.ಕ.
14. ಬಾಬು ಗೌಡ39(ವ) ಪಡ್ಪು ಮನೆ, ಜಾಲ್ಸೂರು ಅಂಚೆ, ಮಂಡೆಕೋಲು ಗ್ರಾಮ, ಸುಳ್ಯ ದ.ಕ.
15. ಬಾಬು ಗೌಡ55(ವ) ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ

16. ಬೊಮ್ಮಕ್ಕ 56(ವ) w/o ಬೆಳ್ಯಪ್ಪ ಗೌಡ, ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ
ಕೊಡಗು ಜಿಲ್ಲೆ
17. ಮೋನಕ್ಕ 58(ವ) ದೊಡ್ಡಡ್ಕ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
18. ಮೋಹನ ಗೌಡ 45(ವ) ಮಡ್ತಿಲ ಮನೆ, ಕೊಲಮೊಗ್ರು ಅಂಚೆ, ಸುಳ್ಯ ದ.ಕ.
19. ರಾಮಯ್ಯ ಗೌಡ 85(ವ) ಕಕ್ಕೆಬೆಟ್ಟು ಮನೆ, ದೊಡ್ಡತೋಟ ಅಂಚೆ, ಉಬರಡ್ಕ, ಸುಳ್ಯ ದ.ಕ.
20. ಲಕ್ಷ್ಮಿ 54(ವ) ಕುರುಂಜಿ ಮನೆ, ಸುಳ್ಯ ದ.ಕ.
21. ಲಿಂಗಪ್ಪ ಗೌಡ51 ಉರುಂಡೆ ಮನೆ, ಉಬರಡ್ಕ, ಸುಳ್ಯ ದ.ಕ.
22. ಲೀಲಾವತಿ14(ವ) D/o ಬಾಬು ಗೌಡ, ಪಡ್ಪು ಮನೆ, ಜಾಲ್ಸೂರು ಅಂಚೆ, ಮಂಡೆಕೋಲು
ಗ್ರಾಮ, ಸುಳ್ಯ ದ.ಕ.
23. ಲೋಕಯ್ಯ ಗೌಡ 51(ವ) ನೆಡ್ಚಿಲ್ ಮನೆ, ಕನ್ನಿಗುಂಡಿ, ಪೆರಾಜೆ ಅಂಚೆ, ಮಡಿಕೇರಿ
ಕೊಡಗು ಜಿಲ್ಲೆ
24. ವಿಶ್ವನಾಥ 25(ವ) ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
25. ಶಿವಪ್ಪ ಗೌಡ 35(ವ) ಮಡಪ್ಪಾಡಿ ಗ್ರಾಮ, ಸುಳ್ಯ ದ.ಕ.
26. ಸಣ್ಣಮನೆ ಕೃಷ್ಣಪ್ಪ ಗೌಡ 48(ವ) ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ
27. ಸುಬ್ಬಮ್ಮ 45(ವ) ಪಾನತ್ತಿಲ ಮನೆ, ಉಬರಡ್ಕ, ಸುಳ್ಯ ದ.ಕ.
28. ಹೇಮಲತ 49(ವ) w/o ಲೋಕಯ್ಯ ಗೌಡ, ನೆಡ್ಚಿಲ್ ಮನೆ, ಕನ್ನಿಗುಂಡಿ, ಪೆರಾಜೆ ಅಂಚೆ
ಮಡಿಕೇರಿ, ಕೊಡಗು ಜಿಲ್ಲೆ
29. ಹೊನ್ನಮ್ಮ 70(ವ) ಮೂಲೆ ಮನೆ, ಪೆರಾಜೆ ಅಂಚೆ, ಮಡಿಕೇರಿ, ಕೊಡಗು ಜಿಲ್ಲೆ

